ಸಮಕಾಲೀನ ಸೋವಿಯೆತ್ ಕಾದಂಬರಿಗಳ ಭಂಡಾರ

# ನಗೆ - ಹೊಗೆ

ಮೂಲ ಲೇಖಕರು :

ಲಿಯೊನಿಡ್ ಸೊಲೊವ್ಯೇವ್

ಅನುವಾದಕರು :

ಎಲ್. ಗುಂಡಪ್ಪ, ಎಂ.ಎ.

ಪೀಪಲ್ಸ್ ಬುಕ್ ಹೌಸ್

ಜಗನ್ಮೋಹನ ಅರಮನೆಯ ಎದುರು

ಮೈಸೂರು

ಮೊದಲನೆಯ ಮುದ್ರಣ: ೧೯೫೭

This Kannada translation of *Leonid Solovyev's* Adventures in Bukhara' has been published by the kind co-operation of V/O
MEZHDUNARODNAYA KNIGA, MOSCOW 200, U.S.S.R

ಬೆಲೆ:
ಸಾಧಾರಣ ಪ್ರತಿ: ೨—೮—೦
ಉತ್ತಮ ಪ್ರತಿ: ೩- ೮—೦

ಪ್ರಕಾಶಕರು:
ಡಿ. ಆರ್. ಕೃಷ್ಣಮೂರ್ತಿ, ಬಿ ಎ.

ಮುದ್ರಕರು:
ಆರ್. ಎನ್. ಹಬ್ಬು
ಉಷಾ ಪ್ರೆಸ್, ಮೈಸೂರು

"....ಈ ಕಥೆ ನಮಗೆ ಬಂದದ್ದು ಅಬು-ಒಮಾರ್-ಅಹ್ಮದ್-ಇಬಿನ್-ಮಹಮ್ಮದನಿಂದ; ಅವನಿಗೆ ದೊರಕಿದ್ದು ಮುಹಮ್ಮದ್-ಇಬಿನ್-ಅಲಿ-ಇಬಿನ್-ರಿಫಾನಿಂದ; ಅವನು ಅಲಿ-ಇಬಿನ್-ಅಬ್ದ್-ಅಲ್-ಅಸಿಸನಿಂದ ಎತ್ತಿಕೊಂಡನು; ಅವನು ಅಬು-ಉಬಾಇದ್-ಅಲ್-ಕಾಸಿಮ್-ಇಬಿನ್-ಸೆಲಾಮ್‌ನಿಂದ ಎತ್ತಿಕೊಂಡನು; ಅವನು ತನ್ನ ಉಪಾಧ್ಯಾಯರುಗಳು ಹೇಳಿದ್ದನ್ನು ಬರೆದುಕೊಂಡನು; ಅವರಲ್ಲಿ ಕಡೆಯವನು ತನ್ನ ಹೇಳಿಕೆಗೆ ಒಮಾರ್-ಇಬಿನ್-ಅಲ್-ಖತ್ತಬ್ ಮತ್ತು ಅವನ ಮಗ ಅಬ್-ಅಲ್ಲಾ ಇವರಿಬ್ಬರನ್ನು ಆಧಾರವಾಗಿ ಕೊಡುತ್ತಾನೆ—ಅವರಿಬ್ಬರಿಗೂ ಅಲ್ಲಾನ ಅನುಗ್ರಹ ಶಾಶ್ವತವಾಗಿರಲಿ.]

ಇಬಿನ್ ಹಸ್‌ಮ್: 'ದಿ ಟರ್ಟ್ಸ್ ಡೊವ್ಸ್' ನೆಕ್ಲೇಸ್.

1930ನೆಯ ಇಸವಿಯ ಏಪ್ರಿಲ್ 18ರಲ್ಲಿ ಹೇಡಿ ಘಾತಕನ ಗುಂಡೇಟಿನಿಂದ ಮೃತಿಹೊಂದಿದ ನನ್ನ ಮಿತ್ರ ಮುಮಿನ್ ಅದಿಲೋವನ ಪರಿಶುದ್ಧವೂ ಶಾಶ್ವತವೂ ಆದ ನೆನಪಿಗೆ ಈ ಪುಸ್ತಕವನ್ನು ಅರ್ಪಿಸುತ್ತೇನೆ.

ಅವನಲ್ಲಿ ಖೋಜಾ ನಸ್ರೆದ್ದೀನನ ನಿಃಸ್ವಾರ್ಥ ಜನಸೇವಾನಿಷ್ಠೆ, ಧೈರ್ಯ, ಘನವಾದ ವಿವೇಚನಶಕ್ತಿ ಮತ್ತು ಪ್ರಾಮಾಣಿಕ ಕಾರ್ಯಚಾತುರ್ಯ—ಇವೇ ಮೊದಲಾದ ಅನೇಕ ಲಕ್ಷಣಗಳಿದ್ದವು. ನಾನು ಈ ಪುಸ್ತಕವನ್ನು ಬರೆಯುತ್ತಿದ್ದಾಗ, ರಾತ್ರಿಯ ಪ್ರಶಾಂತ ಮೌನದಲ್ಲಿ ಅವನ ಆತ್ಮವು ನನ್ನ ಪಕ್ಕದಲ್ಲಿ ನಿಂತು ನನ್ನ ಲೇಖಣಿಯನ್ನು ಪ್ರೇರಿಸುತ್ತಿದ್ದಂತೆ ಅನೇಕ ವೇಳೆ ನನಗೆ ಅನುಭವವಾಗಿದೆ.

ಅವನು ನನಯ್ (Nanay) ಎಂಬ ಒಂದು ಬೆಟ್ಟದ ಹಳ್ಳಿಯಲ್ಲಿ ಪ್ರಾಣ ಬಿಟ್ಟನು; ಕನಿಬದಮ್(Kanibadam)ನಲ್ಲಿ ಸಮಾಧಿಯಲ್ಲಿ ಮಲಗಿದ್ದಾನೆ. ಈಗ್ಗೆ ಸ್ವಲ್ಪ ಕಾಲಕ್ಕೆ ಹಿಂದೆ ನಾನು ಅವನ ಸಮಾಧಿಯನ್ನು ನೋಡಲು ಹೋಗಿದ್ದೆ. ವಸಂತದ ಹುಲ್ಲುಹೂವುಗಳಿಂದ ಆವರಿಸಿದ್ದ ಆ ಸಮಾಧಿಯ ಸುತ್ತಮುತ್ತ ಮಕ್ಕಳು ಆಡುತ್ತಿದ್ದವು; ಅವನು ಪರಲೋಕದ ಚಿರನಿದ್ರೆಯಲ್ಲಿ ಮುಳುಗಿದ್ದನು; ನನ್ನ ಹೃದಯದ ಪ್ರಾರ್ಥನೆಗೆ ಓಗೊಡಲಿಲ್ಲ.

ಎಲ್. ಎಸ್.

# ನಗೆ — ಹೊಗೆ

## ಮೊದಲನೆಯ ಭಾಗ

"ಬೆನ್ನ ಹಿಂದೆ ಹಿಂಬಾಲಿಸಿ ಬರುತ್ತಿದ್ದ ತನ್ನ ಕತ್ತೆಯ ಲಗಾಮನ್ನು ಕೈಯಲ್ಲಿ ಹಿಡಿದುಕೊಂಡು ಒಬ್ಬ ದಡ್ಡನು ದಾರಿಯಲ್ಲಿ ಹೋಗುತ್ತಿದ್ದನೆಂದೂ ಹೇಳುತ್ತಾರೆ."

(ಷೆಹರ್‌ಜಾದೆಯ ಮುನ್ನೂರ ಎಂಬತ್ತೆರಡನೆಯ ರಾತ್ರಿ.)

೧

ಖೋಜಾ ನಸ್ರೆದ್ದೀನನು ತನ್ನ ಮೂವತ್ತೈದನೆಯ ಜನ್ಮದಿನದಂದು ಪ್ರಯಾಣಿಕನಾಗಿ ದಾರಿ ನಡೆಯುತ್ತಿದ್ದನು.

ಅವನು ದೇಶಭ್ರಷ್ಟನಾಗಿ ಹತ್ತು ವರ್ಷಕ್ಕೂ ಹೆಚ್ಚು ಕಾಲ ಕಳೆದಿದ್ದನು. ಆ ಕಾಲದಲ್ಲಿ ಅವನು ಪಟ್ಟಣದಿಂದ ಪಟ್ಟಣಕ್ಕೆ, ದೇಶದಿಂದ ದೇಶಕ್ಕೆ ಅಲೆಯುತ್ತಿದ್ದನು; ಸಾಗರಗಳನ್ನೂ ಮರಳುಕಾಡುಗಳನ್ನೂ ದಾಟುತ್ತಿದ್ದನು; ರಾತ್ರಿ ಯಾವ ಕಡೆ ಮಲಗಿ ನಿದ್ರಿಸುತ್ತಿದ್ದನು; ಕುರುಬರ ರೊಪ್ಪದ ಬೆಂಕಿಯ ಬಳಿಯೋ ಕಿಕ್ಕಿರಿದು ತುಂಬಿದ ಕಾರವಾನ್‌ಶಾಲೆಗಳಲ್ಲಿಯೋ ಬರಿ ನೆಲದ ಮೇಲೆ ಮಲಗುತ್ತಿದ್ದನು; ಆ ಕಾರವಾನ್‌ಶಾಲೆಗಳಲ್ಲಿ ರಾತ್ರಿಯೆಲ್ಲಾ ಧೂಳು ತುಂಬಿದ ಮಬ್ಬುಗತ್ತಲೆಯಲ್ಲಿ ಒಂಟೆಗಳು ನಿಟ್ಟುಸಿರಿಟ್ಟು ತಮ್ಮ ಮೈಯನ್ನು ಕಚ್ಚಿ ಕೆರೆದುಕೊಳ್ಳುವಾಗ ಅವುಗಳ ಗೆಜ್ಜೆಗಳು ಝಣಗುಟ್ಟುತ್ತಿದ್ದವು; ಹಾಗಲ್ಲದಿದ್ದರೆ, ಇಲ್ಲಣ ತುಂಬಿದ ಟೀ ಅಂಗಡಿಗಳಲ್ಲಿ ಒಡ್ಡೊಡ್ಡಾಗಿ ಕೈಕಾಲು ಚಾಚಿ ಬಿದ್ದುಕೊಂಡಿರುವ ನೀರು ಹೊರುವವರು, ಭಿಕ್ಷುಕರು, ಗಾಡಿ ಹೊಡೆಯುವವರು ಮೊದಲಾದ ಬಡಜನರ ನಡುವೆ—ಬೆಳಗಾದೊಡನೆ ಪೇಟೆಗಳನ್ನೂ ಇಕ್ಕಟ್ಟಾದ ಬೀದಿಗಳನ್ನೂ ತಮ್ಮ ಕೇಕು ಕಿರಿಚಿನಿಂದ ತುಂಬಿಸುವ ಆ ಬಡವರ ನಡುವೆ—ಅವರಲ್ಲೊಬ್ಬನಾಗಿ ಮಲಗಿರುತ್ತಿದ್ದನು.

ಯಾರುಯಾರೋ ಪರ್ಷಿಯನ್ ಅಧಿಕಾರಿಗಳ ಅಂತಃಪುರದಲ್ಲಿ ಮೃದುವಾದ ರೇಷ್ಮೆಯ ಮೆತ್ತೆಗಳ ಮೇಲೆಯೂ ಎಷ್ಟೋ ರಾತ್ರಿಗಳನ್ನು ಅವನು ಕಳೆದಿದ್ದನು; ಅದೇ ಸಮಯದಲ್ಲಿ ಮನೆಯ ಯಜಮಾನನು ಆ ಧರ್ಮಲಂಡ ಅಪಾಪೋಲಿ ಕೈಗೆ ಸಿಕ್ಕಿದರೆ ಅವನ ಚರ್ಮ ಸುಲಿಸಿಬಿಡಬೇಕೆಂದು ಸಂಕಲ್ಪಿಸಿ

ಕಾವಲು ಸಿಪಾಯಿಗಳನ್ನು ಸಂಗಡ ಕರೆದುಕೊಂಡು ಅವನನ್ನು ಹುಡುಕುವುದಕ್ಕಾಗಿ ಟೀ ಅಂಗಡಿಗಳನ್ನೂ ಕಾರವಾನ್‌ಶಾಲೆಗಳನ್ನೂ ಶೋಧಿಸಿ ತಡಕಾಡುತ್ತಿದ್ದನು

ಕಿಟಕಿಯ ಜಾಲಂದ್ರದ ಮೂಲಕ ಬೆಳಕಿನ ಕಿರಣ ಇಣುಕುತ್ತದೆ; ನಕ್ಷತ್ರಗಳು ಮಸುಕಾಗುತ್ತವೆ; ಉಷಃಕಾಲದ ಆಗಮನವನ್ನು ಸಾರುತ್ತಾ ತಣ್ಣನೆಯ ಮಂದಮಾರುತವು ಮರದೆಲೆಗಳ ನಡುವೆ ಮರ್ಮರ ಧ್ವನಿಮಾಡುತ್ತದೆ; ಕಿಟಕಿಯ ಚಡಿಯ ಮೇಲೆ ಪಾರಿವಾಳಗಳು ಗುಬ್ಬಳಿಸುತ್ತಾ ಕೊಕ್ಕಿನಿಂದ ಮೈ ಒಪ್ಪಮಾಡಿಕೊಳ್ಳತೊಡಗುತ್ತವೆ. ಖೋಜಾ ನಸ್ರೆದ್ದೀನನು ಅಲಸಗಾತ್ರಿಯಾದ ಸುಂದರಿಯನ್ನು ಮುದ್ದಿಸಿ ಮುತ್ತಿಡುತ್ತಾ,

“ಹೊತ್ತಾಯಿತು. ಅಸದೃಶವಾದ ನನ್ನ ಮುತ್ತಿನ ಮಣಿಯೇ, ಹೋಗಿ ಬರುತ್ತೇನೆ ನನ್ನನ್ನು ಮರೆಯಬೇಡ” ಎನ್ನುತ್ತಾನೆ.

ಆಕೆ ತನ್ನ ಚೆಲುದೋಳುಗಳನ್ನು ಅವನ ಕುತ್ತಿಗೆಯ ಸುತ್ತ ಸುತ್ತಿ ತಬ್ಬಿಕೊಂಡು, “ಹೋಗಬೇಡ, ನಿಲ್ಲು. ಮತ್ತೆ ಬರದೆ, ಹೋಗಿಯೇ ಬಿಡುತ್ತೀಯಾ? ಕೇಳಿಲ್ಲಿ, ಇವತ್ತು ರಾತ್ರೆ, ಕತ್ತಲೆಯಾದೊಡನೆಯೇ ನಿನ್ನನ್ನು ಮತ್ತೆ ಇಲ್ಲಿಗೆ ಕರೆದುಕೊಂಡು ಬರುವುದಕ್ಕೆ ಮುದುಕಿಯನ್ನು ಕಳಿಸುತ್ತೇನೆ” ಎಂದು ಅಂಗಲಾಚಿ ಬೇಡುತ್ತಾಳೆ.

“ಇಲ್ಲ; ಅದಾಗದು. ಒಂದೇ ಮನೆಯಲ್ಲಿ ಎರಡು ರಾತ್ರೆಗಳನ್ನು ಕಳೆಯುವುದೆಂದರೇನೆಂಬುದು ನನಗೆ ಮರೆತುಹೋಗಿ ಎಷ್ಟೋ ಕಾಲವಾಯಿತು. ನಾನು ಪ್ರಯಾಣ ಹೊರಟುಬಿಡಬೇಕು. ನನಗೆ ಸ್ವಲ್ಪವೂ ಪುರಸತ್ತಿಲ್ಲ.”

“ಪ್ರಯಾಣವೆ! ಬೇರೆ ಯಾವ ಪಟ್ಟಣದಲ್ಲಿಯಾದರೂ ತುಂಬ ಜರೂರು ಕೆಲಸವಿದೆಯೇ? ಎಲ್ಲಿಗೆ ಹೋಗುತ್ತೀಯ?”

“ನನಗೆ ಗೊತ್ತಿಲ್ಲ. ಆದರೆ ಆಗಲೇ ಬೆಳಗಾಗಿಹೋಯಿತು: ಪಟ್ಟಣದ ಕೋಟೆಬಾಗಿಲುಗಳನ್ನು ತೆಗೆದಿದ್ದಾರೆ; ಮೊದಮೊದಲಿನ ಕಾರವಾನುಗಳು ಹೊರಹೊರಡುತ್ತಿವೆ. ಒಂಟೆಗಳ ಗಂಟೆಯ ಗಣಗಣ ಕೇಳಿಸುತ್ತಿಲ್ಲವೆ? ಅದನ್ನು ಕೇಳಿದಾಗ ನನ್ನ ಹೆಜ್ಜೆಗಳಲ್ಲಿ ಜಿನ್‌ಗಳು* ನೆಲಸಿದಂತೆ ಭಾಸವಾಗುತ್ತದೆ; ಆಗ ನಾನು ಸುಮ್ಮನಿರಲಾರೆ.”

---

* ಜಿನ್ = ಒಂದು ಬಗೆಯ ಭೂತ.

ಅಂತಃಪುರದ ಸುಂದರಿ ತನ್ನ ನಿಡಿದಾದ ಕಣ್ಣುರೆಪ್ಪೆಗಳಲ್ಲಿ ಮಿನುಗುವ ಅಶ್ರುಬಿಂದುಗಳನ್ನು ಮರೆಮಾಡಲು ಯತ್ನಿಸುತ್ತಾ ಮುನಿದು ನುಡಿಯುತ್ತಾಳೆ: "ಹೋಗು, ಹಾಗಾದರೆ! ಆದರೆ, ಹೋಗುವ ಮೊದಲು ನಿನ್ನ ಹೆಸರನ್ನಾದರೂ ನನಗೆ ತಿಳಿಸು."

"ನನ್ನ ಹೆಸರೆ? ಕೇಳು: ಖೋಜಾ ನಸ್ರೆದ್ದೀನನ ಸಂಗಡ ನೀನು ರಾತ್ರಿಯನ್ನು ಕಳೆದಿದ್ದೀಯೆ. ನಾನು ಖೋಜಾ ನಸ್ರೇದ್ದಿನ್; ಶಾಂತಿಯನ್ನು ಭಂಗಪಡಿಸುವವನು; ಕಲಹಬೀಜಗಳನ್ನು ಬಿತ್ತುವವನು; ಅವನ ತಲೆಗೆ ಭಾರಿ ಬೆಲೆಯಿರುವವನು: ಪ್ರತಿದಿನವೂ ಪೇಟೆಗಳಲ್ಲಿಯೂ ಸಾರ್ವಜನಿಕ ಸ್ಥಳಗಳಲ್ಲಿಯೂ ನಗರದ ಘೋಷಕರು ಅದನ್ನು ಸಾರುತ್ತಿರುತ್ತಾರೆ. ನಿನ್ನೆ ದಿನ ಅವರು ಮೂರು ಸಾವಿರ ತೋಮಾನ್‌ಗಳನ್ನು* ಕೊಡುವುದಾಗಿ ಪ್ರಕಟಿಸಿದರು; ಅಷ್ಟು ಒಳ್ಳೆ ಬೆಲೆ ದೊರೆಯುವಾಗ ನನ್ನ ತಲೆಯನ್ನು ನಾನೇ ಏಕೆ ಮಾರಿಬಿಡಬಾರದೆನ್ನಿಸಿತು. ನೀನು ನಗುತ್ತೀಯ, ನನ್ನ ಪುಟ್ಟ ತಾರಕೆ? ಆಗಲಿ, ಕೊನೆಯ ಬಾರಿ ನಿನ್ನ ಅಧರಗಳನ್ನಿತ್ತ ನೀಡು. ನಿನಗೊಂದು ಪಚ್ಚೆಯನ್ನು ಕೊಡಬೇಕೆಂದು ನನ್ನ ಮನಸ್ಸು. ಆದರೆ ನನ್ನಲ್ಲಿ ಪಚ್ಚೆಯಿಲ್ಲದಿರುವುದರಿಂದ. ಇಗೋ, ಈ ಪುಟ್ಟ ಕಲ್ಲುಹರಳನ್ನೇ ತೆಗೆದುಕೋ; ಇದನ್ನು ನೋಡಿ ನನ್ನನ್ನು ಸ್ಮರಿಸಿಕೊ."

ಅವನು ಶಿಬಿರಾಗ್ನಿಗಳ ಕಿಡಿ ಹಾರಿ ಅನೇಕ ಕಡೆ ಸುಟ್ಟು ತೂತಾದ ತನ್ನ ಜೂಲು ಖಲತ್ತನ್ನು† ಮೈಮೇಲೆಳೆದುಕೊಂಡು ಮೆಲ್ಲಗೆ ಜಾರಿಕೊಂಡು ಹೋಗುತ್ತಾನೆ. ಬಾಗಿಲ ಬಳಿ ಸೋಮಾರಿಯಾದ ದಡ್ಡ ನಪುಂಸಕ ರುಮಾಲು ಸುತ್ತಿ ಬೆರಳುಭಾಗ ಮೇಲ್ಮುಖವಾಗಿ ಎತ್ತಿರುವ ಮೃದುವಾದ ಜೋಡು (ಸ್ಲಿಪ್ಪರ್) ಮೆಟ್ಟಿಕೊಂಡು ಗೊರಕೆ ಹೊಡೆಯುತ್ತಿದ್ದಾನೆ—ಅರಮನೆಯಲ್ಲಿರುವ ಅತ್ಯಮೂಲ್ಯವಾದ ರತ್ನದ ರಕ್ಷಣೆಯಲ್ಲಿ ಅಜಾಗರೂಕನಾಗಿ ನಿದ್ರಿಸುತ್ತಿದ್ದಾನೆ. ಇನ್ನೂ ಮುಂದೆ, ಕಂಬಳಿಗಳ ಮೇಲೂ ಫೆಲ್ಟುಗಳ ಮೇಲೂ ಕೈಕಾಲು ನೀಡಿಕೊಂಡು ಮಲಗಿ, ಒರೆದೆಗೆದ ಕಠಾರಿಗಳನ್ನೇ ತಲೆದಿಂಬಾಗಿಟ್ಟುಕೊಂಡು,

---

* ತೋಮಾನ್ = ಒಂದು ನಾಣ್ಯದ ಹೆಸರು.

† ಖಲತ್ = ಉದ್ದನೆಯ ಅಂಗಿ.

ಕಾವಲುಸಿಪಾಯಿಗಳು ಗೊರಕೆಹೊಡೆಯುತ್ತಿದ್ದಾರೆ. ಖೋಜಾ ನಸ್ರೆದ್ದೀನನು ಮೆಟ್ಟುಂಗಾಲಿಟ್ಟುಕೊಂಡು ಅವರ ಬಳಿಯೇ ನುಸುಳಿ ಹೋಗುತ್ತಾನೆ; ಯಾವಾಗಲೂ ಕ್ಷೇಮವಾಗಿಯೇ ಹೋಗುತ್ತಾನೆ; ತತ್ಕಾಲದಲ್ಲಿ ಅದೃಶ್ಯನಾಗಿದ್ದಾನೇನೋ ಎಂಬ ರೀತಿಯಲ್ಲಿ ಯಾರ ಕಣ್ಣಿಗೂ ಬೀಳದೆ ಹೊರಟುಹೋಗುತ್ತಾನೆ.

ಮತ್ತೊಮ್ಮೆ ಕಲ್ಲುದಾರಿ ಅವನ ಕತ್ತೆಯ ಚುರುಕು ಗೊರಸುಗಳ ಹೊಡೆತದಲ್ಲಿ ಖಣಿಗುಟ್ಟಿ ಹೋಗೆಯುಗುಳುತ್ತವೆ. ನೀಲಗಗನದಲ್ಲಿ ಹೊರಬಂದು ಸೂರ್ಯನು ಭೂಮಿಯ ಮೇಲೆ ತನ್ನ ಬೆಳಕು ಚೆಲ್ಲುತ್ತಾನೆ. ಖೋಜಾ ನಸ್ರೆದ್ದೀನನು ಕಣ್ಣು ಮುಚ್ಚಿಕೊಳ್ಳದೆ ಅದನ್ನು ದೃಷ್ಟಿಸಿ ನೋಡಬಲ್ಲ. ಇಬ್ಬನಿ ತುಂಬಿದ ಬಯಲುಗಳು, ಮರಳುದಿಬ್ಬಗಳ ನಡುವೆ ಒಂಟೆಗಳ ಮೂಳೆ ಥಳಥಳಿಸುತ್ತಿರುವ ಮರುಭೂಮಿಗಳು, ಹಸುರು ತುಂಬಿದ ತೋಟಗಳು, ನೊರೆಗರೆದು ಹರಿಯುವ ಹೊಳೆಗಳು, ಬೋಳುಗುಡ್ಡಗಳು ಮತ್ತು ಕಳೆಯೊರಚಿ ನಗುನಗುವ ಹುಲ್ಲುಗಾವಲುಗಳು—ಈ ಎಲ್ಲ ಕಡೆಯೂ ಖೋಜಾ ನಸ್ರೆದ್ದೀನನ ಗಾನ ಕೇಳಿಬರುತ್ತದೆ. ಅವನು ಮುಂದೆ ಮುಂದ ಸವಾರಿ ಹೋಗುತ್ತಿರುತ್ತಾನೆ; ಒಮ್ಮೆಯಾದರೂ ಹಿಂದಿರುಗಿ ನೋಡದೆ, ತಾನು ಹಿಂದೆ ಬಿಟ್ಟು ಹೋಗುತ್ತಿರುವುದನ್ನು ನೆನೆದು ಮರುಗದೆ, ತನಗೆ ಮುಂದೇನು ಸಂಭವಿಸಬಹುದೆಂದು ನೆನೆದು ನಡುಗದೆ ತನ್ನ ಕತ್ತೆಯ ಮೇಲೆ ಮುಂದುವರಿಯುತ್ತಲೇ ಇರುತ್ತಾನೆ.

ಆದರೆ ಆಗ ತಾನೆ ಅವನು ಬಿಟ್ಟು ಹೊರಟ ಪಟ್ಟಣದಲ್ಲಿ ಅವನ ಸ್ಮರಣೆ ಶಾಶ್ವತವಾಗಿ ನೆಲಸುತ್ತದೆ ಮುಲ್ಲಾಗಳೂ ನಗರಪ್ರಮುಖರೂ ಅವನ ಹೆಸರೆತ್ತಿದರೆ ಸಾಕು ರೇಗಿರೇಗಿ ಬೀಳುತ್ತಾರೆ. ನೀರು ಹೊರುವವರು, ಗಾಡಿ ಹೊಡೆಯುವವರು, ನೆಯ್ಗೆಯವರು, ಕಂಚುಗಾರರು, ಜೀನುಗಾರರು ಇವರೇ ಮೊದಲಾದವರೆಲ್ಲರೂ ರಾತ್ರಿ ಹೊತ್ತು ಟೀ ಅಂಗಡಿಗಳಲ್ಲಿ ಬಂದು ಸೇರಿ ಅವನ ಸಾಹಸ ಕಥೆಗಳನ್ನು—ಅವುಗಳಲ್ಲೆಲ್ಲ ಯಾವಾಗಲೂ ಕಡೆಯಲ್ಲಿ ಅವನಿಗೇ ಜಯ ಕಟ್ಟಿಟ್ಟದ್ದು—ಹೇಳಿಕೊಳ್ಳುತ್ತಾ ಒಬ್ಬರನ್ನೊಬ್ಬರು ವಿನೋದಪಡಿಸುತ್ತಾರೆ. ಅಲಸಳಾದ ಆ ಅಂತಃಪುರದ ಸುಂದರಿ ಆ ಬಿಳಿಯ ಕಲ್ಲುಹರಳನ್ನು ಎಷ್ಟೋ ವೇಳೆ ದೃಷ್ಟಿಸಿ ನೋಡುತ್ತಿರುತ್ತಾಳೆ; ತನ್ನ ಯಜಮಾನನು ಬರುತ್ತಿರುವ ಹೆಜ್ಜೆಯ ಸದ್ದು ಕೇಳಿದೊಡನೆ ಮುತ್ತಿನಚಿಪ್ಪಿನ ಭರಣಿಯೊಂದರೊಳಕ್ಕೆ ಅದನ್ನು ಆತುರಾತುರವಾಗಿ ಹಾಕಿಟ್ಟುಬಿಡುತ್ತಾಳೆ.

ಬೊಜ್ಜು ಮೈಯಿನ ಅಧಿಕಾರಿ ಏದುಸುರುಬಿಟ್ಟು ತನ್ನ ಕಿನ್‌ಖಾಪಿನ ಅಂಗಿಯನ್ನು ಬಿಚ್ಚುತ್ತ ಹೀಗೆ ಗೊಣಗಿಕೊಳ್ಳುತ್ತಾನೆ: "ಓ! ಈ ಹಾಳು ಪೋಲಿ ನಸ್ರೆದ್ದೀನ್ ನಮ್ಮನ್ನೆಲ್ಲಾ ಗೋಳುಹುಯ್ದುಕೊಂಡು ಸಾಕುಸಾಕು ಮಾಡಿಬಿಟ್ಟಿದ್ದಾನೆ! ಅವನು ದೇಶವನ್ನೆಲ್ಲ ಕಲಕಿ ಕೆರಳಿಸಿಬಿಟ್ಟಿದ್ದಾನೆ! ಇವತ್ತಿನ್ನೂ ನನಗೊಂದು ಪತ್ರ ಬಂತು; ನನ್ನ ಹಳೆಯ ಗೆಳೆಯ, ಖೋರಾಸಾನ್ ಪ್ರಾಂತದ ಮಾನ್ಯ ರಾಜ್ಯಪಾಲ(ಗವರ್ನರ್)ನಿಂದ ಪತ್ರ ಬಂತು. ಏನು ಸಮಾಚಾರ, ಗೊತ್ತೋ? ಈ ಅಲೆಮಾರಿ, ಖೋಜಾ ನಸ್ರೆದ್ದೀನ್ ಅವನ ಪಟ್ಟಣದಲ್ಲಿ ಮುಖ ತೋರಿಸುವುದೇ ತಡ, ಆ ಕ್ಷಣವೇ, ಅಲ್ಲಿನ ಕಮ್ಮಾರರೆಲ್ಲ ತೆರಿಗೆ ಕೊಡುವುದನ್ನು ನಿಲ್ಲಿಸಿಬಿಟ್ಟರಂತೆ; ಮತ್ತು ಊಟದಂಗಡಿಗಳ ಮಾಲೀಕರು ಸರ್ಕಾರದ ಕಾವಲುಸಿಪಾಯಿಗಳಿಗೆ ಬಿಟ್ಟಿ ಊಟ ಹಾಕಲು ನಿರಾಕರಿಸಿದರಂತೆ! ಇದಕ್ಕೆಲ್ಲ ಅತಿಶಯವಾಗಿ, ಈ ಕಳ್ಳ, ಈ ಇಸ್ಲಾಂ ಧರ್ಮದೂಷಕ, ಈ ಪಾಪದ ಪುತ್ರ, ರಾಜ್ಯಪಾಲನ ಅಂತಃಪುರಕ್ಕೆ ಪ್ರವೇಶಿಸಿ ಅವನ ಮೆಚ್ಚಿನ ರಾಣಿಯನ್ನು ಭ್ರಷ್ಟಗೊಳಿಸುವ ಸಾಹಸಮಾಡಿದನಂತೆ! ಪಾಪ, ಈ ಕೆಲಸಕ್ಕೆ ಬಾರದ ಪಿರುಕ ನನ್ನ ಅಂತಃಪುರಕ್ಕೆ ಪ್ರವೇಶಿಸುವ ಪ್ರಯತ್ನ ಮಾಡಲಿಲ್ಲ! ಹಾಗೇನಾದರೂ ಮಾಡಿದ್ದಿದ್ದರೆ, ಅವನ ತಲೆ ಇಷ್ಟರಲ್ಲಿಯೇ ಪಟ್ಟಣದ ಪ್ರಧಾನ ಚೌಕದಲ್ಲಿ ಶೂಲದ ಕಂಬದ ಮೇಲಿರುತ್ತಿತ್ತು."

ಸುಂದರಿಯು ಇದನ್ನಾಲಿಸಿ ತನ್ನಲ್ಲಿ ತಾನು ಆಶಾಭಾವನೆಯಿಂದ ನಸುನಗುತ್ತ ಮೌನವಾಗಿರುತ್ತಾಳೆ.

ಹೀಗಿರುವಲ್ಲಿ ಇತ್ತ ಖೋಜಾ ನಸ್ರೆದ್ದೀನನ ಹಾದಿಗೆ ಸರಿಯಾಗಿ ಅವನ ಕತ್ತೆ ಚುರುಕಾಗಿ ಮುಂದುವರಿಯುತ್ತಿರಲು ಅದರ ಗೊರಸಿನ ಬಿರುಸಿನೇಟಿಗೆ ದಾರಿ ಹೊಳಲುಗೊಡುತ್ತ ಹೊಗೆ ಸೂಸುತ್ತಿರುತ್ತದೆ.

ಈಗ ಹತ್ತು ವರ್ಷಗಳಲ್ಲಿ ಅವನು ಎಲ್ಲ ಕಡೆಗೂ ಹೋಗಿದ್ದನು: ಬಾಗ್ದಾದಿನಲ್ಲಿ, ಸ್ಟಾಂಬೂಲಿನಲ್ಲಿ, ಟೆಹರಾನಿನಲ್ಲಿ, ಬಾಕ್ಚೇಸರೆಯಲ್ಲಿ, ಎಕ್ಮಿಯಾಡ್ಜಿನ್‌ನಲ್ಲಿ, ಟಿಫ್ಲಿಸ್‌ನಲ್ಲಿ, ದಮಾಸ್ಕಸಿನಲ್ಲಿ ಮತ್ತು ಟ್ರೆಬಿಸಾಂಡ್‌ನಲ್ಲಿ — ಈ ಸ್ಥಳಗಳಲ್ಲೆಲ್ಲ ಅವನು ಇದ್ದುಬಂದಿದ್ದನು. ಅವನಿಗೆ ಈ ಎಲ್ಲ ನಗರಗಳೂ ಗೊತ್ತಿತ್ತು; ಇನ್ನೂ ಹಲವು ನಗರಗಳನ್ನು ಅವನರಿತಿದ್ದನು. ಅವನು ಎಲ್ಲೆಲ್ಲಿ ಹೋಗಿದ್ದನೋ ಅಲ್ಲೆಲ್ಲ ಎಂದೂ ಮರೆತುಹೋಗದಂಥ ನೆನಪನ್ನು ಉಳಿಸಿ ಬಂದಿದ್ದನು.

ಈಗ ಅವನು ತನ್ನ ಹುಟ್ಟೂರಿಗೆ—ಬುಖಾರಾ-ಇ-ಷರೀಫ್ ಎಂದರೆ ಘನತೆ ಹೊಂದಿದ ಬುಖಾರಕ್ಕೆ—ಹಿಂದಿರುಗಿ ಹೋಗಬೇಕೆಂದು ಹೊರಟು ಮಾರ್ಗಸ್ಥನಾಗಿದ್ದನು. ಅಲ್ಲಿ ಬೇರೊಂದು ಹೆಸರಿಟ್ಟುಕೊಂಡು ಆ ಹೊಸ ಹೆಸರಿನ ಮರೆಯಲ್ಲಡಗಿ ತನ್ನ ಅನಂತಪ್ರಯಾಣದಲ್ಲಿ ಸ್ವಲ್ಪ ಕಾಲದ ಮಟ್ಟಿಗೆ ವಿಶ್ರಾಂತಿ ಪಡೆಯಬೇಕೆಂದು ಆಶಿಸಿದ್ದನು.

೨

ಅವನು ವ್ಯಾಪಾರಿಗಳ ಒಂದು ದೊಡ್ಡ ಕಾರವಾನಿನಲ್ಲಿ ಸೇರಿಕೊಂಡು ಅದರೊಡನೆ ಪ್ರಯಾಣ ಮಾಡುತ್ತಾ ಬುಖಾರಾದ ಗಡಿಪ್ರದೇಶವನ್ನು ದಾಟಿ ಮುಂದುವರಿದನು. ಪ್ರಯಾಣದ ಎಂಟನೆಯ ದಿನ ಧೂಳು ತುಂಬಿದ ದೂರದ ಮಬ್ಬಿನಲ್ಲಿ ಪ್ರಖ್ಯಾತವಾದ ಆ ಮಹಾನಗರಿಯ ಮಿನರೆಟ್ಟುಗಳ* ನಸುನೋಟ ಗೋಚರವಾಯಿತು.

ಬಾಯಾರಿಕೆಯಿಂದಲೂ ಬಿಸಿಲಿನ ಸೆಕೆಯಿಂದಲೂ ಸೋತು ಸೊರಗಿದ್ದ ಒಂಟೆಸಾರಥಿಗಳು ತಮ್ಮ ಶುಷ್ಕ ಕಂಠದಿಂದಲೇ ಸಾಧ್ಯವಾದ ಮಟ್ಟಿಗೂ ಗಟ್ಟಿಯಾಗಿ ಆನಂದಘೋಷ ಮಾಡಿದರು; ಒಂಟೆಗಳು ಹೆಚ್ಚು ವೇಗವಾಗಿ ನಡೆಯತೊಡಗಿದವು, ಸೂರ್ಯ ಮುಳುಗುವುದರಲ್ಲಿದ್ದನು; ಪಟ್ಟಣದ ಬಾಗಿಲುಗಳನ್ನು ಮುಚ್ಚುವುದರೊಳಗಾಗಿಯೇ ಬುಖಾರವನ್ನು ಪ್ರವೇಶಿಸಲಾಗುವಂತೆ ನಡಗೆಯನ್ನು ಚುರುಕುಮಾಡುವುದು ಅತ್ಯಾವಶ್ಯಕವಾಗಿತ್ತು. ಖೋಜಾ ನಸ್ರೆದ್ದೀನನು ಕಾರವಾನಿನ ಹಿಂಭಾಗದಲ್ಲಿ ಎಲ್ಲಕ್ಕಿಂತಲೂ ಕೊಟ್ಟಕೊನೆಯ ತುದಿಯಲ್ಲಿ ಸವಾರಿಮಾಡಿ ಬರುತ್ತಿದ್ದನು; ದಟ್ಟವಾದ ಮತ್ತು ಭಾರವಾದ ಧೂಳಿನ ಮೋಡ ಅವನನ್ನು ಆವರಿಸಿಕೊಂಡಿತ್ತು. ಇದು ಅವನಿಗೆ ತನ್ನ ಸ್ವಂತದ್ದೇ ಆದ ಪರಮ ಪವಿತ್ರವಾದ ಧೂಳೆನ್ನಿಸಿತು; ಉಳಿದ ದೂರ ದೇಶಗಳ ಧೂಳಿಗಿಂತಲೂ ಈ ಧೂಳು ಹೆಚ್ಚು ಸುವಾಸನೆಯುಳ್ಳದ್ದಾಗಿ ಕಂಡಿತು. ಸೀನುತ್ತಲೂ ಕೆಮ್ಮುತ್ತಲೂ ಅವನು ತನ್ನ ಕತ್ತೆಗೆ ಹೀಗೆ ಹೇಳುತ್ತಿದ್ದನು:

"ಅಂತೂ ಇಲ್ಲಿಗೆ ಬಂದೆವು. ಕಟ್ಟಕಡೆಗೆ ಸ್ವಸ್ಥಾನವನ್ನು ತಲುಪಿದೆವು. ಅಲ್ಲಾನ ದಯದಿಂದ, ಇಲ್ಲಿ ನಮಗೆ ವಿಜಯವೂ ಸುಖವೂ ಕಾದಿದೆ."

---

* ಮಿನರೆಟ್ = ಮಸೀದಿಯ ಸ್ತಂಭಗೋಪುರ.

ಕಾರವಾನ್ ಪಟ್ಟಣದ ಕೋಟೆಯ ಬಳಿ ಬರುವುದಕ್ಕೂ ಕಾವಲಾಳುಗಳು ಕೋಟೆಯ ಬಾಗಿಲು ಹಾಕುವುದಕ್ಕೂ ಸರಿಹೋಯಿತು.

"ತಡೆಯಿರಿ, ನಾವು ಬರುವವರೆಗೆ! ಅಲ್ಲಾ ಒಳ್ಳೆಯದು ಮಾಡುತ್ತಾನೆ ನಿಮಗೆ" ಎಂದು ದೂರದಿಂದಲೇ ಕೂಗಿದನು ಕಾರವಾನಿನ ಮುಖಂಡ, ಒಂದು ಚಿನ್ನದ ನಾಣ್ಯವನ್ನು ಎತ್ತಿ ತೋರಿಸುತ್ತಾ.

ಆದರೆ ಆ ಮೊದಲೇ ಬಾಗಿಲು ಹಾಕಿ ಆಗಿತ್ತು; ಅಗುಣಿಗಳು ಢಂ ಢಣನೆ ಸದ್ದುಮಾಡಿದವು. ಕಾವಲುಸಿಪಾಯಿಗಳು ಬುರುಜುಗಳ ಮೇಲಿನ ಫಿರಂಗಿಗಳ ಬಳಿ ತಮ್ಮ ತಮ್ಮ ಸ್ಥಾನಗಳಲ್ಲಿ ಸಿದ್ಧವಾಗಿ ನಿಂತರು. ಹೊಸ ಗಾಳಿ ಮೆಲ್ಲನೆ ಬೀಸತೊಡಗಿತು. ಮಬ್ಬಾಗವಿದ ಆಕಾಶದಲ್ಲಿ ಎಳೆಗೆಂಪು ಮೆಲ್ಲ ಮೆಲ್ಲನೆ ಕರಗಿಹೋಯಿತು; ಬಾಲಚಂದ್ರನ ಬಿಂಬಖಂಡ ಸ್ಪಷ್ಟವಾಗಿ ಎದ್ದು ಕಾಣಿಸಿತು. ಸಂಧ್ಯಾಪ್ರಕಾಶದಲ್ಲಿ ಸರ್ವತ್ರವ್ಯಾಪಿಯಾದ ಆ ಪ್ರಶಾಂತ ನೀರವತೆಯಲ್ಲಿ ಭಕ್ತರನ್ನು ಸಂಧ್ಯಾಪ್ರಾರ್ಥನೆಗಾಗಿ ಮುಯೆಸೆನ್ನುಗಳ* ತಾರಸ್ವರದ ಸುದೀರ್ಘವಾದ ದನಿಗಳು ನಗರದ ಅಸಂಖ್ಯ ಮಿನರೆಟ್ಟುಗಳಿಂದ ಹೊರಹೊಂಟು ಎಲ್ಲೆಡೆಯೂ ಹರಡತೊಡಗಿತು.

ವರ್ತಕರೂ ವಾಹನಚಾಲಕರೂ ಮಂಡಿಯೂರಿ ಕುಳಿತರು. ಆಗ ಖೋಜಾ ನಸ್ರೆದ್ದೀನನು ತನ್ನ ಕತ್ತೆಯೊಡನೆ ನಿಶ್ಶಬ್ದವಾಗಿ ಬೇರೊಂದು ಕಡೆಗೆ ಹೋದನು.

"ಈ ವರ್ತಕರು ಅಲ್ಲಾನನ್ನು ಪ್ರಾರ್ಥಿಸಲು ಕಾರಣವಿದೆ; ಇವರು ಯಾವುದೋ ಒಂದಕ್ಕಾಗಿ ಅಲ್ಲಾನಿಗೆ ಕೃತಜ್ಞತೆ ಅರ್ಪಿಸಬೇಕಾಗಿದೆ: ಇವತ್ತು ಅವರು ಊಟ ಮಾಡಿದ್ದರು; ಮತ್ತೆ ಈಗಲೂ ಊಟಮಾಡುವ ನಿರೀಕ್ಷಣೆಯಲ್ಲಿದ್ದಾರೆ. ನನ್ನ ನಿಷ್ಠಾವಂತ ಕತ್ತೆಯೇ, ನೀನೂ ನಾನೂ ಊಟ ಮಾಡಿಲ್ಲ; ರಾತ್ರಿಯ ಊಟವೂ ನಮಗಿಲ್ಲ. ಅಲ್ಲಾಗೆ ನಮ್ಮ ಕೃತಜ್ಞತೆ ಬೇಕಾಗಿದ್ದರೆ, ನನಗೊಂದು ಬೋಗುಣಿ ಪಲಾವು, ನಿನಗೆ ಒಂದು ಕ್ಲೋವರ್ ಕಂತೆ—ಇಷ್ಟನ್ನು ಕಳಿಸಿಕೊಡಲಿ" ಎಂದು ಹೇಳಿಕೊಳ್ಳುತ್ತಿದ್ದನು.

---

* ಮುಯೆಸೆನ್ = ಮಸೀದಿಯ ಸ್ತಂಭಗೋಪುರದಿಂದ ಭಕ್ತರನ್ನು ಪ್ರಾರ್ಥನೆಗೆ ಆಹ್ವಾನಿಸುವ ಘೋಷಕ.

ಕತ್ತೆಯನ್ನು ದಾರಿಯ ಪಕ್ಕದ ಒಂದು ಮರಕ್ಕೆ ಕಟ್ಟಿಹಾಕಿ, ಅದರ ಪಕ್ಕದಲ್ಲೆ ಒಂದು ಕಲ್ಲನ್ನು ತಲೆದಿಂಬಾಗಿಟ್ಟುಕೊಂಡು ಬರಿಯ ನೆಲದ ಮೇಲೆ ಮಲಗಿದನು. ಕತ್ತೆತ್ತಿ ಮೇಲೆ ನೋಡಿದರೆ ಮಬ್ಬಾದ ಸ್ವಚ್ಛಾಕಾಶದಲ್ಲಿ ಪ್ರಕಾಶಮಾನವಾಗಿ ಹರಡಿದ ನಕ್ಷತ್ರಜಾಲ ಕಾಣುತ್ತಿತ್ತು. ಪ್ರತಿಯೊಂದು ನಕ್ಷತ್ರಪುಂಜವೂ (Constellation) ಅವನಿಗೆ ಚೆನ್ನಾಗಿ ಪರಿಚಿತವಾಗಿತ್ತು. ಈ ಹತ್ತು ವರ್ಷಗಳಲ್ಲಿ ಅವನು ಎಷ್ಟು ಸಲ ಆ ವಿಶಾಲಾಕಾಶವನ್ನು ನೋಡಿದ್ದನೊ! ಹೀಗೆ ಆಕಾಶವನ್ನು ನೋಡುತ್ತಾ ಮೌನವಾಗಿ ಆಲೋಚಿಸುವ ಈ ಸಮಯಗಳು ತನ್ನನ್ನು ಈ ಪ್ರಂಪಂಚದಲ್ಲಿರುವ ಅತ್ಯಂತ ಶ್ರೀಮಂತನಿಗಿಂತಲೂ ಹೆಚ್ಚು ಶ್ರೀಮಂತನನ್ನಾಗಿ ಮಾಡಿದ್ದವೆಂದು ಅವನಿಗನ್ನಿಸುತ್ತಿತ್ತು. ಏಕೆಂದರೆ ಈ ಪ್ರಪಂಚದಲ್ಲಿ ಒಬ್ಬೊಬ್ಬನಿಗೂ ಒಂದೊಂದು ಸ್ಥಾನ ನಿರ್ದಿಷ್ಟವಾಗಿದೆ: ಐಶ್ವರ್ಯವಂತನಾದಾತನು ಚಿನ್ನದ ತಟ್ಟೆಬಟ್ಟಲುಗಳಲ್ಲಿ ಊಟತಿಂಡಿ ತೆಗೆದುಕೊಳ್ಳಬಹುದಾದರೂ, ರಾತ್ರಿ ಕಾಲವನ್ನು ಅವನು ಮನೆಯೊಳಗೇ ಕಳೆಯುವುದು ಅವಶ್ಯವಾಗಿದೆ; ಆದ್ದರಿಂದ ನಡು ರಾತ್ರಿಯ ಪ್ರಶಾಂತ ಪರಿಸ್ಥಿತಿಯಲ್ಲಿ ಅಂಬರವನ್ನವಲೋಕಿಸುತ್ತ ನಕ್ಷತ್ರ ನಿಬಿಡವಾದ ಶಾಂತ ನೀಲಾಕಾಶದಲ್ಲಿ ನಮ್ಮ ಭೂಮಿ ಹಾರಿಹೋಗುತ್ತಿದೆಯೆಂಬ ಭಾವನೆಯನ್ನು ಮನಸ್ಸಿನಲ್ಲಿ ಭಾವಿಸಿಕೊಳ್ಳುವುದಕ್ಕೆ ಅವನು ಅಸಮರ್ಥನಾಗಿದ್ದಾನೆ.

ಇವನು ಹೀಗೆ ಆಲೋಚಿಸುತ್ತಿರುವಲ್ಲಿ ಇತ್ತ ಕಡೆ ಕೋಟೆಗೋಡೆಯ ಸುತ್ತಮುತ್ತ ಅಲ್ಲಲ್ಲೇ ಗುಂಪಾಗಿದ್ದ ಕಾರವಾನ್‌ಶಾಲೆ ಮತ್ತು ಟೀ ಅಂಗಡಿಗಳಲ್ಲಿ ಒಲೆಯ ಮೇಲೆ ಭಾರಿ ಭಾರಿ ಕಡಾಯಿಗಳನ್ನಿಟ್ಟು ಬೆಂಕಿ ಹೊತ್ತಿಸಿದರು; ಕಡಿಯುವುದಕ್ಕೆ ಎಳೆದುಕೊಂಡುಹೋಗುತ್ತಿರುವ ಕುರಿಗಳು ಕರುಣಸ್ವರದಿಂದ ಅರಚತೊಡಗಿದವು. ಅನೇಕ ಅನುಭವಗಳಿಂದ ವಿವೇಕಶಾಲಿಯಾಗಿದ್ದ ನಸ್ರೆದ್ದೀನನು ಮನಸ್ಸನ್ನು ಅಲುಗಿಸಿ ತಲ್ಲಣಗೊಳಿಸುವ ಆಹಾರದ ವಾಸನೆಯನ್ನು ಹೊತ್ತು ತರುವ ಆ ಕಡೆಯ ಗಾಳಿಗೆ ಸಿಕ್ಕದಂತೆ, ಅದು ತನ್ನ ಶಾಂತಿಯನ್ನು ಕಲಕದಂತೆ, ಸುರಕ್ಷಿತವಾದ ಒಂದು ಸ್ಥಳವನ್ನು ಆಯ್ದುಕೊಂಡು ಅಲ್ಲಿ ಆ ರಾತ್ರೆ ವಿಶ್ರಮಿಸಿಕೊಂಡನು. ಬುಖಾರದ ಪದ್ಧತಿಗಳನ್ನು ಚೆನ್ನಾಗಿ ಅರಿತವನಾದ್ದರಿಂದ ಮರುದಿನ ಕೋಟೆಯ ಬಾಗಿಲಿನಲ್ಲಿ ತೆರಿಗೆ ಕೊಡುವುದಕ್ಕೆ ಅನುಕೂಲಿಸಲೆಂದು ತನ್ನ ಹತ್ತಿರ ಉಳಿದಿದ್ದ ಕೊಟ್ಟಕೊನೆಯ ನಾಣ್ಯವನ್ನು ಉಳಿಸಿಟ್ಟುಕೊಳ್ಳಬೇಕೆಂದು ಅವನು ನಿರ್ಧರಿಸಿದ್ದನು.

'ಎಷ್ಟೋ ಹೊತ್ತು ಪಕ್ಕದಿಂದ ಪಕ್ಕಕ್ಕೆ ಹೊರಳುತ್ತ ಮಲಗಿದ್ದನು; ಆದರೆ ನಿದ್ದೆ ಬರಲೇ ಇಲ್ಲ. ಹಸಿವಲ್ಲ ಅವನಿಗೆ ನಿದ್ದೆಹತ್ತದಂತೆ ಮಾಡಿದ್ದು; ಆದರೆ ಅವನ ಮನಸ್ಸನ್ನು ಮುತ್ತಿ ಚಿತ್ರಹಿಂಸೆ ಮಾಡುತ್ತಿದ್ದ ಕಟು ಯೋಚನೆಗಳು ನಿದ್ದೆಯನ್ನು ಓಡಿಸಿಬಿಟ್ಟವು.

ಬಿಸಿಲಿನಲ್ಲಿ ಬೆಂದು ಕಂದುತಿರುಗಿದ ತಾಮ್ರವರ್ಣದ ಮುಖದಲ್ಲಿ ಚಿಕ್ಕ ಕಪ್ಪು ಗಡ್ಡದಿಂದಲೂ ತಿಳಿಗಣ್ಣುಗಳ ಕೊನೆಯಲ್ಲಿ ತುಂಟತನದ ಮಿಟುಕಿನಿಂದಲೂ ಕೂಡಿದ ಖೋಜಾ ನಸ್ರೆದ್ದೀನ್ ಕಾರ್ಯಚತುರನೂ ನಿತ್ಯಸಂತೋಷಿಯೂ ಆದ ಆಸಾಮಿ. ಅಂಥವನು ತನ್ನ ಜನ್ಮಭೂಮಿಯನ್ನು ತುಂಬ ಪ್ರೀತಿಸುತ್ತಿದ್ದನು; ಉಳಿದೆಲ್ಲಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದನು. ತೇಪೆ ತುಂಬಿದ ಅಂಗಿ ತೊಟ್ಟು, ಜಿಡ್ಡುಗಟ್ಟಿದ ಗುತ್ತನೆಯ ಟೋಪಿ ಹಾಕಿಕೊಂಡು ಒಡ್ಡೊಡ್ಡಾದ ಬೂಟುಗಳನ್ನು ಮೆಟ್ಟಿ ತಿರುಗುವ ತನ್ನ ಸಂಚಾರಕಾಲದಲ್ಲಿ ಅವನು ಬುಖಾರದಿಂದ ಹೆಚ್ಚು ಹೆಚ್ಚು ದೂರಕ್ಕೆ ಪ್ರಯಾಣ ಮಾಡಿದಂತೆಲ್ಲ ಅವನ ಹುಟ್ಟೂರಿನ ಪ್ರೇಮ ಹೆಚ್ಚು ಹೆಚ್ಚು ಗಟ್ಟಿಯಾಗುತ್ತಿತ್ತು; ಅದನ್ನು ಬಿಟ್ಟು ಬಂದದ್ದಕ್ಕಾಗಿ ಕೊರಗೂ ಹೆಚ್ಚಾಗುತ್ತಿತ್ತು. ತನ್ನೂರನ್ನು ಅಗಲಿ ಹೋಗಿ ಪ್ರವಾಸಿತನಾಗಿರಬೇಕಾಗಿದ್ದ ಆ ಸಮಯಗಳಲ್ಲೆಲ್ಲ ಊರಿನ ನೆನಪು ಅವನ ಮನಸ್ಸಿನಲ್ಲಿ ಅಚ್ಚೊತ್ತಿದಂತೆ ನಿಂತಿತ್ತು: ಅಪರ ಸಣ್ಣ ಸಣ್ಣ ಬೀದಿಗಳು—ಅರಬ* ಅಲ್ಲಿ ಹೋಗುವಾಗ ಎರಡು ಕಡೆಯ ಮನೆಗಳ ಮಣ್ಣುಗೋಡೆಗಳಿಗೂ ತಾಕಿ ಕೆರೆಯುವಂತೆ ಬಹು ಇಕ್ಕಟ್ಟಾದ ಆ ಬೀದಿಗಳು, ಸೂರ್ಯಾಸ್ತಗಳಲ್ಲಿ ಆ ಬೆಂಕಿಬೆಳಗನ್ನು ಮೊದಲು ತಮ್ಮ ತಲೆಯಲ್ಲಿ ತಳೆದು ಪ್ರತಿಫಲಿಸುವ ಹೊಳಪಿಟ್ಟಿಗೆಗಳ ತುದಿಯುಳ್ಳ ಎತ್ತರವಾದ ಮಿನರೆಟ್ಟುಗಳು, ತಮ್ಮ ಕೊಂಬೆಗಳಲ್ಲಿ ಬೆಳ್ಳಕ್ಕಿಗಳ ಗೂಡುಗಳಿಗೆ ಆಶ್ರಯ ಕೊಟ್ಟಿರುವ ಪುರಾತನ ಪವಿತ್ರ ಪ್ಲೇನ್ ಮರಗಳು, ಇವೆಲ್ಲವುಗಳನ್ನು ಅವನು ಸದಾ ನೆನೆಯುತ್ತಿದ್ದನು.

ಮರ್ಮರ ಶಬ್ದಮಾಡುವ ಪಾಪ್ಲರ್ ಮರಗಳ ನೆರಳಿನಲ್ಲಿ ನೀರ್ಗಾಲುವೆಗಳ ಆಚೆಕಡೆ ಇದ್ದ ಹರ್ಷದಾಯಕವಾದ ಟೀ ಅಂಗಡಿಗಳನ್ನೂ, ಅತಿ ಸೆಕೆಯಾಗಿದ್ದ ಅಡಿಗೆಯಂಗಡಿಗಳಲ್ಲಿ ಬೇಯುತ್ತಿದ್ದ ಆಹಾರದ ವಾಸನೆ ಮತ್ತು ಹೊಗೆಯನ್ನೂ,

* ಅರಬ= ಸ್ಥಳೀಯವಾದ ಒಂದು ಬಗೆಯ ಬಂಡಿ.

ಸಂತೆಪೇಟೆಗಳ ಕಲಬೆರಕೆಯ ಸದ್ದುಗದ್ದಲವನ್ನೂ ಅವನು ಸದಾ ನೆನೆಯು ತ್ತಿದ್ದನು; ತನ್ನ ಜನ್ಮಭೂಮಿಯ ಕಾಡುಮೇಡುಗಳು, ನದಿಗಳು, ಹಳ್ಳಿಗಳು, ಹೊಲಗದ್ದೆಗಳು, ಹುಲ್ಲುಗಾವಲುಗಳು, ಮರುಭೂಮಿಗಳು—ಎಲ್ಲವೂ ಅವನ ನೆನಪಿಗೆ ಬರುತ್ತಿದ್ದವು. ಬಾಗ್ದಾದಿನಲ್ಲೊ ದಮಾಸ್ಕಸಿನಲ್ಲೊ ಇದ್ದಾಗ ತನ್ನ ಸ್ವದೇಶಿಯೊಬ್ಬನನ್ನು ಕಂಡಾಗ—ಗುತ್ತನೆ ಟೋಪಿಯ ಮಾದರಿಯಿಂದಲೋ, ಉಡುಪನ್ನು ಕತ್ತರಿಸಿ ಹೊಲಿದಿರುವ ರೀತಿಯಿಂದಲೋ ಅವನು ತನ್ನೂರಿನವ ನೆಂದು ಗುರುತಿಸಿದಾಗ—ಖೋಜಾ ನಸ್ರೆದ್ದೀನನ ಹೃದಯದ ಬಡಿತ ಒಂದು ಕ್ಷಣ ನಿಲ್ಲುತ್ತಿತ್ತು; ಅವನ ಕೊರಳು ಕಟ್ಟುತ್ತಿತ್ತು.

ಸ್ವದೇಶಕ್ಕೆ ಮರಳಿ ಬಂದಾಗ ಅದು ತಾನು ಬಿಟ್ಟು ಹೋದ ಕಾಲದ ಲ್ಲಿದ್ದುದಕ್ಕಿಂತ ಹೆಚ್ಚು ಅಸುಖವಾಗಿದ್ದದ್ದು ಅವನಿಗೆ ಗೋಚರವಾಯಿತು. ವೃದ್ಧ ಅಮೀರನು ಬಹಳ ಹಿಂದೆಯೇ ಗೋರಿಯನ್ನು ಸೇರಿದ್ದನು. ಕಳೆದ ಎಂಟು ವರ್ಷಗಳೊಳಗಿನ ಅಲ್ಪ ಅವಧಿಯಲ್ಲಿ ಹೊಸ ಅಮೀರನು ಬುಖಾರ ವನ್ನು ವಿನಾಶದ ಅಂಚಿಗೆ ತಂದಿದ್ದನು: ಸೇತುವೆಗಳು ಮುರಿದು ಬಿದ್ದಿದ್ದವು; ಗೋದಿ ಬಾರ್ಲಿ ಬೆಳೆಗಳು ಅತ್ಯಲ್ಪವಾಗಿದ್ದವು; ಬಿಸಿಲಿನಲ್ಲಿ ಬೆಂದುಹೋಗಿದ್ದವು; ವ್ಯವಸಾಯವೂ ಒರಟೊರಟು; ನೀರು ಹಾಯಿಸುವ ಕಾಲುವೆಗಳು ಒಣಗಿ ಹೆಪ್ಪುಗಟ್ಟಿ ಶಾಖಕ್ಕೆ ಸೀಳಿಹೋಗಿದ್ದವು; ಹೊಲಗದ್ದೆಗಳು ಹಾಳುಬಿದ್ದಿದ್ದವು; ಕಳೆಗಳೂ ಮುಳ್ಳುಗಳೂ ಬೆಳೆದು ಜೆಳೆ ಹಾಳಾಗಿತ್ತು; ತೋಟಗಳು ನೀರಿಲ್ಲದೆ ಬಾಡಿಹೋಗಿದ್ದವು; ರೈತರಿಗೆ ಆಹಾರವಾಗಲಿ ದನಗಳಾಗಲಿ ಇರಲಿಲ್ಲ; ಭಿಕ್ಷುಕರು ಹೆಚ್ಚಿದ್ದರು; ತಮ್ಮಂತೆಯೇ ಅಸಹಾಯರಾದ ಬೇರೆಯವರನ್ನು ಭಿಕ್ಷ ಕೊಡಿರೆಂದು ಬೇಡುತ್ತ ದಾರಿಯ ಇಕ್ಕೆಲಗಳಲ್ಲೂ ಸಾಲಾಗಿ ಕುಳಿತಿರು ತ್ತಿದ್ದರು.

ಹೊಸ ಅಮೀರನು ಪ್ರತಿಯೊಂದು ಹಳ್ಳಿಗೂ ಸಿಪಾಯಿಗಳ ತಂಡ ವೊಂದನ್ನು ಕಳಿಸಿದ್ದನು; ಆ ಸಿಪಾಯಿಗಳಿಗೆ ತಮ್ಮ ಸ್ವಂತ ಖರ್ಚಿನಿಂದ ಬಿಟ್ಟಿಯಾಗಿ ಅನ್ನ ಹಾಕಬೇಕೆಂದು ಹಳ್ಳಿಗರಿಗೆ ಅಜ್ಞೆ ಕಳಿಸಿದ್ದನು. ಅವನು ಅನೇಕ ಮಸೀದಿಗಳನ್ನು ಸ್ಥಾಪಿಸಿ, ಕೆಲಸ ಆರಂಭವಾದ ಮೇಲೆ ಅವನ್ನೆಲ್ಲ ಕಟ್ಟಿ ಮುಗಿಸಬೇಕೆಂದು ಪ್ರಜೆಗಳಿಗೆ ಅಜ್ಞೆಮಾಡಿದನು. ಹೊಸ ಅಮೀರ ಬಹಳ ದೈವಭಕ್ತ; ಷೇಕ್ ಬಾಹಾ ಎದ್-ದೀನನ ಗೋರಿಗೆ ವರ್ಷಕ್ಕೆರಡು

ಬಾರಿ ತಪ್ಪದೆ ಯಾತ್ರೆಹೋಗುತ್ತಿದ್ದನು; ಅತ್ಯಂತ ಪವಿತ್ರವೂ ಅಸದೃಶವೂ ಆದ ಷೇಕ್ ಬಾಹಾ ಎದ್-ದೀನನ ಅವಶೇಷಗಳನ್ನೊಳಗೊಂಡ ಆ ಗೋರಿ ಬುಖಾರದ ಸುತ್ತಮುತ್ತಲಿನಲ್ಲೇ ಇತ್ತು. ಅದುವರೆಗೂ ಇದ್ದ ನಾಲ್ಕು ತೆರಿಗೆಗಳ ಜೊತೆಗೆ ಮತ್ತೆ ಮೂರನ್ನು ಹೊಸದಾಗಿ ಸೇರಿಸಿದನು; ಪ್ರತಿಯೊಂದು ಸೇತುವೆಯ ಬಳಿಯೂ ಸುಂಕವನ್ನು ವಿಧಿಸಿದನು; ವ್ಯಾಪಾರದ ಮೇಲೆ ತೆರಿಗೆ ವಿಧಿಸಿದನು; ಕಂದಾಯ ಹೆಚ್ಚಿಸಿದನು; ಕೀಳು ಲೋಹ ಬೆರಸಿದ ಕಳಪೆ ನಾಣ್ಯಗಳನ್ನು ಬಹುವಾಗಿ ಮುದ್ರಿಸಿದನು. ಕುಶಲ ಕೈಗಾರಿಕೆಗಳು ಅವನತಿ ಹೊಂದಿ ಕ್ಷೀಣಿಸುತ್ತಿದ್ದವು; ವ್ಯಾಪಾರವೂ ಇಳಿಮುಖವಾಗಿತ್ತು.

ಖೋಜಾ ನಸ್ರೆದ್ದೀನನ ಸ್ವದೇಶಾಗಮನ ವಿಷಾದನೀಯವಾಗಿತ್ತು.

ಮರುದಿನ ಮುಂಜಾನೆ ಮುಯೆಸೆನ್‌ಗಳು ಎಲ್ಲ ಮಿನರೆಟ್ಟುಗಳಿಂದಲೂ ತಮ್ಮ ಆಹ್ವಾನವನ್ನು ಘೋಷಿಸಿದರು. ಕೋಟೆಯ ಬಾಗಿಲುಗಳು ತೆರೆದವು. ಗಂಟೆಗಳ ಗಣಗಣ ಶಬ್ದದೊಡನೆ ಕಾರವಾನ್ ಪಟ್ಟಣವನ್ನು ಪ್ರವೇಶಿಸಿತು.

ಹೆಬ್ಬಾಗಿಲಿನಿಂದ ಒಳಕ್ಕೆ ಹೋದಮೇಲೆ ಕಾರವಾನ್ ತಟ್ಟನೆ ನಿಂತುಬಿಟ್ಟಿತು: ಕಾವಲುಗಾರರು ಅಡ್ಡಹಾಕಿ ದಾರಿಯನ್ನು ಕಟ್ಟಿಬಿಟ್ಟರು. ಅವರೋ ಲೆಕ್ಕವಿಲ್ಲದಷ್ಟು ಮಂದಿ; ಕೆಲವರು ಜೋಡು ಮೆಟ್ಟಿ ಚೆನ್ನಾಗಿ ಉಡುಪು ತೊಟ್ಟಿದ್ದರು; ಅಮೀರನ ಸೇವೆಯಲ್ಲಿ ಮೇದು ಕೊಬ್ಬುವುದಕ್ಕೆ ಕಾಲಾವಕಾಶ ಸಾಲದಿದ್ದ ಉಳಿದವರು ಬರಿಗಾಲಿನಲ್ಲಿದ್ದು ಅರೆಬೆತ್ತಲೆಯಾಗಿದ್ದರು. ಅವರೆಲ್ಲರೂ ಮುಂಬರುವ ಸೂರೆಯಲ್ಲಿ ತಮ್ಮ ಪಾಲಿಗೆ ಬರುವುದರ ವಿಷಯವಾಗಿ ವಿವಾದ ಮಾಡುತ್ತಾ ಕೂಗಾಡುತ್ತಾ ಒಬ್ಬರನ್ನೊಬ್ಬರು ನೂಕಾಡುತ್ತಿದ್ದರು. ಕಟ್ಟಕಡೆಗೆ ತೆರಿಗೆ ವಸೂಲಿಗಾರನು ಒಂದು ಟೀ ಅಂಗಡಿಯಿಂದ ಹೊರಬಂದನು: ಬೊಜ್ಜು ಮೈ; ನಿದ್ದೆಗಣ್ಣು; ಬೂದಿ ಬಣ್ಣದ ತೋಳಿನ ರೇಷ್ಮೆ ಖಲತ್ ತೊಟ್ಟಿದ್ದನು; ಕಾಲುಚೀಲವಿಲ್ಲದೆ ಬರಿ ಹೆಜ್ಜೆಗಳನ್ನು ಸ್ಲಿಪರ್‌ಗಳಲ್ಲಿ ತೂರಿಸಿದ್ದನು; ಅವನ ಊದಿದ ಮುಖ ವಿಷಯಲೋಲುಪತೆಯ ಮತ್ತು ದುರ್ವ್ಯಸನದ ಲಕ್ಷಣಗಳನ್ನೆಲ್ಲ ಹೊತ್ತು ತೋರುತ್ತಿತ್ತು. ಅವನು ವರ್ತಕರ ಕಡೆಗೆ ತನ್ನ ದುರಾಶೆಯ ದೃಷ್ಟಿಯನ್ನು ಬೀರಿ ಹೀಗೆಂದನು:

"ಓ ವರ್ತಕರೇ, ನಿಮಗೆಲ್ಲ ಸ್ವಾಗತ! ನಿಮ್ಮ ವ್ಯಾಪಾರದಲ್ಲಿ ನೀವು ಯಶಸ್ವಿಗಳಾಗುವಂತಾಗಲಿ! ಯಾವನಾದರೂ ತನ್ನ ವಸ್ತುಗಳಲ್ಲಿ ಏನ್ನೊಂದು

ಅಲ್ಪನ್ನೇ ಆದರೂ ಮುಚ್ಚುಮರೆಮಾಡಿದ ಪಕ್ಷದಲ್ಲಿ ಅವನನ್ನು ಅಂಗಾಲಿನ ಮೇಲೆ ಬೆತ್ತದೇಟು ಹೊಡೆದು ಸಾಯಿಸತಕ್ಕದ್ದೆಂದು ಅಮೀರರು ಆಜ್ಞೆಮಾಡಿದ್ದಾರೆ; ತಿಳಿದಿರಿ.”

ವರ್ತಕರಿಗೆ ದಿಕ್ಕುತೋಚದಂತಾಯಿತು; ಭಯವಾಯಿತು; ಮೌನವಾಗಿ ಗಡ್ಡ ನೀವಿಕೊಳ್ಳತೊಡಗಿದರು. ತೆರಿಗೆ ವಸೂಲಿಯ ಅಧಿಕಾರಿ ಕಾಪು ಸಿಪಾಯಿಗಳ ಕಡೆ ತಿರುಗಿ ತನ್ನ ದಪ್ಪ ಬೆರಳುಗಳಿಂದ ಸೂಚನೆ ಮಾಡಿದನು. ಅದುವರೆಗೂ ಅಸಮಾಧಾನದಿಂದ ಚಡಪಡಿಸುತ್ತಿದ್ದ ಆ ಸಿಪಾಯಿಗಳು ಹೋ ಎಂದು ಕೂಗಿ ಅಬ್ಬರಿಸುತ್ತಾ ಒಂಟೆಗಳ ಮೇಲೆ ಬಿದ್ದರು. ತಮ್ಮ ಆತುರದಲ್ಲಿ ಒಬ್ಬರನ್ನೊಬ್ಬರು ನೂಕುತ್ತಾ ಕೂದಲುಹಗ್ಗಗಳನ್ನು ತಮ್ಮ ಕತ್ತಿಗಳಿಂದ ಕತ್ತರಿಸಿ ಗಂಟುಮೂಟೆಗಳನ್ನು ಚುಚ್ಚಿ ಕಿವಿದು ಬಿಚ್ಚಿಹಾಕಿದರು; ಕಿಂಕಾಪು, ರೇಷ್ಮೆ, ಮುಖಮಲ್ಲು, ಬಟ್ಟೆಗಳು, ಮೆಣಸು, ಟೀ ಮತ್ತು ಅಂಬರು ಪೆಟ್ಟಿಗೆಗಳು, ಅಮೂಲ್ಯವಾದ ಅತ್ತರು ಸೀಸೆಗಳು, ಟಿಬೆಟ್ಟಿನ ಮೂಲಿಕೆಗಳು—ಇವೆಲ್ಲ ರಸ್ತೆಯಲ್ಲಿ ಬಿದ್ದು ಚೆಲ್ಲಾಪಿಲ್ಲಿಯಾಗುವಂತೆ ಸಾಮಾನು ಕಟ್ಟುಗಳನ್ನು ಬಿಚ್ಚಿ ಎಳೆದಾಡಿದರು.

ಭಯಭ್ರಾಂತರಾದ ವರ್ತಕರ ನಾಲಿಗೆ ಕಟ್ಟಿಹೋಯಿತು.

ಎರಡು ನಿಮಿಷ ಕಳೆಯುವುದರೊಳಗೆ ಪರೀಕ್ಷೆ ಮುಗಿದುಹೋಯಿತು. ಸಿಪಾಯಿಗಳು ತಮ್ಮ ಯಜಮಾನನ ಹಿಂದೆ ಸಾಲುಗಟ್ಟಿ ನಿಂತರು; ಅವರ ಅಂಗಿಗಳೂ ಜೇಬುಗಳೂ ಉಬ್ಬಿ ಏರಿಳಿಯುತ್ತಿದ್ದವು. ಆಮೇಲೆ ತೆರಿಗೆ ವಸೂಲಿ ಪ್ರಾರಂಭವಾಯಿತು: ಪದಾರ್ಥಗಳ ಮೇಲೆ ತೆರಿಗೆ; ಪಟ್ಟಣಪ್ರವೇಶಕ್ಕೆ ತೆರಿಗೆ. ಖೋಜಾ ನಸ್ರೆದ್ದೀನನ ಹತ್ತಿರ ವ್ಯಾಪಾರದ ಸಾಮಾನೇನೂ ಇರಲಿಲ್ಲ; ಆದ್ದರಿಂದ ಪಟ್ಟಣಪ್ರವೇಶದ ತೆರಿಗೆಯೊಂದನ್ನು ಮಾತ್ರ ಅವನು ಕೊಡಬೇಕಾಗಿತ್ತು.

“ನೀನು ಎಲ್ಲಿಂದ ಬಂದೆ? ಏಕೆ ಬಂದೆ?” ಎಂದು ತೆರಿಗೆ ವಸೂಲಿಗಾರ ಕೇಳಿದನು.

ಗುಮಾಸ್ತನು ಲಾಳದ ಕಡ್ಡಿಯ ಲೇಖಣಿಯನ್ನು ಶಾಯಿಕೊಂಬಿನೊಳಗೆ ಅದ್ದಿ ಒಂದು ದಪ್ಪ ಪುಸ್ತಕದಲ್ಲಿ ಖೋಜಾ ನಸ್ರೆದ್ದೀನನ ಹೇಳಿಕೆಯನ್ನು ಬರೆದುಕೊಳ್ಳಲು ಸಿದ್ಧಪಡಿಸಿಕೊಂಡನು.

" ನಾನು ಇರಾನಿನಿಂದ ಬಂದೆ, ಮಹಾಸ್ವಾಮಿ. ಇಲ್ಲಿ, ಈ ಬುಖಾರ ದಲ್ಲಿ ನನ್ನ ನೆಂಟರು ಕೆಲವರು ವಾಸಮಾಡುತ್ತಾರೆ."

ತೆರಿಗೆ ವಸೂಲಿಯ ಅಧಿಕಾರಿ ಹೀಗೆಂದನು :

" ಹಾಗೋ. ನೀನು ನಿನ್ನ ನೆಂಟರನ್ನು ನೋಡುವುದಕ್ಕೆ ಬಂದಿದ್ದೀಯ. ಈ ಸಂದರ್ಭದಲ್ಲಿ ನೀನು ಆಗಂತುಕರ ತೆರಿಗೆಯನ್ನು ಕೊಡಬೇಕು."

" ಆದರೆ ನಾನು ಅವರನ್ನು ನೋಡುವುದಕ್ಕೆ ಬಂದಿಲ್ಲ. ಒಂದು ಮುಖ್ಯ ಕೆಲಸಕ್ಕಾಗಿ ಬಂದಿದ್ದೇನೆ" ಎಂದು ಖೋಜಾ ನಸ್ರೆದ್ದೀನ್ ಎದುರು ಮಾತಾಡಿ ದನು.

" ಕೆಲಸದ ಮೇಲೋ ! " ಎಂದು ಅಬ್ಬರಿಸಿದನು ತೆರಿಗೆಯ ಅಧಿಕಾರಿ ; ಅವನ ಕಣ್ಣು ಜ್ವಲಿಸತೊಡಗಿತು. " ಹಾಗಾದರೆ ನೀನು ನೆಂಟರನ್ನು ನೋಡುವು ದಕ್ಕೆ ಮತ್ತು ಕೆಲಸದಮೇಲೆ—ಎರಡಕ್ಕೂ ಬಂದಿದ್ದೀಯ. ಆಗಂತುಕರ ತೆರಿಗೆ ಯನ್ನು ಕೊಡು, ಕೆಲಸದ ತೆರಿಗೆ ಕೊಡು, ಮಾರ್ಗದಲ್ಲಿ ನಿನ್ನನ್ನು ಕಳ್ಳಕಾಕ ರಿಂದ ರಕ್ಷಿಸಿದ ಅಲ್ಲಾನ ಮಹಿಮೆಯನ್ನು ಸಾರುವುದಕ್ಕಾಗಿ ಕಟ್ಟಿಸಿರುವ ಮಸೀದಿಗಳ ಅಲಂಕಾರಕ್ಕಾಗಿ ತಕ್ಕಷ್ಟು ಚಂದಾ ಕೊಡು."

" ಅಲ್ಲಾ ಈಗ ಇವನಿಂದ ನನ್ನನ್ನು ಬಿಡಿಸಿದರೆ ಸಾಕಾಗಿದೆ ; ಕಳ್ಳರ ಕೈಗೆ ಸಿಕ್ಕದೆ ಒದುಕಿಕೊಳ್ಳಲು ನಾನೇ ದಾರಿ ಹುಡುಕಿಕೊಳ್ಳುತ್ತಿದ್ದೆ " ಎಂದು ಕೊಂಡ ಖೋಜಾ ನಸ್ರೆದ್ದೀನ್. ಆದರೆ ಅವನು ನಾಲಗೆಯನ್ನು ಬಿಗಿಹಿಡಿದು ಕೊಂಡನು ; ಈ ಸಂಭಾಷಣೆಯ ಒಂದೊಂದು ಮಾತಿಗೂ ತಾನು ಹತ್ತು ಟಂಗ* ಗಳಿಗಿಂತಲೂ ಹೆಚ್ಚು ಹಣ ತೆರಬೇಕಾಗುವುದೆಂದು ಲೆಕ್ಕಹಾಕಿ ನಾಲಿಗೆ ಬಿಗಿ ಹಿಡಿದುಕೊಂಡನು. ತನ್ನ ಚೀಲ ಬಿಚ್ಚಿ ದುರಾಶೆಯಿಂದ ದುರುಗುಟ್ಟಿ ನೋಡುವ ಸಿಪಾಯಿಗಳ ತೀವ್ರದೃಷ್ಟಿಯನ್ನು ತಾಳಿಕೊಂಡೇ ತೆರಿಗೆಯ ಹಣವನ್ನೆಣಿಸಿ ದನು : ಪಟ್ಟಣಪ್ರವೇಶದ ತೆರಿಗೆ, ಆಗಂತುಕರ ತೆರಿಗೆ, ವ್ಯಾಪಾರದ ತೆರಿಗೆ, ಮಸೀದಿಗಳ ಅಲಂಕಾರಕ್ಕೆ ಚಂದಾ—ಎಲ್ಲವನ್ನೂ ಎಣಿಸಿ ಕೊಟ್ಟುಬಿಟ್ಟನು. ತೆರಿಗೆ ಅಧಿಕಾರಿಯು ತೀಕ್ಷ್ಣದೃಷ್ಟಿಯಿಂದ ಸಿಪಾಯಿಗಳ ಕಡೆ ನೋಡಿದನು ; ಅವರು ಅತ್ತ ತಿರುಗಿ ನಡೆದರು. ಗುಮಾಸ್ತನು, ಪುಸ್ತಕದಲ್ಲಿ ಮೂಗು ಮುಳು ಗಿಸಿ ತನ್ನ ಲಾಳದ ಲೇಖಣಿಯಿಂದ ಗೀಚುತ್ತಿದ್ದನು.

---

* ಬುಖಾರದಲ್ಲಿ ಬಳಸುತ್ತಿದ್ದ ನಾಣ್ಯ.

ಹಣ ಕೊಟ್ಟಾದಮೇಲೆ ಖೋಜಾ ನಸ್ರೆದ್ದೀನನು ಆ ಸ್ಥಳವನ್ನು ಬಿಟ್ಟು ಹೋಗುವುದರಲ್ಲಿದ್ದನು. ಆಗ ಅವನ ಚೀಲದಲ್ಲಿ ಇನ್ನೂ ಕೆಲವು ನಾಣ್ಯಗಳು ಉಳಿದಿದ್ದ ಸಂಗತಿ ತೆರಿಗೆ ಅಧಿಕಾರಿಗೆ ಕಂಡುಬಂತು. "ನಿಲ್ಲು!" ಎಂದು ಅವನು ಅಪ್ಪಣೆಮಾಡಿದನು. "ನಿನ್ನ ಕತ್ತೆಗೆ ತೆರಿಗೆ ಕೊಡುವವರು ಯಾರು? ನೀನು ನೆಂಟರನ್ನು ನೋಡುವುದಕ್ಕೆ ಹೋಗುತ್ತೀಯೆಂದಾದರೆ, ನಿನ್ನ ಕತ್ತೆ ಕೂಡ ತನ್ನ ನೆಂಟರನ್ನು ನೋಡುವುದಕ್ಕೆ ಹೋಗುತ್ತದೆ ಎಂದರ್ಥ" ಎಂದನು.

"ತಾವು ಹೇಳುವುದು ಸರಿ, ಓ ಪರಮ ವಿವೇಕವಂತ ಮಹಾಸ್ವಾಮಿಗಳೇ" ಎಂದು ಖೋಜಾ ನಸ್ರೆದ್ದೀನನು ಬಹು ನಯವಾಗಿ ಮರುನುಡಿದನು; ನುಡಿನುಡಿಯುತ್ತಲೇ ಹಣದ ಚೀಲವನ್ನು ಮತ್ತೊಮ್ಮೆ ಬಿಚ್ಚಿದನು. "ನಿಜವಾಗಿಯೂ ನನ್ನ ಕತ್ತೆಗೆ ಬುಖಾರದಲ್ಲಿ ಬಹುಮಂದಿ ನೆಂಟರಿರಬೇಕು. ಹಾಗಲ್ಲದಿದ್ದರೆ, ಇಲ್ಲಿನ ನಡವಳಿಕೆಯ ರೀತಿಯನ್ನು ಗಮನಿಸಿದರೆ, ನಿಮ್ಮ ಅಮೀರರನ್ನು ಸಿಂಹಾಸನದಿಂದ ತಳ್ಳಿಹಾಕಿ ಎಷ್ಟೋ ಕಾಲ ಕಳೆದುಹೋಗಿರುತ್ತಿತ್ತು; ನಿಮ್ಮನ್ನು, ಓ ಗಣ್ಯಮಹಾಸ್ವಾಮಿಗಳೇ, ದುರಾಶೆಯ ಅಪರಾಧಕ್ಕಾಗಿ ಜೀವ ಸಹಿತ ಚರ್ಮ ಸುಲಿಸಿರುತ್ತಿದ್ದರು" ಎಂದನು.

ತೆರಿಗೆ ಅಧಿಕಾರಿಯು ತನ್ನ ಬುದ್ಧಿಯನ್ನು ಚುರುಕುಮಾಡಿ ಆ ಮಾತನ್ನು ಅರ್ಥಮಾಡಿಕೊಳ್ಳುವ ಮೊದಲೇ ಖೋಜಾ ನಸ್ರೆದ್ದೀನನು ತನ್ನ ಕತ್ತೆಯ ಮೇಲಕ್ಕೆ ಹಾರಿ ಕೂತು ನಾಗಾಲೋಟದಿಂದ ಓಡಿಸಿ, ಅತಿ ಹತ್ತಿರದ ಓಣಿಯೊಳಕ್ಕೆ ನುಸುಳಿ ಮಾಯವಾದನು.

"ಬೇಗ! ಬೇಗ! ಇನ್ನೂ ಬೇಗ, ಓಡು! ನನ್ನ ನೆಚ್ಚಿನ ಕತ್ತೆಯೇ ಬೇಗ ಬೇಗ ಓಡು! ಓಡದಿದ್ದರೆ ನಿನ್ನ ಯಜಮಾನ ತನ್ನ ತಲೆ ಒಪ್ಪಿಸಿ ಮತ್ತೊಂದು ತೆರಿಗೆ ಕೊಡಬೇಕಾದೀತು!"

ಖೋಜಾ ನಸ್ರೆದ್ದೀನನ ಕತ್ತೆ ಬಹಳ ಜಾಣ ಕತ್ತೆ. ಅದಕ್ಕೆ ಎಲ್ಲಾ ಗೊತ್ತಾಗುತ್ತಿತ್ತು. ಅದರ ಉದ್ದ ಕಿವಿಗಳಿಗೆ ಪಟ್ಟಣದ ಹೆಬ್ಬಾಗಿಲಲ್ಲಿ ಆದ ಗದ್ದಲ ಗಡಿಬಿಡಿಗಳೂ ಕಾವಲುಸಿಪಾಯಿಗಳ ಅಬ್ಬರವೂ ಕೇಳಿಸಿತ್ತು; ಆದ್ದರಿಂದ ಅದು ವೇಗವಾಗಿ ಓಡತೊಡಗಿತು; ದಾರಿಯನ್ನೂ ಲಕ್ಷ್ಯಕ್ಕೆ ತೆಗೆದುಕೊಳ್ಳದೆ ಓಡತೊಡಗಿತು. ಅದರ ವೇಗ ಎಷ್ಟಾಯಿತೆಂದರೆ, ಅದರ ಯಜಮಾನ ಜೀನಿಗೆ ಅಂಟಿಕೊಂಡಿರಬೇಕಾಯಿತು; ಅವನ ತೋಳುಗಳು ಆ ಪ್ರಾಣಿಯ ಕುತ್ತಿಗೆಯನ್ನು ಸುತ್ತಿ ತಬ್ಬಿಕೊಂಡವು; ಪಾದಗಳು ಎತ್ತರವಾಗಿ ಮೇಲಕ್ಕೆ

ಎತ್ತಿಕೊಂಡಿದ್ದವು ನಾಯಿಗಳು ಗಂಟಲು ಕಟ್ಟುವಂತೆ ಬಗುಳುತ್ತಾ ಹಿಂದೆ ಹಿಂದೆ ಓಡಿಬಂದವು; ಕೋಳಿಪಿಳ್ಳೆಗಳು ದಿಕ್ಕಾಪಾಲಾಗಿ ಚೆದರಿ ಓಟಕಿತ್ತವು; ದಾರಿಯಲ್ಲಿ ಹೋಗುತ್ತಿದ್ದವರು ಗೋಡೆಗೆ ಒತ್ತಿಕೊಂಡು ಒರಗಿ ನಿಂತರು, ಅವರನ್ನೇ ದೃಷ್ಟಿಸಿ ನೋಡುತ್ತಾ ತಲೆ ಅಳ್ಳಾಡಿಸುತ್ತಿದ್ದರು.

ಇಷ್ಟರಲ್ಲಿ ಪುರದ್ವಾರದಲ್ಲಿ ಸಿಪಾಯಿಗಳು ಎದೆಗಾರನಾದ ಆ ಸ್ವತಂತ್ರ ವಿಚಾರಿಯನ್ನು ಗುಂಪಿನಲ್ಲೆಲ್ಲ ಹುಡುಕಾಡಿದರು. ವರ್ತಕರು ಮುಗುಳು ನಕ್ಕು, "ಆ ಉತ್ತರ ಖೋಜಾ ನಸ್ರೆದ್ದೀನನಿಗೇ ತಕ್ಕದ್ದು!" ಎಂದು ಒಬ್ಬರೊಬ್ಬರ ಕಿವಿಯಲ್ಲಿ ಪಿಸುಗುಟ್ಟುತ್ತಿದ್ದರು.

ಮಧ್ಯಾಹ್ನದ ಹೊತ್ತಿಗೆ ನಗರವೆಲ್ಲ ಈ ಕಥೆಯನ್ನು ಕೇಳಿಬಿಟ್ಟಿತ್ತು. ಅಂಗಡಿಗಳಲ್ಲಿ ವರ್ತಕರು ತಮ್ಮ ಗಿರಾಕಿಗಳ ಕಿವಿಯಲ್ಲಿ ಅದನ್ನು ಪಿಸುಗುಟ್ಟು ತ್ತಿದ್ದರು; ಅವರು ತಮಗೆ ಸಿಕ್ಕಿದವರಿಗೆ ಅದನ್ನು ತಿಳಿಸುತ್ತಿದ್ದರು. ಕೇಳಿ ಎಲ್ಲರೂ ನಗುತ್ತಿದ್ದರು.

"ಈ ಮಾತುಗಳು ಸ್ವತಃ ಖೋಜಾ ನಸ್ರೆದ್ದೀನನೇ ಆಡತಕ್ಕಂಥವು" ಎಂದು ತಮ್ಮ ಅಭಿಪ್ರಾಯವನ್ನು ಸೂಚಿಸಲು ಯಾರೂ ಮರೆಯುತ್ತಿರಲಿಲ್ಲ.

೩

ನೆಂಟರಾಗಲಿ ಹಳೆಯ ಗೆಳೆಯರಾಗಲಿ ಅವನಿಗೆ ಬುಖಾರದಲ್ಲಿ ಯಾರೂ ಕಂಡುಬರಲಿಲ್ಲ. ತಾನು ಹುಟ್ಟಿ ಬೆಳೆದು ದೊಡ್ಡವನಾಗಿದ್ದ ತನ್ನ ತಂದೆಯ ಮನೆಯೂ ಅವನಿಗೆ ಸಿಕ್ಕಲಿಲ್ಲ. ಆ ಮನೆಗೆ ಸೇರಿದ್ದ ತೋಟವೂ ಕಾಣಿಸಲಿಲ್ಲ: ದಟ್ಟಮರಗಳ ಆ ತೋಟದಲ್ಲಿ ಶರತ್ಕಾಲದಲ್ಲಿ ಹಳದಿ ತಿರುಗುವ ಎಲೆಗಳು ಗಾಳಿಯಲ್ಲಿ ಮರ್ಮರಧ್ವನಿ ಮಾಡುತ್ತಿದ್ದವು; ಕಳಿತ ಹಣ್ಣುಗಳು ಧೊಪ್ಪನೆ ನೆಲಕ್ಕೆ ಬೀಳುತ್ತಿದ್ದವು; ಹಕ್ಕಿಗಳು ಉಚ್ಚಕಂಠದಲ್ಲಿ ಹಾಡುತ್ತಿದ್ದವು; ಸಂತತವಾಗಿ ಓಡಾಡುವ ದುಂಬಿಗಳು ಬಾಡುತ್ತಿರುವ ಹೂವುಗಳಿಂದ ಕೊಟ್ಟಕೊನೆಯ ಕಾಣಿಕೆಯನ್ನು ಸಂಗ್ರಹಿಸುತ್ತಾ ಝೇಂಕರಿಸುತ್ತಿದ್ದವು; ನೀರು ಹಾಯಿಸುವ ಕಾಲುವೆಯಲ್ಲಿ ಹರಿಯುವ ಜಲಪ್ರವಾಹವು ಕೊನೆಯಿಲ್ಲದ್ದೂ ಅರ್ಥವಾಗದ್ದೂ ಆದ ತನ್ನ ಕಥೆಗಳನ್ನು ಹುಡುಗನಿಗೆ ರಹಸ್ಯ ಭಾಷೆಯಲ್ಲಿ ಹೇಳುತ್ತಾ ಕಲರವ ಮಾಡುತ್ತಿತ್ತು. ಆ ತೋಟವಾಗಲಿ ಮನೆಯಾಗಲಿ ಅವನಿಗೆ ಸಿಕ್ಕಲಿಲ್ಲ.....

ಆ ಸ್ಥಳ ಈಗ ಬೀಳುಬಯಲಾಗಿತ್ತು; ಅಲ್ಲಿ ಕಸಕಡ್ಡಿಗಳ ರಾಶಿಗಳು ತುಂಬಿದ್ದವು; ಮುಳ್ಳುಗಿಡಗಳು ಬೆಳೆದಿದ್ದವು; ಸುಟ್ಟು ಮಸಿಹಿಡಿದ ಇಟ್ಟಿಗೆಗಳು ಚೆಲ್ಲಾಡಿದ್ದವು; ಕುಸಿದು ಬೀಳುತ್ತಿರುವ ಗೋಡೆಗಳೂ, ಕೊಳೆತು ನಾರುವ ಕಿಪ್ಪೆಗಳೂ ಕಾಣಿಸಿದವು. ಒಂದೇ ಒಂದು ಹಕ್ಕಿಯಾಗಲಿ, ಒಂದೇ ಒಂದು ದುಂಬಿಯಾಗಲಿ ಖೋಜಾ ನಸ್ರೆದ್ದೀನನ ಕಣ್ಣಿಗೆ ಬೀಳಲಿಲ್ಲ. ಒಂದು ಕಲ್ಲು ಗುಡ್ಡೆಯನ್ನು ಅವನು ಎಡವಿದಾಗ, ತಟಕ್ಕನೆ ಎಣ್ಣೆಯ ಪಳಿಯಂತೆ ಏನೋ ಒಂದು ಹೊರಹರಿದು ಬಂದು ಬಿಸಿಲಿನಲ್ಲಿ ಮಬ್ಬುಮಬ್ಬಾಗಿ ಹೊಳೆದು ಬೇರೆ ಕಲ್ಲುರಾಶಿಯ ಕೆಳಗೆ ಮತ್ತೆ ಮರೆಯಾಗಿಹೋಯಿತು :— ಹಾವು, ಮನುಷ್ಯನು ಪೂರ್ತಿಯಾಗಿ ತೊರೆದೇ ಬಿಟ್ಟು ಹೋಗಿರುವ ಕಡೆಗಳಲ್ಲಿ ನೆಲೆನಿಂತು ವಾಸಿಸುವ ಭಯಂಕರವಾದ ಒಂಟಿ ಜೀವಿ!

ಖೋಜಾ ನಸ್ರೆದ್ದೀನನು ಕಣ್ಣುಗಳನ್ನು ಕೆಳಕ್ಕೆ ತಗ್ಗಿಸಿ ಮೌನವಾಗಿ ಬಹಳ ಹೊತ್ತು ಅಲ್ಲೇ ನಿಂತನು. ಅವನ ಹೃದಯವನ್ನು ದುಃಖ ಅದುಮಿ ಹಿಡಿದಿತ್ತು.

ಮೈಯನ್ನೆಲ್ಲ ಅಲುಗಿಸಿ ಪೀಡಿಸುವ ಕೆಮ್ಮಿನ ದನಿ ಅವನು ಹಿಂದಿರುಗಿ ನೋಡುವಂತೆ ಮಾಡಿತು.

ಬಡತನದಿಂದಲೂ ಚಿಂತೆಗಳಿಂದಲೂ ಕುಸಿದುಹೋಗಿದ್ದ ಮುದುಕನೊಬ್ಬನು ಹಾಳು ಬಯಲಿನ ಮೂಲಕ ಹಾದುಬರುತ್ತಿದ್ದನು. ಖೋಜಾ ನಸ್ರೆದ್ದೀನನು ಅವನನ್ನು ದಾರಿಯಲ್ಲೆ ತಡೆದು ನಿಲ್ಲಿಸಿದನು.

"ಶಾಂತಿಯಿರಲಜ್ಜಾ, ನಿನಗೆ! ಆರೋಗ್ಯ ಅಭಿವೃದ್ಧಿಗಳಿಂದ ಕೂಡಿದ ಅನೇಕ ವರ್ಷಗಳ ಆಯಸ್ಸನ್ನು ಅಲ್ಲಾ ನಿನಗೆ ದಯಪಾಲಿಸಲಿ. ಇಲ್ಲಿ, ಈ ಹಾಳು ಬಯಲಿನಲ್ಲಿ, ಯಾರ ಮನೆಯಿತ್ತು ಹೇಳು!"

"ಜೀನುಗಾರ ಷರ್-ಮಾಮೆದ್ದನ ಮನೆಯಿತ್ತು" ಎಂದು ಮುದುಕ ಉತ್ತರ ಕೊಟ್ಟನು. "ಅವನಿಗೂ ನನಗೂ ಚೆನ್ನಾಗಿ ಪರಿಚಯವಿತ್ತು. ಈ ಷರ್-ಮಾಮೆದ್ದನೇ ಪ್ರಖ್ಯಾತನಾದ ಖೋಜಾ ನಸ್ರೆದ್ದೀನನ ತಂದೆ. ಅಯ್ಯಾ, ದಾರಿಹೋಕಾ, ಆ ಖೋಜಾ ನಸ್ರೆದ್ದೀನನ ವಿಷಯವಾಗಿ ನೀನು ಅನೇಕ ಸಂಗತಿಗಳನ್ನು ಕೇಳಿಯೇ ಇರಬೇಕು!"

"ಹೌದು; ಅವನ ವಿಷಯವಾಗಿ ನಾನು ಸ್ವಲ್ಪ ಕೇಳಿದ್ದೇನೆ. ಆದರೆ,

ಪ್ರಖ್ಯಾತನಾದ ಖೋಜಾ ನಸ್ರೆದ್ದೀನನ ತಂದೆಯಾದ ಈ ಜೇನುಗಾರ ಷರ್-ಮಾಮೆದ್ ಎಲ್ಲಿ ಹೋಗಿದ್ದಾನೆ? ಅವನ ಕುಟುಂಬದವರೆಲ್ಲಿದ್ದಾರೆ? ಹೇಳು."

"ಅಷ್ಟು ಗಟ್ಟಿಯಾಗಿ ಮಾತಾಡಬೇಡ, ಮಗನೇ. ಬುಖಾರದಲ್ಲಿ ಸಾವಿರಗಟ್ಟಳೆ ಗೂಢಚಾರರಿದ್ದಾರೆ. ಅವರೇನಾದರೂ ನಮ್ಮ ಮಾತುಗಳನ್ನು ಕೇಳಿದರೆ, ನಮ್ಮ ಕಷ್ಟಗಳಿಗೆ ಕೊನೆಯೇ ಇರುವುದಿಲ್ಲ. ನೀನು ಬಹು ದೂರ ದೇಶದಿಂದ ಬಂದಿರಬೇಕೆಂದು ತೋರುತ್ತದೆ; ಏಕೆಂದರೆ, ನಮ್ಮ ಪಟ್ಟಣದಲ್ಲಿ ಖೋಜಾ ನಸ್ರೆದ್ದೀನನ ಹೆಸರನ್ನು ಹೇಳಕೂಡದೆಂದು ಕಡ್ಡಾಯವಾಗಿ ನಿಷೇಧಿಸಿದ್ದಾರೆ. ಒಬ್ಬನನ್ನು ಸೆರೆಗೆ ದೂಡುವುದಕ್ಕೆ ಅಷ್ಟೇ ಸಾಕು. ಹತ್ತಿರ ಬಾ, ಹೇಳುತ್ತೇನೆ."

ತನ್ನ ಕಳವಳವನ್ನು ಕಷ್ಟದಿಂದ ಅಡಗಿಸಿಟ್ಟು ಖೋಜಾ ನಸ್ರೆದ್ದೀನನು ಮುದುಕನ ಹತ್ತಿರಕ್ಕೆ ಹೋದನು.

"ಅದು ನಡೆದದ್ದು ಹಳೆಯ ಅಮೀರನ ಕಾಲದಲ್ಲಿ" ಎಂದು ಮುದುಕ ಪ್ರಾರಂಭಿಸಿದನು. ಮಾತುಮಾತಿಗೂ ಕೆಮ್ಮುತ್ತಲೇ ಇದ್ದನು. "ಖೋಜಾ ನಸ್ರೆದ್ದೀನನನ್ನು ಗಡೀಪಾರುಮಾಡಿ ಹದಿನೆಂಟು ತಿಂಗಳು ಕಳೆದಮೇಲೆ ಪೇಟೆಗಳಲ್ಲೆಲ್ಲ ಒಂದು ವದಂತಿ ಹರಡಿತು: ಅವನು ಕಾಯಿದೆಗೆ ವಿರುದ್ಧವಾಗಿ ಗುಟ್ಟಾಗಿ ಹಿಂದಿರುಗಿ ಬಂದಿರುವನೆಂದೂ, ಅಮೀರನ ಮೇಲೆ ಅತಿ ಹಾಸ್ಯಕರವಾದ ಹಾಡುಗಳನ್ನು ಕಟ್ಟಿ ಹಾಡುತ್ತಾ ಬುಖಾರದಲ್ಲೇ ನೆಲಸಿದ್ದಾನೆಂದೂ ಸುದ್ದಿ ಹರಡಿತು. ಈ ವದಂತಿ ಅಮೀರನ ಅರಮನೆಗೂ ತಲುಪಿತು. ಸಿಪಾಯಿಗಳು ಖೋಜಾ ನಸ್ರೆದ್ದೀನನಿಗಾಗಿ ಬಹಳ ಹುಡುಕಾಡಿದರು, ಆದರೆ ಅವನು ಸಿಕ್ಕಲಿಲ್ಲ. ಆಗ ಅಮೀರನು ಅವನ ಅಪ್ಪ, ಇಬ್ಬರು ಸೋದರರು, ಚಿಕ್ಕಪ್ಪ, ಹತ್ತಿರದ ಮತ್ತು ದೂರದ ಸಂಬಂಧಿಗಳು ಮತ್ತು ಅವನ ಸ್ನೇಹಿತರು—ಎಲ್ಲರನ್ನೂ ಹಿಡಿಯಬೇಕೆಂದು ಅಪ್ಪಣೆ ಮಾಡಿದನು. ಖೋಜಾ ನಸ್ರೆದ್ದೀನನು ಎಲ್ಲಿದ್ದಾನೆ ಎಂದು ತಿಳಿಸುವವರೆಗೂ ಅವರಿಗೆ ಚಿತ್ರಹಿಂಸೆ ಕೊಡಬೇಕೆಂದು ಆಜ್ಞೆ ಆಯಿತು. ಮೌನವಾಗಿರಲು ತಕ್ಕಷ್ಟು ಧೈರ್ಯಸ್ಥೈರ್ಯಗಳನ್ನು ಅವರಿಗೆ ದಯಪಾಲಿಸಿದ್ದಕ್ಕಾಗಿ ಅಲ್ಲಾನಿಗೆ ಪ್ರಾರ್ಥನೆ ಸಲ್ಲಬೇಕು! ಅವರು ಬಾಯಿ ಬಿಡದೆ ಇದ್ದದ್ದರಿಂದ ನಮ್ಮ ಖೋಜಾ ನಸ್ರೆದ್ದೀನ್ ಅಮೀರನ ಕೈಗೆ ಸಿಕ್ಕಲಿಲ್ಲ. ಆದರೆ ಅವರಪ್ಪ ಜೇನುಗಾರ ಷರ್-ಮಾಮೆದ್ ಚಿತ್ರಹಿಂಸೆಗೆ ಸಿಕ್ಕಿ ನೊಂದು

ಬೇಗ ಸತ್ತುಹೋದನು. ಅವನ ನೆಂಟರೂ ಸ್ನೇಹಿತರೂ ಅಮೀರನ ಆಗ್ರಹಕ್ಕೆ ಬಲಿಯಾಡೇವೆಂದು ಭೀತರಾಗಿ ಬುಖಾರವನ್ನು ಬಿಟ್ಟು ಓಡಿಹೋದರು. ಅವರು ಎಲ್ಲಿದ್ದಾರೋ ಯಾರೂ ಅರಿಯರು. ಆ ಬಳಿಕ ಅವರ ಮನೆಗಳನ್ನು ನಾಶ ಪಡಿಸಬೇಕೆಂದು ಅಪ್ಪಣೆಯಾಯಿತು. ಮನೆ ಕೆಡವಿ ತೋಟಗಳನ್ನು ಧ್ವಂಸ ಮಾಡಿದರು; ಖೋಜಾ ನಸ್ರೆದ್ದೀನನ ನೆನಪು ಕೂಡ ಅಳಿಸಿಹೋಗಲೆಂದು ಹೀಗೆ ಮಾಡಿದರು."

"ಆದರೆ, ಅವರನ್ನು ಚಿತ್ರಹಿಂಸೆಯಿಂದ ಪೀಡಿಸಿದ್ದೇಕೆ?" ಎಂದು ಖೋಜಾ ನಸ್ರೆದ್ದೀನ್ ಕೇಳಿದನು. ಅವನ ಮುಖದ ಮೇಲೆ ಕಣ್ಣೀರು ಧಾರೆ ಯಾಗಿ ಇಳಿಯುತ್ತಿತ್ತು. ಆದರೆ ಮುದುಕನ ದೃಷ್ಟಿ ಮಂದವಾಗಿದ್ದದ್ದರಿಂದ ಅವನಿಗೆ ಅದು ಕಾಣಿಸಲಿಲ್ಲ. "ಅವರಿಗೇಕೆ ಚಿತ್ರಹಿಂಸೆ ಮಾಡಿದರು? ಆ ಕಾಲದಲ್ಲಿ ಖೋಜಾ ನಸ್ರೆದ್ದೀನನು ಬುಖಾರದಲ್ಲಿ ಇರಲೇ ಇಲ್ಲ. ಅದು ನನಗೆ ಚೆನ್ನಾಗಿ ಗೊತ್ತು!"

"ಯಾರೂ ಹೇಳಲಾರರು!" ಎಂದನು ಮುದುಕ. "ಖೋಜಾ ನಸ್ರೆದ್ದೀ ನನು ತನಗೆ ಬೇಕಾದಾಗ ತನಗೆ ತೋರಿದ ರೀತಿಯಲ್ಲಿ ಬರುತ್ತಾನೆ, ಹೋಗು ತ್ತಾನೆ. ಅವನು ಎಲ್ಲೆಲ್ಲಿಯೂ ಇದ್ದಾನೆ; ಎಲ್ಲಿಯೂ ಇಲ್ಲ; ಅದು, ನಮ್ಮ ಖೋಜಾ ನಸ್ರೆದ್ದೀನ್!"

ಹೀಗೆಂದು ನುಡಿದು ಆ ಮುದುಕ ನರಳುತ್ತಾ ಕೆಮ್ಮುತ್ತಾ ಮೆಲ್ಲಗೆ ಹೆಜ್ಜೆಯಿಟ್ಟು ಮುಂದೆ ಹೋದನು. ಖೋಜಾ ನಸ್ರೆದ್ದೀನನು ಕೈಗಳಲ್ಲಿ ಮುಖ ಮುಚ್ಚಿಕೊಂಡು ತನ್ನ ಕತ್ತೆಯ ಬಳಿ ಹೋದನು.

ಅವನು ತನ್ನ ತೋಳುಗಳಿಂದ ಬಳಸಿ ಕತ್ತೆಯನ್ನು ಅಪ್ಪಿಕೊಂಡನು. ಕಣ್ಣೀರಿನಿಂದ ನೆನೆದು ಒದ್ದೆಯಾದ ತನ್ನ ಮುಖವನ್ನು ವಾಸನೆ ತುಂಬಿ ಬೆಚ್ಚ ಗಿದ್ದ ಅದರ ಕುತ್ತಿಗೆಗೆ ಒತ್ತಿಕೊಂಡನು.

"ಆ, ನನ್ನ ಗೆಳೆಯಾ! ಒಳ್ಳೆಯ, ನಿಜವಾದ ಗೆಳೆಯಾ! ನೋಡು! ನನಗೆ ಪ್ರಿಯರಾದವರು, ಹತ್ತಿರವಾದವರು ಯಾರೂ ಉಳಿದಿಲ್ಲ. ನೀನೇ, ನೀನೊಬ್ಬನೇ ನನಗೆ ಉಳಿದಿರುವವನು; ನನ್ನ ಅಲೆದಾಟಗಳಲ್ಲಿ ಸದಾ ನನ್ನ ಸಂಗಡಿಗನಾಗಿ, ನನ್ನ ಸಿ ಪ್ಸಾ ವ ಂ ತ ಗೆಳೆಯನಾಗಿ ಉಳಿದಿರುವವನು ನೀನೊಬ್ಬನೇ" ಎಂದನು ಖೋಜಾ ನಸ್ರೆದ್ದೀನ್.

ತನ್ನ ಯಜಮಾನನ ದುಃಖ ಅರಿವಾಯಿತೋ ಎಂಬಂತೆ ಕತ್ತೆ ಅಲುಗಾಡದೆ ನಿಂತುಕೊಂಡಿತು ; ತಾನು ತಿನ್ನುತ್ತಿದ್ದ ಮುಳ್ಳುಗಿಡವನ್ನು ಅಗಿಯುವುದನ್ನು ಕೂಡ ನಿಲ್ಲಿಸಿಬಿಟ್ಟಿತು ; ಆ ಗಿಡ ತುಟಿಯಿಂದ ಹೊರಚಾಚಿ ಜೋತಾಡುತ್ತಿತ್ತು.

ಒಂದು ಗಂಟೆ ಕಳೆಯುವಷ್ಟರಲ್ಲಿ ಖೋಜಾ ನಸ್ರೆದ್ದೀನನು ತನ್ನ ದುಃಖವನ್ನು ಸಮಾಧಾನಗೊಳಿಸಿಕೊಂಡಿದ್ದನು ಅವನ ಮುಖದ ಮೇಲೆ ಕಣ್ಣೀರು ಆರಿಹೋಗಿತ್ತು.

ಅವನು ಕತ್ತೆಯ ಬೆನ್ನ ಮೇಲೆ ಒಲವಾಗಿ ಒಂದು ಗುದ್ದು ಹೊಡೆದು, “ಹೋಗಲಿ ಬಿಡು ! ಹೋಗಲಿ ಬಿಡು ! ಬುಖಾರದಲ್ಲಿ ನನ್ನನ್ನಿನ್ನೂ ಜನ ಮರೆತಿಲ್ಲ ಅವರು ನನ್ನನ್ನು ನೆನಸಿಟ್ಟುಕೊಂಡಿದ್ದಾರೆ. ನನ್ನ ವಿಚಾರ ಗೊತ್ತು ಅವರಿಗೆ ಯಾರಾದರೂ ಕೆಲವರು ಸ್ನೇಹಿತರನ್ನು ಸಂಪಾದಿಸೋಣ ! ಅಮೀರನ ಮೇಲೆ ಒಂದು ಹಾಡು ಕಟ್ಟೋಣ ! ಎಂಥ ಹಾಡೆಂದರೆ, ಅದನ್ನು ಕೇಳಿ ಅವನು ತನ್ನ ಸಿಂಹಾಸನದ ಮೇಲೆ ರೇಗಿ ಊದಿ ಒಡೆಯಬೇಕು ! ಅವನ ಆ ಕೊಳೆತ ಕರುಳುಗಳು ಅವನ ಅರಮನೆಯ ಸೂಕ್ಷ್ಮಾಲಂಕಾರದ ಗೋಡೆಗಳಿಗೆ ಹೊಡೆದು ಕರೆ ಹಿಡಿಸಬೇಕು ; ಅಂಥ ಹಾಡು ಕಟ್ಟೋಣವಂತೆ ! ಬಾ, ನನ್ನ ನೆಚ್ಚಿನ ಕತ್ತೆಯೇ, ಬಾ ! ಮುಂದುವರಿಯೋಣ ! ” ಎಂದನು.

೪

ಅಪರಾಹ್ಣದ ಒಂದು ಪ್ರಶಾಂತ ಸಮಯ. ಧೂಳು ತುಂಬಿದ ರಸ್ತೆ ; ಕಲ್ಲುಗಳು, ಮಣ್ಣು ಗೋಡೆಗಳು ಮತ್ತು ಬೇಲಿಗಳು ಇವುಗಳ ಕಡೆಯಿಂದ ಸೆಖೆ ಹೊಮ್ಮಿಬರುತ್ತಿತ್ತು, ಖೋಜಾ ನಸ್ರೆದ್ದೀನನ ಮುಖದ ಮೇಲಿನ ಬೆವರು ಅವನು ಒರಸಿಕೊಳ್ಳುವಷ್ಟರೊಳಗಾಗಿಯೇ ಆರಿಹೋಗುತ್ತಿತ್ತು.

ತನಗೆ ಚಿರಪರಿಚಿತವಾಗಿದ್ದ ಬೀದಿಗಳು, ಟೀ ಅಂಗಡಿಗಳು ಮತ್ತು ಮಿನರೆಟ್ಟುಗಳು, ಇವನ್ನೆಲ್ಲ ಅವನು ಗುರುತಿಸಿದನು ; ಕಂಡು ಗುರುತಿಸಿ ಭಾವೋದ್ರೇಕಹೊಂದಿದನು. ಆ ಹತ್ತು ವರ್ಷಗಳಲ್ಲಿ ಬುಖಾರಾದಲ್ಲಿ ಏನೂ ಬದಲಾವಣೆಯಾಗಿರಲಿಲ್ಲ. ಎಲ್ಲ ಕಾಲದಲ್ಲೂ ಹೇಗೋ ಹಾಗೆ ಕೆಲವು ಬಡಕಲು ನಾಯಿಗಳು ನೀರು ತೊಟ್ಟಿಗಳ ಪಕ್ಕದಲ್ಲಿ ಮಲಗಿದ್ದವು ; ಒಬ್ಬ ಹೆಂಗಸು

ಸೊಗಸುದೋರುವಂತೆ ಬಾಗಿ ಕಪ್ಪು ಚರ್ಮದ ಕೈಯಿಂದ ಅವಕುಂಠನವನ್ನು ಹಿಂದಕ್ಕೆಳೆದು ಹಿಡಿದುಕೊಂಡು ಕಿರುಗಂಠದ ಹೂಜಿಯೊಂದನ್ನು ನೀರಿಗೆ ಅದ್ದಿದಳು.

ಆವತ್ತಿನ ಊಟವನ್ನು ಎಲ್ಲಿ ಸಂಪಾದಿಸುವುದು ? ಹೇಗೆ ಸಂಪಾದಿಸು ವುದು—ಎಂಬುದೇ ಅವನಿಗಿದ್ದ ಸಮಸ್ಯೆ. ನಿನ್ನೆಯಿಂದ ನಸ್ರೆದ್ದೀನನು ಮೂರು ಸಲ ತನ್ನ ಚೀಲವನ್ನು ಬಿಗಿದು ಕಟ್ಟಿದ್ದನು.

" ಏನಾದರೊಂದು ದಾರಿ ಹುಡುಕಬೇಕು. ಓ ನನ್ನ ನಂಬಿಕೆಯ ಕತ್ತೇ, ಸ್ವಲ್ಪ ಕೂತು ಯೋಚಿಸೋಣ. ಇಲ್ಲಿ ನಮ್ಮ ಭಾಗ್ಯವಶದಿಂದ ಒಂದು ಟೀ ಅಂಗಡಿ ಕಾಣಿಸುತ್ತದೆ " ಎಂದುಕೊಂಡನು.

ಕತ್ತೆಯ ಕಡಿವಾಣವನ್ನು ಬಿಚ್ಚಿ ತೆಗೆದು ಅದನ್ನು ಕಟ್ಟುಗಂಬದ ಬಳಿ ಅಲ್ಲಲ್ಲಿ ಉದುರಿದ್ದ ಕ್ಲೋವರ್ ತುಂಡುಗಳನ್ನು ಮೇಯಲೆಂದು ಬಿಟ್ಟನು. ಆಮೇಲೆ ತನ್ನ ಖಲತ್ತಿನ ಅಂಚನ್ನು ಮೇಲೆತ್ತಿಕೊಂಡು ಕಾಲುವೆಯ ಹತ್ತಿರ ಕೂತುಕೊಂಡನು ; ಕಾಲುವೆಯ ನೀರು ಮಣ್ಣು ಸೇರಿ ಮಂದವಾಗಿ ತಿರುವು ಗಳಲ್ಲಿ ನೊರೆಗೆರೆಯುತ್ತ ಗುಳ್ಳೆಯೆಬ್ಬಿಸುತ್ತಾ ಹರಿಯುತ್ತಿತ್ತು.

" ಎಲ್ಲಿಗೆ, ಏಕೆ, ಎಲ್ಲಿಂದ ಈ ನೀರು ಹರಿಯುತ್ತಿದೆ ? ಅದಕ್ಕೇ ಅದು ಗೊತ್ತಿಲ್ಲ, ಆ ವಿಚಾರವಾಗಿ ಅದು ಯೋಚಿಸುವುದೇ ಇಲ್ಲ " ಎಂದುಕೊಂಡು ಖೋಜಾ ನಸ್ರೆದ್ದೀನ್ ತನ್ನ ಭಾವನಾಲಹರಿಯನ್ನು ಮುಂದುವರಿಸಿದನು. " ನನಗೂ ವಿಶ್ರಾಂತಿಯಾಗಲಿ ಮನೆಯಾಗಲಿ ಗೊತ್ತಿಲ್ಲ ; ನಾನೆಲ್ಲಿ ಹೋಗು ತ್ತಿದ್ದೇನೆಂಬುದೂ ತಿಳಿಯದು. ನಾನು ಬುಖಾರಕ್ಕೆ ಏಕೆ ಬಂದೆ ? ನಾಳೆ ಎಲ್ಲಿ ಹೋಗಲಿ ? ನನ್ನ ಊಟಕ್ಕೆ ಬೇಕಾಗಿರುವ ಅರ್ಧ ಟಂಗನ್ನು ನಾನೆಲ್ಲಿ ದೊರಕಿಸಲಿ ? ಇನ್ನೂ ನಾನು ಹಸಿದೇ ಇರಬೇಕೆ ? ಆ ಹಾಳು ಶನಿ, ಸುಂಕದ ಅಧಿಕಾರಿ ! ಅವನು ನನ್ನಲ್ಲಿದ್ದದ್ದನ್ನೆಲ್ಲಾ ದೋಚಿ ಬರಿದು ಮಾಡಿಬಿಟ್ಟ ! ಕಳ್ಳರ ವಿಚಾರವಾಗಿ ನನ್ನೊಡನೆ ಮಾತೆತ್ತುವುದಕ್ಕೆ ಎಂಥಾ ಧಾರ್ಷ್ಟ್ಯ ಅವನದು ! "

ಅವನು ಹಾಗೆಂದುಕೊಳ್ಳುತ್ತಿದ್ದ ಆ ಕ್ಷಣಕ್ಕೆ ಸರಿಯಾಗಿ ತನ್ನ ದುರ ದೃಷ್ಟಕ್ಕೆಲ್ಲಾ ಕಾರಣನಾದ ಆ ಆಸಾಮಿಯೇ ಕಣ್ಣಿಗೆ ಬಿದ್ದನು. ತೆರಿಗೆ ಅಧಿಕಾರಿ ಕುದುರೆಯ ಮೇಲೆ ಟೀ ಅಂಗಡಿಯ ಕಡೆಗೆ ಹೋಗುತ್ತಿದ್ದನು. ಮುಂದುಗಡೆ

ಇಬ್ಬರು ಸಿಪಾಯಿಗಳು ಅವನ ಅರಬ್ಬೀ ಕುದುರೆಯನ್ನು ಲಗಾಮು ಹಿಡಿದು ನಡಸಿಕೊಂಡು ಹೋಗುತ್ತಿದ್ದರು. ಅದೊಂದು ಸುಂದರವಾದ ಬೀಜದ ಕುದುರೆ; ಪಿಂಗಳ ವರ್ಣದ್ದು; ಅದರ ಕಪ್ಪುಗಣ್ಣುಗಳಲ್ಲಿ ಕಿಡಿ ಮಿಂಚುತ್ತಿತ್ತು. ಕೊರಳು ಕೊಂಕಿಸಿ ತನ್ನ ತೆಳುವಾದ ಕಾಲುಗಳನ್ನು ಚಪಲಗತಿಯಿಂದ ಎತ್ತಿಡುತ್ತಾ ಗಂಭೀರವಾಗಿ ಮುಂದುವರಿಯುತ್ತಿದ್ದ ಆ ಚೆಲುಗುದುರೆ ತನ್ನ ಯಜಮಾನನ ಆ ಊದಿದ ಕಳೇವರವನ್ನು ಹೊರಲು ಅಸಹ್ಯ ಪಡುತ್ತಿದೆಯೋ ಎಂಬಂತೆ ಕಾಣುತ್ತಿತ್ತು.

ಸಿಪಾಯಿಗಳು ಗೌರವಪೂರ್ವಕವಾಗಿ ತಮ್ಮ ನಾಯಕನನ್ನು ಕುದುರೆಯಿಂದಿಳಿಸಿಕೊಂಡರು. ಅವನು ಟೀ ಅಂಗಡಿಯೊಳಕ್ಕೆ ಹೋದನು. ಅಂಗಡಿಯ ಮಾಲೀಕ ಅತಿ ಸಡಗರಪಡುತ್ತಾ ಅತಿ ದೈನ್ಯ ತೋರಿಸುತ್ತಾ ಹಲ್ಲುಗಿರಿದು ಕೊಂಡು ಬಂದು ಒಡಗೊಂಡು ನಡೆದು ಕೆಲವು ರೇಷ್ಮೆಯ ಮೆತ್ತೆಗಳನ್ನು ಹಾಕಿ ಅಧಿಕಾರಿಯನ್ನು ಅವರ ಮೇಲೆ ಕೂರಿಸಿದನು. ಆಮೇಲೆ ತನ್ನಲ್ಲಿದ್ದ ಉತ್ತಮೋತ್ತಮ ತರಗತಿಯ ಟೀಸೊಪ್ಪನ್ನು ಉಪಯೋಗಿಸಿ ವಿಶೇಷ ರೀತಿಯ ಟೀ ಸಿದ್ಧಪಡಿಸಿದನು; ಅದನ್ನು ಚೀನಾ ಕಲೆಗಲಸದ ಸೊಗಸಾದ ಟೀ ಬಟ್ಟಲಲ್ಲಿ ಸುರಿದು ಅಧಿಕಾರಿಗೆ ಅರ್ಪಿಸಿದನು.

"ಅವನಿಗೆ ದಿವ್ಯವಾದ ಸ್ವಾಗತ ದೊರೆಯುತ್ತಿದೆ, ನನ್ನ ಖರ್ಚಿನಿಂದ!" ಎಂದು ಖೋಜಾ ನಸ್ರೆದ್ದೀನ್ ಚಿಂತಿಸುತ್ತಿದ್ದನು.

ತೆರಿಗೆ ವಸೂಲಿಗಾರ ಹೊಟ್ಟೆ ತುಂಬ ಟೀ ತುಂಬಿಕೊಂಡು ಬಹುಬೇಗ ತೂಕಡಿಕೆ ಹತ್ತಿ ಮೆತ್ತೆಯ ಮೇಲೆ ಒರಗಿಕೊಂಡನು. ಅವನ ಗಂಟಲ ಗುಳು ಗುಳು ಸದ್ದು, ತುಟಿಯ ಚಪ್ಪರಿಕೆ ಮತ್ತು ಗೊರಕೆಯ ಸದ್ದು ಅಂಗಡಿಯನ್ನೆಲ್ಲ ತುಂಬಿತು. ಅಲ್ಲಿ ನೆರೆದಿದ್ದ ಇತರ ಗಿರಾಕಿಗಳೆಲ್ಲ ಅವನ ನಿದ್ರೆಗೆಲ್ಲಿ ಭಂಗವಾಗುವುದೋ ಎಂದು ಹೆದರಿ ತಮ್ಮ ದನಿ ತಗ್ಗಿಸಿ ಪಿಸುಮಾತಿನಲ್ಲಿ ಸಂಭಾಷಿಸತೊಡಗಿದರು. ಸಿಪಾಯಿಗಳು ಅವನ ಇಕ್ಕೆಲಗಳಲ್ಲಿಯೂ ಕೂತುಕೊಂಡು ಎಲೆ ತುಂಬಿದ ರೆಂಬೆಗಳನ್ನು ಬೀಸುತ್ತಾ ಅಲ್ಲಿ ಮುಸುರುತ್ತಿದ್ದ ನೊಣಗಳನ್ನು ಓಡಿಸುತ್ತಿದ್ದರು. ಅವನು ಗಾಢನಿದ್ರೆಯಲ್ಲಿ ಮುಳುಗಿದನೆಂದು ಅರಿತ ಕೂಡಲೆ ಅವರು ಒಬ್ಬರಿಗೊಬ್ಬರು ಕಣ್ಣು ಮಿಟುಕಿಸಿದರು. ಹೊರಕ್ಕೆದ್ದು ಬಂದು ಕುದುರೆಯ ಕಡಿವಾಣವನ್ನು ಕಳಚಿ ಒಂದು ಹೊರೆ ಕ್ಲೋವರನ್ನು ಅದರ

ಮುಂದೆ ಹಾಕಿ, ಒಂದು ಗುಡುಗಡಿಯನ್ನು ಕೈಯಲ್ಲೆತ್ತಿಕೊಂಡು ಕತ್ತಲೆ ತುಂಬಿದ ಟೀ ಅಂಗಡಿಯ ಒಳಭಾಗಕ್ಕೆ ನಡೆದರು. ಒಂದು ಕ್ಷಣ ಕಳೆದ ಬಳಿಕ ಬಂಗಿಯ ಸಿಹಿ ವಾಸನೆ ಖೋಜಾ ನಸ್ರೆದ್ದೀನನ ಮೂಗಿಗೆ ಬಂದು ಬಡಿಯಿತು. ಸಿಪಾಯಿಗಳು ನಿರಾತಂಕವಾಗಿ ಆನಂದಪಡುತ್ತಿದ್ದರು.

"ಸರಿ, ನಾನಿನ್ನು ಹೊರಟು ಬಿಡಬೇಕು" ಎಂದು ಯೋಚಿಸಿದನು ಖೋಜಾ ನಸ್ರೆದ್ದೀನ್. ಆ ಬೆಳಗ್ಗೆ ನಗರದ ಬಾಗಿಲಿನಲ್ಲಿ ತಾನು ನಡಸಿದ್ದ ಸಾಹಸವನ್ನು ನೆನೆದುಕೊಂಡು, ಸಿಪಾಯಿಗಳು ತನ್ನನ್ನು ಗುರುತಿಸಬಹುದೆಂದು ಹೆದರಿದನು. "ಹೊರಡಬೇಕೇನೋ ಹೌದು! ಆದರೆ ಅರ್ಧ ಟಂಗ ಎಲ್ಲಿ ದೊರಲಿ? ಸರ್ವಶಕ್ತಿಯುಳ್ಳ ಓ ಅದೃಷ್ಟವೇ, ನೀನು ಎಷ್ಟೋ ವೇಳೆ ಖೋಜಾನಸ್ರೆದ್ದೀನನ ನೆರವಿಗೆ ಬಂದಿದ್ದೀಯೆ, ಈಗಲೂ ಅವನ ಮೇಲೆ ಕರುಣಾಕಟಾಕ್ಷವನ್ನು ಬೀರು!" ಎಂದು ಮನಸ್ಸಿನಲ್ಲೇ ಪ್ರಾರ್ಥಿಸಿದನು.

ಅದೇ ಕ್ಷಣದಲ್ಲಿ ಅವನನ್ನು ಯಾರೋ, "ಏ, ಯಾರಲ್ಲಿ?" ಎಂದು ಕರೆದರು.

ಖೋಜಾ ನಸ್ರೆದ್ದೀನನು ಒಂದು ಸುತ್ತು ತಿರುಗಿ ಹಿಂದೆ ನೋಡಿದನು. ರಸ್ತೆಯಲ್ಲಿ ಒಂದು ಸಾರೋಟು—ಅಮೂಲ್ಯಾಲಂಕಾರ ಮಾಡಿ ಮೇಲ್ಮುಸುಕು ಹಾಕಿದ್ದ ಸೊಗಸಾದ ಸಾರೋಟು—ನಿಂತಿತ್ತು. ಅದರ ತೆರೆಗಳೊಳಗಿನಿಂದ ದೊಡ್ಡ ರುಮಾಲು ಸುತ್ತಿ ಬಹುಬೆಲೆಯ ಖಲತ್ ತೊಟ್ಟಿದ್ದ ಒಬ್ಬಾತ ಕತ್ತು ಚಾಚಿ ಹೊರಕ್ಕೆ ನೋಡುತ್ತಿದ್ದನು ಈ ಅಪರಿಚಿತನು—ಒಳ್ಳೆಯ ಶ್ರೀಮಂತ ವರ್ತಕ ಅಥವಾ ಅಧಿಕಾರಿ—ಇನ್ನೂ ಬಾಯಿ ಬಿಡುವ ಮೊದಲೇ ಖೋಜಾ ನಸ್ರೆದ್ದೀನನಿಗೆ ತಿಳಿದುಹೋಯಿತು ತನ್ನ ಪ್ರಾರ್ಥನೆ ವ್ಯರ್ಥವಾಗಲಿಲ್ಲವೆಂದು: ಎಂದಿನಂತೆ ಅದೃಷ್ಟವು ಸಂಕಟಸಮಯದಲ್ಲಿ ಅವನ ಮೇಲೆ ಕುರಣಾಕಟಾಕ್ಷವನ್ನು ಬೀರಿತ್ತು.

ಅಪರಿಚಿತ ಶ್ರೀಮಂತನು ಬಹು ದರ್ಪದಿಂದ, "ನನಗೆ ಈ ಕುದುರೆ ಮೆಚ್ಚಿಕೆಯಾಯಿತು" ಎಂದು ನುಡಿದನು. ಖೋಜಾ ನಸ್ರೆದ್ದೀನನ ತಲೆಯ ಮೇಲುಗಡೆಯಿಂದ ದೃಷ್ಟಿ ಹಾಯಿಸಿ ಸುಂದರವಾದ ಅರಬ್ಬಿ ಕುದುರೆಯನ್ನು ಮೆಚ್ಚಿ ನೋಡತೊಡಗಿದನು. "ಹೇಳು, ಈ ಕುದುರೆ ಮಾರಾಟಕ್ಕಿದೆಯೆ?" ಎಂದು ಕೇಳಿದನು.

"ಮಾರಲಾಗದಿರುವಂಥ ಕುದುರೆ ಪ್ರಪಂಚದಲ್ಲಿ ಒಂದೂ ಇಲ್ಲ" ಎಂದು ಪ್ರಶ್ನೆಗೆ ನೇರವಾಗಿ ಉತ್ತರ ಕೊಡದೆ ಖೋಜಾ ನಸ್ರೆದ್ದೀನ್ ನುಡಿದನು.

ಅಪರಿಚಿತನು ಮಾತು ಮುಂದುವರಿಸಿದನು. "ನಿನ್ನ ಜೇಬು ಬಹುಶಃ ಬರಿದಾಗಿರಬೇಕು! ನಾನು ಹೇಳುವುದನ್ನು ಎಚ್ಚರಿಕೆಯಿಂದ ಕೇಳು. ಈ ಕುದುರೆ ಯಾರಿಗೆ ಸೇರಿದ್ದೋ ನನಗೆ ಗೊತ್ತಿಲ್ಲ. ಎಲ್ಲಿಂದ ಬಂತೋ, ಇದರ ಹಿಂದಿನ ಯಜಮಾನ ಯಾರೋ ಅದೂ ತಿಳಿಯದು ಆ ವಿಚಾರವಾಗಿ ನಿನ್ನನ್ನು ಕೇಳುವುದೂ ಇಲ್ಲ ನಿನ್ನ ಒಟ್ಟೆಗಳ ಮೇಲೆ ಕೂತಿರುವ ಧೂಳು ನೋಡಿದರೆ, ನೀನು ಬುಖಾರಕ್ಕೆ ಬಹುದೂರದಿಂದ ಬಂದಿರಬೇಕೆಂದು ತೋರುತ್ತದೆ. ಅಷ್ಟೇ ಸಾಕು ನನಗೆ. ತಿಳಿಯಿತೋ?" ಎಂದನು.

ಖೋಜಾ ನಸ್ರೆದ್ದೀನ್ ತಲೆ ಅಲ್ಲಾಡಿಸಿದನು. ಆ ಅಪರಿಚಿತ ಶ್ರೀಮಂತನ ಅಭಿಪ್ರಾಯವೇನೆಂಬುದನ್ನು ಆ ಕ್ಷಣವೇ ಅವನು ತಿಳಿದುಕೊಂಡನು. ಈಗ ಅವನು ಬಯಸುತ್ತಿದ್ದದ್ದು, ಯಾವುದಾದರೊಂದು ಹುಚ್ಚು ನೊಣ ತೆರಿಗೆ ಅಧಿಕಾರಿಯ ಮೂಗಿಗೋ ಗಂಟಲಿಗೋ ನುಗ್ಗಿ ಅವನನ್ನು ಎಬ್ಬಿಸದಿರಲಿ— ಎಂದು. ಸಿಪಾಯಿಗಳ ವಿಷಯದಲ್ಲಿ ಅವನಿಗೆ ಹೆಚ್ಚು ಆತಂಕವಿರಲಿಲ್ಲ; ಏಕೆಂದರೆ ಮುಬ್ಬು ತುಂಬಿದ ಒಳ ಕೋಣೆಯಿಂದ ಹಸುರು ಹೊಗೆಯ ದಟ್ಟ ಮೋಡಗಳು ಹೊರಬರುತ್ತಾ ಅವರು ತಮ್ಮ ವ್ಯಸನದಲ್ಲಿ ಮಗ್ನರಾಗಿದ್ದರೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತಿದ್ದವು.

ಶ್ರೀಮಂತನು ಅನುಗ್ರಹಭಾವದಿಂದಲೂ ವಿಷಯದ ಪ್ರಾಮುಖ್ಯವನ್ನು ಸೂಚಿಸುತ್ತಲೂ ಹೇಳತೊಡಗಿದನು: "ಚೆನ್ನಾಗಿ ತಿಳಿದುಕೋ; ಇಂಥ ಕುದುರೆಯ ಮೇಲೆ ಸವಾರಿಮಾಡುವುದು ಹರುಕಲು ಖಿಲತ್ ತೊಟ್ಟ ನಿನ್ನಂಥವನಿಗೆ ತಕ್ಕದ್ದಲ್ಲ. ಇದರಿಂದ ಅಪಾಯವೂ ಉಂಟು. ಪ್ರತಿಯೊಬ್ಬರೂ, 'ಈ ಭಿಕಾರಿಗೆ ಈ ಕುದುರೆ ಎಲ್ಲಿ ಸಿಕ್ಕಿತೋ!' ಎಂದು ಆಶ್ಚರ್ಯಪಡುತ್ತಾರೆ. ನೀನು ಸುಲಭವಾಗಿ ಸೆರೆಮನೆ ಸೇರಿದರೂ ಸೇರಬಹುದು" ಎಂದನು.

"ನೀವು ಹೇಳುವುದು ಸರಿ, ಮಹಾಸ್ವಾಮಿ. ನನ್ನಂಥವನಿಗೆ ಈ ಕುದುರೆ ತುಂಬ ಹೆಚ್ಚಿನ ಅಂತಸ್ತಿನದು. ಈ ಹರುಕಲು ಖಿಲತ್ ತೊಟ್ಟು ನನ್ನ ಜೀವಮಾನದುದ್ದಕ್ಕೂ ನಾನೊಂದು ಕತ್ತೆಯ ಮೇಲೆ ಸವಾರಿ ಮಾಡುತ್ತಿದ್ದೇನೆ; ಇಂಥ ಉತ್ತಮ ಜಾತಿಯ ಕುದುರೆಯ ಮೇಲೆ ಹತ್ತುವ ಯೋಚನೆಯನ್ನು

ಮಾಡಲಾರೆ” ಎಂದು ಬಹುವಿನಯದಿಂದ ನುಡಿದನು ಖೋಜಾ ನಸ್ರೆದ್ದೀನ್.

ಅವನ ಆ ಉತ್ತರದಿಂದ ಶ್ರೀಮಂತನು ತೃಪ್ತನಾದನು. “ನೀನು ಬಡವ; ಗರ್ವದಿಂದ ನೀನು ಕುರುಡನಾಗಬಾರದು. ಅದೇ ಸರಿ. ಬಡವನಾದವನು ತಗ್ಗಿ ನಡೆಯಬೇಕು; ನಮ್ರನಾಗಿರಬೇಕು. ಸುಂದರ ಪುಷ್ಪಗಳು ಘನವಾದ ಬಾದಾಮಿ ಮರಕ್ಕೆ ತಕ್ಕವು; ಹುಲ್ಲುಬಯಲಿನಲ್ಲಿ ಬೆಳೆಯುವ ಹಾಳು ಮುಳ್ಳು ಪೊದೆಗಲ್ಲ. ಈಗ ನನಗೆ ಉತ್ತರ ಕೊಡು: ನಿನಗೆ ಈ ಚೀಲ ಬೇಕೋ? ಇದರಲ್ಲಿ ಬರೋಬರಿ ಮುನ್ನೂರು ಬೆಳ್ಳಿ ಟಂಗಗಳಿವೆ.”

ಖೋಜಾ ನಸ್ರೆದ್ದೀನನಿಗೆ ಆತಂಕ ಹತ್ತಿತು; ಏಕೆಂದರೆ ಹುಚ್ಚು ನೊಣವೊಂದು ತೆರಿಗೆ ವಸೂಲಿಗಾರನ ಮೂಗಿಗೆ ನುಸುಳಿಹೋಗಿ ಅವನು ಸೀನುವಂತೆ, ಅತ್ತಿತ್ತ ಚಲಿಸುವಂತೆ ಮಾಡಿಬಿಟ್ಟಿತ್ತು. ಆತಂಕವನ್ನು ತೋರಗೊಡದೆ, “ನನಗೆ ಬೇಕೆ ಎಂದು ಕೇಳುತ್ತೀರಾ? ಬೇಕು ಎನ್ನಿಸುತ್ತಿದೆ! ಮುನ್ನೂರು ಬೆಳ್ಳಿಯ ಟಂಗಗಳನ್ನು ಯಾರು ತಾನೆ ಬೇಡವೆನ್ನುತ್ತಾರೆ? ದಾರಿಯಲ್ಲಿ ಬಿದ್ದಿದ್ದ ಹಣದ ಚೀಲ ಸಿಕ್ಕಿದಂತಾಗಿದೆ, ಇದು!” ಎಂದು ಉತ್ತರ ಕೊಟ್ಟನು.

ಶ್ರೀಮಂತ ಅನುಚಿತನು ಅರ್ಥವಾಯಿತೆಂಬಂತೆ ಮುಗುಳುನಗೆ ನಗುತ್ತಾ, “ನಿನಗೆ ದಾರಿಯಲ್ಲಿ ಬೇರೆ ಇನ್ನೇನೋ ಸಿಕ್ಕಿತೆಂದು ಕಾಣುತ್ತದೆ. ಆದರೆ ನಿನಗೆ ದಾರಿಯಲ್ಲಿ ಏನು ಸಿಕ್ಕಿತೋ ಅದನ್ನು ತೆಗೆದುಕೊಂಡು ಅದಕ್ಕೆ ಬದಲಾಗಿ ಈ ಬೆಳ್ಳಿ ನಾಣ್ಯಗಳನ್ನು ಕೊಡಲು ಸಿದ್ಧವಾಗಿದ್ದೇನೆ. ಇಗೋ, ಇಲ್ಲಿ ನಿನ್ನ ಮುನ್ನೂರು ಟಂಗಗಳು” ಎಂದನು.

ಭಾರವಾದ ಹಣದ ಚೀಲವನ್ನು ಖೋಜಾ ನಸ್ರೆದ್ದೀನನ ಕೈಗೆ ಕೊಟ್ಟು, ಅವನು ತನ್ನ ಸೇವಕನಿಗೆ ಸನ್ನೆಮಾಡಿದನು. ಅವನು ಕೈಯ ಕೊರಡೆಯಿಂದ ತನ್ನ ಬೆನ್ನು ತುರಿಸಿಕೊಳ್ಳುತ್ತಾ ನಿಂತು ಸಂಭಾಷಣೆಯನ್ನು ಆಲಿಸುತ್ತಿದ್ದನು. ಆ ಸೇವಕನು ಕುದುರೆಯ ಬಳಿಗೆ ಹೋಗುತ್ತಿದ್ದಾಗ ಖೋಜಾ ನಸ್ರೆದ್ದೀನ್ ಅವನ ಮುಖ ನೋಡಿದನು. ಸಿಡುಬಿನ ಕಲೆ ತುಂಬಿದ ಆ ಮುಖದ ಮೇಲೆ ಕಾಣಿಸಿಕೊಂಡ ಹಲ್ಲುಕಿರಿತದ ನಗೆಯಿಂದಲೂ ಅತ್ತಿಂದಿತ್ತ ಅಸ್ಥಿರವಾಗಿ ಚಲಿಸುತ್ತಿದ್ದ ಆ ನೋಟದಿಂದಲೂ ಅವನು ಕೂಡ ತನ್ನ ಯಜಮಾನನಂತೆಯೇ ಪಕ್ಕಾ ಠಕ್ಕನಾಗಿರಬೇಕೆಂದು ಖೋಜಾ ನಸ್ರೆದ್ದೀನ್ ಸ್ಪಷ್ಟವಾಗಿ ತಿಳಿದುಕೊಂಡನು.

"ಒಂದೇ ರಸ್ತೆಯಲ್ಲಿ ಮೂರು ಮಂದಿ ತಕ್ಕರಿರುವುದಾದರೆ, ಕನಿಷ್ಠಪಕ್ಷ ಒಬ್ಬನಂತೂ ತೀರಾ ಹೆಚ್ಚು. ಆದ್ದರಿಂದ ನಾನು ಕಾಣಿಸಿಕೊಳ್ಳದಿರುವುದೇ ಲೇಸು" ಎಂದು ಅವನು ನಿರ್ಧರಿಸಿದನು.

ಅಪರಿಚಿತ ಶ್ರೀಮಂತನ ಧರ್ಮನಿಷ್ಠೆಯನ್ನೂ ಔದಾರ್ಯವನ್ನೂ ಪ್ರಶಂಸೆ ಮಾಡುತ್ತಾ ತನ್ನ ಕತ್ತೆಯ ಮೇಲೆ ಹಾರಿ ಕುಳಿತು, ಹಿಮ್ಮಡಿಗಳಿಂದ ಅದಕ್ಕೆ ಬಲವಾಗಿ ಒದೆ ಕೊಟ್ಟನು. ಆ ಒದೆತದ ರಭಸಕ್ಕೆ ಆ ಪ್ರಾಣಿ ಸ್ವಾಭಾವಿಕವಾಗಿ ಸೋಮಾರಿಯೇ ಆದರೂ ತಟಕ್ಕನೆ ನಾಗಾಲೋಟದಿಂದ ಓಡಲು ಮೊದಲುಮಾಡಿತು.

ಖೋಜಾ ನಸ್ರುದ್ದೀನನು ಹಿಂದಿರುಗಿ ನೋಡಿದಾಗ ಸೇವಕನು ಆ ಅರಬ್ಬೀ ಕುದುರೆಯನ್ನು ಸಾರೋಟಿಗೆ ಕಟ್ಟುತ್ತಿರುವುದು ಕಾಣಿಸಿತು. ಅವನು ಮತ್ತೊಮ್ಮೆ ಹಿಂದಿರುಗಿ ನೋಡುವಾಗ, ಶ್ರೀಮಂತ ಅಪರಿಚಿತನೂ ತೆರಿಗೆ ವಸೂಲಿ ಅಧಿಕಾರಿಯೂ ಒಬ್ಬರೊಬ್ಬರ ಗಡ್ಡಗಳನ್ನು ಹಿಡಿದೆಳೆಯುತ್ತಿದ್ದರು; ಸಿಪಾಯಿಗಳು ಅವರನ್ನು ಬಿಡಿಸಿ ಬೇರ್ಪಡಿಸಲು ವ್ಯರ್ಥವಾಗಿ ಪ್ರಯತ್ನಮಾಡುತ್ತಿದ್ದರು.

ವಿವೇಕಿಯಾದವನು ಬೇರೆಯವರ ಕಲಹದಲ್ಲಿ ಭಾಗವಹಿಸುವುದಿಲ್ಲ. ಖೋಜಾ ನಸ್ರುದ್ದೀನನು ಸಂದಿಗೊಂದಿಗಳಲ್ಲಿ ನುಸಿದು ಒಂದರಿಂದೊಂದಕ್ಕೆ ನುಗ್ಗಿ ನುಸುಳಿ ಹೊರಬಂದು ಎಲ್ಲೆಲ್ಲೋ ಸುತ್ತತೊಡಗಿದನು; ಬೆಂಬತ್ತಿ ಬರುವವರ ಕಾಟ ತಪ್ಪಿತೆಂದು ಸಮಾಧಾನವಾಗುವವರೆಗೂ ಓಣಿಯಿಂದೋಣಿಗೆ ನುಸಿಯುತ್ತಲೇ ಇದ್ದನು. ಧೈರ್ಯವಾದಮೇಲೆ ಕತ್ತೆಯ ಲಗಾಮೆಳೆದು ನಡಗೆಯನ್ನು ನಿಧಾನ ಮಾಡಿದನು.

"ತಡೆ, ತಡೆ; ಈಗೇನು ಅಂಥ ಆತುರವಿಲ್ಲ...." ಎಂದು ಪ್ರಾರಂಭಿಸಿದನು. ಇದ್ದಕ್ಕಿದ್ದಂತೆ ವೇಗವಾಗಿ ಬರುವ ಗೊರಸಿನ ಸದ್ದು ಕೇಳಿಸಿತು. "ಓಹೋ! ನುಗ್ಗಿ ನಡೆ, ನನ್ನ ನೆಚ್ಚಿನ ಕತ್ತೇ, ಮುಂದೆ ನಡೆ! ಇಲ್ಲಿಂದ ನನ್ನನ್ನು ತಪ್ಪಿಸಿಕೊಂಡು ಹೋಗು" ಎಂದು ಗಟ್ಟಿಯಾಗಿ ಕೂಗಿದನು. ಆದರೇನು, ಕಾಲ ಮಿಂಚಿತ್ತು: ಒಂದು ಮೂಲೆಯ ಹಿಂದಿನಿಂದ ಒಬ್ಬ ಸವಾರ ರಸ್ತೆಯ ನಡುವೆ ಬಂದು ನಿಂತನು.

ಬಂದವನು ಸಿಡುಬಿನ ಕಲೆಯ ಸೇವಕ. ಸಾರೋಟಿನಿಂದ ಬಿಚ್ಚಿದ ಕುದುರೆಯೊಂದನ್ನು ಹತ್ತಿ ಬಂದಿದ್ದನು. ತನ್ನ ಕಾಲುಗಳನ್ನು ತೂಗಾಡಿಸಿ

ಕೊಂಡು ಖೋಜಾ ನಸ್ರೆದ್ದೀನನನ್ನು ದಾಟುವಂತೆ ದೌಡೋಡಿಸಿ ಅವನ ದಾರಿಗೆ ಅಡ್ಡನಿಲ್ಲುವಂತೆ ತಟಕ್ಕನೆ ಕುದುರೆಯನ್ನು ನಿಲ್ಲಿಸಿದನು.

"ದಾರಿ ಬಿಡಯ್ಯ, ಪುಣ್ಯಾತ್ಮಾ. ಇಂಥ ಇಕ್ಕಟ್ಟು ದಾರಿಗಳಲ್ಲಿ ಉದ್ದುದ್ದವಾಗಿ ಸವಾರಿ ಮಾಡಬೇಕು, ಅಡ್ಡಡ್ಡಲಾಗಿ ಅಲ್ಲ" ಎಂದು ಖೋಜಾ ನಸ್ರೆದ್ದೀನನು ನಮ್ರವಾಗಿ ಕೇಳಿಕೊಂಡನು.

"ಆಹಾ!" ಎಂದ ಆ ಸೇವಕ; ಮಾತ್ಸರ್ಯ ಸೂಸುವ ಮಹದಾನಂದ ಅವನ ದನಿಯಲ್ಲಿ ಹೊರಚಿಮ್ಮುತ್ತಿತ್ತು. "ಈಗ ಕತ್ತಲೆ ಕೋಣೆಯನ್ನು ತಪ್ಪಿಸಿಕೊಳ್ಳಲು ನಿನಗೆ ಸಾಧ್ಯವೇ ಇಲ್ಲ. ಏನಾಗಿದೆ ಒಲ್ಲೆಯೊ? ಆ ಕುದುರೆಯ ಮಾಲೀಕ, ಆ ಅಧಿಕಾರಿ ನಮ್ಮೊಡೆಯನ ಗಡ್ಡದಲ್ಲಿ ಅರ್ಧವನ್ನು ಕಿತ್ತುಬಿಟ್ಟಿದ್ದಾನೆ; ನಮ್ಮೊಡೆಯ ಅವನ ಮೂಗು ರಕ್ತ ಸುರಿಸುವಂತೆ ಹೊಡೆದು ಬಿಟ್ಟಿದ್ದಾನೆ! ನಾಳೆ ನಿನ್ನನ್ನು ಅಮೀನರ ನ್ಯಾಯಸ್ಥಾನದ ಮುಂದೆ ಎಳೆದು ಕೊಂಡು ಹೋಗಿ ನಿಲ್ಲಿಸುತ್ತಾರೆ. ನಿಜವಾಗಿಯೂ ನಿನ್ನ ಗತಿ ಮಹಾ ಕಷ್ಟ ಕರವೇ ಸರಿ!" ಎಂದನು.

"ಏನದು, ನೀನು ಹೇಳುತ್ತಿರುವುದು? ಇಂಥ ಗೌರವಶಾಲಿಗಳು ಅಷ್ಟೊಂದು ಕ್ರೂರವಾಗಿ ಕಾದಾಡುವುದಕ್ಕೆ ಕಾರಣವೇನು? ಅದೇಕೆ ನೀನು ನನ್ನನ್ನು ಅಡ್ಡಗಟ್ಟಿದ್ದೀಯಾ? ಅವರ ಜಗಳದಲ್ಲಿ ನಾನು ತೀರ್ಪುಗಾರ ನಾಗಲಾರೆ. ಅವರೇ ಆ ಜಗಳವನ್ನು ತಮ್ಮತಮ್ಮಲ್ಲೇ ಸಾಧ್ಯವಾದ ರೀತಿಯಲ್ಲಿ ತೀರ್ಮಾನ ಮಾಡಿಕೊಳ್ಳಲಿ" ಎಂದನು ಖೋಜಾ ನಸ್ರೆದ್ದೀನ್.

"ಬಾಯಿ ಮುಚ್ಚು!" ಎಂದು ಗದರಿಸಿದನು ಆ ಸೇವಕ. "ತಿರುಗು ಹಿಂದಕ್ಕೆ. ಆ ಕುದುರೆಯ ಬಗ್ಗೆ ನೀನು ಸಮಜಾಯಿಷಿ ಕೊಡಬೇಕಾಗಿದೆ" ಎಂದನು.

"ಯಾವ ಕುದುರೆ?"

"ಎಷ್ಟು ಧೈರ್ಯ ನಿನಗೆ, ಹೀಗೆ ಕೇಳುವುದಕ್ಕೆ? ಯಾವ ಕುದುರೆಯೆ? ಯಾವುದಕ್ಕೆ ನಮ್ಮ ಯಜಮಾನರಿಂದ ಬೆಳ್ಳಿ ಹಣದ ಚೀಲ ಇಸುಕೊಂಡೆಯೋ ಆ ಕುದುರೆ!"

"ಅಯ್ಯೋ ಅಲ್ಲಾ! ನೀನು ತಪ್ಪು ತಿಳಿದುಕೊಂಡಿದ್ದೀಯ" ಎಂದು ಖೋಜಾ ನಸ್ರೆದ್ದೀನ್ ವಿವರಿಸತೊಡಗಿದನು. "ಈ ವ್ಯವಹಾರದಲ್ಲಿ ಕುದುರೆಗೆ

ಸ್ಥಾನವೇ ಇಲ್ಲ; ಅದು ಬರುವ ಅವಕಾಶವೇ ಇಲ್ಲ. ನೀನೇ ತೀರ್ಮಾನ ಮಾಡು. ನೀನು ನಮ್ಮ ಸಂಭಾಷಣೆಯನ್ನೆಲ್ಲಾ ಕೇಳಿದ್ದೀಯ. ನಿಮ್ಮ ಯಜಮಾನ ಧರ್ಮನಿಷ್ಠ ಮತ್ತು ಉದಾರಿ; ಒಬ್ಬ ಬಡವನಿಗೆ ಸಹಾಯ ಮಾಡಬೇಕೆಂಬ ಉದ್ದೇಶದಿಂದ, 'ಮುನ್ನೂರು ಬೆಳ್ಳಿ ಟಂಗಗಳನ್ನು ತೆಗೆದು ಕೊಳ್ಳುವ ಇಷ್ಟವಿದೆಯೇ?' ಎಂದು ನನ್ನನ್ನು ಕೇಳಿದನು; ಅದಕ್ಕೆ ನಾನು, 'ಅಗತ್ಯವಾಗಿ ಆಗಲಿ' ಎಂದೆ. ಆಮೇಲೆ ಅವನು ನನಗೆ ಮುನ್ನೂರು ಟಂಗಗಳನ್ನು ಕೊಟ್ಟನು; ಅಲ್ಲಾ ಅವನ ಬಾಳ ದಿನಗಳನ್ನು ಹೆಚ್ಚಿಸಲಿ! ಆದರೆ, ಅವನು ನನಗೆ ಹಣ ಕೊಡುವ ಮೊದಲು ನನ್ನ ನಮ್ರತೆಯನ್ನೂ ನಿರಹಂಕಾರವನ್ನು ಪರೀಕ್ಷಿಸಿ ನೋಡಿದನು; ನಾನು ಆ ಬಹುಮಾನಕ್ಕೆ ಅರ್ಹನೋ ಅಲ್ಲವೊ ಎಂದು ನಿರ್ಧರಿಸಲು ಹಾಗೆ ಪರೀಕ್ಷೆ ಮಾಡಿದನು. ಅವನಂದ: 'ಇದು ಯಾರ ಕುದುರೆಯೆಂದಾಗಲಿ, ಇದು ಎಲ್ಲಿಂದ ಬಂತೆಂದಾಗಲಿ ನಾನು ಕೇಳುವುದಿಲ್ಲ' ಎಂದ; ಅಲ್ಲವೆ?

"ಇಲ್ಲ ಕೇಳು, ಸುಳ್ಳು ಅಹಂಕಾರದಿಂದ ನಾನೇ ಅದರ ಮಾಲೀಕನೆಂದು ನಾನೆನ್ನುತ್ತೇನೋ ಏನೋ ಎಂದು ಆತನು ತಿಳಿಯಬಯಸಿದ. ನಾನು ಮೌನವಾಗಿದ್ದೆ; ಆ ಉದಾರಿ ಧಾರ್ಮಿಕ ತೃಪ್ತಿಹೊಂದಿದ. ಆಗ, ಅಂಥ ಕುದುರೆ ನನ್ನಂಥವನಿಗೆ ತಕ್ಕದ್ದಲ್ಲ, ನನ್ನ ಅಂತಸ್ತಿಗೆ ಮೀರಿದ ಉತ್ತಮಾಶ್ವ ಎಂದ; ಆ ಮಾತು ಸರಿಯೆಂದು ಒಪ್ಪಿಕೊಂಡೆ ನಾನು. ಆಮೇಲೆ, ನಾನು ಬೆಳ್ಳಿಗೆ ಅದಲುಬದಲು ಮಾಡಿಕೊಳ್ಳಬಹುದಾದ್ದನ್ನು ದಾರಿಯಲ್ಲಿ ಪಡೆದು ಕೊಂಡಿರುವುದಾಗಿ ಅವನಂದನು; ಈ ಮಾತಿನಿಂದ ಪವಿತ್ರ ಕ್ಷೇತ್ರಗಳಿಗೆ ಯಾತ್ರೆಮಾಡಿ ನಾನು ಪಡೆದುಕೊಂಡಿರುವ ಇಸ್ಲಾಂಧರ್ಮದ ಶ್ರದ್ಧೆಯನ್ನೂ ಸ್ಥಿರನಂಬಿಕೆಯನ್ನೂ ಆತ ಸೂಚಿಸಿದನು; ಇಷ್ಟೆಲ್ಲಾ ಆದಮೇಲೆ ಅವನು ನನಗೆ ಬಹುಮಾನ ಮಾಡಿದನು; ಈ ಧರ್ಮಕಾರ್ಯದಿಂದ ತಾನು ಮುಂದೆ ಸ್ವರ್ಗಕ್ಕೆ ಪ್ರವೇಶಮಾಡುವುದು ಸುಲಭವಾಗಬೇಕೆಂದು ಅವನ ಉದ್ದೇಶ; ಸ್ವರ್ಗಪ್ರವೇಶಕ್ಕೆ ಸಾಧನವಾಗಿರುವ ಸೇತುವೆ ಕೂದಲಿಗಿಂತ ಹಗುರವೆಂದೂ ಕತ್ತಿಯ ಏಣಿಗಿಂತ ಕಿರಿದಗಲದ್ದೆಂದೂ ಪವಿತ್ರ ಕುರಾನಿನಲ್ಲಿ ಹೇಳಿದೆ. ನನ್ನ ಮೊಟ್ಟಮೊದಲನೆಯ ಪ್ರಾರ್ಥನೆಯಲ್ಲಿಯೇ ಅಲ್ಲಾಗೆ ನಮ್ಮ ಯಜಮಾನನ ಧರ್ಮಕಾರ್ಯವನ್ನು ಕುರಿತು ಅರಿಕೆ ಮಾಡಿಕೊಳ್ಳುತ್ತೇನೆ; ಅದರ ಪ್ರಭಾವದಿಂದ ಅಲ್ಲಾ

ಆ ಸೇತುವೆಯ ಮೇಲೆ ನಿಮ್ಮೊಡೆಯನಿಗಾಗಿ ಕಟಕಟೆಗಳನ್ನು ನಿರ್ಮಿಸಲೆಂದು ಬೇಡಿಕೊಳ್ಳುತ್ತೇನೆ."

ಸೇವಕನು ಈ ದೀರ್ಘ ಭಾಷಣವನ್ನು ಸಾವಧಾನವಾಗಿ ಆಲಿಸಿದನು; ಕೈಯ ಕೋರಡೆಯಿಂದ ತನ್ನ ಬೆನ್ನನ್ನು ಕೆರೆದುಕೊಳ್ಳುತ್ತಾ ಆಳವಾಗಿ ಆಲೋಚನೆ ಮಾಡುತ್ತಾ ಕೇಳುತ್ತಿದ್ದನು. ಭಾಷಣ ಮುಗಿದ ಬಳಿಕ ಹಲ್ಲುಕಿರಿದು ನಕ್ಕು ಹೀಗೆಂದನು; ಈ ಹಲ್ಲುಕಿರಿತ ಖೋಜಾ ನಸ್ರೆದ್ದೀನನನ್ನು ಬೆಚ್ಚಿಸಿತು.

"ಓ ಯಾತ್ರಿಕನೇ, ನೀನನ್ನುವುದು ನಿಜ! ಅದು ಹೇಗೆ, ನನಗೆ ಆಗ ತಿಳಿಯಲೇ ಇಲ್ಲವಲ್ಲಾ, ನಮ್ಮ ಯಜಮಾನನೊಡನೆ ನೀನು ಮಾಡುತ್ತಿದ್ದ ಸಂಭಾಷಣೆಗೆ ಇಂಥ ಪವಿತ್ರವಾದ ಅರ್ಥವಿದೆಯೆಂದು? ಅಂತೂ ಪರಲೋಕ ಪ್ರವೇಶದ ಸೇತುವೆಯನ್ನು ದಾಟಿಹೋಗಲು ನಮ್ಮ ಯಜಮಾನನಿಗೆ ಸಹಾಯ ಮಾಡಲು ನೀನೂ ಸಂಕಲ್ಪಿಸಿದ್ದೀಯ; ಆ ಸೇತುವೆಗೆ ಎರಡು ಕಡೆಯೂ ಕಟಕಟೆಯಿದ್ದರೆ ಉತ್ತಮ. ನಾನು ಕೂಡ ನಮ್ಮ ಯಜಮಾನನಿಗಾಗಿ ಪ್ರಾರ್ಥನೆ ಮಾಡುತ್ತೇನೆ, ಆದರಿಂದ ಅಲ್ಲಾ ಇನ್ನೊಂದು ಕಡೆಯೂ ಕಟಕಟೆ ಹಾಕುವಂತಾಗಲಿ."

"ಹಾಗಾದರೆ ಪ್ರಾರ್ಥನೆ ಮಾಡು! ನಿನಗೆ ಅಡ್ಡಿ ಮಾಡುವವರು ಯಾರು? ಹಾಗೆ ಮಾಡುವುದು ನಿನ್ನ ಬದ್ಧ ಕರ್ತವ್ಯವೂ ಹೌದು. ಗುಲಾಮರೂ ಸೇವಕರೂ ತಮ್ಮ ಯಜಮಾನರ ಹಿತಕ್ಕಾಗಿ ದಿನದಿನವೂ ಯಾವ ಬಗೆಯ ವಿಶೇಷ ಪ್ರತಿಫಲವನ್ನೂ ಅಪೇಕ್ಷಿಸದೆಯೇ ಪ್ರಾರ್ಥಿಸುತ್ತಿರಬೇಕೆಂದು ಕುರಾನ್ ಉಪದೇಶಿಸುತ್ತಿಲ್ಲವೆ?" ಎಂದನು ಖೋಜಾ ನಸ್ರೆದ್ದೀನ್.

"ಹಿಂದಿರುಗಿಸು ನಿನ್ನ ಕತ್ತೆಯನ್ನು!" ಎಂದು ಒರಟಾಗಿ ಅಬ್ಬರಿಸಿದನು ಆ ಸೇವಕ. ತನ್ನ ವಾಹನವನ್ನು ಮೊಳಕಾಲಿನಿಂದ ಒತ್ತಿ ಖೋಜಾ ನಸ್ರೆದ್ದೀನನನ್ನು ಗೋಡೆಗೆ ಅದುಮುತ್ತಾ, "ನಡಿ ಈಗ; ಬೇಗ, ಬೇಗ! ಇನ್ನು ನನ್ನ ಕಾಲ ಕಳೆಯಬೇಡ" ಎಂದು ಒತ್ತಾಯಪಡಿಸತೊಡಗಿದನು.

ಖೋಜಾ ನಸ್ರೆದ್ದೀನ್ ಆತುರಾತುರವಾಗಿ ಅವನ ಮಾತಿನ ನಡುವೆ ಅಡ್ಡ ಬಂದನು. "ಸ್ವಲ್ಪ ತಡೆ. ನಾನಿನ್ನೂ ಮುಗಿಸಿಲ್ಲ. ಕೈಗೆ ಬಂದ ಟಂಗಗಳ ಸಂಖ್ಯೆಗನುಗುಣವಾಗಿ ಮುನ್ನೂರು ಪದಗಳ ಒಂದು ಪ್ರಾರ್ಥನೆಯನ್ನು ಉಚ್ಚರಿಸಬೇಕೆಂದಿದ್ದೆ. ಆದರೆ ಈಗ ಇನ್ನೂರ ಐವತ್ತು ಪದಗಳ

ಪ್ರಾರ್ಥನೆಯೇ ಸಾಕೆನ್ನಿಸುತ್ತಿದೆ. ನನ್ನ ಕಡೆಯ ಕಟಕಟೆ ಸ್ವಲ್ಪ ಕುಳ್ಳಾಗುತ್ತದೆ, ಸ್ವಲ್ಪ ತೆಳ್ಳಗಾಗುತ್ತದೆ ; ಆದರಾಗಲಿ, ನಿನಗಾದರೋ, ನೀನು ಐವತ್ತು ಪದಗಳ ಪ್ರಾರ್ಥನೆಯೊಂದನ್ನು ಹೇಳುವೆಯಂತೆ. ಅದೇ ಮರದಿಂದ ನಿನ್ನ ಕಡೆಯೂ ಕಟಕಟೆ ಕಟ್ಟುವುದು ಹೇಗೆಂಬುದು ಸರ್ವಜ್ಞನಾದ ಅಲ್ಲಾಗೆ ಗೊತ್ತೇ ಇದೆ" ಎಂದನು.

"ಏನು ? ನನ್ನ ಕಟಕಟೆ ನಿನ್ನದಕ್ಕಿಂತ ಅದೇಕೆ ಐದರಷ್ಟು ಕುಳ್ಳಾಗಿರಬೇಕು ?"

"ಆದರೆ, ನನ್ನ ಕಟಕಟೆ ಅತ್ಯಂತ ಅಪಾಯಕರವಾದ ಕಡೆ ಇರುತ್ತದೆ. ಅದಕ್ಕೇ ಅದು ಹೆಚ್ಚು ಎತ್ತರವಾಗಿರಬೇಕು" ಎಂದನು ಖೋಜಾ ನಸ್ರೆದ್ದೀನ್.

"ಇಲ್ಲ" ಎಂದನು ಸೇವಕ ಖಂಡಿತ ಸ್ವರದಿಂದ. "ಇಲ್ಲ, ಅಂಥ ಗಿಡ್ಡ ಕಟಕಟೆಗೆ ನಾನೊಪ್ಪುವುದಿಲ್ಲ. ಅದರಿಂದ ಸೇತುವೆಯ ಆ ಭಾಗಕ್ಕೆ ಕಟಕಟೆ ಇಲ್ಲದಂತೆಯೇ ಆಗುತ್ತದೆ. ಆ ಸಂದರ್ಭದಲ್ಲಿ ನಮ್ಮ ಯಜಮಾನನಿಗೆ ಒದಗಬಹುದಾದ ಅಪಾಯವನ್ನು ಯೋಚಿಸುವುದಕ್ಕೂ ನನಗೆ ಮೈ ನಡುಗುತ್ತದೆ. ನನ್ನ ಅಭಿಪ್ರಾಯದಲ್ಲಿ ನಾವಿಬ್ಬರೂ ತಲಾ ನೂರೈವತ್ತು ಪದಗಳ ಪ್ರಾರ್ಥನೆಯನ್ನು ಹೇಳುವುದೇ ಲೇಸು ; ಆಗ ಎರಡು ಕಡೆಯ ಕಟಕಟೆಗಳೂ ಒಂದೇ ಸಮನಾಗಿರುತ್ತವೆ. ಅವು ತೆಳ್ಳಗಿದ್ದಗೂ ಚಿಂತೆಯಿಲ್ಲ ; ಕನಿಷ್ಠ ಪಕ್ಷ ಇಕ್ಕೆಲಗಳಲ್ಲಿಯೂ ಕಾಪಿದ್ದಂತಾಗುತ್ತದೆ. ನೀನು ಒಪ್ಪುವುದಿಲ್ಲವಾದರೆ, ನಮ್ಮ ಯಜಮಾನನ ವಿಷಯದಲ್ಲಿ ನಿನಗೆ ಕೆಟ್ಟಯೋಚನೆಯಿದೆಯೆಂದಾಗುತ್ತದೆ ; ಅವನು ಸೇತುವೆಯಿಂದ ಜಾರಿ ಬೀಳಲೆಂದು ಬಯಸುತ್ತೀಯೆಂದು ಅರ್ಥವಾಗುತ್ತದೆ. ಆಗ ನಾನು ಸಹಾಯಕ್ಕೆ ಹೇಳಿಕಳಿಸಬೇಕಾಗುತ್ತದೆ. ನೀನು ಸೆರೆಮನೆಯ ಕತ್ತಲೆ ಕೋಣೆಗೆ ಹತ್ತಿರದ ದಾರಿ ಹುಡುಕಿಕೊಂಡಂತಾಗುತ್ತದೆ."

ಖೋಜಾ ನಸ್ರೆದ್ದೀನನಿಗೆ ರೇಗಿಹೋಯಿತು ; ತನ್ನ ನಡುಕಟ್ಟಿನಲ್ಲಿ ಹಣದ ಚೀಲ ಕುಣಿಯುತ್ತಿರುವ ಹಾಗೆ ಭಾಸವಾಯಿತು "ತೆಳ್ಳನೆಯ ಕಟಕಟೆ! ನಿನ್ನ ಮಾತು ಕೇಳಿದರೆ, ಕಡ್ಡಿಗಳಿಂದ ಕಟಕಟೆ ಕಟ್ಟಿದರೂ ಸಾಕು ಎಂದು ತೋರುತ್ತದೆ! ಒಂದು ಕಡೆಯಾದರೂ ಕಟಕಟೆ ದಪ್ಪವಾಗಿಯೂ ಹೆಚ್ಚು ಬಲವಾಗಿಯೂ ಇರಬೇಡವೆ ? ನಿಮ್ಮ ಯಜಮಾನ ಎಲ್ಲಾದರೂ ಕಾಲು ಜಾರಿ ಬೀಳುವ ಹಾಗಾದರೆ, ಆಗ ಹಿಡಿದುಕೊಳ್ಳಲು ಭದ್ರವಾದ ಆಶ್ರಯವಿರ

ಬೇಡವೆ? ಇಷ್ಟು ನಿನಗೆ ತಿಳಿಯದೆ?" ಎಂದು ಕೋಪದಿಂದಲೇ ನುಡಿದನು.

ಸೇವಕನಿಗೆ ಆನಂದವಾಯಿತು. "ನಿಜ; ನಿನ್ನ ಬಾಯಿಂದ ಸತ್ಯವೇ ಹೊರಹರಿಯುತ್ತಿದೆ. ನನ್ನ ಕಡೆಯ ಕಟಕಟೆಯೇ ಹೆಚ್ಚು ದಪ್ಪವಾಗಿರಲಿ. ನಾನು ಕಷ್ಟಪಡಲು ಹಿಂಜರಿಯುವುದಿಲ್ಲ; ಇನ್ನೂರು ಪದಗಳ ಪ್ರಾರ್ಥನೆಯನ್ನೇ ಹೇಳುತ್ತೇನೆ" ಎಂದನು.

"ಬಹುಶಃ ಅದನ್ನು ನೀನು ಮುನ್ನೂರು ಪದಕ್ಕೆ ಹೆಚ್ಚಿಸಿದರೂ ಆದೀತು!" ಎಂದು ಖೋಜಾ ನಸ್ರೆದ್ದೀನ್ ನಂಜುನುಡಿ ನುಡಿದನು.

ಕೊನೆಗೆ ಇಬ್ಬರೂ ಒಬ್ಬರನ್ನೊಬ್ಬರು ಅಗಲಿದಾಗ ಖೋಜಾನಸ್ರೆದ್ದೀನನ ಹಣದ ಚೀಲದ ಅರ್ಧದಷ್ಟು ಹಗುರವಾಗಿತ್ತು. ಸೇವಕನ ಯಜಮಾನನನ್ನು ಸ್ವರ್ಗಕ್ಕೆ ಪ್ರವೇಶಮಾಡಿಸುವುದಕ್ಕೆ ಆ ಸೇತುವೆಗೆ ಎರಡು ಕಡೆಗಳಲ್ಲಿಯೂ ಒಂದೇ ಗಾತ್ರದ ಸಮಾನ ಬಲದ ಕಟಕಟೆಯಿರಬೇಕೆಂದು ಕಟ್ಟಕಡೆಯಲ್ಲಿ ಇಬ್ಬರೂ ಒಪ್ಪಿಕೊಂಡಿದ್ದರು.

"ಓ ಪ್ರಯಾಣಿಕನೇ, ಹೋಗಿ ಬಾ. ಈ ದಿನ ನಾನು ನೀನು ಇಬ್ಬರೂ ಒಂದು ಪುಣ್ಯಕಾರ್ಯ ಮಾಡಿದ್ದೇವೆ" ಎಂದನು ಆ ಸೇವಕ.

"ಹೋಗಿ ಬಾ; ಪರಮ ಕರುಣಾಳುವೂ, ಸ್ವಾಮಿಭಕ್ತನೂ ಧರ್ಮನಿಷ್ಠನೂ ಆದ ಸೇವಕನೇ ಹೋಗಿ ಬಾ. ನಿಮ್ಮ ಯಜಮಾನನ ಆತ್ಮದ ಶ್ರೇಯಸ್ಸಿಗಾಗಿ ನಿನ್ನ ಕಾತರ ಎಷ್ಟು! ಬಹು ಬೇಗ ನೀನು ಆ ಖೋಜಾ ನಸ್ರೆದ್ದೀನನಿಗೇ ಸಮಾನನಾಗುತ್ತೀಯ ಎಂದು ಹೇಳಬಹುದು."

ಸೇವಕನು ಕಿವಿ ನೆಟ್ಟಗೆ ಮಾಡಿಕೊಂಡು, "ನೀನು ಅವನ ಹೆಸರು ಹೇಳುವಂತೆ ಮಾಡಿದ್ದೇನು?" ಎಂದು ಪ್ರಶ್ನಿಸಿದನು.

"ಏನೂ ಇಲ್ಲ........ಇದ್ದಕ್ಕಿದ್ದ ಹಾಗೇ ಇದು ನನಗೆ ಹೊಳೆಯಿತು. ಅಷ್ಟೆ" ಎಂದನು ಖೋಜಾ ನಸ್ರೆದ್ದೀನ್. ಹಾಗೆಂದು ನುಡಿದು ತನ್ನ ಮನಸ್ಸಿನಲ್ಲೇ, "ಓಹೋ, ಈ ಆಸಾಮಿ ಬೆಪ್ಪನೇನಲ್ಲ" ಎಂದುಕೊಂಡನು.

"ನೀನು ಅವನಿಗೆ ದೂರದ ಸಂಬಂಧಿಯಾಗಿದ್ದರೂ ಇರಬಹುದು. ಅಥವಾ, ಒಂದು ವೇಳೆ ಅವನ ಕುಟುಂಬದವರಲ್ಲಿ ಯಾರಾದರೂ ನಿನಗೆ ಗೊತ್ತಿರಬಹುದು. ಅಲ್ಲವೆ?" ಎಂದು ಕೇಳಿದನು ಆ ಸೇವಕ.

"ಇಲ್ಲ, ನಾನವನನ್ನು ಕಂಡೇ ಇಲ್ಲ. ಖೋಜಾ ನಸ್ರೆದ್ದೀನನ ನೆಂಟರಲ್ಲಿ

ಯಾರೊಬ್ಬರನ್ನೂ ನಾನು ಕಾಣೆ "

"ಕೇಳಿಲ್ಲಿ; ನಾನೊಂದು ಗುಟ್ಟು ಹೇಳುತ್ತೇನೆ." ಹೀಗೆಂದು ಆ ಸೇವಕ ಕುದುರೆಯ ಮೇಲಿನಿಂದ ಕೆಳಕ್ಕೆ ಬಗ್ಗಿದನು. "ನಾನು ಅವನ ನೆಂಟನಲ್ಲೊಬ್ಬ. ನಿಜವಾಗಿ ಹೇಳಿದರೆ, ಅವನ ಚಿಕ್ಕಪ್ಪನ ಮಗ. ನಾವಿಬ್ಬರೂ ಬಾಲ್ಯವನ್ನು ಒಟ್ಟಿಗೇ ಕಳೆದೆವು" ಎಂದನು.

ಖೋಜಾ ನಸ್ರೆದ್ದೀನನ ಸಂಶಯ ಈಗ ಖಂಡಿತವಾಯಿತು. ಅವನು ತನ್ನ ನಾಲಗೆಯನ್ನು ಬಿಗಿಹಿಡಿದನು. ಸೇವಕ ಇನ್ನೂ ಹತ್ತಿರಕ್ಕೆ ಬಗ್ಗಿದನು.

"ಅವರಪ್ಪ, ಇಬ್ಬರು ಸೋದರರು ಮತ್ತು ಒಬ್ಬ ಚಿಕ್ಕಪ್ಪ—ಇಷ್ಟು ಜನರೂ ಸತ್ತರು. ಬಹುಶಃ ಆ ವಿಚಾರವನ್ನು ನೀನು ಕೇಳಿರಬಹುದು. ಅಲ್ಲವೆ, ಪ್ರಯಾಣಿಕ ?"

ಈಗಲೂ ಖೋಜಾ ನಸ್ರೆದ್ದೀನ್ ಮೌನವಾಗಿದ್ದನು.

"ಅಮೀರನದು ಅದೆಂಥ ಭಯಂಕರ ಕ್ರೂರತನ !" ಆಷಾಢಭೂತಿತನದಿಂದ ಆಡಿದನು ಆ ಸೇವಕ.

ಖೋಜಾ ನಸ್ರೆದ್ದೀನ್ ಈಗಲೂ ತುಟಿ ಪಿಟಕ್ ಅನ್ನಲಿಲ್ಲ.

"ಬುಖಾರದ ವಜೀರರೆಲ್ಲ ಶುದ್ಧ ದಡ್ಡರು!" ಎಂದು ಅನಿರೀಕ್ಷಿತವಾಗಿ ನುಡಿದನು ಸೇವಕ. ಅವನು ಅತ್ಯಾಶೆಗೆ ವಶನಾಗಿ ಅತಿ ಕುತೂಹಲವನ್ನು ತಡೆಯಲಾರದವನಾಗಿದ್ದನು. ಸ್ವತಂತ್ರ ವಿಚಾರಿಗಳನ್ನು ಹಿಡಿದುಕೊಟ್ಟವರಿಗೆ ಸರ್ಕಾರ ಕೈತುಂಬ ಬಹುಮಾನ ಕೊಡುತ್ತಿತ್ತು. ಆದರೆ ಖೋಜಾ ನಸ್ರೆದ್ದೀನನು ಗಟ್ಟಿ ಮನಸ್ಸುಮಾಡಿ ಕಲ್ಲಿನಂತೆ ಮೌನ ತಾಳಿದ್ದನು.

"ಮತ್ತು ನಮ್ಮ ಸುಪ್ರಸಿದ್ಧ ಅಮೀರ ಕೂಡ ಶುದ್ಧ ದಡ್ಡ! ಅಲ್ಲದೆ, ಅಲ್ಲಾ ಇರುವುದು ಕೂಡ ನಿಶ್ಚಯವಿಲ್ಲ"

ಆದರೆ ಖೋಜಾ ನಸ್ರೆದ್ದೀನ್ ಬಾಯಿಬಿಡಲಿಲ್ಲ; ಮುಟ್ಟಿ ನೋಡಿಕೊಳ್ಳುವಂತೆ ಮಾಡುವ ಚುಚ್ಚುನುಡಿಯ ಉತ್ತರ ನಾಲಿಗೆಯ ತುದಿಯಲ್ಲಿ ನರ್ತಿಸುತ್ತಿದ್ದರೂ ತೆಪ್ಪಗಿದ್ದನು. ಸೇವಕನಿಗೆ ಅಸಾಧ್ಯ ಆಶಾಭಂಗವಾಯಿತು. ಯಾವುದೋ ಒಂದು ಆಣೆಯನ್ನು ಅಬ್ಬರಿಸಿ ನುಡಿದು, ಕುದುರೆಗೆ ಚಬುಕಿನಿಂದ ಬಾರಿಸಿ ಎರಡೇ ಹಾರಿನಲ್ಲಿ ಮೂಲೆ ತಿರುಗಿ ಮರೆಯಾಗಿ ಹೋದನು. ಎಲ್ಲಾ ಶಾಂತವಾಯಿತು. ಕುದುರೆಯ ಗೊರಸಿನಿಂದೆದ್ದ ಧೂಳು ಮಾತ್ರ, ಆ ಇಕ್ಕ

ಟ್ಟಿದ ಓಣಿಯಲ್ಲಿ ಒಕ್ಕಡೆಗೆ ಓಲಿಕೊಂಡು ತೂರಿಬರುತ್ತಿದ್ದ ಶಾಖವಾದ ಸೂರ್ಯ ಕಿರಣಗಳಲ್ಲಿ ಬಂಗಾರದ ಮಂಜಿನಂತೆ ತೂಗಾಡುತ್ತಿತ್ತು.

" ಸರಿ ಹಾಗಾದರೆ, ನನಗೊಬ್ಬ ನೆಂಟ ಸಿಕ್ಕಿದಂತಾಯಿತು. ಆ ಮುದುಕ ನನಗೆ ಹೇಳಿದ್ದು ಸುಳ್ಳಲ್ಲ. ಬುಖಾರದಲ್ಲಿನ ಗೂಢಚಾರರು ನೊಣಗಳಂತೆಯೇ ದಟ್ಟವಾಗಿದ್ದಾರೆ. ಎಚ್ಚತ್ತಿರುವುದರಿಂದ ಪ್ರಯೋಜನವುಂಟು. ಗಾದೆ ಹೇಳು ವಂತೆ: ' ತಪ್ಪು ನುಡಿಯುವ ನಾಲಿಗೆ ತಲೆಯ ಜೊತೆಯೇ ಕತ್ತರಿಸಿ ಹೋಗು ತ್ತದೆ ' ಎಂದುಕೊಂಡು ನಸ್ರೆದ್ದೀನ್ ತನ್ನಷ್ಟಕ್ಕೆ ತಾನೇ ಮುಗುಳು ನಕ್ಕನು.

ಹೀಗೆ ಅವನು ಬಹಳ ಹೊತ್ತು ಸವಾರಿ ಹೋಗುತ್ತಲೇ ಇದ್ದನು. ಒಂದು ಸಲ ತನ್ನ ಚೀಲದ ಅರ್ಧ ಭಾಗ ಕಳೆದು ಹೋದದ್ದಕ್ಕಾಗಿ ವ್ಯಥೆ ಪಡುತ್ತಲೂ, ಮತ್ತೊಂದು ಸಲ ತೆರಿಗೆ ವಸೂಲಿಗಾರನಿಗೂ ಆ ಜಂಬಗಾರ ಅಪರಿಚಿತನಿಗೂ ನಡೆದ ಜಗಳವನ್ನು ನೆನೆದು ಹಲ್ಲುಕಿರಿಯುತ್ತಲೂ, ಹೀಗೆ ಒಂದಾದ ಮೇಲೊಂದನ್ನು ಮನಸ್ಸಿನಲ್ಲೇ ಮೆಲುಕು ಹಾಕುತ್ತಾ ಮುಂದೆ ನಡೆದನು.

೫

ಖೋಜಾ ನಸ್ರೆದ್ದೀನ್ ಪಟ್ಟಣದ ಇನ್ನೊಂದು ಕೊನೆಯನ್ನು ಮುಟ್ಟಿ ದಾಗ ಅಲ್ಲಿ ನಿಂತನು. ತನ್ನ ಕತ್ತೆಯನ್ನು ಟೀ ಅಂಗಡಿಯ ಮಾಲೀಕನೊಬ್ಬನ ವಶಕ್ಕೆ ಕೊಟ್ಟು ತಾನು ಹೊತ್ತು ಕಳೆಯದೆ ಊಟದ ಮನೆಗೆ ಹೋದನು.

ಅದು ಕಿಕ್ಕಿರಿದು ತುಂಬಿತ್ತು ; ಹೊಗೆ ಮತ್ತು ಬೇಯುತ್ತಿರುವ ಆಹಾರದ ವಾಸನೆ ಎಲ್ಲೆಲ್ಲೂ ವ್ಯಾಪಿಸಿತ್ತು. ಒಲೆಗಳು ಶಾಖದಿಂದ ಕೆಂಪಗೆ ಜ್ವಲಿಸುತ್ತಿದ್ದವು; ಉರಿಯ ಜ್ವಾಲೆಗಳು ಅಡಿಗೆಯವರ ಬೆನ್ನ ಮೇಲೆ—ಸೊಂಟದ ವರೆಗೂ ಬರಿಮೈ ಬಿಟ್ಟುಕೊಂಡು ಕೆಲಸ ಮಾಡುತ್ತಿದ್ದ ಅವರ ಬೆವರು ತುಂಬಿದ ಬೆನ್ನ ಮೇಲೆ—ಕಳೆಯೆರಚಿ ಬೆಳಗುತ್ತಿದ್ದವು. ಅವರು ಗಡಿಬಿಡಿಯಿಂದ ಓಡಾಡು ತ್ತಿದ್ದರು ; ಒಬ್ಬರನ್ನೊಬ್ಬರು ನೂಕಿಕೊಂಡು ಕೂಗಾಡಿ ಗದ್ದಲ ಮಾಡುತ್ತಿದ್ದರು; ಅಡಿಗೆಮನೆಯ ಕೆಲಸದ ಹುಡುಗರ ಕಿವಿ ಹಿಂಡುತ್ತಿದ್ದರು ; ಆ ಹುಡುಗರು ಬಿರುಗಣ್ಣು ಬಿಟ್ಟುಕೊಂಡು ಅತ್ತಿತ್ತ ಓಡಾಡುತ್ತಾ ಅಲ್ಲಿನ ಗದ್ದಲ ಅವ್ಯವಸ್ಥೆ ಗಳನ್ನು ಮತ್ತಷ್ಟು ಹೆಚ್ಚಿಸುತ್ತಿದ್ದರು. ಭಾರಿ ಭಾರಿ ಕೆಟಲುಗಳು ಕುದಿಯು

ತ್ತಿರಲು ಅವುಗಳ ಮರದ ಮುಚ್ಚಳ ಕುಣಿದಾಡುತ್ತಿದ್ದವು. ದಟ್ಟ ಆವಿ ಒಳ ಮಾಳಿಗೆಯ ಬಳಿಗೇರುತ್ತಿತ್ತು ; ಅಲ್ಲಿ ನೊಣದ ಗುಂಪುಗಳು ಜೊಂಯ್ ಎಂದು ಸದ್ದು ಮಾಡುತ್ತಿದ್ದವು. ಹೊಗೆ ತುಂಬಿದ ಆ ಮಬ್ಬು ಬೆಳಕಿನಲ್ಲಿ ಜಿಡ್ಡೆ ಹಿಸ್ಸೆಂದು ಸದ್ದುಮಾಡುತ್ತಿತ್ತು, ಚಟಪಟಗುಟ್ಟುತ್ತಿತ್ತು. ಅಗ್ಗಿಷ್ಟಿಕೆಗಳ ಪಕ್ಕ ಕೆಂಪಗೆ ಕಾದು ಹೊಳೆಯುತ್ತಿತ್ತು. ಸುಡುಗಂಬಿಗಳಿಂದ ಕೊಬ್ಬು ಕೆಂಡದ ಮೇಲೆ ತೊಟ್ಟಿಕ್ಕಿ ನೀಲವರ್ಣದ ಹೊಗೆಗೂಡಿದ ಉರಿಯುಗುಳುತ್ತ ಉರಿಯುತ್ತಿತ್ತು. ಪಲಾವು ಬೇಯಿಸುತ್ತಿದ್ದರು ; ಕರುಳು ಕುದಿಸುತ್ತಿದ್ದರು ; ನೀರುಳ್ಳಿ ಮೆಣಸು ಮಾಂಸ ಕುರಿಯ ಬಾಲದ ಕೊಬ್ಬುಗಳನ್ನು ತುಂಬಿದ ಕಡುಬುಗಳನ್ನು ಬೇಯಿಸುತ್ತಿದ್ದರು ; ಹೀಗೆ ಬಗೆಬಗೆಯ ಅಡಿಗೆಗಳನ್ನು ಸಿದ್ಧಪಡಿಸುತ್ತಿದ್ದರು.

ಖೋಜಾ ನಸ್ರೆದ್ದೀನನಿಗೆ ಅಲ್ಲಿ ಸ್ಥಳ ಸಿಕ್ಕುವುದೇ ಕಷ್ಟವಾಯಿತು. ಅಂತೂ ಇಂತೂ ಒಂದು ಕಡೆ ಹೋಗಿ ಆಚೀಚೆಯವರನ್ನು ಒತ್ತಿ ಕುಳಿತುಕೊಂಡನು ; ಬೆನ್ನು ಕಡೆ ಮತ್ತು ಎಡಬಲಗಳಲ್ಲಿ ಕೂತಿದ್ದವರು ಗುರುಗುಟ್ಟುವಷ್ಟು ಬಲವಾಗಿ ಒತ್ತಿ ಕೂರಬೇಕಾಯಿತು. ಆದರೂ ಯಾರೂ ಅಸಮಾಧಾನ ಮಾಡಿಕೊಳ್ಳಲಿಲ್ಲ. ಯಾರೊಬ್ಬರೂ ಅವನಿಗೆ ಒಂದು ಮಾತೂ ಅನ್ನಲಿಲ್ಲ; ಅವನೂ ಗೊಣಗಲಿಲ್ಲ ಪೇಟೆಗಳಲ್ಲಿ ದಟ್ಟವಾಗಿ ಜನ ತುಂಬಿದ ಇಂಥ ಊಟದ ಮನೆಗಳನ್ನು ಕಂಡರೆ ಯಾವಾಗಲೂ ಅವನಿಗೆ ತುಂಬ ಇಷ್ಟ. ಪರಸ್ಪರ ಹೊಂದಿಕೆಯಿಲ್ಲದ ಹಲವು ಬಗೆಯ ಸದ್ದುಗಳು, ಗದ್ದಲ, ವಿನೋದಗಳು, ನಗುಗಳು, ಕೂಗು, ಕಿರಿಚು, ಒಬ್ಬರನ್ನೊಬ್ಬರು ಒತ್ತರಿಸುವ ತಳ್ಳಾಟ, ಭಾವೋದ್ರೇಕ ಹೊಂದಿದಾಗ ಮೂಗಿನಿಂದ ಹೊರಡುವ ಜೋರಾದ ಘರ್ಘರನದ ಸದ್ದು, ನೂರಾರು ಜನ ಒಟ್ಟಿಗೆ ಸೇರಿ ಆಹಾರವನ್ನು ಕಚಕಚನೆ ಅಗಿಯುತ್ತಿರುವುದು, —ಇದೆಲ್ಲ ಅವನಿಗೆ ಆಕರ್ಷಕವಾಗಿತ್ತು. ಹಗಲೆಲ್ಲ ಮೈಮುರಿಯ ದುಡಿದು ದಣಿದುಬಂದು ತಮಗೆ ಇಂಥದೇ ಆಹಾರ ಬೇಕೆಂದು ಆಯ್ದುಕೊಳ್ಳಲು ಸಮಯವಿಲ್ಲದ ಮತ್ತು ಅವಕಾಶವಿಲ್ಲದ ಬಡಜೀವಿಗಳು ಅವರು. ಅವರ ಬಲವಾದ ದವಡೆಗಳು ಏನನ್ನು ಬೇಕಾದರೂ—ಮೃದ್ವಸ್ಥಿಯೋ ಸ್ನಾಯುರಜ್ಜುವೋ ಏನನ್ನೇ ಆದರೂ—ಅಗಿಯಬಲ್ಲವು, ಅವರ ಒರಟು ಜಠರಗಳು ಯಾವುದನ್ನಾದರೂ ಒಳಕೊಂಡು ಅರಗಿಸಿಕೊಳ್ಳಬಲ್ಲವು ; ಆದರೆ ಆ ಆಹಾರ ಅಗ್ಗವಾಗಿರಬೇಕು ಮತ್ತು ತುಂಬ ದೊರೆಯಬೇಕು, ಅಷ್ಟೇ.

ಖೋಜಾ ನಸ್ರೆದ್ದೀನ್ ಬಹಳ ಬಹಳ ತಿನ್ನಬಲ್ಲವನು. ಅವನು ಒಂದೇ ಊಟದಲ್ಲಿ ಮೂರು ಬೋಗುಣಿ ನೂಡಲ್, ಮೂರು ಬೋಗುಣಿ ಅನ್ನ ಉಂಡು ಅದರ ಮೇಲೆ ಎರಡು ಡಸನ್* ಭಕ್ಷ್ಯಗಳನ್ನೂ ತಿಂದುಬಿಟ್ಟನು. ದುಡ್ಡು ಕೊಟ್ಟು ತರಿಸಿಕೊಂಡಮೇಲೆ ಪಾತ್ರೆಯಲ್ಲಿ ಏನೂ ಉಳಿಯದಂತೆ ತಿಂದುಬಿಡಬೇಕೆಂಬುದು ಅವನ ನಿಯಮ; ಆ ನಿಯಮವನ್ನು ಚಾಚೂ ತಪ್ಪದೆ ಈಗಲೂ ಅನುಸರಿಸಿದನು.

ಎಲ್ಲ ಮುಗಿಸಿ ಕೊನೆಗೆ ಬಾಗಿಲ ಕಡೆ ಹೊರಟನು. ಮೊಳಕೈಯಿಂದ ನೂಕಿ ಹಾಗೂ ಹೀಗೂ ದಾರಿ ಬಿಡಿಸಿಕೊಂಡು ಹೊರಗೆ ಬಂದಾಗ ಅವನಿಗೆ ಬೆವರಿನ ಸ್ನಾನವಾಗಿಬಿಟ್ಟಿತ್ತು. ಅವನ ಕೈಕಾಲುಗಳು ಬಹು ಮೃದುವಾಗಿ ಶಕ್ತಿಹೀನವಾಗಿ ತೋರಿದವು; ಸ್ನಾನದ ಮನೆಗಳಲ್ಲಿ ಮೈಕೈ ನೀವುವ ಜಟ್ಟಿಯ ಕೈಯಿಂದ ಆಗಿನ್ನೂ ಬಿಡುಗಡೆಹೊಂದಿ ಬಂದಿದ್ದಂತೆ ತೋರುತ್ತಿತ್ತು. ಹೊಟ್ಟೆ ಭಾರವಾಗುವಂತೆ ಉಂಡು ಆ ಸೆಕೆಯಲ್ಲಿ ನಿದಾನವಾಗಿ ಕಾಲೆಳೆದುಕೊಂಡು ತನ್ನ ಕತ್ತೆಯನ್ನು ಬಿಟ್ಟಿದ್ದ ಟೀ ಅಂಗಡಿಗೆ ಹೋದನು. ಟೀ ತರಿಸಿಕೊಂಡು ಕುಡಿದು ಫೆಲ್ಟುಗಳ ಮೇಲೆ ಒರಗಿಕೊಂಡನು. ಕಣ್ಣೆಳೆದುಕೊಂಡು ಬರುತ್ತಿತ್ತು. ಹಿತವಾದ ಭಾವನೆಗಳು ನಿದಾನವಾಗಿ ಅವನ ಮನಸ್ಸಿನಲ್ಲಿ ಸುಳಿಯತೊಡಗಿದವು :

"ಸದ್ಯದಲ್ಲಿ ನನ್ನ ಕೈಯಲ್ಲಿ ತಕ್ಕಷ್ಟು ಹಣವಿದೆ. ಒಂದು ಕಾರಖಾನೆಯನ್ನು—ಜೀನು ತಯಾರಿಕೆ ಅಥವಾ ಮಡಕೆ ಕುಡಿಕೆಯನ್ನು ಮಾಡುವ ಕಾರಖಾನೆಯನ್ನು—ಪ್ರಾರಂಭಿಸಲು ಈ ಹಣವನ್ನು ಉಪಯೋಗಿಸುವುದು ಲೇಸು. ಈ ಎರಡು ಕೆಲಸಗಳೂ ನನಗೆ ಚೆನ್ನಾಗಿ ಗೊತ್ತು. ಅಲೆದಾಟವನ್ನು ಬಿಟ್ಟು ಒಂದು ಕಡೆ ನೆಲಸುವುದಕ್ಕೆ ನನಗೆ ಸಕಾಲವಾಗಿದೆ. ಬೇರೆ ಜನಕ್ಕಿಂತ ನಾನೇನು ಕೀಳಾಗಿದ್ದೇನೆಯೆ? ಅವರಿಗಿಂತ ದಡ್ಡನೆ? ಕೋಮಲಹೃದಯದ ಚೆಲುವೆ ಹೆಂಡತಿ ನನಗೆ ಸಿಕ್ಕಲಾರಳೆ? ತೋಳ ಮೇಲೆ ಎತ್ತಿ ಮುದ್ದಾಡುವ ಮುದ್ದು ಮಗ ನನಗಾಗಲಾರನೆ? ಪ್ರವಾದಿಯ ಗಡ್ಡದಾಣೆಗೂ ಆ ತುಂಟ ಪೋರ ಗದ್ದಲಗಾರನಾಗಿ ಬೆಳೆದು ಪ್ರಸಿದ್ಧ ಠಕ್ಕನಾಗುತ್ತಾನೆ; ನಾನು ಕಲಿತ ಬುದ್ಧಿವಂತಿಕೆಯನ್ನೆಲ್ಲಾ ಅವನಿಗೆ ಅರೆದು ಹುಯ್ದುಬಿಡುತ್ತೇನೆ! ಹೌದು,

* ಡಸನ್ = ಹನ್ನೆರಡು.

ನಿರ್ಧರ ಮಾಡಿಬಿಟ್ಟೆ. ಖೋಜಾ ನಸ್ರೆದ್ದೀನನು ತನ್ನ ಅಲೆಮಾರಿ ಜೀವನವನ್ನು ಕೊನೆಗಾಣಿಸುತ್ತಾನೆ. ಮೊಟ್ಟಮೊದಲು ಕುಂಬಾರನ ಅಥವಾ ಜೀನುಗಾರನ ಉದ್ಯೋಗವೊಂದನ್ನು ಕೊಂಡುಕೊಳ್ಳಬೇಕು...."

ತನ್ನಲ್ಲಿದ್ದ ಹಣವನ್ನು ಎಣಿಸತೊಡಗಿದನು. ಒಳ್ಳೆಯ ಕಾರಖಾನೆಗೆ ಕನಿಷ್ಠ ಪಕ್ಷ ಮುನ್ನೂರು ಟಂಗದಷ್ಟಾದರೂ ಬೆಲೆಯಾಗುತ್ತದೆ. ಹಾಗಿರುವಾಗ ಅವನಲ್ಲಿದ್ದದ್ದು ನೂರೈವತ್ತು ಮಾತ್ರ. ಹಿಡುಬಿನ ಕಲೆಯ ಸೇವಕನಿಗೆ ಅವನು ಶಾಪಹಾಕಿದನು. "ಅಲ್ಲಾ ಆ ಕಳ್ಳನ ಕಣ್ಣಿಂಗಿಸಲಿ! ನಾನು ಉದ್ಯೋಗ ಪ್ರಾರಂಭಿಸುವುದಕ್ಕೆ ಎಷ್ಟು ಬೇಕಾಗಿತ್ತೋ ಅಷ್ಟನ್ನೂ ಅವನು ಕಸಿದುಕೊಂಡು ಬಿಟ್ಟನಲ್ಲ!"

ಮತ್ತೊಮ್ಮೆ ಅದೃಷ್ಟ ಅವನ ಸಹಾಯಕ್ಕೆ ಬಂತು. "ಇಪ್ಪತ್ತು ಟಂಗಗಳು!" ಇದ್ದಕ್ಕಿದ್ದಂತೆಯೇ ಯಾರೋ ಕೂಗಿದರು. ಆ ಮೇಲೆ ತಾಮ್ರದ ತಟ್ಟೆಯೊಳಕ್ಕೆ ದಾಳಗಳು ಉರುಳಿಬಿದ್ದವು.

ಮೊಗಸಾಲೆಯ ಅಂಚಿನಲ್ಲಿ ಅವನ ಕತ್ತೆಯನ್ನು ಕಟ್ಟಿಹಾಕಿದ್ದ ಕಟ್ಟು ಗಂಬಕ್ಕೆ ಬಹಳ ಹತ್ತಿರವಾಗಿ ಕೆಲವು ಮಂದಿ ಗುಂಪಾಗಿ ಕೂತಿದ್ದರು. ಟೀ ಅಂಗಡಿಯ ಮಾಲೀಕ ಅವರ ಹಿಂದುಗಡೆ ನಿಂತು, ಅವರ ತಲೆಗಳ ಮೇಲೆ ಕತ್ತು ನೀಡಿ ನೋಡುತ್ತಿದ್ದನು.

'ಜೂಜು!' ಎಂದು ಊಹಿಸಿದನು ಖೋಜಾ ನಸ್ರೆದ್ದೀನ್; ಮೊಳಕೈ ಊರಿಕೊಂಡು ಮಲಗಿದ್ದ ಹಾಗೆಯೇ ಸ್ವಲ್ಪ ಮೇಲಕ್ಕೆದ್ದನು. "ನನ್ನ ಹೆಸರು ಖೋಜಾ ನಸ್ರೆದ್ದೀನ್ ಎಂಬುದು ಎಷ್ಟು ನಿಜವೋ ಅಷ್ಟೇ ನಿಜವಾಗಿ ಅವರು ಜೂಜಾಡುತ್ತಿದ್ದಾರೆ ಎಂಬುದು ನಾನೂ ನೋಡಬೇಕು; ದೂರದಿಂದಾದರೂ ಸರಿ, ಅದನ್ನು ನೋಡಬೇಕು. ನಾನು ಜೂಜಾಡುವುದಿಲ್ಲ; ನಾನಂಥ ದಡ್ಡನಲ್ಲ. ಜಾಣನಾದವನು ದಡ್ಡರು ಏನು ಮಾಡುತ್ತಾರೆಂದು ನೋಡಬಾರದೆ?" ಎಂದುಕೊಂಡನು.

ಅವನು ಎದ್ದು ಜೂಜುಗಾರರಿದ್ದ ಬಳಿಗೆ ಹೋದನು.

"ಶುದ್ಧ ದಡ್ಡರು!" ಟೀ ಅಂಗಡಿಯ ಯಜಮಾನನ ಕಿವಿಯಲ್ಲಿ ಪಿಸುಗುಟ್ಟಿದನು. "ಲಾಭದಾಸೆಯಿಂದ ತಮ್ಮಲ್ಲಿರುವ ಕಡೆಯ ನಾಣ್ಯವನ್ನೂ ಒಡ್ಡಿಬಿಡುತ್ತಾರೆ. ಹಣಕ್ಕಾಗಿ ಜೂಜಾಡಬಾರದೆಂದು ಪ್ರವಾದಿಗಳು ನಿಷೇಧಿ

ಸಿಲ್ಲವೆ? ಅಲ್ಲಾ ದೊಡ್ಡವನು, ಈ ವಿನಾಶಕರವಾದ ಮೋಹಕ್ಕೆ ನಾನು ಸಿಕ್ಕಿಲ್ಲ....ಆದರೆ, ಆ ಕೆಂಗೂದಲಿನ ಜೂಜುಗಾರನ ಅದೃಷ್ಟವೇ ಅದೃಷ್ಟ! ಒಂದೇ ಸಮನೆ ಗೆಲ್ಲುತ್ತಿದ್ದಾನೆ! ಇದು ನಾಲ್ಕನೆಯ ಸಲ ಅವನು ಗೆದ್ದಿರುವುದು!....ನೋಡು, ನೋಡು—ಐದನೆಯ ಸಲವೂ ಗೆದ್ದುಬಿಟ್ಟ! ಅಯ್ಯೋ, ಬುದ್ಧಿಯಿಲ್ಲದ ಬೆಪ್ಪುತಕಡಿ! ಸಂಪತ್ತಿನ ಕನಸು ಕಂಡು ಅದರಿಂದ ಆಕರ್ಷಿತನಾಗಿ ಮುನ್ನುಗ್ಗುತ್ತಿದ್ದಾನೆ; ಆದರೆ ಬಡತನ ಅವನ ದಾರಿಯಲ್ಲಾಗಲೆ ಗುಂಡಿ ತೋಡಿ ಸಿದ್ಧಮಾಡಿಟ್ಟಿದೆ. ಏನಿದು? ಆರನೆಯ ಸಲ ಗೆದ್ದುಬಿಟ್ಟನಲ್ಲಾ! ಇಂಥ ಅದೃಷ್ಟವನ್ನು ನಾನೆಂದೂ ಕಂಡೇ ಇಲ್ಲ. ನೋಡು, ಅವನು ಮತ್ತೆ ಪಣವೊಡ್ಡುತ್ತಿದ್ದಾನೆ. ನಿಜ, ನಿಜ, ಮನುಷ್ಯನ ಮೌಢ್ಯಕ್ಕೆ ಮಿತಿಯಿಲ್ಲ! ಬಿಡುವಿಲ್ಲದೆ ಒಂದೇ ಸಮನೆ ಅವನು ಗೆಲ್ಲುತ್ತಿರಲಾರ! ಸುಳ್ಳು ಅದೃಷ್ಟದ ಮೇಲೆ ಭಾರ ಹಾಕಿದವರು ಕೆಡುವುದೇ ಹೀಗೆ! ಈ ಕೆಂಗೂದಲಿನ ಆಸಾಮಿಗೆ ಬುದ್ಧಿ ಕಲಿಸಬೇಕು. ಇವನು ಏಳನೆಯ ಸಲವೂ ಗೆದ್ದರೆ, ಆಗ, ನನ್ನ ಹೃದಯಾಂತರಾಳದಲ್ಲಿ ಎಲ್ಲ ಬಗೆಯ ಜೂಜಿಗೂ ವಿರೋಧಿಯೇ ಆಗಿರುವೆನಾದರೂ, ನಾನು ಅವನಿಗೆದುರಾಗಿ ಪಣ ಒಡ್ಡುತ್ತೇನೆ. ನಾನೇನಾದರೂ ಅಮೀರನಾಗಿದ್ದಿದ್ದರೆ, ಇದನ್ನು ನಿಷೇಧಿಸಿ ಎಷ್ಟೋ ಕಾಲವಾಗಿರುತ್ತಿತ್ತು!"

ಕೆಂಗೂದಲಿನ ಜೂಜುಗಾರ ದಾಳ ಎಸೆದನು, ಎಡೆಬಿಡದೆ ಏಳನೆಯ ಸಲವೂ ಅವನು ಗೆದ್ದುಬಿಟ್ಟನು. ಖೋಜಾ ನಸ್ರೆದ್ದೀನ್ ಸ್ಥಿರ ಸಂಕಲ್ಪದಿಂದ ಹೆಜ್ಜೆಯಿಡುತ್ತ ನಡೆದು, ಆಟಗಾರರನ್ನು ಭುಜ ನೂಕಿ ಅತ್ತಿತ್ತ ಒತ್ತರಿಸಿ ದಾರಿ ಮಾಡಿಕೊಂಡು ಸಾಲಿನಲ್ಲಿ ತಾನೂ ಸೇರಿಕೊಂಡನು.

ದಾಳಗಳನ್ನು ಕೈಯಲ್ಲಿ ತೆಗೆದುಕೊಂಡು ಸುತ್ತಲೂ ತಿರುಗಿಸಿ ಅವನ್ನು ಪರೀಕ್ಷಿಸಿದನು. ಅನುಭವಿಕ ದೃಷ್ಟಿಯಿಂದ ಪರೀಕ್ಷೆಮಾಡಿ ಅದೃಷ್ಟಶಾಲಿಯಾದ ಆ ಜಯಶಾಲಿಯನ್ನು ಕುರಿತು, "ನಾನೂ ನಿನ್ನ ಜೊತೆ ಆಡಬೇಕೆಂದಿದ್ದೇನೆ" ಎಂದನು.

"ಎಷ್ಟಕ್ಕೆ?" ಎಂದು ಒಡೆದ ಗಂಟಲಿನ ಒರಟು ದನಿಯಿಂದ ಕೇಳಿದನು, ಕೆಂಚುಗೂದಲಿನಾತ. ಅವನ ಮೈ ಕಂಪಿಸಿತು. ಅಸ್ಥಿರವಾದ ಅದೃಷ್ಟದಿಂದ ಆದಷ್ಟು ಬೇಗ ಲಾಭ ಗಳಿಸಬೇಕೆಂದು ಆತುರಪಡುತ್ತಿದ್ದನು.

ಖೋಜಾ ನಸ್ರೆದ್ದೀನ್ ತನ್ನ ಹಣದ ಚೀಲವನ್ನು ಹೊರದೆಗೆದು

ಆಪತ್ಕಾಲಕ್ಕಿರಲೆಂದು ಇಪ್ಪತ್ತು ಟಂಗಗಳನ್ನು ಬೇರೆ ತೆಗೆದು ಜೇಬಿನಲ್ಲಿರಿಸಿ ಕೊಂಡು, ಉಳಿದದ್ದನ್ನೆಲ್ಲ ಸುರಿದನು. ಬೆಳ್ಳಿಯ ನಾಣ್ಯ ತಾಮ್ರದ ತಟ್ಟೆಯ ಮೇಲೆ ಬಿದ್ದು ರಂಠಣ ಧ್ವನಿಮಾಡಿ ಝಣಝಣಿಸಿತು. ಆ ಪಣವನ್ನು ಕಂಡು ಜೂಜುಗಾರರೆಲ್ಲ ಕುತೂಹಲದಿಂದ ಗುಜುಗುಜಿಸತೊಡಗಿದರು. ಭಾರಿಯ ಪಣಗಳ ಆಟ ಪ್ರಾರಂಭವಾಗುವುದರಲ್ಲಿತ್ತು.

ಕೆಂಚುಗೂದಲನವನು ದಾಳಗಳನ್ನು ತೆಗೆದುಕೊಂಡು ಬಹಳ ಹೊತ್ತು ಕುಲುಕುತ್ತಲೇ ಇದ್ದನು; ಎಸೆಯುವುದಕ್ಕೆ ಹಿಂಜರಿಯುತ್ತಿದ್ದನು. ಎಲ್ಲರೂ ಉಸಿರಾಡುವುದನ್ನು ನಿಲ್ಲಿಸಿ ನೋಡುತ್ತಿದ್ದರು; ಕತ್ತೆ ಕೂಡ ಮೂತಿಯನ್ನು ಚಾಚಿ ಕಿವಿ ನೆಟ್ಟಗೆ ಮಾಡಿಕೊಂಡಿತು. ಜೂಜುಗಾರನ ಕೈಯೊಳಗೆ ಒಂದ ಕ್ಕೊಂದು ತಾಕುತ್ತಿದ್ದ ದಾಳದ ಸದ್ದೊಂದು ಹೊರತು ಮತ್ತೆಲ್ಲ ನಿಶ್ಶಬ್ದವಾಗಿತ್ತು. ಈ ಸದ್ದು ಖೋಜಾ ನಸ್ರೆದ್ದೀನನ ಅಂಗಾಂಗಗಳಲ್ಲೆಲ್ಲ ಒಂದು ಬಗೆಯ ಹಂಬ ಲಿಕೆಯನ್ನು ಹರಿಸಿತು. ಕಟ್ಟಕಡೆಗೆ ಆ ಕೆಂಗೂದಲಿ ದಾಳ ಎಸೆದನು. ಉಳಿದ ಆಟಗಾರರೆಲ್ಲ ಕತ್ತು ಚಾಚಿ ನೋಡಿದರು; ಆ ಮೇಲೆ ಎಲ್ಲಾ ಒಟ್ಟಿಗೆ ಹಿಂದೆ ಸರಿದು ದೊಡ್ಡದಾಗಿ ಉಸಿರು ಬಿಟ್ಟರು; ಒಂದೇ ಒಂದು ಹೃದಯದಿಂದ ಹೊರ ಟಿತೋ ಎಂಬಂತೆ ಕೇಳಿಸಿತು ಆ ಉಸಿರು. ಜೂಜುಗಾರನ ಮುಖ ಬಿಳಿಚಿ ಕೊಂಡಿತು; ಅವನು ಹಲ್ಲುಕಚ್ಚಿಕೊಂಡು ನರಳಿದನು. ದಾಳದಲ್ಲಿ ಮೂರು ಚುಕ್ಕೆ ಕಾಣಿಸಿತು;—ಅದು ಖಂಡಿತವಾದ ಸೋಲು. ಹನ್ನೆರಡು ಬೀಳುವು ದೆಷ್ಟು ವಿರಳವೋ ದುಗ ಬೀಳುವುದೂ ಅಷ್ಟೇ ವಿರಳ. ಬೇರೆ ಯಾವ ಗರವೇ ಆದರೂ ಅದು ಖೋಜಾ ನಸ್ರೆದ್ದೀನನಿಗೆ ಅನುಕೂಲ.

ದಾಳಗಳನ್ನು ಕೈಯಲ್ಲಿ ಕುಲುಕಿಸುತ್ತಾ ಆ ದಿನ ತನಗೆ ಅಷ್ಟು ದಯ ತೋರಿದ್ದಕ್ಕಾಗಿ ಅವನು ಅದೃಷ್ಟವನ್ನು ಮನಸ್ಸಿನಲ್ಲೆ ಹೊಗಳಿದನು. ಆದರೆ ಅದೃಷ್ಟ ವಿಚಿತ್ರ ವರ್ತನೆಯ ಮನಸ್ಸು ಬಂದ ಗಿರಾಕಿ, ಚಂಚಲಸ್ವಭಾವದ್ದು, ಅದನ್ನೇ ಅತಿಯಾಗಿ ಅಂಗಲಾಚಿ ಬೇಡುವವನನ್ನು ಕೈಬಿಡುವುದು ಎಂಬು ದನ್ನು ಅವನು ಮರೆತಿದ್ದನು. ಮಿತಿಮೀರಿ ಆತ್ಮವಿಶ್ವಾಸವಿಟ್ಟುಕೊಂಡಿದ್ದ ನಸ್ರೆದ್ದೀನನಿಗೆ ಒಂದು ಪಾಠ ಕಲಿಸಬೇಕೆಂದು ಅದೃಷ್ಟ ನಿರ್ಧರಿಸಿತು. ಅದಕ್ಕೆ ಅವನ ಕತ್ತೆಯನ್ನು, ಅಥವಾ ಮುಳ್ಳು ಮತ್ತು ಊಬುಗಳಿಂದ ತುಂಬಿದ ಅದರ ಬಾಲವನ್ನು ಸಾಧನವಾಗಿ ಉಪಯೋಗಿಸಿಕೊಂಡಿತು. ಆಟಗಾರರ ಕಡೆಗೆ

ಬೆನ್ನು ತಿರುಗಿಸಿ ಕತ್ತೆ ತನ್ನ ಯಜಮಾನನ ಕೈಗೆ ಬಡಿಯುವಂತೆ ಬಾಲ ಬೀಸಿತು. ದಾಳಗಳು ಜಾರಿಬಿದ್ದವು; ತಕ್ಷಣವೆ ಕೆಂಗೂದಲಿನ ಜೂಜುಗಾರ ಒರಟಾಗಿ ಕೂಗುತ್ತ ತಟ್ಟೆಯ ಮೇಲೆ ಬಗ್ಗಿದನು; ಒಡ್ಡಿದ್ದ ಹಣವನ್ನೆಲ್ಲಾ ತನ್ನ ಮೈಯಿಂದ ಮುಚ್ಚಿಬಿಟ್ಟನು.

ಖೋಜಾ ನಸ್ರೆದ್ದೀನ್ ದುಗ ಬೀಳಿಸಿದ್ದನು.

ತುಟಿ ಅಲುಗಿಸುತ್ತಾ ಅವನು ಬಹಳ ಹೊತ್ತು ಕುಳಿತುಬಿಟ್ಟನು. ದುರುಗುಟ್ಟಿ ನೋಡುತ್ತಿದ್ದ ಅವನ ಕಣ್ಣ ಮುಂದೆ ಪ್ರಪಂಚವೆಲ್ಲ ತತ್ತರಿಸಿ ಗಿರ್ರನೆ ತಿರುಗತೊಡಗಿತು; ಒಂದು ವಿಚಿತ್ರವಾದ ಭೋರೆಂಬ ಸದ್ದು ಕಿವಿ ತುಂಬಿತು.

ತಟಕ್ಕನೆ ಅವನು ಎದ್ದು ನಿಂತನು. ಹತ್ತಿರ ಬಿದ್ದಿದ್ದ ಒಂದು ಕೋಲನ್ನು ಎತ್ತಿಕೊಂಡು ಕತ್ತೆಯನ್ನು ಸದೆಬಡಿಯಲು ಮೊದಲುಮಾಡಿದನು; ಕಟ್ಟು ಗಂಬದ ಸುತ್ತಲೂ ಸುತ್ತಾಡಿಸಿಕೊಂಡು ಹೊಡೆಯತೊಡಗಿದನು.

"ಹಾಳು ಕತ್ತೇ! ಪಾಪದ ಮರಿಯೇ! ಕೊಳೆತು ನಾರುವ ಪಶುವೇ! ಪ್ರಾಣಿಗಳಿಗೆಲ್ಲಾ ನೀನೊಂದು ಕಳಂಕ!" ಎಂದು ಅಬ್ಬರಿಸುತ್ತಿದ್ದನು ಖೋಜಾ ನಸ್ರೆದ್ದೀನ್. "ನಿನ್ನ ಯಜಮಾನನ ಹಣದಿಂದ ನೀನು ಜೂಜಾಡುತ್ತೀಯಾ? ಅದೂ ಸಾಲದೆ ಅದನ್ನೆಲ್ಲಾ ಕಳೆಯಲೂ ಬೇಕೊ? ನಿನ್ನ ಈ ಠಕ್ಕ ಚರ್ಮ ಸುಲಿದುಹೋಗ! ನೀನು ಬಿದ್ದು ಕಾಲು ಮುರಿದುಕೊಳ್ಳುವಂತೆ ಸರ್ವಶಕ್ತನಾದ ಅಲ್ಲಾ ನಿನ್ನ ದಾರಿಯಲ್ಲಿ ಗುಂಡಿ ತೋಡ! ನೀನೆಂದು ಸಾಯುತ್ತೀಯಾ? ಸತ್ತು, ನಿನ್ನ ಈ ಅವಲಕ್ಷಣದ ಮುಖ ನನ್ನ ಕಣ್ಣಿಗೆ ಬೀಳದಂತೆ ಎಂದು ಮಾಡುತ್ತೀಯಾ?"

ಕತ್ತೆ ಕಿರಿಚಿತು; ಜೂಜುಗಾರರು ನಕ್ಕು ಕೇಕೆಹಾಕಿದರು. ಕೆಂಗೂದಲಿನವನು ಎಲ್ಲರಿಗಿಂತಲೂ ಹೆಚ್ಚು ಜೋರಾಗಿ ನಗುತ್ತಿದ್ದನು. ಈಗ ತನ್ನ ಒಳ್ಳೆಯ ಅದೃಷ್ಟದಲ್ಲಿ ಅವನಿಗೆ ಪೂರ್ಣವಾಗಿ ನಂಬಿಕೆ ಬಂದಿತ್ತು.

ಸೋತು ಸಾಕಾಗಿ ಖೋಜಾ ನಸ್ರೆದ್ದೀನ್ ಕೋಲನ್ನು ಅತ್ತ ಎಸೆದನು. ಆಗ ಆ ಕೆಂಗೂದಲಿ "ಮತ್ತೆ ಆಡೋಣ ಬಾ, ಇನ್ನೊಂದೆರಡು ಆಟಗಳು. ನಿನ್ನ ಹತ್ತಿರ ಇನ್ನೂ ಇಪ್ಪತ್ತೈದು ಟಂಗ ಇದೆಯಲ್ಲ" ಎಂದನು.

ಹಾಗೆನ್ನುತ್ತಾ ಅವನು ತನ್ನ ಎಡಗಾಲನ್ನು ಮುಂದಕ್ಕೆ ಚಾಚಿ ಸ್ವಲ್ಪ ಅಳ್ಳಾಡಿಸಿದನು; ಆ ಮೂಲಕ ಖೋಜಾ ನಸ್ರೆದ್ದೀನನ ವಿಷಯದಲ್ಲಿ ತನ್ನ

ಮನಸ್ಸಿನಲ್ಲಿದ್ದ ತಿರಸ್ಕಾರವನ್ನು ಸ್ಪಷ್ಟವಾಗಿ ಸೂಚನೆ ಮಾಡಿದನು.

" ಏಕಾಗಬಾರದು ? " ಎಂದು ಖೋಜಾ ನಸ್ರೆದ್ದೀನ್ ಉತ್ತರಕೊಟ್ಟನು. ನೂರೈವತ್ತು ಟಂಗಗಳು ಕಳೆದುಹೋಗಿರುವಾಗ ಉಳಿದ ಇಪ್ಪತ್ತೈದಕ್ಕೆ ಏನಾದರೂ ಒಂದೇ—ಎಂದು ಭಾವಿಸಿ ಹಾಗೆ ಉತ್ತರ ಕೊಟ್ಟನು.

ಉದಾಸೀನವಾಗಿಯೇ ದಾಳ ಎಸೆದ; ಗೆದ್ದ. ಕೆಂಗೂದಲಿನವನು ತಾನು ಸೋತ ಪಣವನ್ನು ತಟ್ಟೆಗೆ ಸುರಿಯುತ್ತಾ,

" ಎಲ್ಲವನ್ನೂ ಒಡ್ಡೋಣ " ಎಂದನು.

ಖೋಜಾ ನಸ್ರೆದ್ದೀನ್ ಮತ್ತೆ ಗೆದ್ದನು.

ಅದೃಷ್ಟ ತನ್ನ ಕಡೆಗೆ ಬೆನ್ನುತಿರುಗಿಸಿದೆಯೆಂದು ಕೆಂಗೂದಲಿ ನಂಬಲಾರದಾದ.

" ಎಲ್ಲಾ ! "

ಒಂದಾದಮೇಲೊಂದರಂತೆ ಎಡೆಬಿಡದೆ ಏಳು ಸಲ ಅವನು ಈ ಮಾತಾಡಿದನು ; ಪ್ರತಿಸಲವೂ ಸೋತನು. ತಟ್ಟೆಯಲ್ಲಿ ಹಣ ತುಂಬಿತುಳುಕುತ್ತಿತ್ತು. ಜೂಜುಗಾರರು ಅಳ್ಳಾಡದೆ ಸ್ತಬ್ಧರಾಗಿ ಕುಳಿತರು ; ಅವರನ್ನು ದಹಿಸುತ್ತಿದ್ದ ಅಂತರಂಗದ ಉರಿಯನ್ನು ಅವರ ಕಣ್ಣ ಹೊಳಪೊಂದೇ ಹೊರಸೂಸುತ್ತಿತ್ತು.

" ಸೈತಾನನೇ ನಿನಗೆ ಸಹಾಯ ಮಾಡದಿರುವ ಪಕ್ಷದಲ್ಲಿ ಪ್ರತಿಸಲವೂ ನೀನು ಗೆಲ್ಲಲಾರೆ ! ಒಂದಲ್ಲ ಒಂದು ಸಲ ನೀನು ಸೋಲಲೇಬೇಕು. ಇಲ್ಲಿ ಈ ತಟ್ಟೆಯಲ್ಲಿ ನಿನ್ನದಾಗಿ ಒಂದು ಸಾವಿರದ ಆರು ನೂರು ಟಂಗಗಳಿವೆ. ಮತ್ತೊಂದು ಸಲ ಎಲ್ಲವನ್ನೂ ಒಡ್ಡುತ್ತೀಯೋ ? ನಾಳೆ ನನ್ನ ಅಂಗಡಿಗೆ ಪೇಟೆಯಲ್ಲಿ ಸಾಮಾನು ಕೊಳ್ಳಬೇಕೆಂದು ಇಟ್ಟುಕೊಂಡಿದ್ದ ಹಣ, ಇಗೋ ಇಲ್ಲಿದೆ. ನಿನ್ನ ಹಣಕ್ಕೆದುರಾಗಿ ಈ ನನ್ನ ಹಣವನ್ನು ಒಡ್ಡುತ್ತೇನೆ " ಎಂದನು ಆ ಕೆಂಚುಗೂದಲಿನ ಆಟಗಾರ.

ಬಂಗಾರ ತುಂಬಿದ ಒಂದು ಸಣ್ಣ ಚೀಲವನ್ನು ಅವನು ಹೊರತೆಗೆದನು—ರೂಪಾಯಿಗಳು, ತಿಲ್ಲಗಳು, ತೋಮಗಳು ತುಂಬಿದ್ದವು.

ಖೋಜಾ ನಸ್ರೆದ್ದೀನ್ ಭಾವೋದ್ರೇಕದಿಂದ ಕಳೆದುಂಬಿ, " ನಿನ್ನ ಹಣವನ್ನು ತಟ್ಟೆಗೆ ಹಾಕು ! " ಎಂದನು.

ಅಷ್ಟು ಭಾರಿ ಪಣವನ್ನು ಹಿಂದೆಂದೂ ಆ ಟೀ ಅಂಗಡಿ ಕಂಡೇ ಇರಲಿಲ್ಲ.

ಅಂಗಡಿಯ ಯಜಮಾನ ಕುದಿಯುತ್ತಿರುವ ಕೆಟಲುಗಳನ್ನು ಮರೆತುಬಿಟ್ಟನು. ಜೂಜುಗಾರರು ಬಲವಾಗಿ ಏದುಸುರುಬಿಡುತ್ತಿದ್ದರು. ಕೆಂಚುಗೂದಲಿನವನು ಕಣ್ಣು ಮುಚ್ಚಿಕೊಂಡು—ಕಣ್ಣುಬಿಟ್ಟು ನೋಡುವುದಕ್ಕೆ ಅವನಿಗೆ ಹೆದರಿಕೆ—ಮೊದಲು ದಾಳ ಎಸೆದನು.

"ಹನ್ನೊಂದು! ಹನ್ನೊಂದು!" ಎಲ್ಲರೂ ಒಟ್ಟಾಗಿ ಕೂಗಿದರು. ಖೋಜಾ ನಸ್ರೆದ್ದೀನ್ ತಾನಿನ್ನು ಸೋತಂತೆಯೇ ಎಂದುಕೊಂಡನು; ಹನ್ನೆರಡು ಬಿದ್ದರೆ ಮಾತ್ರ ಅವನು ಉಳಿದುಕೊಳ್ಳಬಹುದಾಗಿತ್ತು.

ಕೆಂಗೂದಲಿನ ಆಟಗಾರನಿಗೆ ಆನಂದವನ್ನು ತಡೆಯಲಾಗಲಿಲ್ಲ. "ಹನ್ನೊಂದು! ಹನ್ನೊಂದು! ನೋಡು, ನನಗೆ ಹನ್ನೊಂದು ಬಿದ್ದಿದೆ, ನೀನು ಸೋತೆ! ನೀನು ಸೋತೆ!" ಎಂದು ಮತ್ತೆ ಮತ್ತೆ ಕೂಗುತ್ತಿದ್ದನು.

ಖೋಜಾ ನಸ್ರೆದ್ದೀನನ ಮೈಯೆಲ್ಲ ತಣ್ಣಗಾಯಿತು. ದಾಳಗಳನ್ನು ತೆಗೆದುಕೊಂಡು ಎಸೆಯಲು ಸಿದ್ಧಮಾಡಿಕೊಂಡನು; ಎಸೆಯಲಿರುವಾಗ ತಟಕ್ಕನೆ ಕೈ ತಡೆದನು.

"ತಿರುಗು ಇತ್ತ ಕಡೆಗೆ!" ಎಂದು ತನ್ನ ಕತ್ತೆಯನ್ನು ಕರೆದನು. "ಮೂರು ಚುಕ್ಕಿಗೆ ಎದುರಾಗಿ ಗರ ಬೀಳಿಸಿ ಸೋಲುವಂತೆ ಮಾಡಿದ್ದೀಯೆ. ಈಗ ಹನ್ನೊಂದಕ್ಕೆದುರಾಗಿ ಗರ ಬೀಳಿಸಿ ಗೆಲ್ಲಿಸು. ಇಲ್ಲದಿದ್ದರೆ ತಕ್ಷಣವೇ ನಿನ್ನನ್ನು ಕುದುರೆಕಸಾಯಿಯ ಬಳಿಗೆ ತೆಗೆದುಕೊಂಡುಹೋಗಿ ಬಿಡುತ್ತೇನೆ" ಎಂದನು.

ತನ್ನ ಎಡಗೈಯಿಂದ ಕತ್ತೆಯ ಬಾಲವನ್ನು ಹಿಡಿದುಕೊಂಡು ಅದರಿಂದ ದಾಳ ಹಿಡಿದಿದ್ದ ಬಲಗೈಗೆ ಹೊಡೆದುಕೊಂಡನು.

ಅಲ್ಲಿ ನೆರೆದಿದ್ದವರೆಲ್ಲರ ಅಬ್ಬರದಿಂದ ಟೀ ಅಂಗಡಿ ನಡುಗಿಹೋಯಿತು. ಅಂಗಡಿಯ ಯಜಮಾನ ಎದೆಯ ಮೇಲೆ ಕೈಯೂರಿಕೊಂಡು, ಕುಸಿದು ಕುಳಿತನು; ಆಶ್ಚರ್ಯೋದ್ರೇಕದ ಭಾರವನ್ನು ತಾಳಲಾರದೆ ನೆಲಕ್ಕೆ ಕುಸಿದನು.

ದಾಳದಲ್ಲಿ ಹನ್ನೆರಡರ ಗರ ಬಿದ್ದಿತ್ತು.

ಕೆಂಚುಗೂದಲಿನ ಜೂಜುಗಾರನ ಕಣ್ಣು ಗೂಡುಗಳಿಂದ ಹೊರಕ್ಕೆ ಚಾಚಿ ಪೊರೆ ಮುಚ್ಚಿದಂತೆ ದೃಷ್ಟಿಶೂನ್ಯವಾಯಿತು; ಮುಖದ ರಕ್ತ ಇಂಗಿಹೋಯಿತು. ಅವನು ನಿದಾನವಾಗಿ ಎದ್ದು ನಿಂತನು. ಆ ಮೇಲೆ, "ಅಯ್ಯೋ, ನಾನು

ಹಾಳಾದೆ! ಅಯ್ಯೋ, ನಾನು ಹಾಳಾದೆ!" ಎಂದು ಕೂಗಿಕೊಳ್ಳುತ್ತಾ ತತ್ತರಿಸುತ್ತಾ ಹೊರಕ್ಕೆ ನಡೆದನು.

ಅಂದಿನಿಂದೀಚೆಗೆ ಆ ಕೆಂಚುಗೂದಲಿನವನು ಆ ಪಟ್ಟಣದಲ್ಲಿ ಯಾರ ಕಣ್ಣಿಗೂ ಬಿದ್ದಿಲ್ಲವೆಂದು ಹೇಳುತ್ತಾರೆ. ಅವನು ಮರುಭೂಮಿಗೆ ಓಡಿಹೋದನಂತೆ; ಅಲ್ಲಿ ವೈಯ್ಯೆಲ್ಲ ಕೂದಲು ತುಂಬಿ ಭಯಂಕರವಾಗಿ ಕಾಣುತ್ತಾ, "ಅಯ್ಯೋ! ಅಯ್ಯೋ!" ಎಂದು ಕೂಗಿಕೊಳ್ಳುತ್ತಾ ಮರಳುರಾಶಿಗಳ ಮತ್ತು ಮುಳ್ಳುಪೊದೆಗಳ ನಡುವೆ ಅಲೆಯುತ್ತಿರಲು ಕಟ್ಟಕಡೆಗೆ ನರಿಗಳು ಅವನ ಕಥೆಯನ್ನು ಮುಗಿಸಿಬಿಟ್ಟವಂತೆ. ಆದರೆ ಅವನು ಹೋದನಲ್ಲಾ ಎಂದು ಯಾರೂ ಅಳಲಿಲ್ಲ; ಏಕೆಂದರೆ ಅವನು ತುಂಬ ಕ್ರೂರಿಯೂ ಅನ್ಯಾಯಗಾರನೂ ಏನೂ ಅರಿಯದ ಅಜ್ಞ ಜನರನ್ನು ಹಾಳುಮಾಡುವ ಕೇಡಿಗನೂ ಆಗಿದ್ದನಂತೆ.

ಖೋಜಾ ನಸ್ರೆದ್ದೀನನೋ, ತನ್ನ ಹೊಸ ಸಂಪಾದನೆಯ ಸಂಪತ್ತನ್ನು ಜೇಬಿನ ಚೀಲಗಳಲ್ಲಿ ತುಂಬಿಕೊಂಡನು. ಆ ಮೇಲೆ ತನ್ನ ಕತ್ತೆಯನ್ನು ಬಲವಾಗಿ ತಬ್ಬಿ ಅದರ ಬೆಚ್ಚನೆಯ ಮೂತಿಯ ಮೇಲೆ ಪ್ರೀತಿಯಿಂದ ಮುತ್ತಿಟ್ಟನು; ಸೊಗಸಾದ ಕಡುಬು ಕಜ್ಜಾಯಗಳನ್ನು ತಂದು ತಿನ್ನಿಸಿದನು; ಕೆಲವು ನಿಮಿಷಗಳ ಪೂರ್ವದಲ್ಲಿ ಬೇರೊಂದು ರೀತಿಯ ಉಪಚಾರವನ್ನು ಪಡೆದಿದ್ದ ಈ ಪ್ರಾಣಿಗೆ ಈ ಅತ್ಯಾದರವನ್ನು ಕಂಡು ಬಹಳ ಬೆರಗಾಯಿತು.

೬

'ನೀನು ಹಣ ಇಟ್ಟಿರುವುದೆಲ್ಲಿಂದು ತಿಳಿದಿರುವವರಿಂದ ದೂರ ಇರು' ಎಂಬ ವಿವೇಕವಚನವನ್ನು ನೆನೆದು, ಖೋಜಾ ನಸ್ರೆದ್ದೀನನು ಟೀ ಅಂಗಡಿಯ ಹತ್ತಿರ ಹೆಚ್ಚು ಹೊತ್ತು ನಿಲ್ಲಲಿಲ್ಲ; ಆ ಸುತ್ತಮುತ್ತ ಎಲ್ಲೂ ಅಲೆದಾಡದೆ ನೇರವಾಗಿ ಮಾರುಕಟ್ಟೆಯ ಚೌಕಕ್ಕೆ ನಡೆದನು. ಯಾರಾದರೂ ತನ್ನ ಬೆನ್ನು ಹತ್ತಿ ಬರುತ್ತಿದ್ದಾರೋ ಏನೋ ಎಂದು ತಿಳಿದುಕೊಳ್ಳುವುದಕ್ಕಾಗಿ ಆಗಾಗ ಹಿಂದಿರುಗಿ ನೋಡುತ್ತಿದ್ದನು; ಏಕೆಂದರೆ ಆ ಜೂಜುಗಾರರ ಮತ್ತು ಆ ಟೀ ಅಂಗಡಿಯ ಯಜಮಾನನ ಮುಖಗಳಲ್ಲಿ ನ್ಯಾಯಪರತೆಯ ಚಿಹ್ನೆ ಕಾಣುತ್ತಿರಲಿಲ್ಲ.

ಆಗ ಹಾಗೆ ಹೋಗುವುದು ಅವನಿಗೆ ಬಹು ಸುಖಕರವಾಗಿತ್ತು. ಈಗ

ಅವನು ಯಾವ ಕರ್ಮಶಾಲೆಯನ್ನು ಬೇಕಾದರೂ ಕೊಳ್ಳಬಹುದಾಗಿತ್ತು ; ಒಂದು, ಎರಡು, ಮೂರು ಕರ್ಮಶಾಲೆಗಳನ್ನು ಬೇಕಾದರೂ ಕೊಂಡುಕೊಳ್ಳ ಬಹುದಾಗಿತ್ತು. ಹೀಗೆ ಮಾಡಬೇಕೆಂದು ಅವನು ದೃಢಸಂಕಲ್ಪ ಮಾಡಿದನು.

"ನಾನು ನಾಲ್ಕು ಕರ್ಮಶಾಲೆಗಳನ್ನು ಕೊಳ್ಳುತ್ತೇನೆ; ಒಂದು ಕುಂಬಾರ ಶಾಲೆ, ಒಂದು ಜೀನುಗಾರ ಶಾಲೆ, ಒಂದು ದರ್ಜಿ ಅಂಗಡಿ ಮತ್ತು ಒಂದು ಮೋಚಿ ಅಂಗಡಿ. ಪ್ರತಿಯೊಂದು ಕರ್ಮಶಾಲೆಯಲ್ಲಿಯೂ ಇಬ್ಬಿಬ್ಬರು ಕೆಲಸ ಗಾರರನ್ನು ಇಟ್ಟುಕೊಳ್ಳುತ್ತೇನೆ. ನಾನು ಮಾಡಬೇಕಾಗಿರುವ ಕೆಲಸವೆಂದರೆ ಹಣ ವಸೂಲು ಮಾಡುವುದು ; ಅಷ್ಟೇ. ಎರಡು ವರ್ಷದೊಳಗೆ ನಾನು ಐಶ್ವರ್ಯವಂತನಾಗುತ್ತೇನೆ. ಉದ್ಯಾನವೂ ಅದರಲ್ಲಿ ಚಿಲುಮೆಗಳೂ ಇರುವ ಮನೆಯೊಂದನ್ನು ಕೊಂಡುಕೊಳ್ಳುತ್ತೇನೆ. ಅಲ್ಲಿ ಎಲ್ಲ ಕಡೆಯೂ ಚಿನ್ನದ ಪಂಜರಗಳನ್ನು ತೂಗಹಾಕಿ, ಹಾಡುವ ಹಕ್ಕಿಗಳನ್ನು ತಂದಿಡುತ್ತೇನೆ. ಇಬ್ಬರು, ಬಹುಶಃ ಮೂವರು ಹೆಂಡಿರನ್ನು ಮದುವೆಯಾಗುತ್ತೇನೆ; ಅವರಲ್ಲಿ ಒಬ್ಬೊಬ್ಬ ರಿಗೂ ಮೂವರು ಗಂಡುಮಕ್ಕಳಾಗುತ್ತಾರೆ...."

ಈ ರೀತಿಯ ಹಿತಕರವಾದ ಹಗಲುಗನಸುಗಳ ಪ್ರವಾಹದಲ್ಲಿ ಅವನು ಸಲೀಸಾಗಿ ತೇಲಿಹೋಗುತ್ತಿದ್ದನು. ಇತ್ತ ಅವನ ಕತ್ತೆ, ಲಗಾಮಿನ ಎಳೆತ ಸಡಿಲವಾಗಲಾಗಿ ತನ್ನ ಯಜಮಾನನ ಮೈಮರವನ್ನು ಪೂರ್ಣವಾಗಿ ಸದುಪ ಯೋಗಪಡಿಸಿಕೊಂಡಿತು. ದಾರಿಯಲ್ಲಿ ಒಂದು ಸಣ್ಣ ಸೇತುವೆ ಸಿಕ್ಕಿತು. ಆಗ ಎಲ್ಲ ಕತ್ತೆಗಳಂತೆ ಅದು ಆ ಸೇತುವೆಯ ಮೇಲೆ ನಡೆದು ದಾಟ ಹೋಗದೆ, ಪಕ್ಕಕ್ಕೆ ಹೊರಳಿತು. ಆಮೇಲೆ ಸ್ವಲ್ಪ ದೂರ ಓಡಿಬಂದು ಆ ಹಳ್ಳದ ಮೇಲೆ ನೆಗೆದು ಹಾರಿತು.

"....ನನ್ನ ಮಕ್ಕಳು ದೊಡ್ಡವರಾದಾಗ ಅವರನ್ನೆಲ್ಲಾ ಒಟ್ಟಿಗೆ ಕರೆದು ಹೇಳುತ್ತೇನೆ...." ಖೋಜಾ ನಸ್ರೆದ್ದೀನನ ಭಾವನಾಲಹರಿ ಹರಿಯುತ್ತಿತ್ತು. "ಇದೇಕೆ, ನಾನು ಆಕಾಶದಲ್ಲಿ ಹಾರುತ್ತಿದ್ದೇನೆ? ಅಲ್ಲಾ ನನ್ನನ್ನು ದೇವತೆ ಯಾಗಿ ಮಾಡಿ ರೆಕ್ಕೆಗಳನ್ನೇನಾದರೂ ಕೊಟ್ಟನೋ?"

ಮರುಕ್ಷಣವೇ ಅವನ ಕಣ್ಣುತುಂಬ ಅಸಂಖ್ಯ ನಕ್ಷತ್ರಗಳು ಕಾಣಿಸಿ ಕೊಂಡುವು; ಎಷ್ಟೊಂದು ನಕ್ಷತ್ರಗಳೆಂದರೆ, ತನಗೆ ರೆಕ್ಕೆಗಳಿಲ್ಲವೆಂದು ಅವನಿಗೆ ಚೆನ್ನಾಗಿ ಅರಿವಾಯಿತು. ತಾನು ಕೂತಿದ್ದ ಜೀನಿನ ಮೇಲಿನಿಂದ ಕವಣೆ

ಬೀರಿದಂತಾಗಿ ತನ್ನ ವಾಹನಕ್ಕಿಂತ ಮುಂದಕ್ಕೆ ಆರು ಗಜ ದೂರಕ್ಕೆ ಹಾರಿ ರಸ್ತೆಯ ಮಧ್ಯಕ್ಕೆ ಎಸೆದು ಬಿದ್ದಿದ್ದನು.

ನರಳಿಕೊಂಡು ಮೇಲಕ್ಕೆದ್ದನು; ಮೈಯೆಲ್ಲ ಧೂಳು ಮುಸುಕಿತ್ತು. ಅವನು ಏಳುವ ಹೊತ್ತಿಗೆ ಕತ್ತೆ ಹತ್ತಿರ ಬಂತು. ಸ್ನೇಹಪೂರ್ವಕವಾಗಿ ಕಿವಿಯೆತ್ತಿಕೊಂಡು, ಮುಖದಲ್ಲಿ ಸಂಪೂರ್ಣ ನಿಷ್ಪಾಪಭಾವವನ್ನು ಸೂಚಿಸುತ್ತಾ ಮತ್ತೆ ಜೀನಿನ ಮೇಲೆ ಹತ್ತಿ ಕೂರೆಂದು ಕರೆಯುತ್ತಿದೆಯೋ ಎಂಬಂತೆ ಯಜಮಾನನ ಬಳಿಗೆ ಬಂತು.

"ಅಯ್ಯೋ, ನೀನು ನನ್ನ ಪಾಪಕ್ಕೆ ಶಿಕ್ಷೆಯಾಗಿ ಬಂದಿದ್ದೀಯೆ! ನನ್ನೊಬ್ಬನ ಪಾಪಕ್ಕೇ ಅಲ್ಲ; ನಮ್ಮಪ್ಪನ, ಅಜ್ಜನ, ಮುತ್ತಜ್ಜನ ಪಾಪಗಳಿಗೂ ಕೂಡ. ಏಕೆಂಪರೆ, ಇಸ್ಲಾಮಿನ ನ್ಯಾಯದ ಪ್ರಕಾರ, ಒಬ್ಬನನ್ನು ಅವನೊಬ್ಬನ ಪಾಪಕ್ಕಾಗಿಯೇ ಇಷ್ಟೊಂದು ಕ್ರೂರವಾಗಿ ಶಿಕ್ಷಿಸುವುದು ಅನ್ಯಾಯವಾಗುತ್ತದೆ. ಓ, ಕೀಳು ನಿಷ್ಪ್ರಯೋಜಕ ಪ್ರಾಣಿಯೇ! ಜೇಡ ಮತ್ತು ಕಿರುಬಗಳ ಸಂತಾನವೇ! ಓ, ಹಾಳು...."

ಇಷ್ಟಕ್ಕೆ ಅವನ ಮಾತು ಕಟ್ಟಿಹೋಯಿತು; ಅನತಿ ದೂರದಲ್ಲಿಯೇ ಅರ್ಧ ಬಿದ್ದುಹೋಗಿದ್ದ ಒಂದು ಗೋಡೆಯ ನೆರಳಿನಲ್ಲಿ ಕೂತಿದ್ದ ಜನರ ಗುಂಪೊಂದನ್ನು ಕಂಡು ತೆಪ್ಪಗಾದನು.

ಶಾಪದ ನುಡಿಗಳೆಲ್ಲ ಖೋಜಾ ನಸ್ರೆದ್ದೀನನ ನಾಲಗೆಯ ಮೇಲೆಯೇ ಸತ್ತು ಸಮಾಧಿ ಹೊಂದಿದವು. ನೋಟಕರೆದುರಿಗೆ ಯಾರಾದರೂ ಸ್ವಂತ ಅಚಾತುರ್ಯದಿಂದ ಆ ರೀತಿ ಹಾಸ್ಯಾಸ್ಪದವಾದ ಮತ್ತು ಗಾಂಭೀರ್ಯರಹಿತವಾದ ಸ್ಥಿತಿಗೆ ಬಂದುಬಿಟ್ಟರೆ, ತನ್ನ ಆ ಗತಿಗೆ ತಾನೇ ಎಲ್ಲರಿಗಿಂತ ಹೆಚ್ಚು ಗಟ್ಟಿಯಾಗಿ ನಗಬೇಕೆಂಬ ವಿಷಯ ಅರಿವಿಗೆ ಬಂತು. ಆ ಗುಂಪಿನ ಕಡೆ ಕಣ್ಣು ಮಿಟುಕಿಸಿ ಹಲ್ಲೆಲ್ಲ ಕಾಣುವಂತೆ ದೊಡ್ಡದಾಗಿ ಹಲ್ಲುಕಿರಿದನು.

ವಿನೋದಸೂಚಕವಾಗಿ ಗಟ್ಟಿಯಾಗಿ ಹೀಗೆಂದನು: "ಓಹೋ! ನಾನು ಎಷ್ಟು ಸೊಗಸಾಗಿ ಹಾರಿದೆನೋ! ನಾನೆಷ್ಟು ಸಲ ಲಾಗ ಹಾಕಿದೆ, ಹೇಳಿ? ಎಣಿಸಿಕೊಳ್ಳುವುದಕ್ಕೆ ನನಗೆ ಹೊತ್ತಿರಲಿಲ್ಲ" ಎಂದು ಗುಂಪಿನವರನ್ನು ಪ್ರಶ್ನಿಸುವಂತೆ ನುಡಿದನು. ಕತ್ತೆಯ ಕಡೆ ತಿರುಗಿ, "ಅಯ್ಯೋ, ತುಂಟ ಪೋಕರಿ!" ಎಂದು ಪ್ರಶಂಸೆಯಂತೆಯೇ ಬೈಯುತ್ತಾ ಬೆನ್ನುತಟ್ಟಿದನು; ಹೀಗೆ ಸದ್ಭಾವ

ದಿಂದ ಬೆನ್ನು ತಟ್ಟುತ್ತಿದ್ದರೂ ಅವನ ಮನಸ್ಸಿನಲ್ಲಿ ಅದರ ಚರ್ಮ ಕಿತ್ತು ಹೋಗುವಂತೆ ಚಾವಟಿ ಬಿಗಿಯಬೇಕೆಂದು ಕೋಪ ಕುದಿಯುತ್ತಿತ್ತು. “ ಅದು ನೋಡಿ, ಮನಸ್ಸು ಬಂದ ಗಿರಾಕಿ! ಒಮ್ಮೊಮ್ಮೆ ಹೀಗೆ ಏನೇನೋ ಚೇಷ್ಟೆ ಮಾಡಿಬಿಡುತ್ತದೆ; ನಾನು ಆಚೆ ಈಚೆ ತಿರುಗುವುದೇ ತಡ ಏನಾದರೊಂದು ಚೇಷ್ಟೆಯನ್ನು ಪ್ರಾರಂಭಿಸಿಬಿಡುತ್ತದೆ ” ಎಂದನು.

ಖೋಜಾ ನಸ್ರೆದ್ದೀನ್ ಸಂತೋಷದಿಂದ ಗಟ್ಟಿಯಾಗಿ ನಗತೊಡಗಿದನು. ಆದರೆ, ಏನಾಶ್ಚರ್ಯ, ಯಾರೊಬ್ಬರೂ ಜೊತೆಗೆ ನಗಲಿಲ್ಲ. ಆ ಜನರು ಇನ್ನೂ ಕತ್ತು ಬಗ್ಗಿಸಿಕೊಂಡು ಜೋಲುಮುಖ ಹಾಕಿಕೊಂಡು ಕುಳಿತಿದ್ದರು; ಮಕ್ಕಳನ್ನು ಎತ್ತಿಕೊಂಡಿದ್ದ ಹೆಂಗಸರು ನಿಶ್ಶಬ್ದವಾಗಿ ಅಳುತ್ತಿದ್ದರು.

“ ಏನೋ ಎಡವಟ್ಟಾಗಿದೆ ” ಎಂದುಕೊಂಡ ಖೋಜಾ ನಸ್ರೆದ್ದೀನ್.

ಅವನು ಗುಂಪಿನ ಬಳಿಗೆ ಬಂದು, ಮುಖ ಮುದುಡಿಹೋಗಿದ್ದ ಒಬ್ಬ ನರೆಗೂದಲಿನ ಮುದುಕನನ್ನು ಮಾತಾಡಿಸಿದನು.

“ ಅಜ್ಜಾ, ಏನಾಯಿತು? ಹೇಳು. ಯಾರ ಮುಖದಲ್ಲೂ ಮುಗುಳು ನಗೆಯ ಸುಳಿವಿಲ್ಲವಲ್ಲಾ; ನೀವು ಯಾರೊಬ್ಬರೂ ಗಟ್ಟಿಯಾಗಿ ನಗುವುದಿಲ್ಲವಲ್ಲಾ; ಏಕೆ? ಈ ಹೆಂಗಸರೇಕೆ ಅಳುತ್ತಿದ್ದಾರೆ? ಈ ಸೆಕೆಯಲ್ಲೂ ಧೂಳಿನಲ್ಲೂ ನೀವು ರಸ್ತೆಯ ಪಕ್ಕದಲ್ಲೇಕೆ ಕುಳಿತಿದ್ದೀರಿ? ನಿಮ್ಮ ಮನೆಗಳಲ್ಲಿ ನೆರಳಿನ ತಂಪಿನಲ್ಲಿರುವುದು ಮೇಲಲ್ಲವೆ? ”

“ ಮನೆಯಲ್ಲಿ ಕುಳಿತಿರುವುದು ಮೇಲು, ನಿಜ; ಆದರೆ ಅದು ಮನೆಯಿರುವವರಿಗೆ ಮಾತ್ರ. ಓ ಪ್ರಯಾಣಿಕ, ನಮ್ಮನ್ನು ಪ್ರಶ್ನೆ ಮಾಡಬೇಡ. ನಮ್ಮ ಕಷ್ಟ ಬಹು ಭಾರಿ; ಯಾವ ರೀತಿಯಲ್ಲೂ ನೀನು ನಮಗೆ ಸಹಾಯ ಮಾಡಲಾರೆ. ನನ್ನ ಮಟ್ಟಿಗೆ ಹೇಳುವುದಾದರೆ, ಕೈಕಾಲುಡುಗಿದ ಮುದುಕ ನಾನು. ಬೇಗ ಸಾವು ಕೊಡೆಂದು ದೇವರನ್ನು ಪ್ರಾರ್ಥಿಸುತ್ತೇನೆ ” ಎಂದು ದುಃಖದಿಂದ ನುಡಿದನು ಆ ಮುದುಕ.

ಖೋಜಾ ನಸ್ರೆದ್ದೀನ್ ನಿಂದಿಸುವ ದನಿಯಲ್ಲಿ ಹೀಗೆಂದನು: “ ಅಂಥ ಮಾತನ್ನು ಹೇಗೆ ತಾನೆ ಆಡುತ್ತೀರಿ? ಮನುಷ್ಯರಾದವರು ಅಂಥ ಮಾತಾಡಬಾರದು. ನಿಮ್ಮ ಕಷ್ಟಗಳನ್ನು ನನಗೆ ತಿಳಿಸಿ; ನನ್ನ ಈ ಬಡ ರೂಪವನ್ನು ನೋಡಿ ನನ್ನ ಯೋಗ್ಯತೆಯನ್ನು ಗೊತ್ತುಮಾಡಬೇಡಿ. ಬಹುಶಃ, ನಿಮಗೆ

ಸಹಾಯ ಮಾಡಲು ನಾನು ಸಮರ್ಥನಾಗಿದ್ದರೂ ಇರಬಹುದು."

"ನನ್ನ ಕಥೆ ಬಹು ಸಂಕ್ಷೇಪದ್ದು. ಒಂದೇ ಒಂದು ಗಂಟೆಯ ಹಿಂದೆ ದುಬಾರಿ ಬಡ್ಡಿಯ ಜಾಫರ್ ಅಮೀರರ ಇಬ್ಬರು ಸಿಪಾಯಿಗಳನ್ನು ಸಂಗಡ ಕರೆದುಕೊಂಡು ನಮ್ಮ ಕೇರಿಗೆ ಬಂದ. ಅವನಿಗೆ ನಾನು ಹಣ ಕೊಡಬೇಕು; ನಾಳೆ ಅದನ್ನು ತೀರಿಸಬೇಕಾಗುತ್ತದೆ. ಆದ್ದರಿಂದ, ನಾನು ಜೀವಮಾನದ ಉದ್ದಕ್ಕೂ ಬಾಳಿ ಬಂದ ಆ ಮನೆಯಿಂದ ನನ್ನನ್ನು ಹೊರದೂಡಿದ್ದಾರೆ. ನನಗೆ ಕುಟುಂಬದವರು ಯಾರೂ ಇಲ್ಲ, ನನಗೆ ತಲೆಯಿಡಲು ಸ್ಥಳವಿಲ್ಲ....ನನ್ನ ಆಸ್ತಿಯನ್ನೆಲ್ಲಾ—ನನ್ನ ಮನೆ, ತೋಟ, ದನಕರುಗಳು, ದ್ರಾಕ್ಷೆ ಚಪ್ಪರಗಳು—ಎಲ್ಲವನ್ನೂ ನಾಳೆ ಜಾಫರ್ ಮಾರಿಹಾಕಿಬಿಡುತ್ತಾನೆ."

ಮುದುಕನ ಕಣ್ಣುಗಳಲ್ಲಿ ನೀರು ತುಂಬಿತು. ಅವನ ದನಿ ನಡುಗಿತು.

"ನೀನು ಅವನಿಗೆ ಬಹಳ ಕೊಡಬೇಕೆ?" ಎಂದು ಕೇಳಿದನು ಖೋಜಾ ನಸ್ರೆದ್ದೀನ್.

"ಬಹಳ, ಅಯ್ಯಾ ಪ್ರಯಾಣಿಕಾ, ಬಹಳವಾಗಿಯೇ ಕೊಡಬೇಕು! ಅವನಿಗೆ ನಾನು ಇನ್ನೂರೈವತ್ತು ಟಂಗಗಳನ್ನು ಕೊಡಬೇಕು."

"ಇನ್ನೂರೈವತ್ತು ಟಂಗಗಳೇ!" ಎಂದು ಖೋಜಾ ನಸ್ರೆದ್ದೀನ್ ಉದ್ಗಾರವೆತ್ತಿದನು. "ಈ ಅಲ್ಪ ಮೊತ್ತಕ್ಕಾಗಿ, ಈ ಇನ್ನೂರೈವತ್ತು ಟಂಗಕ್ಕಾಗಿ ಒಬ್ಬ ಮನುಷ್ಯ ಸಾವು ಬಯಸುತ್ತಿದ್ದಾನೆ!" ತನ್ನ ಕತ್ತೆಯ ಕಡೆ ತಿರುಗಿ ಜೀನಿನ ಚೀಲವನ್ನು ಬಿಚ್ಚಿ, "ನೋಡು, ನೋಡು, ಸಮಾಧಾನ ಮಾಡಿಕೊ. ಓ ನನ್ನ ಪೂಜ್ಯ ಸ್ನೇಹಿತನೇ, ಇಗೋ ಇಲ್ಲಿದೆ ಇನ್ನೂರೈವತ್ತು ಟಂಗ ಹಣ. ಅದನ್ನು ದುಬಾರಿ ಬಡ್ಡಿಗಾರನಿಗೆ ಹಿಂದಿರುಗಿಸಿಬಿಡು; ಹಣ ಎಸೆದುಬಿಟ್ಟು, ಅವನನ್ನು ನಿನ್ನ ಮನೆಯಿಂದ ಒದ್ದೋಡಿಸಿಬಿಡು. ಇನ್ನು ಉಳಿದ ಜೀವಮಾನವನ್ನೆಲ್ಲಾ ಸುಖಶಾಂತಿಗಳಿಂದ ಕಳೆಯುತ್ತಿರು" ಎಂದನು.

ಝಣಝಣಿಸುವ ಹಣದ ಸದ್ದಿನಿಂದ ಗುಂಪಿಗೆ ಗುಂಪೇ ಜೀವಗೂಡಿಕೊಂಡಿತು. ಮುದುಕನಿಗೆ ಮಾತೇ ಹೊರಡಲಿಲ್ಲ; ಏನು ಹೇಳಲೂ ತೋರದೆ ಕಣ್ಣೀರು ತುಂಬಿ ಕೃತಜ್ಞತೆಯಿಂದ ಖೋಜಾ ನಸ್ರೆದ್ದೀನನ ಮುಖವನ್ನು ನೋಡತೊಡಗಿದನು.

ಖೋಜಾ ನಸ್ರೆದ್ದೀನ್ ಹಣವನ್ನೆಣಿಸಿಕೊಡುತ್ತ, "ನೋಡಿದೆಯೋ?

ಹೀಗಿದ್ದರೂ ನಿನ್ನ ಕಷ್ಟವೇನೆಂದು ನನಗೆ ತಿಳಿಸಲು ಒಪ್ಪಲಿಲ್ಲವಲ್ಲ ! " ಎಂದನು. ಎಣಿಸುತ್ತಿರುವಾಗ ಜೊತೆಜೊತೆಗೇ ತನ್ನ ಮನಸ್ಸಿನಲ್ಲಿ, "ಪರವಾಯಿಲ್ಲ; ಎಂಟು ಜನ ಕೆಲಸಗಾರರಿಗೆ ಬದಲಾಗಿ ಏಳು ಜನರನ್ನು ಮಾತ್ರ ಇಟ್ಟುಕೊಳ್ಳು ತ್ತೇನೆ. ಅದೇ ಬೇಕಾದಷ್ಟಾಯಿತು" ಎಂದು ಯೋಚಿಸುತ್ತಿದ್ದನು.

ಆ ಮುದುಕನ ಪಕ್ಕದಲ್ಲಿ ಕೂತಿದ್ದ ಒಬ್ಬ ಹೆಂಗಸು ತಟಕ್ಕನೆ ಖೋಜಾ ನಸ್ರೆದ್ದೀನನ ಕಾಲಿಗೆ ಬಿದ್ದಳು; ಗಟ್ಟಿಯಾಗಿ ಅಳುತ್ತಾ ತನ್ನ ಮಗುವನ್ನು ಅವನ ಮುಂದೆ ಎತ್ತಿ ಹಿಡಿದಳು.

ಅಳುತ್ತ್ತಳುತ್ತಲೇ ಅವಳು, "ನೋಡಿ! ಇವನಿಗೆ ಕಾಯಿಲೆ. ಇವನ ತುಟಿ ಒಣಗಿಹೋಗಿದೆ; ಮುಖ ಸುಡುತ್ತಿದೆ. ನನ್ನ ಈ ಬಡ ಮಗು ರಸ್ತೆ ಯಲ್ಲೇ ಸತ್ತುಹೋಗುತ್ತದೆ; ಏಕೆಂದರೆ, ನನ್ನನ್ನೂ ಮನೆಯಿಂದ ಹೊರದೂಡಿ ಬಿಟ್ಟಿದ್ದಾರೆ" ಎಂದು ಹಂಬಲಿಸಿದಳು.

ಖೋಜಾ ನಸ್ರೆದ್ದೀನ್ ಬತ್ತಿ ಬಾಡಿಹೋಗಿ ಕಳೆಗುಂದಿದ್ದ ಅದರ ಮುಖವನ್ನೂ ಅದರ ಬಡಕಲು ಕೈಗಳನ್ನೂ ನೋಡಿದನು; ಆಮೇಲೆ ಅಲ್ಲಿ ಕೂತಿದ್ದ ಗುಂಪಿನವರ ಮುಖಗಳನ್ನು ದೃಷ್ಟಿಸಿದನು. ಅಲ್ಲಿ ಕಂಡದ್ದೇನು? ಸುಕ್ಕು ತುಂಬಿ ಯಾತನೆ ಗೆರೆಯೆಳೆದಂತೆ ಕಾಣುತ್ತಿತ್ತು; ಎಡಬಿಡದೆ ಅತ್ತತ್ತು ಕಣ್ಣು ಮಂಜಾಗಿತ್ತು. ಇದನ್ನು ಕಂಡು ಖೋಜಾ ನಸ್ರೆದ್ದೀನನಿಗೆ ಕಾಸಿದ ಚೂರಿಯನ್ನು ಎದೆಗೆ ಇರಿದಂತಾಯಿತು. ಇದ್ದಕ್ಕಿದ್ದಂತೆಯೇ ಕುತ್ತಿಗೆಯಲ್ಲಿ ಏನೋ ಕಟ್ಟಿಕೊಂಡಂತಾಯಿತು. ಕರುಣೆ ಮತ್ತು ಕೋಪ ಉಕ್ಕಿಬಂದು ಬಿಸಿರಕ್ತದ ಪ್ರವಾಹ ಮುಖದತ್ತ ಹರಿಯಿತು. ನೋಡಲಾರದೆ ಅವನು ಮುಖ ತಿರುಗಿಸಿಕೊಂಡನು.

ಹೆಂಗಸು ಮುಂದುವರಿಸಿದಳು: "ನಾನು ವಿಧವೆ. ನನ್ನ ಗಂಡ ಆರು ತಿಂಗಳ ಹಿಂದೆ ಸತ್ತುಹೋದನು. ಅವನು ದುಬಾರಿ ಬಡ್ಡಿಗಾರನಿಗೆ ಇನ್ನೂರು ಟಂಗ ಸಾಲ ಕೊಡಬೇಕಾಗಿತ್ತು. ಕಾಯಿದೆಯ ಪ್ರಕಾರ ಆ ಸಾಲ ನನ್ನ ಮೇಲೆ ಬಂತು."

"ನಿಜ, ಹುಡುಗನಿಗೆ ಹುಷಾರಿಲ್ಲ. ಇಗೋ ಇಲ್ಲಿ, ಇನ್ನೂರು ಟಂಗ. ಬೇಗ ಹೊರಡು ಮನೆಗೆ. ಮನೆಗೆ ಹೋಗಿ ಇವನ ತಲೆಗೆ ತಣ್ಣಗೆ ಬಟ್ಟೆ ಕಟ್ಟು. ಇಗೋ ಇನ್ನೂ ಐವತ್ತು ಟಂಗ ತೆಗೆದುಕೊ. ಹೋಗಿ ವೈದ್ಯನನ್ನು ಕರೆದು

ಕೊಂಡು ಬಂದು ತೋರಿಸಿ ತಕ್ಕ ಔಷಧಿ ತಂದುಕೊಡು" ಎಂದನು ಖೋಜಾ ನಸ್ರೆದ್ದೀನ್.

ತನ್ನಲ್ಲಿ ತಾನು, "ಆರು ಮಂದಿ ಕೆಲಸಗಾರರಿಂದಲೇ ಕೆಲಸ ಸಾಗಿಸ ಬಹುದು" ಎಂದುಕೊಂಡನು.

ಆದರೆ ಆ ಕ್ಷಣವೇ ಒಬ್ಬ ಕಲ್ಲೊಡೆಯುವವನು—ಬಲು ಭಾರಿ ಆಸಾಮಿ—ಅವನ ಕಾಲ ಬಳಿ ಅಡ್ಡಬಿದ್ದನು. ಜಾಫರನಿಗೆ ಅವನು ಕೊಡಬೇಕಾಗಿದ್ದ ನಾನೂರು ಟಂಗ ಸಾಲಕ್ಕಾಗಿ ಮರುದಿನ ಬೆಳಗ್ಗೆ ಅವನ ಕುಟುಂಬದವರನ್ನೆಲ್ಲಾ ಗುಲಾಮರಾಗಿ ಮಾರುವ ಗತಿ ಬಂದಿತ್ತು.

"ಐದು ಜನ ಕೆಲಸಗಾರರಿದ್ದರೆ ಯಥೇಚ್ಛವಾಯಿತು!" ಎಂದುಕೊಂಡು ಖೋಜಾ ನಸ್ರೆದ್ದೀನ್ ಮತ್ತೊಮ್ಮೆ ಜೀನಿನ ಚೀಲ ಬಿಚ್ಚಿದನು. ಅದನ್ನು ಮತ್ತೆ ಕಟ್ಟಿದ್ದಿನ್ನೂ ಮುಗಿದೇ ಇರಲಿಲ್ಲ, ಅಷ್ಟರಲ್ಲೇ ಇನ್ನಿಬ್ಬರು ಹೆಂಗಸರು ಅವನ ಮುಂದೆ ಬಂದು ಮಂಡಿಯೂರಿದರು. ಅವರು ಹೇಳಿದ ಕಥೆ ಇನ್ನೂ ಎದೆಗರಗಿಸುವಂಥದು. ಅದನ್ನು ಕೇಳಿ ಖೋಜಾ ನಸ್ರೆದ್ದೀನ್ ಅವರು ದುಬಾರಿ ಬಡ್ಡಿಗಾರನ ಸಾಲವನ್ನು ಪೂರ್ತಿಯಾಗಿ ತೀರಿಸುವುದಕ್ಕೆ ಎಷ್ಟು ಬೇಕೋ ಅಷ್ಟನ್ನೂ ಅವರಿಗೆ ಕೊಟ್ಟುಬಿಟ್ಟನು. ಆಮೇಲೆ ತನ್ನಲ್ಲಿ ಉಳಿದ ಹಣ ಮೂರು ಮಂದಿ ಕೆಲಸಗಾರರಿಗೆ ಮಾತ್ರ ಸಾಕಾದೀತೋ ಇಲ್ಲವೋ ಎನ್ನಿಸಿತು. ಇನ್ನು ಕರ್ಮಶಾಲೆಗಳ ವಿಷಯವಾಗಿ ಚಿಂತಿಸಿ ಫಲವಿಲ್ಲವೆಂದು ನಿರ್ಧರಿಸಿ, ಅಲ್ಲಿ ನೆರೆದಿದ್ದ ಇತರ ಸಾಲಗಾರರಿಗೆಲ್ಲ—ದುಬಾರಿ ಬಡ್ಡಿಯ ಜಾಫರನಿಗೆ ಸಾಲಗಾರರಾಗಿದ್ದವರಿಗೆ—ಆ ಹಣವನ್ನೆಲ್ಲ ಹಂಚಿಬಿಟ್ಟನು.

ಜೀನಿನ ಚೀಲದಲ್ಲಿ ಇನ್ನು ಐನೂರು ಟಂಗಕ್ಕಿಂತ ಹೆಚ್ಚಿನೂ ಉಳಿದಿರಲಿಲ್ಲ. ಆಗ ಮತ್ತೊಬ್ಬ ಮನುಷ್ಯ ಅವನ ಕಣ್ಣಿಗೆ ಬಿದ್ದನು; ಅದುವರೆಗೆ ಖೋಜಾ ನಸ್ರೆದ್ದೀನ್ ಅವನನ್ನು ಕಂಡೇ ಇರಲಿಲ್ಲ. ಅವನು ಗುಂಪಿನ ಜೊತೆ ಸೇರದೆ ಪ್ರತ್ಯೇಕವಾಗಿ ಕುಳಿತಿದ್ದನು; ಇತರರಂತೆ ಅವನು ಸಹಾಯವನ್ನು ಕೇಳಿಯೇ ಇರಲಿಲ್ಲ; ಆದರೆ ಅವನ ಕಷ್ಟ ಸುಸ್ಪಷ್ಟವಾಗಿತ್ತು.

"ಅಯ್ಯಾ, ಅಯ್ಯಾ, ಇಲ್ಲಿ ಕೇಳು!" ಎಂದು ಖೋಜಾ ನಸ್ರೆದ್ದೀನ್ ಅವನನ್ನು ಕೂಗಿ ಕರೆದನು. "ನೀನು ದುಬಾರಿ ಬಡ್ಡಿಗಾರನಿಗೆ ಸಾಲ ಕೊಡಬೇಕಾಗಿದ್ದು ಕಷ್ಟದಲ್ಲಿ ಸಿಕ್ಕಿಹಾಕಿಕೊಂಡಿಲ್ಲವಾದ ಪಕ್ಷದಲ್ಲಿ, ಇಲ್ಲೇಕೆ ಕುಳಿ

ತಿದ್ದಿಯ ? ” ಎಂದು ಕೇಳಿದನು.

“ ನಾನು ಸಾಲದಲ್ಲಿ ಸಿಕ್ಕಿಕೊಂಡಿದ್ದೇನೆ. ನಾಳೆ ಸರಪಣಿ ಬಿಗಿದು ಕೊಂಡು ಗುಲಾಮರ ಪೇಟೆಗೆ ಹೋಗುತ್ತೇನೆ ” ಎಂದು ಶುಷ್ಕ ಕಂಠದಿಂದ ಅವನು ಉತ್ತರ ಕೊಟ್ಟನು.

“ ಅದೇಕೆ ನೀನು ಮೌನವಾಗಿದ್ದೆ ? ”

“ ಓ, ಕರುಣಾಳುವಾದ ಉದಾರಿ ಪ್ರಯಾಣಿಕಾ ! ನೀನು ಯಾರೋ ನನಗೆ ಗೊತ್ತಿಲ್ಲ. ಒಡವರಿಗೆ ಸಹಾಯಮಾಡಲೆಂದು ಗೋರಿಯಿಂದ ಎದ್ದು ಬಂದಿರುವ ಬಹಾ ಎದ್‌-ದೀನನೇ ನೀನಾಗಿರಬಹುದು; ಅಥವಾ ಪ್ರತ್ಯಕ್ಷ ಹರೂನ್ ಎರ್‌-ರಷೀದನೇ ಆಗಿರಬಹುದು. ನಾನು ನಿನ್ನ ಸಹಾಯ ಕೋರ ದಿರುವುದೇಕೆಂದರೆ, ನೀನಾಗಲೇ ಅಪಾರ ಹಣ ವೆಚ್ಚಮಾಡಿದ್ದೀಯೆ ; ಇವರೆಲ್ಲರ ಸಾಲಕ್ಕಿಂತ ನನ್ನ ಸಾಲ ಬಹಳ ಭಾರಿ—ಐನೂರು ಟಂಗಗಳು ಅಷ್ಟೊಂದು ಭಾರಿ ಗಂಟನ್ನು ನನಗೆ ಕೊಟ್ಟುಬಿಟ್ಟರೆ, ಈ ಮುದುಕರಿಗೂ ಹೆಂಗಸರಿಗೂ ತಕ್ಕಷ್ಟು ಉಳಿಯುವುದಿಲ್ಲವೆಂದು ನನಗೆ ಭಯವಾಯಿತು.”

ಆ ಮಾತು ಖೋಜಾ ನಸ್ರೆದ್ದೀನನ ಅಂತರಂಗಕ್ಕೆ ತಟ್ಟಿತು. “ ನೀನು ಸತ್ಯವಂತ, ಘನವಂತ ; ಮತ್ತು ಆತ್ಮಸಾಕ್ಷಿಯ ಅರಿವಿರುವವನು. ನನಗೂ ಆತ್ಮಸಾಕ್ಷಿಯ ಅರಿವಿದೆ. ಪ್ರಮಾಣ ಮಾಡಿ ಹೇಳುತ್ತೇನೆ, ನೀನು ನಾಳೆ ಗುಲಾಮರ ಪೇಟೆಗೆ ಹೋಗಬೇಕಾಗಿಲ್ಲ. ಎಲ್ಲಿ, ನಿನ್ನ ಅಂಗಿಯನ್ನು ಹಿಡಿ ” ಎಂದನು.

ಖೋಜಾ ನಸ್ರೆದ್ದೀನ್ ಜೇನಿನ ಚೀಲದ ಬಾಯಿ ಬಿಚ್ಚಿ ಸುರಿದನು ; ಕೊನೆಯ ನಾಣ್ಯವನ್ನೂ ಕೊಡವಿಬಿಟ್ಟನು. ಆ ಮೇಲೆ ಆ ಮನುಷ್ಯ ತನ್ನ ಖಲತ್ತಿನ ಅಂಚನ್ನು ಎಡಗೈಯಿಂದ ಎತ್ತಿ ಹಿಡಿದುಕೊಂಡು, ಬಲಗೈಯಿಂದ ಖೋಜಾ ನಸ್ರೆದ್ದೀನನನ್ನು ಬಳಸಿ ತಬ್ಬಿಕೊಂಡನು ; ಕಣ್ಣೀರು ಸುರಿದು ಒದ್ದೆ ಯಾದ ತನ್ನ ಮುಖವನ್ನು ಅವನ ಎದೆಗೆ ಒರಗಿಸಿದನು.

“ ನೀನು ನಿಜವಾಗಿಯೂ ಕತ್ತೆಯ ಮೇಲಿನಿಂದ ಬಹು ಸೊಗಸಾಗಿ ಹಾರಿದೆ ” ಎಂದನು ದೊಡ್ಡ ಗಡ್ಡದ ಭಾರಿ ಆಸಾಮಿ ಕಲ್ಲುಕುಟಿಗ ; ಹೀಗೆಂದು ನುಡಿದು ಅವನು ಗಟ್ಟಿಯಾಗಿ ನಕ್ಕು ಅಟ್ಟಹಾಸ ಮಾಡಿದನು. ಇದನ್ನು ಕೇಳಿ ಉಳಿದೆಲ್ಲರೂ ಫಕ್ಕನೆ ಗಟ್ಟಿಯಾಗಿ ನಗತೊಡಗಿದರು—ಗಂಡಸರು ಆಳ

ವಾದ ಒರಟು ದನಿಯಿಂದಲೂ, ಹೆಂಗಸರು ತಾರಸ್ವರದಿಂದಲೂ ನಗುತ್ತಿದ್ದರು. ಮಕ್ಕಳು ಸದ್ದಿಲ್ಲದೆ ಮುಗುಳುನಗೆ ಸೂಸುತ್ತಾ ಖೋಜಾ ನಸ್ರೆದ್ದೀನನ ಕಡೆಗೆ ಕೈಚಾಚಿದವು. ಖೋಜಾ ನಸ್ರೆದ್ದೀನ್ ಅವರೆಲ್ಲರಿಗಿಂತಲೂ ಹೆಚ್ಚು ಗಟ್ಟಿಯಾಗಿ ನಗುತ್ತಿದ್ದನು.

"ಹೋ–ಹೋ–ಹೋ!" ಎಂದು ನಕ್ಕನು; ನಕ್ಕು ನಕ್ಕು ಮೈಬಾಗಿಸಿ ನಕ್ಕನು. "ಆ ಕತ್ತೆ, ಅದೆಂಥ ಕತ್ತೆಯೆಂದು ನಿಮಗೆ ತಿಳಿಯದು! ಅದೊಂದು ಭ್ರಷ್ಟ ಕತ್ತೆ!" ಎಂದನು.

ತಾಯಿಲೆ ಮಗುವಿನ ತಾಯಿ, "ಅಲ್ಲ! ಅಲ್ಲ! ನಿನ್ನ ಆ ಕತ್ತೆಯನ್ನು ಹಾಗನ್ನಬಾರದು. ಪ್ರಪಂಚದ ಕತ್ತೆಗಳಲ್ಲೆಲ್ಲಾ ಅದೇ ಅತ್ಯಂತ ಜಾಣ ಕತ್ತೆ; ಅತ್ಯಂತ ಘನವಾದ, ಅತ್ಯಮೌಲ್ಯವಾದ ಕತ್ತೆ! ಅದರಂಥ ಕತ್ತೆ ಮತ್ತೊಂದಿರಲಿಲ್ಲ; ಇನ್ನುಮುಂದೂ ಅಂಥ ಕತ್ತೆ ಹುಟ್ಟುವುದಿಲ್ಲ. ನನ್ನ ಜೀವಮಾನವೆಲ್ಲಾ ಅದರ ಯೋಗಕ್ಷೇಮ ನೋಡಿಕೊಂಡಿರಬೇಕೆನಿಸುತ್ತಿದೆ; ಅತ್ಯುತ್ತಮವಾದ ಕಾಳುಗಳನ್ನು ಅದಕ್ಕೆ ಕೊಡುತ್ತಿರಬೇಕು, ಅದಕ್ಕೆ ಕೆಲಸ ಕೊಡಲೇ ಬಾರದು, ಮಾಲೀಸು ಮಾಡುತ್ತಿರಬೇಕು, ಅದರ ಬಾಲವನ್ನು ಬಾಚುತ್ತಿರಬೇಕು—ಎನ್ನಿಸುತ್ತದೆ ನನಗೆ. ಏಕೆಂದರೆ, ಅಸದೃಶವಾದ ಈ ನಿನ್ನ ಕತ್ತೆ—ಗುಲಾಬಿಯಂತೆ ಇದಕ್ಕೆ ಒಳ್ಳೆಯ ಗುಣವೇ ಹೊರತು ದುರ್ಗುಣವೊಂದೂ ಇಲ್ಲ—ಹಳ್ಳದ ಮೇಲೆ ಹಾರಿ ನೆಗೆಯದೆ ಇದ್ದಿದ್ದರೆ, ನೆಗೆದು ನಿನ್ನನ್ನು ಎತ್ತಿ ಹಾಕದೆ ಇದ್ದಿದ್ದರೆ, ನೀನು, ಓ ಪ್ರಯಾಣಿಕನೇ, ಕತ್ತಲೆಯಲ್ಲಿ ಸೂರ್ಯ ಮೂಡಿಬಂದಂತೆ ಬಂದ ನೀನು—ನಮ್ಮನ್ನು ಕಣ್ಣೆತ್ತಿ ನೋಡದೆಯೇ ದಾರಿ ಹಿಡಿದು ಹೋಗಿಬಿಡುತ್ತಿದ್ದೆ; ನಿನ್ನನ್ನು ನಾವು ನಿಲ್ಲಿಸುವುದಕ್ಕಾಗುತ್ತಲೇ ಇರಲಿಲ್ಲ" ಎಂದಳು.

"ಹೌದು, ಅವಳು ಹೇಳುವುದು ನಿಜ" ಎಂದನು ಬಹು ತೂಕವಾಗಿ ಆ ಮುದುಕ. "ನಮ್ಮ ಈ ಉದ್ಧಾರದ ಬಹು ಭಾಗ ಕತ್ತೆಗೆ ಸೇರಿದ್ದು. ಇದು ಪ್ರಪಂಚಕ್ಕೊಂದು ಅಲಂಕಾರ; ಉಳಿದೆಲ್ಲ ಕತ್ತೆಗಳ ನಡುವೆ ಉಜ್ಜ್ವಲ ರತ್ನದಂತೆ ಹೊಳೆಯುತ್ತದೆ, ಇದು."

ಆ ಮೇಲೆ ಅವರೆಲ್ಲ ಕತ್ತೆಯನ್ನು ಗಟ್ಟಿಯಾಗಿ ಪ್ರಶಂಸೆ ಮಾಡತೊಡಗಿದರು. ಅದಕ್ಕೆ ರೊಟ್ಟಿಗಳು, ಹುರಿಗಾಳುಗಳು, ಒಣಗಿದ ಹಣ್ಣುಗಳು ಮೊದ

ಲಾದ ರುಚಿ ತಿಂಡಿಗಳನ್ನು ಕೊಡುವುದರಲ್ಲಿ ಒಬ್ಬರೊಡನೊಬ್ಬರು ಹುರುಡಿಸು ತ್ತಿದ್ದರು. ಕತ್ತೆ ತನ್ನ ಮೇಲೆ ಮುತ್ತಿ ಮುಸುರುತ್ತಿದ್ದ ನೊಣಗಳನ್ನು ಓಡಿಸಲು ಬಾಲ ಬೀಸುತ್ತಾ, ತನಗರ್ಪಿಸಿದ ಆ ನೈವೇದ್ಯವನ್ನೆಲ್ಲಾ ಗಂಭೀರಭಾವದಿಂದ ತಿನ್ನುತ್ತಿತ್ತು. ಖೋಜಾ ನಸ್ರೆದ್ದೀನನು ಯಾರಿಗೂ ಕಾಣದಂತೆ ಗುಟ್ಟಾಗಿ ತನ್ನ ಕಡೆಗೆ ನೀಡಿ ಅಳ್ಳಾಡಿಸುತ್ತಿದ್ದ ಚಾವಟಿಯ ಕಡೆಗೆ ಆಗಾಗ ಅಳುಕಿನಿಂದ ಕಡೆಗಣ್ಣೋಟ ಬೀರುತ್ತಿದ್ದರೂ ಅದನ್ನೆಲ್ಲ ಆನಂದದಿಂದ ತಿನ್ನುತ್ತಿತ್ತು.

ಹಗಲು ಕಳೆಯುತ್ತಿತ್ತು; ನೆರಳುಗಳು ಉದ್ದವಾದವು. ಕೆಂಪು ಕಾಲಿನ ಕೊಕ್ಕರೆಗಳು ರೆಕ್ಕೆ ಬಡಿಯುತ್ತ ಕೂಗುತ್ತ ಗೂಡಿಗೆ ಹಿಂದಿರುಗುತ್ತಿದ್ದವು; ಗೂಡುಗಳಲ್ಲಿ ರೆಕ್ಕೆ ಮೂಡುತ್ತಿರುವ ಮರಿಗಳು ಹಸಿವಿನಿಂದ ಕತ್ತು ನೀಡಿ ಬಾಯಿ ಬಿಟ್ಟುಕೊಂಡು ಅವುಗಳ ಕಡೆ ನೋಡುತ್ತಿದ್ದವು.

ಖೋಜಾ ನಸ್ರೆದ್ದೀನ್ ಅವರಿಂದ ಬೀಳ್ಕೊಂಡು ಹೊರಟನು. ಎಲ್ಲರೂ ಅವನ ಉಪಕಾರಸ್ಮರಣೆಮಾಡಿ ತಲೆ ಬಗ್ಗಿ ನಮಸ್ಕರಿಸಿದರು.

"ನಿನ್ನಿಂದ ಉಪಕಾರವಾಯಿತು. ನಮ್ಮ ಕಷ್ಟಗಳನ್ನು ನೀನು ಅರಿತು ಕೊಂಡೆ."

"ಅರಿತುಕೊಳ್ಳದಿರಲು ಹೇಗೆ ಸಾಧ್ಯ? ಒಂದೊಂದರಲ್ಲೂ ಎಂಟೆಂಟು ಮಂದಿ ನುರಿತ ಕುಶಲ ಕಾರ್ಮಿಕರು ಕೆಲಸ ಮಾಡುತ್ತಿದ್ದ ನಾಲ್ಕು ಕರ್ಮ ಶಾಲೆಗಳನ್ನೂ, ಸೊಗಸಾದ ಒಂದು ಮನೆಯನ್ನೂ, ಅದಕ್ಕೆ ಸೇರಿದಂತಿದ್ದ ಚಿಲುಮೆಗಳು ಚಿಮ್ಮುತ್ತಿರುವ ಮತ್ತು ಗಾನಪಕ್ಷಿಗಳ ಚಿನ್ನದ ಪಂಜರ ತೂಗು ಬಿಟ್ಟ ಕೊಂಬೆಗಳಿಂದ ಕೂಡಿದ ಮರಗಳುಳ್ಳ ತೋಟವನ್ನೂ ಇವತ್ತಿನ್ನೂ ನಾನು ಕಳೆದುಕೊಂಡಿದ್ದೇನೆ. ಹೀಗಿರುವಾಗ ನಿಮ್ಮನ್ನು ಹೇಗೆ ತಾನೆ ಅರ್ಥ ಮಾಡಿಕೊಳ್ಳದೆ ಇದ್ದೇನು?" ಎಂದು ಅವನು ಉತ್ತರ ಕೊಟ್ಟನು.

ಮುದುಕನು ಹಲ್ಲಿಲ್ಲದ ಬೊಚ್ಚುಬಾಯಲ್ಲಿ ಹೀಗೆಂದನು: "ಅಯ್ಯಾ ಪ್ರಯಾಣಿಕಾ! ನಿನ್ನ ಉಪಕಾರಕ್ಕೆ ಪ್ರತಿಯಾಗಿ ಕೃತಜ್ಞತೆಯಿಂದ ಬಹುಮಾನ ವಾಗಿ ಅರ್ಪಿಸಲು ನನ್ನ ಹತ್ತಿರ ಏನೂ ಇಲ್ಲ. ನನ್ನ ಮನೆಯನ್ನು ಬಿಟ್ಟು ಹೊರಬಂದಾಗ ನಾನು ಜೊತೆಯಲ್ಲಿ ತೆಗೆದುಕೊಂಡು ಬಂದ ವಸ್ತು ಇದೊಂದೇ. ಇದು ಕುರಾನ್, ಪವಿತ್ರ ಗ್ರಂಥ. ಇದನ್ನು ತೆಗೆದುಕೊ. ಇದು ನಿನಗೆ ಈ ಪ್ರಪಂಚದಲ್ಲಿ ಮಾರ್ಗದರ್ಶಕವಾದ ಜ್ಯೋತಿಯಾಗಿರಲಿ!"

ಖೋಜಾ ನಸ್ರೆದ್ದೀನನಿಗೆ ಪವಿತ್ರ ಗ್ರಂಥಗಳಿಂದ ಸ್ವಲ್ಪವೂ ಉಪಯೋಗ ವಿರಲಿಲ್ಲ. ಆದರೂ ಆ ಮುದುಕನ ಮನಸ್ಸಿಗೆ ನೋವುಂಟುಮಾಡಲು ಅಳುಕಿ, ಅದನ್ನು ಈಸಿಕೊಂಡನು; ತೆಗೆದುಕೊಂಡು ಅದನ್ನು ತನ್ನ ಜೀನಿನ ಚೀಲ ದಲ್ಲಿಟ್ಟುಕೊಂಡು ಕತ್ತೆಯ ಮೇಲೆ ಹತ್ತಿದನು.

"ನಿನ್ನ ಹೆಸರು? ನಿನ್ನ ಹೆಸರು? ನಿನ್ನ ಹೆಸರು ಹೇಳು ನಮಗೆ; ನಾವು ಪ್ರಾರ್ಥನೆ ಮಾಡುವಾಗ ಆ ಹೆಸರು ಹೇಳಿ ವಂದನೆ ಸಲ್ಲಿಸಬೇಕು" ಎಂದು ಉಳಿದವರೆಲ್ಲರೂ ಒಟ್ಟಾಗಿ ಕೂಗಿದರು.

"ನನ್ನ ಹೆಸರನ್ನು ಗೊತ್ತುಮಾಡಿಕೊಳ್ಳಬೇಕಾದ ಅಗತ್ಯವೇನು? ನಿಜ ವಾದ ಸದ್ಗುಣಕ್ಕೆ ಕೀರ್ತಿಯ ಆವಶ್ಯಕತೆಯಿಲ್ಲ. ಪ್ರಾರ್ಥನೆಗಳೋ! ಜನ ಮಾಡಿದ ಧರ್ಮಕಾರ್ಯಗಳನ್ನು ತಿಳಿಸುವುದಕ್ಕೆ ಅಲ್ಲಾಗೆ ಅನೇಕ ಮಂದಿ ದೇವದೂತರಿದ್ದಾರೆ. ಆ ದೇವದೂತರು ಸೋಮಾರಿಗಳೂ ಉದಾಸೀನರೂ ಆಗಿ, ಮೃದುವಾದ ಮೋಡಗಳ ಮೇಲೆ ಮಲಗಿ, ಭೂಮಿಯ ಮೇಲೆ ಮಾನವರು ಮಾಡುವ ಧಾರ್ಮಿಕ ಮತ್ತು ಅಧಾರ್ಮಿಕ ಕೃತ್ಯಗಳನ್ನು ಲೆಕ್ಕ ಮಾಡದೆ ಮರೆತುಬಿಟ್ಟರೆಂದರೆ, ಆಗ ನಿಮ್ಮ ಪ್ರಾರ್ಥನೆಗೂ ಯಾವ ಬೆಲೆಯೂ ಇಲ್ಲ. ಏಕೆಂದರೆ, ನಂಬಿಕೆಗೆ ಅರ್ಹರಾದವರ ಅನುಮೋದನೆಯಿಲ್ಲದೆ ಜನ ಆಡುವ ಮಾತುಗಳನ್ನು ಹಾಗೆಯೇ ನಂಬಿಬಿಟ್ಟರೆ ಅಲ್ಲಾ ಬೆಪ್ಪುತಕಡಿಯಾಗಿ ಬಿಟ್ಟಾನು!"

ಅವನು ಹೀಗೆ ಮಾತಾಡುತ್ತಿದ್ದಾಗ ಹೆಂಗಸರಲ್ಲೊಬ್ಬಳು ಬಾಯಿಬಿಟ್ಟು ಕೊಂಡು ಸದ್ದಾಗುವಂತೆ ಉಸಿರುಬಿಟ್ಟಳು. ಮತ್ತೊಬ್ಬಳೂ ಹಾಗೆ ಮಾಡಿದಳು. ಆ ಮೇಲೆ ಮುದುಕನು ಖೋಜಾ ನಸ್ರೆದ್ದೀನನನ್ನು ದುರುಗುಟ್ಟಿ ನೋಡುತ್ತಾ ನಿಂತನು. ಆದರೆ ಖೋಜಾ ನಸ್ರೆದ್ದೀನ್ ಹೊರಡುವ ಆತುರದಲ್ಲಿದ್ದನು. ಇದೊಂದನ್ನೂ ಗಮನಿಸಲಿಲ್ಲ.

"ಹೋಗಿ ಬಾ. ನಿನಗೆ ಸುಖಶಾಂತಿಗಳು ಶಾಶ್ವತವಾಗಿರಲಿ!"

ಈ ಆಶೀರ್ವಾದಗಳನ್ನು ಪಡೆದುಕೊಂಡು ರಸ್ತೆಯ ತಿರುವಿನಲ್ಲಿ ಮರೆ ಯಾಗಿ ಹೊರಟುಹೋದನು.

ಉಳಿದವರು ಮೌನವಾಗಿ ಕುಳಿತರು. ಒಂದೇ ಒಂದು ಭಾವನೆ ಅವ ರೆಲ್ಲರ ಮನಸ್ಸಿನಲ್ಲಿಯೂ ಮೂಡಿ ಕಣ್ಣಿನಲ್ಲಿ ಹೊರಸೂಸುತ್ತಿತ್ತು. ಮುದುಕ

ಮೌನವನ್ನು ಮುರಿದನು. ಅವನು ಭಾವೋದ್ರೇಕದಿಂದ ಕೂಡಿ ಗಂಭೀರವಾಗಿ ಹೀಗೆಂದನು :

" ಪ್ರಪಂಚದಲ್ಲೆಲ್ಲ ಇಂಥ ಕೆಲಸ ಮಾಡಬಲ್ಲವನು ಒಬ್ಬನೇ ಒಬ್ಬ. ಹೌದು, ಪ್ರಪಂಚದಲ್ಲಿ ಕೇವಲ ಒಬ್ಬನೇ ಒಬ್ಬ ಹೀಗೆ ಮಾತಾಡಬಲ್ಲ; ಬಡವರಿಗೂ ದೀನದಲಿತರಿಗೂ ಉತ್ಸಾಹ ತುಂಬಿ ಕಳೆದುಂಬಿಸಬಲ್ಲಂಥ ಉತ್ಸಾಹ ಕಳೆಗಳಿಂದ ಕೂಡಿದವನು, ಅಂಥ ಆತ್ಮಶಕ್ತಿಯುಳ್ಳವನು, ಪ್ರಪಂಚದಲ್ಲಿ ಒಬ್ಬನೇ ಒಬ್ಬ ; ಅವನು ನಮ್ಮ—"

" ನಾಲಿಗೆ ಬಿಗಿಹಿಡಿದುಕೋ ! " ಎಂದು ಒಬ್ಬಾತ ನಡುವೆಯೇ ಅಡ್ಡ ಮಾತಾಡಿ ತಡೆದನು. " ಗೋಡೆಗಳಿಗೆ ಕಿವಿಯಿದೆ; ಕಲ್ಲುಗಳಿಗೆ ಕಣ್ಣಿದೆ. ಅವನ ಸುಳಿವನ್ನರಸಿಹೋಗಲು ನೂರಾರು ನಾಯಿಗಳು ಸಿದ್ಧವಾಗಿವೆ ಎಂಬುದನ್ನಾಗಲೆ ಮರೆತುಬಿಟ್ಟೆಯಾ ? "

" ಹೌದು, ಹೌದು, ನೀನು ಹೇಳುವುದು ಸರಿ ! " ಎಂದ ಮೂರನೆಯವನು. " ನಾವು ನಮ್ಮ ನಾಲಗೆ ಬಿಗಿಹಿಡಿದುಕೊಳ್ಳಬೇಕು ; ಏಕೆಂದರೆ, ಈಗ ನಾವು ಎಳೆದು ಕಟ್ಟಿದ ಬಿಗಿ ಹಗ್ಗದ ಮೇಲೆ ನಡೆಯುತ್ತಿರುವಂತಿದ್ದೇವೆ. ಸ್ವಲ್ಪ ಅತ್ತಿತ್ತ ಅಲುಗಿದರೆ ಸಾಕು ಹಾಳಾಗಿ ಹೋಗುತ್ತೇವೆ."

ಕಾಯಿಲೆ ಮಗುವಿನ ತಾಯಿ, " ಅವರು ನನ್ನ ನಾಲಗೆಯನ್ನು ಹಿರಿದು ಹಾಕಿದರೂ ಹಾಕಲಿ, ನಾನು ಬೇರೆ ಅವನ ಹೆಸರನ್ನು ಗಟ್ಟಿಯಾಗಿ ಹೇಳುವುದಿಲ್ಲ " ಎಂದಳು.

" ನಾನೂ ತೆಪ್ಪಗಿದ್ದುಬಿಡುತ್ತೇನೆ " ಎಂದಳು ಎರಡನೆಯವಳು. " ನಾನು ಸತ್ತಾದರೂ ಸತ್ತೇನು ; ಆದರೆ ಮಾತ್ರ ಅವಿವೇಕವಾಗಿ ಆಡಿ ಅವನ ಕೈಗೆ ಹಗ್ಗ ಕೊಡಲಾರೆ."

ದೊಡ್ಡ ಗಡ್ಡದ ಭಾರಿಯ ಕಲ್ಕುಟಿಗನೊಬ್ಬ ಹೊರತು ಉಳಿದವರೆಲ್ಲ ಹೀಗೆ ಮಾತಾಡಿದರು. ಆ ಕಲ್ಕುಟಿಗ ಅವರಂತೆ ಚುರುಕು ಬುದ್ಧಿಯವನಲ್ಲ. ತಾನು ಕೇಳಿದ್ದಷ್ಟರಿಂದ, ಆ ಪ್ರಯಾಣಿಕನ ಜಾಡನ್ನು ನಾಯಿಗಳೇಕೆ ಹಿಂಬಾಲಿಸಬೇಕೋ ಗೊತ್ತಾಗಲಿಲ್ಲ ; ಅವನು ಕಸಾಯಿಯಾಗಲಿ ಮಾಂಸದ ತಿಂಡಿ ಮಾರುವವನಾಗಲಿ ಅಲ್ಲದಿರುವಾಗ ನಾಯಿಗಳು ಅವನನ್ನು ಹಿಂಬಾಲಿಸುವುದು ಏಕೆಂದು ಅರ್ಥವಾಗಲಿಲ್ಲ. ಮತ್ತೊಂದು, ಆ ಪ್ರಯಾಣಿಕ ಬಿಗಿ ಹಗ್ಗದ

ಮೇಲೆ ನಡೆಯುವವನಾಗಿದ್ದರೆ, ಅವನ ಹೆಸರನ್ನೇಕೆ ಗಟ್ಟಿಯಾಗಿ ಉಚ್ಚರಿಸ ಬಾರದು? ಅವನ ವೃತ್ತಿಗೆ ಹಗ್ಗ ಅವಶ್ಯವಾಗಿರುವಾಗ, ಆ ಹೆಂಗಸು ತನ್ನ ಉಪಕಾರಿಗೆ ಹಗ್ಗ ಕೊಡಲು ಅದೇಕೆ ಹಿಂಜರಿಯಬೇಕು? ಹಗ್ಗ ಕೊಡದೆ ಅದೇಕೆ ಸಾಯಲೂ ಸಿದ್ಧವಾಗಬೇಕು? ಹೀಗೆ ಯೋಚಿಸುವಷ್ಟರಲ್ಲಿ ಆ ಕಲ್ಲು ಕುಟಿಗನಿಗೆ ಪೂರ್ತಿ ಕಂಕುಮಂಕಾಯಿತು. ಅವನು ಮೂಗಿನಿಂದ ಗಟ್ಟಿಯಾಗಿ ಉಸಿರು ಹೊರಡಿಸಿ ಘೂರ್ಣಿಸಿದನು; ಬಲವಾಗಿ ಉಸಿರೆಳೆದುಕೊಂಡು ಮತ್ತೆ ಆ ಯೋಚನೆ ಮಾಡಿದರೆ ಇನ್ನೆಲ್ಲಿ ಬುದ್ಧಿ ಏರುಪೇರಾಗುವುದೋ ಎಂದು ಹೆದರಿ ಸುಮ್ಮನಾಗಿಬಿಟ್ಟನು.

ಇತ್ತಲಾಗಿ, ಖೋಜಾ ನಸ್ರೆದ್ದೀನನು ಬಹು ದೂರ ಹೋಗಿದ್ದನು. ಆದರೂ ಅವನ ಕಣ್ಣೆದುರಿಗೆ ಆ ಬಡವರ ಬತ್ತಿಹೋದ ಮುಖಗಳೇ ಕಾಣಿಸು ತ್ತಿದ್ದವು. ಕಾಯಿಲೆಯ ಮಗು, ಜ್ವರದಿಂದ ಕುದಿಯುತ್ತಿದ್ದ ಅದರ ಕೆನ್ನೆಗಳು, ಒಣಗಿದ ತುಟಿಗಳು—ಇವು ಅವನ ನೆನಪಿನಲ್ಲಿ ಮರಳಿ ಮರಳಿ ಸುಳಿಯುತ್ತಿದ್ದವು. ತನ್ನ ಸ್ವಂತ ಮನೆಯಿಂದ ಹೊರದೂಡಿಸಿಕೊಂಡು ಬಂದಿದ್ದ ಆ ನರೆಗೂದಲಿನ ಮುದುಕನನ್ನು ಸದಾ ಜ್ಞಾಪಿಸಿಕೊಳ್ಳುತ್ತಿದ್ದನು. ಅವನ ಹೃದಯದಾಳದಿಂದ ಮಹಾ ಕ್ರೋಧ ಉಕ್ಕತೊಡಗಿತು.

ಇನ್ನುಮುಂದೆ ಕತ್ತೆಯ ಮೇಲೆ ಕೂತಿರಲು ಅವನಿಗೆ ಸಾಧ್ಯವಾಗಲಿಲ್ಲ. ಕೆಳಕ್ಕೆ ನೆಗೆದು, ಕತ್ತೆಯ ಪಕ್ಕದಲ್ಲೆ ದಾರಿಯ ಕಲ್ಲುಗಳನ್ನು ಅತ್ತಿತ್ತ ಒದೆದೋ ಡಿಸುತ್ತಾ ನಡೆಯತೊಡಗಿದನು.

"ದುಬಾರಿ ಬಡ್ಡಿಯ ಸಾಲಗಾರ ಸ್ವಾಮಿಗಳೇ, ಸ್ವಲ್ಪ ತಡೆಯಿರಿ! ಒಂದಲ್ಲ ಒಂದು ದಿನ, ಸದ್ಯದಲ್ಲೇ, ನಾವು ಒಬ್ಬರನ್ನೊಬ್ಬರು ಸಂಧಿಸುತ್ತೇವೆ; ಆಗ ನಿನ್ನ ಗತಿ ಹೇಗಾಗುತ್ತೋ ನೋಡುವೆಯಂತೆ! ಓ ಅಮೀರಾ, ನಿನ್ನದೂ ಅಷ್ಟೆ! ನಡುಗು, ನಡುಗಿ ಕಳೆಗುಂದಿ ಹೋಗು! ಏಕೆಂದರೆ, ನಾನು, ಖೋಜಾ ನಸ್ರೆದ್ದೀನ್, ಬುಖಾರಕ್ಕೆ ಬಂದಿದ್ದೇನೆ. ಅಯ್ಯೋ ನೀಚರಾ! ನಮ್ಮ ನಿರ್ಭಾಗ್ಯ ಪ್ರಜೆಗಳ ಜೀವರಕ್ತವನ್ನು ಹೀರುವ ಭಯಂಕರ ಜಿಗುಣೆಗಳಾ! ಹಿಡಿದು ಕಿತ್ತು ತಿನ್ನುವ ಹೊಟ್ಟೆಬಾಕ ಕಿರುಬಗಳಾ! ಓ ನಾರುವ ನರಿಗಳಾ! ಸದಾಕಾಲವೂ ನೀವು ಅಭಿವೃದ್ಧಿಸ್ಥಿತಿಯಲ್ಲಿರಲಾರಿರಿ! ಜನ ಕೂಡ ಸದಾ ಸಂಕಟದಲ್ಲಿ ಸಿಕ್ಕಿರ ಲಾರರು! ಓ ದುಬಾರಿ ಬಡ್ಡಿಯ ಜಾಫರ್, ನೀನು ಬಡವರನ್ನು ಗೋಳು

ಹುಯ್ದುಕೊಂಡಿರುವುದಕ್ಕೆ ಬದಲಾಗಿ ನಾನು ನಿನಗೆ ಮುಯ್ಯಿ ತೀರಿಸದಿದ್ದರೆ, ನನ್ನ ಹೆಸರಿಗೆ ಶಾಶ್ವತ ಕಳಂಕ ಕವಿದುಕೊಳ್ಳಲಿ!" ಎಂದು ಗೊಣಗಿಕೊಳ್ಳುತ್ತಿದ್ದನು.

೭

ಖೋಜಾ ನಸ್ರೆದ್ದೀನನು ಜೀವನದಲ್ಲಿ ಅಪಾರ ಕಷ್ಟಸುಖಗಳನ್ನು ಅನುಭವಿಸಿ ಕಂಡಿದ್ದನು. ಅಂಥವನಿಗೂ ಕೂಡ ತನ್ನ ಹುಟ್ಟೂರಿನಲ್ಲಿ ಕಳೆದ ಆ ಮೊದಲನೆಯ ದಿನ ಅನೇಕಾನೇಕ ವಿಚಿತ್ರ ಘಟನೆಗಳಿಂದ ಕೂಡಿ ತಡೆಯಲಾರದಷ್ಟು ತಳಮಳಕ್ಕೆ ಕಾರಣವಾಗಿತ್ತು. ಅವನು ಬಹಳ ಬಳಲಿದ್ದನು; ಎಲ್ಲಾದರೊಂದು ಏಕಾಂತ ಸ್ಥಳದಲ್ಲಿ ಸ್ವಲ್ಪ ವಿಶ್ರಮಿಸಿಕೊಳ್ಳಬೇಕೆಂದು ಅಂಥ ಸ್ಥಳವನ್ನು ಹುಡುಕುತ್ತಿದ್ದನು.

ಒಂದು ಕೊಳದ ಸುತ್ತಲೂ ಹಲವು ಜನರು ಗುಂಪುಗೂಡಿರುವುದನ್ನು ಕಂಡು, "ಇಲ್ಲ! ನನಗೆ ವಿಶ್ರಾಂತಿಯಿಲ್ಲ!" ಎಂದು ಅವನು ಗೊಣಗಿಕೊಂಡನು. "ಇವತ್ತು ನನಗೆ ಖಂಡಿತ ವಿಶ್ರಾಂತಿ ಸಿಕ್ಕುವುದೇ ಇಲ್ಲವೆಂದು ಕಾಣುತ್ತದೆ. ಇಲ್ಲಿ ಏನೋ ನಡೆದಿರಬೇಕು" ಎಂದುಕೊಂಡನು.

ಆ ಕೊಳ ರಸ್ತೆಗೆ ಸ್ವಲ್ಪ ದೂರದಲ್ಲೇ ಇತ್ತು. ಖೋಜಾ ನಸ್ರೆದ್ದೀನ್ ಅದನ್ನು ಸುಲಭವಾಗಿ ದಾಟಿಹೋಗಬಹುದಾಗಿತ್ತು. ಆದರೆ, ಜಗಳ, ಹೊಡೆದಾಟ, ವಾದವಿವಾದಗಳಲ್ಲಿ ಭಾಗವಹಿಸುವ ಅವಕಾಶವನ್ನು ಕಳೆದುಕೊಳ್ಳುವ ಸ್ವಭಾವ ಅವನದಲ್ಲ.

ಕತ್ತೆ, ಅವನ ಸಹವಾಸದಲ್ಲಿ ಬಹುಕಾಲ ಇದ್ದದ್ದು, ತನ್ನ ಯಜಮಾನನ ನಡೆವಳಿಯ ಮಾರ್ಗಗಳನ್ನು ಚೆನ್ನಾಗಿ ಅರಿತುಕೊಂಡಿತ್ತು. ಅದು ಈಗ ತಾನಾಗಿಯೇ ಕೊಳದ ಕಡೆ ತಿರುಗಿತು.

ಖೋಜಾ ನಸ್ರೆದ್ದೀನ್ ಕತ್ತೆಯನ್ನು ಗುಂಪಿನ ದಟ್ಟ ಭಾಗದೊಳಕ್ಕೆ ನುಗ್ಗಿಸುತ್ತಾ, "ಏನು ವಿಷಯ? ಯಾರಾದರೂ ಕೊಲೆಯಾಗಿದ್ದಾರೋ? ಯಾರನ್ನಾದರೂ ಸೂರೆಗಾರರು ದೋಚಿಕೊಂಡು ಹೋಗಿದ್ದಾರೋ ಏನೋ? ದಾರಿ ಬಿಡಿ, ದಾರಿ ಬಿಡಿ!" ಎಂದು ಗಟ್ಟಿಯಾಗಿ ಕೂಗಿದನು.

ಗುಂಪಿನಲ್ಲಿ ತಳ್ಳಿಕೊಂಡು ಮುಂದೆ ನುಗ್ಗಿ ಕೊಳದ ಅಂಚಿನ ವರೆಗೂ

ಹೋದನು. ಕೊಳದ ಮೇಲ್ಭಾಗದಲ್ಲಿ ಹಸುರು ಲೋಳೆ ಮುಚ್ಚಿಕೊಂಡಿತ್ತು. ಅಲ್ಲೊಂದು ಅಸಾಧಾರಣ ನೋಟ ಕಣ್ಣಿಗೆ ಬಿತ್ತು. ದಡದಿಂದ ಕೆಲವೇ ಅಡಿಗಳ ದೂರದಲ್ಲಿ ಒಬ್ಬ ಮನುಷ್ಯ ಮುಳುಗುತ್ತಿದ್ದನು. ಸ್ವಲ್ಪ ಸ್ವಲ್ಪ ಹೊತ್ತು ತಡೆದು ತಡೆದು ಮತ್ತೆ ಮತ್ತೆ ಅವನು ನೀರ ಮೇಲಕ್ಕೆ ಬರುತ್ತಿದ್ದನು; ಒಡನೆಯೇ ಮುಳುಗುತ್ತಿದ್ದನು; ಮುಳುಗಿದ ಮೇಲೆ ಆ ಬಳಿ ದೊಡ್ಡ ದೊಡ್ಡ ಗುಳ್ಳೆಗಳೇಳುತ್ತಿದ್ದವು.

ದಡದ ಮೇಲೆ ಹಲವು ಜನ ಗಡಿಬಿಡಿಮಾಡಿಕೊಂಡು ಓಡಾಡುತ್ತಿದ್ದರು; ಮುಳುಗುತ್ತಿರುವವನ ಕಡೆಗೆ ಕೈಚಾಚಿ ಅವನ ಬಟ್ಟೆ ಹಿಡಿದೆತ್ತಬೇಕೆಂದು ಪ್ರಯತ್ನಿಸುತ್ತಿದ್ದರು. ಆದರೆ ಅವನು ಕೈಯೆಟುಕುವುದಕ್ಕಿಂತ ಸ್ವಲ್ಪವೇ ಸ್ವಲ್ಪ ಆಚೆಯಿದ್ದನು.

"ನಿನ್ನ ಕೈ ಕೊಡು, ನಮಗೆ! ಇಲ್ಲಿ, ಇಲ್ಲಿ ಕೊಡು ಕೈ!" ಎಂದು ಅವರು ಕೂಗುತ್ತಿದ್ದರು.

ಅವರು ಹೇಳುತ್ತಿದ್ದದ್ದು ಮುಳುಗುತ್ತಿದ್ದಾತನಗೆ ಕೇಳಿಸಲಿಲ್ಲವೆಂದು ತೋರುತ್ತದೆ. ಅವನು ತನ್ನ ಕೈ ನೀಡಲಿಲ್ಲ. ಆದರೆ ಮತ್ತೆ ಮತ್ತೆ ಬುಡಕ್ಕನೆ ಮೇಲೆ ಬರುತ್ತಲೂ ತಳಕ್ಕಿಳಿಯುತ್ತಲೂ ಇದ್ದನು. ಅವನು ತಳಕ್ಕಿಳಿದ ಕೂಡಲೆ ಕೊಳದ ಮೇಲೆ ಸಣ್ಣ ಅಲೆಗಳು ನಿದಾನವಾಗಿ ಹರಡಿ ದಡವನ್ನು ಮೆಲ್ಲಗೆ ತಟ್ಟುತ್ತಿದ್ದವು.

"ಇದೇನು ವಿಚಿತ್ರ!" ಎನ್ನಿಸಿತು ಖೋಜಾ ನಸ್ರದ್ದೀನನಿಗೆ. ಅದನ್ನೆಲ್ಲಾ ಗಮನಿಸಿ ನೋಡಿ, "ಇದು ಬಹಳ ವಿಚಿತ್ರವಾಗಿದೆ. ಇದಕ್ಕೇನು ಕಾರಣವಿರಬಹುದು? ಅದೇಕೆ ಅವನು ಕೈ ನೀಡುವುದಿಲ್ಲ? ಅವನೊಬ್ಬ ಚತುರ ನೀರ್ಮುಳುಕನೇ ಆಗಿರಬಹುದು; ಯಾವುದೋ ಒಂದು ಪಣ ಗೆಲ್ಲುವುದಕ್ಕಾಗಿ ಹೀಗೆ ಮುಳುಗುತ್ತಿರಬಹುದು! ಹಾಗಿದ್ದ ಪಕ್ಷದಲ್ಲಿ ಖಿಲತ್ತು ತೊಟ್ಟುಕೊಂಡೇ ಇರುವುದೇಕೆ?" ಎಂದು ಯೋಚಿಸುತ್ತಿದ್ದನು.

ಹಾಗೇಕೆ ನಡೆಯುತ್ತಿರಬಹುದೆಂದು ಬಗೆಬಗೆಯಾಗಿ ಊಹಿಸುವುದರಲ್ಲೇ ಅವನು ಮೈಮರೆತನು. ಅಷ್ಟರಲ್ಲಿ ಮುಳುಗುವ ಮನುಷ್ಯ ಕನಿಷ್ಠ ಪಕ್ಷ ನಾಲ್ಕು ಸಲ ನೀರೊಳಗಿಳಿದಿದ್ದನು; ಪ್ರತಿ ಸಲ ಮುಳುಗಿದಾಗಲೂ ಹಿಂದಿನ ಸಲಕ್ಕಿಂತ ಹೆಚ್ಚು ಹೊತ್ತು ನೀರೊಳಗಿರುತ್ತಿದ್ದನು.

"ಬಹು ವಿಚಿತ್ರ!" ಎಂದುಕೊಂಡು ಖೋಜಾ ನಸ್ರೆದ್ದೀನ್ ಕತ್ತೆಯಿಂದಿಳಿದನು. "ಇಲ್ಲೇ ಇರು. ನಾನು ಸ್ವಲ್ಪ ಹತ್ತಿರ ಹೋಗಿ ನೋಡುತ್ತೇನೆ" ಎಂದು ತನ್ನ ಕತ್ತೆಗೆ ಹೇಳಿದನು.

ಇಷ್ಟರಲ್ಲಿ ಆ ಮನುಷ್ಯ ಮತ್ತೆ ಕೆಳಕ್ಕೆ ಹೋಗಿದ್ದನು. ಈ ಸಲ ಅವನು ಬಹಳ ಹೊತ್ತು ಮೇಲಕ್ಕೆ ಬರಲೇ ಇಲ್ಲ; ಇದನ್ನು ಕಂಡು ದಡದ ಮೇಲಿದ್ದವರಲ್ಲಿ ಕೆಲವರು ಸತ್ತವರಿಗೋಸ್ಕರ ಹೇಳುವ ಪ್ರಾರ್ಥನೆಗಳನ್ನು ಹೇಳತೊಡಗಿದರು. ತಟಕ್ಕನೆ ಅವನು ಮೇಲಕ್ಕೆ ಬಂದ.

"ಇಲ್ಲಿ! ಇಲ್ಲಿ! ಕೊಡು ನಿನ್ನ ಕೈ!" ಎಂದು ಕೂಗಿದರು ಜನ. ಮತ್ತೆ ಅವನ ಕಡೆಗೆ ಕೈನೀಡಿದರು. ಆದರೆ ಅವನು ಅವರನ್ನು ಸುಮ್ಮನೆ ದುರುಗುಟ್ಟಿ ನೋಡಿ ಸದ್ದಿಲ್ಲದೆ ಮತ್ತೆ ತಳಕ್ಕೆ ಮುಳುಗಿದನು.

"ಅಯ್ಯೋ, ದಡ್ಡರಾ! ನಿಮಗಿಷ್ಟೂ ಗೊತ್ತಾಗಲಿಲ್ಲವೆ? ಅವನ ಬೆಲೆಬಾಳುವ ಖಲತ್ತನ್ನೂ ರೇಷ್ಮೆ ರುಮಾಲನ್ನೂ ನೋಡಿದರೆ, ಈ ಮನುಷ್ಯ ಒಬ್ಬ ಮುಲ್ಲನೋ ಇಲ್ಲವೆ ಸಿರಿವಂತನಾದ ದೊಡ್ಡ ಅಧಿಕಾರಿಯೋ ಆಗಿರಬೇಕೆಂದು ಹೊಳೆಯುವುದಿಲ್ಲವೆ? ಮುಲ್ಲಗಳನ್ನೂ ಮತ್ತು ಅಧಿಕಾರಿಗಳನ್ನೂ ನೀರಿನಿಂದ ಎತ್ತುವುದು ಹೇಗೆಂದು ತಿಳಿದುಕೊಳ್ಳುವಷ್ಟು ಮಟ್ಟಿಗೆ ನೀವು ಅವರ ನಡೆವಳಿಕೆಯ ರೀತಿಯನ್ನು ಅರ್ಥಮಾಡಿಕೊಂಡಿಲ್ಲವೆಂದು ಕಾಣುತ್ತದೆ" ಎಂದು ಖೋಜಾ ನಸ್ರೆದ್ದೀನ್ ಕೂಗಾಡಿದನು.

"ನೀನೇ ಅವನನ್ನೆತ್ತಿಹಾಕು! ಬೇಗ, ನಿನಗೆ ಅದು ಗೊತ್ತಿರುವಹಾಗಿದ್ದರೆ ಬೇಗ ಎತ್ತಿಹಾಕು" ಎಂದು ಗುಂಪಿನವರು ಕೂಗಿದರು. "ಹೋಗು, ನಡಿ; ಅವನನ್ನು ಬದುಕಿಸು! ಮತ್ತೆ ಮೇಲಕ್ಕೆ ಬಂದಿದ್ದಾನೆ! ಹೋಗು, ಅವನನ್ನೆತ್ತಿ ದಡಕ್ಕೆ ಹಾಕು!" ಎಂದು ಹಲವರು ದನಿಗೂಡಿಸಿದರು.

"ಸ್ವಲ್ಪ ತಡೆಯಿರಿ!" ಎಂದನು ಖೋಜಾ ನಸ್ರೆದ್ದೀನ್ ಆ ಕೇಳಿಕೆಗಳಿಗೆ ಉತ್ತರವಾಗಿ. "ತಡೆಯಿರಿ, ನನ್ನ ಭಾಷಣವನ್ನಿನ್ನೂ ಮುಗಿಸಿಲ್ಲ. ನಿಮ್ಮನ್ನೊಂದು ಪ್ರಶ್ನೆ ಕೇಳಲೊ? ಮುಲ್ಲನಾಗಲಿ ಅಧಿಕಾರಿಯಾಗಲಿ ಯಾರಿಗಾದರೂ ಏನನ್ನಾದರೂ ಕೊಟ್ಟಿರುವುದನ್ನು ಎಂದಾದರೂ ನೀವು ಕಂಡಿದ್ದೀರಾ? ಚೆನ್ನಾಗಿ ನೆನಪಿಟ್ಟುಕೊಳ್ಳಿ, ಓ ಮೂಢಮತಿಗಳಾ ಚೆನ್ನಾಗಿ ನೆನಪಿಟ್ಟುಕೊಳ್ಳಿ: ಮುಲ್ಲರೂ ಅಧಿಕಾರಿಗಳೂ ಯಾರಿಗೂ ಎಂದೆಂದೂ ಏನೊಂದನ್ನೂ ಕೊಡುವು

ದಿಲ್ಲ ; ಖಂಡಿತ ಕೊಡುವುದಿಲ್ಲ ; ಅವರು ತೆಗೆದುಕೊಳ್ಳುವವರೇ ಹೊರತು ಕೊಡುವವರಲ್ಲ. ಆದ್ದರಿಂದ ಅವರನ್ನು ಶಾಸ್ತ್ರೀಯವಾಗಿ, ಎಂದರೆ ಅವರ ವಿಶಿಷ್ಟ ಸ್ವಭಾವಕ್ಕನುಸಾರವಾಗಿ, ಎತ್ತಿ ಬದುಕಿಸಬೇಕು. ನೋಡುತ್ತೀರಿ, ಈಗ, ನನ್ನನ್ನು" ಎಂದು ಮಾತು ಮುಗಿಸಿದನು.

"ಆದರೆ ಕಾಲ ಮೀರಿಹೋಯಿತು! ಇನ್ನು ಅವನು ಮೇಲೆ ಬರುವುದಿಲ್ಲ" ಎಂದವು ಗುಂಪಿನಲ್ಲಿ ಕೆಲವು ದನಿಗಳು.

"ನಿಮಗೇನು ಗೊತ್ತು? ಮುಲ್ಲನನ್ನಾಗಲಿ ಅಧಿಕಾರಿಯನ್ನಾಗಲಿ ನೀರಿನ ಅಭಿಮಾನಿದೇವತೆಗಳು ಅಷ್ಟು ಸುಲಭವಾಗಿ ಒಪ್ಪಿಕೊಂಡು ಜೊತೆ ಸೇರಿಸಿಕೊಳ್ಳುತ್ತವೆಯೆ? ನಿಮಗೆ ತಿಳಿಯದು. ಅವನನ್ನು ಹೊರದೂಡುವುದಕ್ಕೆ ತಮ್ಮ ಕೈಲಾದಷ್ಟೂ ಪ್ರಯತ್ನ ಮಾಡುತ್ತವೆ ಅವು."

ಖೋಜಾ ನಸ್ರೆದ್ದೀನ್ ಚಕ್ಕಳಮಕ್ಕಳು ಹಾಕಿಕೊಂಡು ಕೂತು ಸಮಾಧಾನದಿಂದ ಕಾಯುತ್ತಿದ್ದನು. ಗುಳ್ಳೆಗಳು ತಳದಿಂದ ಮೇಲೆ ಬಂದು, ಸುಳಿಗಾಳಿಯಲ್ಲಿ ತೇಲಿ ದಡ ಮುಟ್ಟುವುದನ್ನೇ ನೋಡುತ್ತಿದ್ದನು.

ಕಟ್ಟಕಡೆಗೆ ಒಂದು ಆಕಾರ ಕೆಳಗಿನಿಂದ ಮೇಲಕ್ಕೇರಿತು. ಮುಳುಗುತ್ತಿರುವ ಆ ಮನುಷ್ಯ ನೀರಿನ ಮೇಲುಗಡೆ ಮತ್ತೊಂದು ಸಲ ಕಾಣಿಸಿಕೊಂಡನು. ಖೋಜಾ ನಸ್ರೆದ್ದೀನ್ ಇಲ್ಲದೆ ಹೋಗಿದ್ದರೆ, ಅದೇ ಕಟ್ಟಕಡೆಯ ಸಲವಾಗುತ್ತಿತ್ತು.

"ಇಗೋ, ಇಲ್ಲಿ! ತೆಗೆದುಕೋ ಇದನ್ನ! ತೆಗೆದುಕೊ!" ಎಂದು ಖೋಜಾ ನಸ್ರೆದ್ದೀನ್ ಗಟ್ಟಿಯಾಗಿ ಕೂಗಿದನು.

ಕೂಗಿ ಕೈಚಾಚಿದನು. ಚಾಚಿದ ಕೈಯನ್ನು ಮುಳುಗುತ್ತಿದ್ದಾತ ಹಿಡಿದುಕೊಂಡನು. ಅವನ ಕೈ ಅದುರುವಾಯು ಬಂದಂತೆ ರಭಸದಿಂದ ಕಂಪಿಸಿತು. ಆ ಕೈಹಿಡಿತಕ್ಕೆ ಸಿಕ್ಕಿ ನಸ್ರೆದ್ದೀನ್ ಬೆಚ್ಚಿದನು.

ದಡಕ್ಕೆ ಎಳೆದುಹಾಕಿದ ಮೇಲೆ ಅವನ ಕೈಬೆರಳುಗಳನ್ನು ಬಿಚ್ಚಿ ಬಿಡಿಸುವುದಕ್ಕೆ ಬಹಳ ಹೊತ್ತು ಹಿಡಿಯಿತು.

ಸ್ವಲ್ಪ ಹೊತ್ತು ಅವನು ಅಲುಗದೆ ಬಿದ್ದಿದ್ದನು ; ಕಡ್ಡಿಕಸಗಳೂ ದುರ್ವಾಸನೆಯ ಲೋಳೆಯೂ ಮೈಮೇಲೆಲ್ಲ ಆವರಿಸಿಕೊಂಡು ಅವನ ಮುಖಲಕ್ಷಣವನ್ನು ಮರೆಮಾಡಿದ್ದವು. ಅವನ ಬಾಯಿ ಮೂಗು ಕಿವಿಗಳಿಂದ ನೀರು ಸುರಿಯುತ್ತಿತ್ತು.

ಸ್ವಲ್ಪ ಚೈತನ್ಯ ಬಂದ ಕೂಡಲೆ, "ಚೀಲ, ಚೀಲ! ಎಲ್ಲಿದೆ ನನ್ನ ಚೀಲ?" ಎಂದು ನರಳತೊಡಗಿದನು; ತನ್ನ ಪಕ್ಕಜೇಬಿನಲ್ಲಿ ಆ ಚೀಲವಿರುವುದನ್ನು ಮುಟ್ಟಿ ನೋಡಿಕೊಳ್ಳುವ ವರೆಗೂ ಹಾಗೆ ನರಳುತ್ತಲೇ ಇದ್ದನು. ಆ ಮೇಲೆ ಅವನು ಮೆಲ್ಲನೆ ಮೈಮೇಲಿನ ಕಸಕಡ್ಡಿಗಳನ್ನು ಒತ್ತಲಿಸಿ, ತನ್ನ ಖಲತ್ತಿನ ಅಂಚಿನಿಂದ ಮುಖ ಒರಸಿಕೊಂಡನು. ಕಂಡು ಖೋಜಾ ನಸ್ರೆದ್ದೀನ್ ಜುಗುಪ್ಸೆಯಿಂದ ಹಾರಿ ಹಿಮ್ಮೆಟ್ಟಿದನು. ಚಪ್ಪಟೆಯಾದ ಮುರುಕು ಮೂಗು, ಉರಿಯುಗುಳುವ ಮೂಗಿನ ಹೊಳ್ಳೆಗಳು, ಒಂದು ಕುರುಡುಗಣ್ಣು—ಮುಖ ವಿಕಾರವಾಗಿತ್ತು, ಭಯಂಕರವಾಗಿತ್ತು. ಇಷ್ಟರ ಜೊತೆಗೆ ಅವನಿಗೆ ಗೂನುಬೆನ್ನು ಬೇರೆ.

ಅವನು ಕಣ್ಣುಬಿಟ್ಟು ಸುತ್ತ ತಿರುಗಿ ನೋಡಿದನು. ತನ್ನ ಒಂಟಿಗಣ್ಣಿನಿಂದಲೆ ಸುತ್ತ ನೆರೆದ ಗುಂಪನ್ನು ನೋಡುತ್ತಾ, "ನನ್ನನ್ನು ಬದುಕಿಸಿದವರು ಯಾರು?" ಎಂದು ಕಿರುಕಲು ದನಿಯಲ್ಲಿ ಕೇಳಿದನು.

"ಇಗೋ, ಇಲ್ಲಿದ್ದಾನೆ!" ಎಂದು ಗುಂಪಿಗೆ ಗುಂಪೇ ಒಕ್ಕೊರಲಿನಿಂದ ಕೂಗಿತು. ಖೋಜಾ ನಸ್ರೆದ್ದೀನನನ್ನು ಮುಂದಕ್ಕೆ ನೂಕಿದರು.

"ಬಾ, ಇಲ್ಲಿ. ನಿನಗೆ ಬಹುಮಾನ ಕೊಡುತ್ತೇನೆ" ಎಂದ ಆ ಮನುಷ್ಯ. ನೆನೆದು ತೊಪ್ಪೆಯಾದ ಚೀಲದೊಳಕ್ಕೆ ಕೈಹಾಕಿ ಒಂದು ಹಿಡಿ ಬೆಳ್ಳಿಯ ನಾಣ್ಯಗಳನ್ನು ಹೊರಕ್ಕೆ ತೆಗೆದನು. "ನೀನು ನನ್ನನ್ನು ದಡಕ್ಕೆ ಎಳೆದು ಹಾಕಿದ್ದರಲ್ಲಿ ಆಶ್ಚರ್ಯವಾಗಲಿ ವಿಶೇಷವಾಗಲಿ ಏನೂ ಇಲ್ಲ. ಅದೇನು ಅಂಥ ಮಹತ್ವ ವಿಷಯವಲ್ಲ. ನಾನೇ ಹೊರಕ್ಕೆ ಬಂದುಬಿಡಬಹುದಾಗಿತ್ತು" ಎಂದು ಗೊಣಗಿದನು.

ಅವನು ಹೀಗನ್ನುತ್ತಿದ್ದಾಗ, ನಿಶ್ಶಕ್ತಿಯಿಂದಲೋ ಅಥವಾ ಬೇರೆ ಯಾವುದಾದರೂ ಕಾರಣದಿಂದಲೋ, ಅವನ ಮುಷ್ಟಿ ನಿಧಾನವಾಗಿ ಬಿಚ್ಚಿಕೊಂಡಿತು; ನಾಣ್ಯಗಳು ಬೆರಳ ಸಂದಿಯಿಂದ ಝಣಝಣನೆ ಸದ್ದಾಗುವಂತೆ ಮತ್ತೆ ಚೀಲದೊಳಕ್ಕೆ ಬಿದ್ದವು. ಅವನ ಕೈಯೊಳಗೆ ಒಂದೇ ಒಂದು ನಾಣ್ಯ—ಅರ್ಧ ಟಂಗ—ಉಳಿದುಕೊಂಡಿತು. ಆಳವಾಗಿ ಉಸುರು ಬಿಡುತ್ತಾ ಅದನ್ನು ಖೋಜಾ ನಸ್ರೆದ್ದೀನನಿಗೆ ಕೊಡಹೋದನು.

"ಇಗೋ, ಈ ಹಣ ತೆಗೆದುಕೊ. ಹೋಗಿ, ಬಜಾರಿನಲ್ಲಿ ಒಂದು ಬೋಗುಣಿ ಪಲಾವು ಕೊಂಡುಕೊ."

"ಒಂದು ಬೋಗುಣಿ ಪಲಾವು ಕೊಳ್ಳುವುದಕ್ಕೆ ಇದು ಸಾಲುವುದಿಲ್ಲ" ಎಂದನು ಖೋಜಾ ನಸ್ರೆದ್ದೀನ್.

"ಪರವಾ ಇಲ್ಲ. ಮಾಂಸವಿಲ್ಲದ ಅನ್ನ ಕೊಂಡುಕೊ."

ಖೋಜಾ ನಸ್ರೆದ್ದೀನ್ ಸುತ್ತ ನೆರೆದಿದ್ದವರನ್ನು ಕುರಿತು, "ಈಗ ನೋಡಿ ಇಲ್ಲಿ, ನಾನಿವನನ್ನು ನಿಜವಾಗಿಯೂ ಶಾಸ್ತ್ರೀಯವಾದ ರೀತಿಯಲ್ಲಿ ಬದುಕಿಸಿದ್ದೇನೆ" ಎಂದನು.

ಹೀಗೆಂದು ನುಡಿದು ನೆಟ್ಟಗೆ ತನ್ನ ಕತ್ತೆಯ ಬಳಿಗೆ ಹೋದನು.

ದಾರಿಯಲ್ಲಿ ಒಬ್ಬಾತ ಅವನನ್ನು ತಡೆದು ನಿಲ್ಲಿಸಿದನು. ಅವನು ಎತ್ತರವಾಗಿ, ತೆಳ್ಳಗೆ ಆದರೆ ಗಟ್ಟಿಮುಟ್ಟಾಗಿದ್ದನು; ಮುಖ ಗಂಟುಹಾಕಿಕೊಂಡಿದ್ದನು; ಸ್ನೇಹವಿರೋಧದ ಮುಖಲಕ್ಷಣ ತೋರುತ್ತಿತ್ತು. ಅವನ ತೋಳುಗಳು ಮಸಿ ಇದ್ದಲುಗಳಿಂದ ಕಪ್ಪಾಗಿದ್ದವು; ಅವನ ನಡುಕಟ್ಟಿನಿಂದ ಕಮ್ಮಾರನ ಸುತ್ತಿಗೆ ತೂಗಾಡುತ್ತಿತ್ತು.

"ಅದೇನಯ್ಯಾ, ಕಮ್ಮಾರಾ?" ಎಂದು ಕೇಳಿದನು ನಸ್ರೆದ್ದೀನ್.

ಕಮ್ಮಾರನು ಅವನನ್ನು ಅಸಮಾಧಾನ ದೃಷ್ಟಿಯಿಂದ ಕೆಳಕ್ಕೂ ಮೇಲಕ್ಕೂ ತೂಗಿ ನೋಡುತ್ತ ಹೀಗೆಂದನು: "ನೋಡಿಲ್ಲಿ, ನೀನು ಬದುಕಿಸಿದವನು ಎಂಥ ಮನುಷ್ಯನೆಂದು ಗೊತ್ತೋ, ನಿನಗೆ? ಅದರಲ್ಲೂ, ಕೊನೆ ಗಳಿಗೆಯಲ್ಲಿ? ಒಂದು ಕ್ಷಣ ಕಳೆದಮೇಲೆ ಯಾವನೂ ಅವನನ್ನು ಬದುಕಿಸಲಾಗುತ್ತಿರಲಿಲ್ಲ—ಅಂಥ ಸಮಯದಲ್ಲಿ ನೀನು ಬದುಕಿಸಿಬಿಟ್ಟೆಯಲ್ಲಾ! ನೀನು ಮಾಡಿದ ಈ ಕೆಲಸದ ಫಲವಾಗಿ ಎಷ್ಟೊಂದು ಮಂದಿ ಕಣ್ಣೀರು ಸುರಿಸುತ್ತಾರೆ, ಬಲ್ಲೆಯಾ? ಎಷ್ಟು ಜನ ತಮ್ಮ ಮನೆ ಕಳೆದುಕೊಳ್ಳುತ್ತಾರೆ, ಎಷ್ಟು ಜನ ತಮ್ಮ ಹೊಲಗದ್ದೆ ದ್ರಾಕ್ಷೆ ತೋಟಗಳನ್ನು ಕಳೆದುಕೊಳ್ಳುತ್ತಾರೆ; ಅಥವಾ ಎಷ್ಟು ಜನ 'ಗುಲಾಮರ ಮಾರುಕಟ್ಟೆ'ಗೆ ಸಾಗಿಹೋಗುತ್ತಾರೆ ಮತ್ತು ಅಲ್ಲಿಂದ ಭಾರವಾದ ಸರಪಣಿ ಬಿಗಿಸಿಕೊಂಡು ಖೀವಾ ರಸ್ತೆಯಲ್ಲಿ ಕಾಲೆಳೆದುಕೊಂಡು ಹೋಗಬೇಕಾಗಿ ಬರುತ್ತದೆ—ಎಂದೇನಾದರೂ ಗೊತ್ತಿದೆಯೇ ನಿನಗೆ?"

ಖೋಜಾ ನಸ್ರೆದ್ದೀನ್ ಬೆರಗಾಗಿ ಅವನ ಮುಖವನ್ನೇ ದುರುಗುಟ್ಟಿ ನೋಡತೊಡಗಿದನು.

"ಕಮ್ಮಾರಾ, ನಿನ್ನ ಮಾತು ನನಗೆ ಅರ್ಥವಾಗುವುದಿಲ್ಲ. ಯಾವ

ನಾದರೂ ಒಬ್ಬ ಮುಳುಗುತ್ತಿದ್ದರೆ, ಅವನಿಗೆ ಸಹಾಯಮಾಡದೆ, ನೋಡ ನೋಡುತ್ತಾ ಹಾಗೆಯೇ ಹೋಗುವುದು ಮನುಷ್ಯನಾದವನಿಗೆ, ಅದರಲ್ಲೂ ಮುಸ್ಲಿಮನಿಗೆ, ಯೋಗ್ಯವೆ ? "

" ಹಾಗಾದರೆ, ಎಲ್ಲ ವಿಷಸರ್ಪಗಳನ್ನೂ, ಎಲ್ಲಾ ಕಿರುಬಗಳನ್ನೂ, ಬದುಕಿಸಬೇಕು, ಎಂದಲ್ಲವೆ ನೀನು ಹೇಳುವುದು ? " ಎಂದು ಕಿರಿಚಿದನು ಆ ಕಮ್ಮಾರ. ಆ ಮೇಲೆ ಅವನಿಗೆ ಏನೋ ಹೊಳೆಯಿತು. " ಆದರೆ, ನೀನು ಈ ಸ್ಥಳದವನೆ ? " ಎಂದು ಕೇಳಿದನು.

" ಅಲ್ಲ. ನಾನು ಬಹು ದೂರದಿಂದ ಬಂದಿದ್ದೇನೆ."

" ಹಾಗಾದರೆ ನಿನಗೆ ಗೊತ್ತಿಲ್ಲ; ನೀನು ಎಂಥವನನ್ನು ಬದುಕಿಸಿದ್ದೀಯೆ ಎಂದು. ಅವನು ಶುದ್ಧ ಕೇಡಿಗ; ಜನರ ರಕ್ತ ಹೀರುವ ನೀಚ. ಈ ಬುಖಾರದಲ್ಲಿರುವ ಜನರಲ್ಲಿ ಪ್ರತಿ ಮೂರು ಮಂದಿಯಲ್ಲಿಯೂ ಒಬ್ಬೊಬ್ಬನು ಇವನಿಂದ ನರಳುತ್ತಿದ್ದಾನೆ; ಗೋಳಾಡುತ್ತಿದ್ದಾನೆ. ಗೊತ್ತೇ ? "

ಖೋಜಾ ನಸ್ರೆದ್ದೀನನ ಮನಸ್ಸಿನಲ್ಲಿ ಒಂದು ಭಯಂಕರ ಯೋಚನೆ ಮಿಂಚಿತು.

" ಕಮ್ಮಾರಾ, ಹೇಳು, ಇವನ ಹೆಸರೇನು ? ಹೇಳು ? " ಎಂದು ಕೇಳಿದನು. ತನ್ನ ಊಹೆ ಎಲ್ಲಿ ನಿಜವಾದೀತೋ ಎಂದು ಹೆದರಿ ಹಿಂಜರಿಯುತ್ತಲೇ ನಡುಗುದನಿಯಿಂದ ಪ್ರಶ್ನೆಮಾಡಿದನು.

" ನೀನು ದುಬಾರಿ ಬಡ್ಡಿಯ ಜಾಫರನನ್ನು ಬದುಕಿಸಿದ್ದೀಯ. ಅವನು ಹಾಳಾಗ ! ಈ ಜನ್ಮದಲ್ಲೂ ಮುಂದಿನ ಜನ್ಮದಲ್ಲೂ ಅವನು ಹಾಳಾಗಿಹೋಗ ! ಹದಿನಾಲ್ಕು ತಲೆಯ ವರೆಗೂ ಅವನ ಸಂತಾನಕ್ಕೆ ಹುಣ್ಣು ಹತ್ತಿ ಕೀವು ಸೋರಿ ಗೋಳುಗುಟ್ಟಿಸ ! " ಎಂದು ಉತ್ತರ ಹೇಳಿ ಶಪಿಸತೊಡಗಿದನು.

ಖೋಜಾ ನಸ್ರೆದ್ದೀನ್ ನುಡಿದನು :

" ಏನು ? ಏನಂದೆ ? ಕಮ್ಮಾರಾ, ನೀನು ಹೇಳುತ್ತಿರುವುದಾದರೂ ಏನು ? ಅಯ್ಯೋ ! ಅಯ್ಯೋ ! ಅಯ್ಯೋ ! ಎಂಥ ನಾಚಿಕೆಗೇಡಿನ ಕೆಲಸ ಮಾಡಿದೆ, ನಾನು ! ಈ ನನ್ನ ಕೈಗಳೆರಡೂ ಈ ಹಾವನ್ನು ನೀರಿನಿಂದೆತ್ತಿ ಬದುಕಿಸಿದವೆ ? ನಿಜವಾಗಿಯೂ ಇಂಥ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲ ! ಅಯ್ಯೋ ! ಎಂಥ ನಾಚಿಕೆಗೇಡು ! ಎಂಥ ಭಯಂಕರ ಅಪಾಯ ! "

ಅವನ ದುಃಖ ಕಮ್ಮಾರನ ಮನಸ್ಸು ಮುಟ್ಟಿತು. ಅವನು ಸ್ವಲ್ಪ ತಗ್ಗಿದನು.

"ಸಮಾಧಾನ ಮಾಡಿಕೋ, ಪ್ರಯಾಣಿಕಾ! ಈ ವಿಷಯದಲ್ಲಿ ಈಗ ಏನೂ ಮಾಡುವ ಹಾಗಿಲ್ಲ. ಆ ಸಮಯಕ್ಕೆ ಸರಿಯಾಗಿ ನೀನೇಕೆ ಕೊಳದ ಬಳಿ ಬಂದೆ? ನಿನ್ನ ಕತ್ತೆ ದಾರಿಯಲ್ಲಿ ಅದೇಕೆ ಥಟ್ಟನೆ ಹಿಂದಿರುಗ ಲಿಲ್ಲವೋ! ಅದೇಕೆ ತಡಮಾಡಲಿಲ್ಲವೋ! ಹಾಗಾಗಿದ್ದರೆ, ದುಬಾರಿ ಬಡ್ಡಿ ಗಾರನಿಗೆ ಮುಳುಗಿ ಸಾಯಲು ತಕ್ಕಷ್ಟು ಸಮಯವಿರುತ್ತಿತ್ತು."

"ಕತ್ತೆಯೋ! ಅದು ರಸ್ತೆಯಲ್ಲಿ ನಿಂತು ತಡ ಮಾಡುವುದಾದರೆ, ನನ್ನ ಜೇನು ಚೀಲಗಳಿಂದ ಹಣ ಖಾಲಿ ಮಾಡುವುದಕ್ಕೆ ಮಾತ್ರ. ಚೀಲಗಳು ತುಂಬಿ ದ್ದಾಗ ಬಹು ಭಾರವೆಂದು ಅದಕ್ಕೆ ಗೊತ್ತು. ಆದರೆ ದುಬಾರಿ ಬಡ್ಡಿಗಾರ ನನ್ನು ನೀರಿನಿಂದ ಎಳೆದುಹಾಕಿ ಅಪಕೀರ್ತಿಯನ್ನು ತಲೆಯ ಮೇಲೆ ಹೊತ್ತು ಕೊಳ್ಳಬೇಕಾದಾಗ, ಈ ಕತ್ತೆ ಹೊತ್ತಿಗೆ ಸರಿಯಾಗಿ ನನ್ನನ್ನು ಆ ಸ್ಥಳಕ್ಕೆ ಹೊತ್ತುಕೊಂಡು ಬರುವುದಕ್ಕೆ ಮರೆಯುವುದಿಲ್ಲ."

"ಹೌದು, ಹೌದು" ಎಂದು ಕಮ್ಮಾರ ಅವನ ಮಾತನ್ನು ಅನುಮೋದಿ ಸಿದನು. "ಕೆಲಸ ಮುಗಿದುಹೋಯಿತು. ಆದ ಕೆಲಸವನ್ನು ಆಗದ್ದರಂತೆ ಮಾಡಲಾಗುವುದಿಲ್ಲ. ದುಬಾರಿ ಬಡ್ಡಿಗಾರನನ್ನು ಮತ್ತೆ ನೀರಿಗೆತ್ತಿಹಾಕಿ ಮುಳುಗಿಸಲಾಗುವುದಿಲ್ಲ."

ಖೋಜಾ ನಸ್ರೆದ್ದೀನನ ಉತ್ಸಾಹ ಚಿಮ್ಮಿತು.

"ನಾನು ಮಾಡಿದ್ದು ಕೆಟ್ಟ ಕೆಲಸವಾಗಿರಬಹುದು; ಆದರೆ ಅದನ್ನು ಸರಿಮಾಡಿಬಿಡುತ್ತೇನೆ. ಕೇಳು, ಕಮ್ಮಾರಾ, ಕೇಳು. ದುಬಾರಿ ಬಡ್ಡಿಗಾರ ಜಾಫರನನ್ನು ನಾನು ನೀರಿನಲ್ಲಿ ಮುಳುಗಿಸುತ್ತೇನೆಂದು ಶಪಥ ಮಾಡುತ್ತೇನೆ! ನಮ್ಮಪ್ಪನ ಗಡ್ಡದಾಣೆ, ಅವನನ್ನು ಮುಳುಗಿಸಿಬಿಡುತ್ತೇನೆ. ಹೌದು, ಅವನು ನನ್ನಿಂದ ಇದೇ ಕೊಳದಲ್ಲೇ ಮುಳುಗಿ ಸಾಯಬೇಕು! ಕಮ್ಮಾರಾ, ನನ್ನ ಶಪಥ ವನ್ನು ನೆನೆಪಿನಲ್ಲಿಟ್ಟುಕೊಂಡಿರು; ನಾನೆಂದೂ ವ್ಯರ್ಥವಾಗಿ ಮಾತಾಡಿಲ್ಲ. ದುಬಾರಿ ಬಡ್ಡಿಗಾರ ಮುಳುಗಿ ಸಾಯಬೇಕು! ಪೇಟೆಯಲ್ಲಿ ಆ ಸುದ್ದಿ ನಿನ್ನ ಕಿವಿಗೆ ಕೇಳಿದಂದು, ಆಗ ತಿಳಿದುಕೊ, ಈ ಘನತೆವೆತ್ತ ಬುಖಾರಾ ನಗರದ ಪ್ರಜೆಗಳಿಗೆ ನಾನು ಮಾಡಿದ ಅನ್ಯಾಯಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿ ಕೊಡೆನೆಂದು."

೮

ಖೋಜಾ ನಸ್ರೆದ್ದೀನ್ ಪೇಟೆ ಚೌಕಕ್ಕೆ ಹೋಗಿ ತಲುಪಿದಾಗ ಸಂಜೆ ಬೆಳಕು ಹರಡುತ್ತಿತ್ತು; ತಂಪಾದ ಪರಿಮಳದ ಇಬ್ಬನಿ ಬೀಳುವಂತೆ ಬೆಳಕಿಳಿಯುತ್ತಿತ್ತು.

ಟೀ ಅಂಗಡಿಗಳಲ್ಲಿ ಹಿತಕರವಾಗಿ ಬೆಂಕಿಗಳು ಉರಿಯುತ್ತಿದ್ದವು; ಸ್ವಲ್ಪ ಹೊತ್ತಿನೊಳಗೆ ಪೇಟೆ ಪ್ರದೇಶವೆಲ್ಲ ಬೆಳಕುಗಳಿಂದ ಆವೃತವಾಯಿತು. ಮಾರನೆಯ ದಿನ ಅಲ್ಲಿ ಬಹು ಮುಖ್ಯವಾದ ಒಂದು ಸಂತೆ ನೆರೆಯಬೇಕಾಗಿತ್ತು. ಒಂಟೆಗಳ ಕಾರವಾನುಗಳು ಒಂದಾದ ಮೇಲೊಂದರಂತೆ ಬರತೊಡಗಿದವು. ಒಂಟೆಸಾಲು ಮುಂದೆ ಸಾಗಿ ಕತ್ತಲೆಯಲ್ಲಿ ಮರೆಯಾದಂತೆ ಅವುಗಳ ಕೊರಳ ಗಂಟೆಗಳ ಗಣಗಣ ನಾದ ಗಾಳಿಯಲ್ಲಿ ನಿಂತು ಕೇಳಬರುತ್ತಿತ್ತು. ಕಡೆಗೆ ಆ ನಾದವೂ ದೂರದಲ್ಲಿ ಲೀನವಾಗಿ ಹೋಗುತ್ತಿರುವಷ್ಟರಲ್ಲಿ ಮತ್ತೊಂದು ಕಾರವಾನು ಪೇಟೆಯ ಚೌಕಕ್ಕೆ ಕಾಲಿಟ್ಟು ಗಂಟೆಯ ನಾದ ಮತ್ತೆ ಅಲ್ಲೆಲ್ಲ ತುಂಬಿಕೊಳ್ಳುತ್ತಿತ್ತು.

ಒಂದೇ ಸಮನೆ ಹೀಗೆ ನಡೆಯುತ್ತಲೇ ಇತ್ತು. ಭೂಮಂಡಲದ ನಾನಾ ಭಾಗಗಳಿಂದಲೂ ಬಂದು ಸೇರಿದ ಬಗೆಬಗೆಯ ನಾದಗಳಿಂದ ತುಂಬಿ ತುಳುಕಾಡುತ್ತ ಸ್ವತಃ ರಾತ್ರಿಯೇ ಗುಣುಗುಣಿಸುತ್ತಿರುವುದೋ, ದನಿ ನಡುಗಿಸಿಕೊಂಡು ಮೆಲ್ಲಗೆ ಮೃದುವಾಗಿ ನರಳುತ್ತಿರುವುದೋ ಎಂಬಂತೆ ತೋರುತ್ತಿತ್ತು. ಇಂಡಿಯ, ಪರ್ಷಿಯ, ಅರೇಬಿಯ, ಅಫ್ಘಾನಿಸ್ಥಾನ, ಈಜಿಪ್ಟ್—ಈ ಎಲ್ಲ ಕಡೆಯಿಂದಲೂ ಅಗೋಚರವಾದ ಗಂಟೆಗಳು ಬಾಜಿಸಿ ಮಧುರ ಗಾನವನ್ನು ಹೊರಡಿಸುತ್ತಿದ್ದವು. ಖೋಜಾ ನಸ್ರೆದ್ದೀನ್ ಈ ಅವ್ಯಕ್ತಗಾನವನ್ನಾಲಿಸಿದನು. ಸದಾ ಕಾಲವೂ ಆಲಿಸುತ್ತಲೇ ಇರಬೇಕೆನ್ನಿಸಿತು ಅವನಿಗೆ. ಹತ್ತಿರದ ಒಂದು ಟೀ ಅಂಗಡಿಯಲ್ಲಿ ತಂಬೂರಿಯ ನಾದ ಹೊಮ್ಮುತ್ತಿತ್ತು; ಆ ತಂಬೂರಿಯ ಝುಂಕಾರಕ್ಕೆ ಅನುವಾದಿಯಾಗಿ ಒಂದು ದುತಾರ್* ಬಾಜಿಸುತ್ತಿತ್ತು. ಅದೃಶ್ಯ ಗಾಯಕನೊಬ್ಬನು ಭಾವಪೂರ್ಣವೂ ಸುವ್ಯಕ್ತವೂ ಆದ ತನ್ನ ದನಿಯನ್ನು ನಕ್ಷತ್ರಲೋಕಕ್ಕೇ ಏರಿಸಿದನೋ ಎಂಬಂತೆ ಹಾಡುತ್ತಿದ್ದನು. ಅವನು ತನ್ನ

---

* ಎರಡು ತಂತಿಯ ವಾದ್ಯ.

ಪ್ರೇಯಸಿಯನ್ನು ಕುರಿತು, ಅವಳನ್ನು ಆಕ್ಷೇಪಿಸಿ ಹಾಡುತ್ತಿದ್ದನು.

ಈ ಗಾನವನ್ನಾಲಿಸುತ್ತಲೇ ಖೋಜಾ ನಸ್ರೆದ್ದೀನ್ ರಾತ್ರಿ ತಂಗಿರಲು ತಕ್ಕ ಸ್ಥಳವನ್ನು ಅರಸುತ್ತ ಹೊರಟನು.

ಟೀ ಅಂಗಡಿಯ ಯಜಮಾನನನ್ನು ಕಂಡು, " ನನ್ನ ಹತ್ತಿರ ಅರ್ಧ ಟಂಗ ಇದೆ; ನನಗೂ ನನ್ನ ಕತ್ತೆಗೂ ಸ್ಥಳ ಬೇಕು " ಎಂದನು.

" ಅರ್ಧ ಟಂಗ ಕೊಟ್ಟರೆ ಈ ರಾತ್ರಿ ನೀನು ಇಲ್ಲಿರಬಹುದು. ಆದರೆ, ನಿನಗೆ ಕಂಬಳಿ ಕೊಡಲಾಗುವುದಿಲ್ಲ " ಎಂದನು ಅವನು.

" ನನ್ನ ಕತ್ತೆಯನ್ನೆಲ್ಲಿ ಕಟ್ಟಲಿ ? "

" ನಿನ್ನ ಕತ್ತೆಯ ಚಿಂತೆ ನನಗೇಕೆ ? "

ಟೀ ಅಂಗಡಿಯ ಹತ್ತಿರ ಕತ್ತೆಯನ್ನು ಕಟ್ಟಿಹಾಕುವುದಕ್ಕೆ ಯಾವ ಸಾಧನವೂ ಇರಲಿಲ್ಲ. ಮೊಗಸಾಲೆಯಲ್ಲಿ ಎತ್ತರಿಸಿದ ಒಂದು ಭಾಗದ ಕೆಳ ಮೈಯಿಂದ ಒಂದು ಮೊಳೆ ಹಾಯ್ದಿರುವುದು ಖೋಜಾ ನಸ್ರೆದ್ದೀನನಿಗೆ ಕಾಣಿಸಿತು. ಆ ಮೊಳೆಯನ್ನು ಯಾವುದಕ್ಕೆ ಬಡಿದಿದೆಯೆಂದು ನೋಡುವ ಗೋಜಿಗೆ ಹೋಗದೆ ಅದಕ್ಕೆ ಕತ್ತೆಯನ್ನು ಕಟ್ಟಿಹಾಕಿದನು. ಟೀ ಅಂಗಡಿಯೊಳಕ್ಕೆ ಕಾಲಿಟ್ಟದ್ದೇ ತಡ, ಅವನು ಒಂದು ಕಡೆ ಮಲಗಿಬಿಟ್ಟನು ; ಅವನಿಗೆ ಅಷ್ಟು ಆಯಾಸವಾಗಿತ್ತು.

ಅವನಿಗೆ ನಿದ್ದೆ ಹತ್ತುತ್ತಿತ್ತು. ಅಷ್ಟರಲ್ಲಿ ಇದ್ದಕ್ಕಿದ್ದಂತೆ ಯಾರೊ ತನ್ನ ಹೆಸರು ಹೇಳಿದ್ದು ಕೇಳಿಸಿತು. ಕೇಳಿ ಅರೆಗಣ್ಣು ಬಿಟ್ಟು ನೋಡಿದನು.

ಹತ್ತಿರದಲ್ಲಿ ಕೆಲವರು ಕೂತು ಟೀ ಕುಡಿಯುತ್ತಿದ್ದರು—ಒಬ್ಬ ಒಂಟೆ ಸಾರಥಿ, ಒಬ್ಬ ಕುರುಬ ಮತ್ತು ಇಬ್ಬರು ಕುಶಲ ಕಾರ್ಮಿಕರು. ಅವರೆಲ್ಲ ಮರುದಿನದ ಸಂತೆಗಾಗಿ ಬಂದಿದ್ದರು. ಅವರಲ್ಲೊಬ್ಬನು ದನಿ ತಗ್ಗಿಸಿ ಹೀಗೆ ಹೇಳುತ್ತಿದ್ದನು :

" ಖೋಜಾ ನಸ್ರೆದ್ದೀನನ ವಿಚಾರದಲ್ಲಿ ಹೀಗೂ ಹೇಳುತ್ತಾರೆ : ಬಾಗ್ದಾದಿನಲ್ಲಿದ್ದಾಗ ಒಂದು ದಿನ ಅವನು ಪೇಟೆಯಲ್ಲಿ ಹೋಗುತ್ತಿದ್ದನು. ಒಂದು ಹೋಟಲಿನಲ್ಲಿ ಇದ್ದಕ್ಕಿದ್ದಂತೆ ಸದ್ದೂ ಜನದ ಆರ್ಭಟವೂ ಕೇಳಿಸಿತು. ನಿಮಗೂ ಗೊತ್ತಿರಬೇಕು, ನಮ್ಮ ಖೋಜಾ ನಸ್ರೆದ್ದೀನನಿಗೆ ವಿಷಯ ತಿಳಿಯುವ ಕುತೂಹಲ ಹೆಚ್ಚು. ಆದರಿಂದ ಏನಾಗುತ್ತಿದೆಯೋ ನೋಡಬೇಕೆಂದು ಅವನು

ಒಳಹೊಕ್ಕನು. ಅಲ್ಲಿ ಬೊಜ್ಜುಹೊಟ್ಟೆಯ ಕೆಂಚು ಮುಖದ ಹೋಟೆಲು ಯಜಮಾನನು ಒಬ್ಬ ದರಿದ್ರ ಭಿಕ್ಷುಕನನ್ನು ಅವನ ಷರಟಿನ ಕೊರಳಪಟ್ಟಿಗೆ ಕೈಹಾಕಿ ಹಿಡಿದುಕೊಂಡು ಜಗ್ಗಾಡಿಸುತ್ತಿದ್ದನು. ಅವನು ದುಡ್ಡು ಕೊಡೆಂದು ಪೀಡಿಸುತ್ತಿದ್ದನು; ಭಿಕ್ಷುಕ ಕೊಡುವುದಿಲ್ಲವೆಂದು ನಿರಾಕರಿಸುತ್ತಿದ್ದನು. "ಈ ಗದ್ದಲವೆಲ್ಲ ಏಕೆ? ಏಕೆ ನೀವು ಹೀಗೆ ಜಗಳ ಕಾಯುತ್ತಿದ್ದೀರಿ?" ಎಂದು ಕೇಳಿದ ನಮ್ಮ ಖೋಜಾ ನಸ್ರೆದ್ದೀನ್. ಹೋಟೆಲು ಯಜಮಾನ ಗಟ್ಟಿ ದನಿಯಲ್ಲಿ ಅಬ್ಬರಿಸಿದನು: "ಈ ಪೋಲಿ, ಈ ಕೀಳ, ಈ ಮೋಸಗಾರ ತಿರುಕ—ಇವನ ಕರುಳು ಕೊಳೆತುಹೋಗ—ಇವನು ನನ್ನ ಊಟದಂಗಡಿಗೆ ಬಂದ; ತನ್ನ ಖಲತ್ತಿನ ಎದೆಯೊಳಗಿನಿಂದ ಒಂದು ಬ್ರೆಡ್ ಚೂರನ್ನು ಹೊರಕ್ಕೆಳೆದುಕೊಂಡ; ರಸ ತುಂಬಿದ ಷಿಷ್ಲಿಕ್ ಸುಡುತ್ತಿದ್ದ ಒಲೆಯಿಂದ ಹೊರಡುತ್ತಿದ್ದ ಹೊಗೆಯ ಮೇಲೆ ತುಂಬ ಹೊತ್ತು ಆ ಬ್ರೆಡ್ ಚೂರನ್ನು ಹಿಡಿದುಕೊಂಡಿದ್ದ; ಸುಡುವ ಮಾಂಸದ ವಾಸನೆಯನ್ನು ಹೀರಿ ಆ ಚೂರು ಎರಡರಷ್ಟು ರುಚಿಯಾಯಿತು, ಮೆತ್ತಗಾಯಿತು; ಆ ಮೇಲೆ ಅವನು ಆ ಬ್ರೆಡ್ಡನ್ನು ತಿಂದುಬಿಟ್ಟ. ಬ್ರೆಡ್ ನುಂಗಿದಮೇಲೆ, ಈಗ ದುಡ್ಡು ಕೊಡುವುದಿಲ್ಲವೆನ್ನುತ್ತಾನೆ! ಇವನ ಹಲ್ಲುದುರಿ ಬೀಳ! ಇವನ ಮೈ ಚರ್ಮ ಸುಲಿದುಹೋಗ!" ಈ ಮಾತು ಕೇಳಿ ಖೋಜಾ ನಸ್ರೆದ್ದೀನ್ ತಿರುಕನ ಕಡೆ ತಿರುಗಿ ಮುಖ ಗಂಟುಹಾಕಿಕೊಂಡು, "ಇದು ನಿಜವೋ?" ಎಂದು ಕೇಳಿದ. ತಿರುಕನಿಗೆ ಗಾಬರಿಯಿಂದ ಮಾತೇ ಹೊರಡಲಿಲ್ಲ. "ಇದು ತಪ್ಪು; ಶುದ್ಧ ತಪ್ಪು. ಬೇರೊಬ್ಬರ ಪದಾರ್ಥವನ್ನು ಪ್ರತಿಫಲ ಕೊಡದೆ ಉಪಯೋಗಿಸಿಕೊಳ್ಳುವುದು ತಪ್ಪೆಂದು ಗೊತ್ತಿಲ್ಲವೆ, ನಿನಗೆ?" ಎಂದನು ಖೋಜಾ ನಸ್ರೆದ್ದೀನ್. ಹೋಟೆಲು ಯಜಮಾನನಿಗೆ ಬಹಳ ಸಂತೋಷವಾಯಿತು. "ಕೇಳಿದೆಯೋ? ನೀಚಾ, ಈ ದೊಡ್ಡ ಮನುಷ್ಯರು, ಈ ಸಂಭಾವಿತರು, ಹೇಳುತ್ತಿರುವುದನ್ನು ಕೇಳಿದೆಯೋ?" ಎಂದನು. ಖೋಜಾ ನಸ್ರೆದ್ದೀನ್, "ನಿನ್ನ ಹತ್ತಿರ ಏನಾದರೂ ಹಣವಿದೆಯೆ?" ಎಂದು ತಿರುಕನನ್ನು ಕೇಳಿದನು. ತಿರುಕ ತನ್ನ ಬಳಿಯಿದ್ದ ಕೊನೆಯ ಕಾಸನ್ನು ಕೊಡವಿ ತೆಗೆದು ಖೋಜಾ ನಸ್ರೆದ್ದೀನನ ಕೈಗೆ ಕೊಟ್ಟನು. ಹೋಟೆಲು ಯಜಮಾನ ಹಣ ತೆಗೆದುಕೊಳ್ಳುವುದಕ್ಕೆಂದು ಜಿಡ್ಡುಗಟ್ಟಿದ ತನ್ನ ಕೈಯನ್ನು ಮುಂದಕ್ಕೆ ಚಾಚಿದನು. ಖೋಜಾ ನಸ್ರೆದ್ದೀನ್, "ಸ್ವಲ್ಪ ತಾಳಿ ಸ್ವಾಮಿ,

ತಾಳಿ. ಮೊದಲು ನಿಮ್ಮ ಕಿವಿ ಕೊಡಿ” ಎಂದನು. ಆಮೇಲೆ ತನ್ನ ಮುಷ್ಟಿಯಲ್ಲಿಟ್ಟುಕೊಂಡಿದ್ದ ಆ ನಾಣ್ಯಗಳನ್ನು ಹೋಟೆಲು ಯಜಮಾನನ ಕಿವಿಯ ಬಳಿ ಬಹಳ ಹೊತ್ತಿನ ವರೆಗೂ ಝುಣಝುಣಗುಟ್ಟಿಸಿದನು. ಝುಣಗುಟ್ಟಿಸಿ ಆದ ಮೇಲೆ ಹಣವನ್ನು ತಿರುಕನಿಗೆ ಹಿಂದಿರುಗಿ ಕೊಟ್ಟನು. ಕೊಟ್ಟು, “ಅಯ್ಯಾ, ನೀನು ಸಮಾಧಾನವಾಗಿ ಹೋಗಬಹುದು!” ಎಂದನು. “ಏನು! ನನಗೆ ಇನ್ನೂ ಬೆಲೆ ಕೊಟ್ಟೇ ಇಲ್ಲವಲ್ಲ!” ಎಂದು ಹೋಟೆಲು ಯಜಮಾನ ಅಬ್ಬರಿಸಿದನು. ಖೋಜಾ ನಸ್ರೆದ್ದೀನ್ ಹೇಳಿದನು: “ಅವನು ನಿನ್ನ ಹಣ ಪೂರ್ತಿ ಕೊಟ್ಟಿದ್ದಾನೆ. ಅವನು ನಿನ್ನ ಪಿಷ್ಟಿಕ್ಕಿನ ವಾಸನೆ ಮೂಸಿದ, ನೀನು ಅವನ ಹಣದ ಝುಣತ್ಕಾರ ಕೇಳಿದೆ. ಈಗ ನಿಮ್ಮ ಲೆಕ್ಕ ಬಗೆಹರಿಯಿತು” ಎಂದು.

ಕೇಳುತ್ತಿದ್ದವರೆಲ್ಲ ಘೊಳ್ಳೆಂದು ನಕ್ಕರು. ಅವರಲ್ಲೊಬ್ಬನು ಆತುರಾತುರವಾಗಿ ಉಳಿದವರಿಗೆ ಎಚ್ಚರಿಕೆ ಕೊಟ್ಟನು:

“ಅಷ್ಟು ಗಟ್ಟಿಯಾಗಿ ಆಡಬಾರದಣ್ಣ. ಇಲ್ಲದಿದ್ದರೆ, ನಾವು ಖೋಜಾ ನಸ್ರೆದ್ದೀನನ ವಿಚಾರವಾಗಿ ಮಾತಾಡುತ್ತಿದ್ದೇವೆಂದು ತಿಳಿದುಕೊಂಡು ಬಿಡುತ್ತಾರೆ” ಎಂದನು.

“ಇವರಿಗೆ ಹೇಗೆ ಗೊತ್ತಾಯಿತು? ನಡೆದದ್ದೇನೋ ನಿಜ. ಆದರೆ ಇದು ನಡೆದದ್ದು ಬಾಗ್ದಾದಿನಲ್ಲಲ್ಲ, ಇಸ್ತಾಂಬೂಲಿನಲ್ಲಿ. ಆದರೂ ಇದು ಹೇಗೆ ಗೊತ್ತಾಯಿತು, ಇವರಿಗೆ?” ಎಂದು ಖೋಜಾ ನಸ್ರೆದ್ದೀನ್ ತನ್ನಲ್ಲೇ ಯೋಚಿಸಿಕೊಂಡು ನಸುನಗುತ್ತಿದ್ದನು.

ಕುರುಬನ ಉಡುಪು ತೊಟ್ಟು, ಬಣ್ಣದ ರುಮಾಲು ಸುತ್ತಿ ಅದರಿಂದ ಬದಕ್ಷಾನಿನಿಂದ ಬಂದವನೆಂದು ಸ್ಪಷ್ಟವಾಗಿ ಕಾಣುತ್ತಿದ್ದ ಎರಡನೆಯವನು ತನ್ನ ಕಥೆಯನ್ನು ಪ್ರಾರಂಭಿಸಿದನು. ಅವನೂ ಮೆಲುದನಿಯಲ್ಲೇ ಹೇಳುತ್ತಿದ್ದನು:

“ಹೀಗೂ ಹೇಳುತ್ತಾರೆ: ಒಂದು ದಿನ ಖೋಜಾ ನಸ್ರೆದ್ದೀನ್ ಒಬ್ಬ ಮುಲ್ಲನ ತರಕಾರಿ ತೋಟದ ಬಳಿ ಹೋಗುತ್ತಿದ್ದನಂತೆ. ಮುಲ್ಲನು ಕೆಲವು ಕುಂಬಳಕಾಯಿಗಳನ್ನು ಚೀಲಕ್ಕೆ ತುಂಬಿಕೊಳ್ಳುತ್ತಿದ್ದ. ದುರಾಸೆಯಿಂದ ಅವನು ಚೀಲದ ತುಂಬ ತುಂಬಿಬಿಟ್ಟಿದ್ದ; ಅದನ್ನು ಎತ್ತುವುದಕ್ಕೇ ಅವನ ಕೈಲಾಗಲಿಲ್ಲ; ಹೊರುವ ಮಾತಂತೂ ದೂರವೇ ಉಳಿಯಿತು. ಆ ಚೀಲವನ್ನು ಮನೆಗೆ ಹೇಗೆ ಸಾಗಿಸುವುದೆಂದು ಯೋಚಿಸುತ್ತಾ ಅಲ್ಲಿಯೇ ನಿಂತಿದ್ದ. ಆಗ

ಅಲ್ಲೊಬ್ಬ ದಾರಿಹೋಕನನ್ನು ಕಂಡು ಅವನಿಗೆ ಸಂತೋಷವಾಯಿತು. 'ಮಗನೇ, ಇಲ್ಲಿ ಕೇಳು. ಈ ಚೀಲವನ್ನು ನನ್ನ ಮನೆಗೆ ಹೊತ್ತುಕೊಂಡು ಬರುತ್ತೀಯಾ?' ಎಂದು ಕೇಳಿದನು. ಆ ಸಮಯದಲ್ಲಿ ಖೋಜಾ ನಸ್ರೆದ್ದೀನನ ಹತ್ತಿರ ಹಣವಿರಲಿಲ್ಲ. 'ಎಷ್ಟು ಕೊಡುತ್ತೀರಿ, ಇದಕ್ಕೆ?' ಎಂದು ಮುಲ್ಲನನ್ನು ಕೇಳಿದನು. 'ಮಗನೇ, ಹಣವನ್ನೇಕೆ ಕೇಳುತ್ತೀಯಾ? ಚೀಲವನ್ನು ಹೊತ್ತುಕೊಂಡು ಹೋಗುತ್ತಿರುವಾಗ, ದಾರಿಯಲ್ಲಿ ನಿನಗೆ ನಾನು ಮೂರು ಸೂಕ್ತಿಗಳನ್ನು ತಿಳಿಸುತ್ತೇನೆ. ಅದರಿಂದ ನಿನ್ನ ಜೀವಮಾನದಲ್ಲೆಲ್ಲ ಸುಖವಾಗಿರಬಹುದು.'

"'ಆ ಸೂಕ್ತಿಗಳು ಏನೋ ತಿಳಿದುಕೊಳ್ಳಬೇಕು' ಎಂದು ಖೋಜಾ ನಸ್ರೆದ್ದೀನ್ ಯೋಚಿಸಿದನು.

"ಅವನು ಕುತೂಹಲಕ್ಕೆ ಒಳಗಾಗಿ, ಚೀಲವನ್ನು ಹೆಗಲಿಗೇರಿಸಿಕೊಂಡು ಹೊರಟನು. ದಾರಿ ಗುಡ್ಡದ ಮೇಲಕ್ಕೆ ಏರಿಹೋಗುತ್ತಿತ್ತು; ಮತ್ತು ಒಂದು ಕಡಿದು ಪ್ರಪಾತದ ಅಂಚಿನಲ್ಲಿತ್ತು. ಖೋಜಾ ನಸ್ರೆದ್ದೀನ್ ಉಸಿರಾಡುವುದಕ್ಕಾಗಿ ಸ್ವಲ್ಪ ನಿಂತುಕೊಂಡನು. ಯಾವುದೋ ರಹಸ್ಯವನ್ನು ತಿಳಿಸುತ್ತಿರುವಂತೆ ಗಂಭೀರಭಾವವನ್ನು ತಾಳಿ ಮುಲ್ಲ ಹೇಳತೊಡಗಿದನು: 'ಮೊದಲನೆಯ ಸೂಕ್ತಿಯನ್ನು ಕೇಳು. ಆದಮನ ಕಾಲದಿಂದ ಇದುವರೆಗೂ ಇದಕ್ಕಿಂತ ಹೆಚ್ಚಿನ ಸೂಕ್ತಿ ಮತ್ತೊಂದಿಲ್ಲ. ಇದರರ್ಥದ ಆಳವನ್ನು ನೀನು ಪೂರ್ತಿಯಾಗಿ ಗ್ರಹಿಸಿದ ಪಕ್ಷದಲ್ಲಿ, ನಮ್ಮ ಪ್ರವಾದಿ ಲೋಕಗುರು ಮುಹಮ್ಮದ್ ಅವರು ಕುರಾನಿನ ಎರಡನೆಯ ಸೂರವನ್ನು ಪ್ರಾರಂಭ ಮಾಡಿರುವ ಅಲೀಫ್, ಲಾಮ್, ಮೀಮ್ ಅಕ್ಷರಗಳ ರಹಸ್ಯಾರ್ಥವನ್ನು ಅರಿತಂತೆಯೇ ಆಗುತ್ತದೆ.

"'ಗಮನವಿಟ್ಟು ಕೇಳು: ಸವಾರಿ ಮಾಡುವುದಕ್ಕಿಂತ ನಡೆಯುವುದು ಉತ್ತಮವೆಂದು ಯಾವನಾದರೂ ನಿನಗೆ ಹೇಳಿದರೆ, ಅವನ ಮಾತನ್ನು ನಂಬಬೇಡ. ನನ್ನ ಮಾತುಗಳನ್ನು ನೆನಪಿಟ್ಟುಕೋ ಓ, ಮಗನೇ; ನೆನಪಿಟ್ಟುಕೊಂಡಿದ್ದು ಹಗಲೂ ರಾತ್ರಿ ಎಡೆಬಿಡದೆ ಅದರ ವಿಚಾರವಾಗಿ ಮನನಮಾಡುತ್ತಿರು. ಹಾಗೆ ಮಾಡಿದರೆ ಅವುಗಳಲ್ಲಡಗಿರುವ ಸತ್ಯ ನಿನಗೆ ಅರಿವಾಗುತ್ತದೆ. ಆದರೆ ಎರಡನೆಯ ಸೂಕ್ತಿಯೊಡನೆ ಹೋಲಿಸುವುದಾದರೆ, ಈ ಸೂಕ್ತಿ ಏನೇನೂ ಅಲ್ಲವೆಂದುಬಿಡಬಹುದು. ಎರಡನೆಯ ಸೂಕ್ತಿಯನ್ನು ಅಗೋ, ಅಲ್ಲಿ ಕಾಣು

ತ್ತಿದೆಯಲ್ಲಾ ಆ ಮರದ ಹತ್ತಿರ ಹೇಳುತ್ತೇನೆ. ನೋಡು, ಅಲ್ಲಿ, ನಮ್ಮ ಮುಂದುಗಡೆ!' 'ಸರಿ, ಆಗಬಹುದು' ಎಂದು ಯೋಚಿಸಿದ ನಮ್ಮ ನಸ್ರೆದ್ದೀನ್. 'ಮುಲ್ಲಾ ಸಾಹೇಬರೇ, ಸ್ವಲ್ಪ ತಡೆಯಿರಿ!' ಮನಸ್ಸಿನಲ್ಲೇ ಹೀಗೆಂದುಕೊಂಡು ಬೆವರಿನಲ್ಲಿ ನೆನೆದು ಆ ಮರದ ವರೆಗೂ ಚೀಲವನ್ನೆಳೆದುಕೊಂಡು ಹೋದ.

"ಮುಲ್ಲ ಒಂದು ಬೆರಳೆತ್ತಿ ನಿಂತನು. 'ಕಿವಿ ತೆರೆದು ಕೇಳು. ಈ ಎರಡನೆಯ ಸೂಕ್ತಿಯಲ್ಲಿ ಸಂಪೂರ್ಣ ಕುರಾನ್, ಷರಿಯತ್ತಿನಲ್ಲಿ ಅರ್ಧ, ತರೀಖತ್‌ನಲ್ಲಿ ಕಾಲುಭಾಗ—ಇಷ್ಟೂ ಅಡಗಿದೆ. ಇದನ್ನು ಅರ್ಥಮಾಡಿಕೊಂಡವನು ಎಂದೆಂದಿಗೂ ಸನ್ಮಾರ್ಗವನ್ನು ಬಿಟ್ಟು ಆಗಲುವುದಿಲ್ಲ; ತಪ್ಪುಮಾಡುವುದಿಲ್ಲ; ಸತ್ಯಮಾರ್ಗದಿಂದ ಅವನು ಚ್ಯುತಿ ಹೊಂದುವುದೇ ಇಲ್ಲ. ಆದ್ದರಿಂದ, ಈ ಸೂಕ್ತಿಯ ಅರ್ಥವನ್ನು ಗ್ರಹಿಸುವುದಕ್ಕೆ ಚೆನ್ನಾಗಿ ಪ್ರಯತ್ನಮಾಡು. ಮತ್ತು ಇಂಥ ಸೂಕ್ತಿಯನ್ನು ಏನೂ ಕೊಡದೆ ಬಿಟ್ಟಿಯಾಗಿ ಪಡೆದದ್ದಕ್ಕೆ ಆನಂದಪಡು. ಎರಡನೆಯ ಸೂಕ್ತಿ ಹೇಳುತ್ತದೆ: ಭಾಗ್ಯವಂತನಿಗಿಂತ ಬಡವನಿಗೆ ಜೀವನ ಸುಲಭವೆಂದು ಯಾರಾದರೂ ಹೇಳಿದರೆ, ಅವನನ್ನು ನಂಬಬೇಡ ಆದರೆ, ಮೂರನೆಯ ಸೂಕ್ತಿಗೆ ಹೋಲಿಸಿದರೆ ಈ ಎರಡನೆಯದು ಏನೇನೂ ಇಲ್ಲ ಎನ್ನಬೇಕು. ಆ ಸೂಕ್ತಿಯ ಪ್ರಭೆಯನ್ನು ಕಣ್ಣುಕೋರೈಸುವ ಸೂರ್ಯಪ್ರಭೆಗೆ ಮಾತ್ರವೇ ಹೋಲಿಸಬೇಕು; ಅದರ ಅರ್ಥದ ಆಳವನ್ನು ಸಮುದ್ರದ ಆಳಕ್ಕೆ ಮಾತ್ರವೇ ಹೋಲಿಸಬೇಕು ಈ ಮೂರನೆಯ ಸೂಕ್ತಿಯನ್ನು ನಮ್ಮ ಮನೆಯ ಹೆಬ್ಬಾಗಿಲಲ್ಲಿ ನಿನಗೆ ತಿಳಿಸುತ್ತೇನೆ ಬೇಗ ಹೋಗೋಣ; ನಾನಾಗಲೇ ದಣಿವಾರಿಸಿಕೊಂಡಾಯಿತು.'

"'ತಡೆಯಿರಿ, ಮುಲ್ಲಾ ಸಾಹೇಬರೇ!' ಎಂದ ಖೋಜಾ ನಸ್ರೆದ್ದೀನ್. 'ನಿಮ್ಮ ಮೂರನೆಯ ಸೂಕ್ತಿ ನನಗಾಗಲೇ ಗೊತ್ತಾಗಿಹೋಯಿತು ನಿಮ್ಮ ಮನೆಯ ಬಾಗಿಲಲ್ಲಿ ನೀವು ನನಗೆ ಹೇಳುವುದು ಇಷ್ಟೇ: ಒಬ್ಬ ಬುದ್ಧಿವಂತನು ಏನೇನೂ ಕೊಡದೆ ಒಬ್ಬ ದಡ್ಡನಿಂದ ಭಾರವಾದ ಕುಂಬಳಕಾಯಿ ತುಂಬಿದ ಚೀಲವನ್ನು ಹೊರಿಸಿಕೊಂಡು ಹೋಗಬಲ್ಲ!—ಅಲ್ಲವೆ?' ಎಂದನು. ಮುಲ್ಲನಿಗೆ ದಿಗ್ಭ್ರಮೆಯಾಗಿ ತತ್ತರಿಸಿ ಹಿಂದಕ್ಕೆ ಹೆಜ್ಜೆಹಾಕಿದನು. ಖೋಜಾ ನಸ್ರೆದ್ದೀನ್ ಸತ್ಯವನ್ನೇ ಊಹಿಸಿದ್ದನು.

"'ಮುಲ್ಲಾ ಸಾಹೇಬರೇ, ಈಗ ಕೇಳಿ ಇಲ್ಲಿ. ನಾನು ಹೇಳುವ ಒಂದೇ ಒಂದು ಸೂಕ್ತಿಯನ್ನು ಕೇಳಿ. ಈ ಸೂಕ್ತಿಗೆ ನಿಮ್ಮ ಎಲ್ಲಾ ಸೂಕ್ತಿಗಳೂ ಸಮನಾಗಲಾರವು. ನನ್ನ ಸೂಕ್ತಿ ಎಷ್ಟು ಉಜ್ಜ್ವಲವಾದ್ದು ಎಷ್ಟು ಅಗಾಧ ವಾದ್ದು ಎಂದರೆ, ಅದರಲ್ಲಿ ಕುರಾನ್, ಷರಿಯತ್, ತರೀಖತ್ ಮತ್ತು ಇತರ ಎಲ್ಲಾ ಪುಸ್ತಕಗಳನ್ನೂ ಒಳಗೊಂಡ ಸಮಗ್ರ ಇಸ್ಲಾಮೇ ಅಡಗಿದೆ; ಅಷ್ಟೇ ಅಲ್ಲ; ಅದರ ಜೊತೆಗೆ ಸಮಗ್ರ ಬೌದ್ಧ ಧರ್ಮ, ಸಮಗ್ರ ಕ್ರೈಸ್ತ ಧರ್ಮ ಮತ್ತು ಸಮಗ್ರ ಯೆಹೂದ್ಯ ಧರ್ಮ ಇಷ್ಟೂ ಅಡಗಿವೆ ಓ ಮುಲ್ಲಾ ಸಾಹೇಬರೇ, ಸತ್ಯವಾದ ಮತವನ್ನು ನನಗೆ ಉಪದೇಶಮಾಡಿದ ನಿಜ ಗುರುವೇ, ನಾನು ಈಗ ನಿಮಗೆ ತಿಳಿಸಲಿರುವ ಈ ಸೂಕ್ತಿಗಿಂತಲೂ ಹೆಚ್ಚು ಅಭೇದ್ಯವಾದ, ಖಂಡಿಸಲ ಸಾಧ್ಯವಾದ, ಬೇರೊಂದು ಸೂಕ್ತಿ ಹಿಂದೆಂದೂ ಇರಲಿಲ್ಲ, ಮುಂದೆಂದೂ ಬರುವುದಿಲ್ಲ! ಆದರೆ ಈ ಸೂಕ್ತಿ ನಿಮ್ಮ ಬುದ್ಧಿಗೆ ಮಂಕು ಕವಿಸಿ ಅಡಗಿಸಿ ಬಿಟ್ಟೀತು. ನೀವು ಈಗಲೇ ಸಿದ್ಧಮಾಡಿಕೊಳ್ಳಿ, ಎಚ್ಚರಿಕೆ. ಏಕೆಂದರೆ ಅದು ಬಹು ಸುಲಭವಾಗಿ ಬುದ್ಧಿ ಕೆಟ್ಟುಹೋಗುವಂತೆ ಮಾಡಿಬಿಡಬಹುದು—ಅಷ್ಟು ಅಮೋಘವಾದ್ದು, ಅಷ್ಟು ಆಶ್ಚರ್ಯಕರವಾದ್ದು, ಊಹಿಸಲರಿದಾದದ್ದು. ಓ ಮುಲ್ಲಾ, ನಿಮ್ಮ ಮನಸ್ಸನ್ನು ಉಕ್ಕಿನಂತೆ ಗಟ್ಟಿಮಾಡಿಕೊಂಡು ಕೇಳಿ: ಯಾರಾದರೂ ನಿಮಗೆ ಈ ಕುಂಬಳಕಾಯಿಗಳು ಒಡೆದು ಜಜ್ಜಿಹೋಗಲಿಲ್ಲ ವೆಂದು ಹೇಳಿದರೆ—ಅವನ ಮುಖದ ಮೇಲೆ ಉಗುಳಿ, ಸುಳ್ಳುಗಾರನೆಂದು ಬೈದು, ನಿಮ್ಮ ಮನೆಯಿಂದ ಅವನನ್ನು ಓಡಿಸಿಬಿಡಿ!'

"ಹೀಗೆ ಹೇಳುತ್ತ ಹೇಳುತ್ತ ಖೋಜಾ ನಸ್ರೆದ್ದೀನನು ಕುಂಬಳಕಾಯಿ ಗಳನ್ನು ಕಡಿದಾದ ಪ್ರಪಾತದ ಅಂಚಿನಿಂದ ಕೆಳಕ್ಕೆ ಎತ್ತಿಹಾಕಿಬಿಟ್ಟನು. ಕುಂಬಳಕಾಯಿಗಳು ಚೀಲದೊಳಗಿನಿಂದ ಹೊರಕ್ಕುರುಳಿದವು; ಕಲ್ಲ ಮೇಲೆ ಉರುಳಿ ಹಾರಿ ಬಿದ್ದು ಜಜ್ಜಿ ಚೂರುಚೂರಾಗಿಹೋದವು. "ಅಯ್ಯೋ! ಅಯ್ಯೋ! ಎಂಥ ನಷ್ಟ! ಎಂಥ ನಾಶ!" ಎಂದು ಮುಲ್ಲಾ ಗೋಳಾಡಿದನು. ಗಟ್ಟಿಯಾಗಿ ಅತ್ತು ಗೋಳಾಡಿ ಕಿರಿಚುತ್ತಲೂ, ಮುಖ ಪರಚಿಕೊಳ್ಳುತ್ತಲೂ ಹುಚ್ಚನಂತೆ ಆಡತೊಡಗಿದನು.

"ಖೋಜಾ ನಸ್ರೆದ್ದೀನ್ ಮುಲ್ಲನಿಗೆ, 'ನೋಡಿ; ನಾನಾಗಲೇ ನಿಮಗೆ ಎಚ್ಚರಿಕೆ ಕೊಟ್ಟೆ! ನನ್ನ ಸೂಕ್ತಿ ನಿಮ್ಮ ಬುದ್ಧಿ ಕೆಟ್ಟುಹೋಗುವಂತೆ ಮಾಡಿ

ಬಿಡಬಹುದು ಎಂದು ಹೇಳಿಯೇ ಇದ್ದೆ ' ಎಂದನು."

ಈ ಕಥೆ ಕೇಳಿ ಶ್ರೋತೃಗಳೆಲ್ಲ ಬಿದ್ದುಬಿದ್ದು ನಕ್ಕರು.

ಖೋಜಾ ನಸ್ರೆದ್ದೀನ್ ಒಂದು ಮೂಲೆಯಲ್ಲಿ ದೂಳು ತುಂಬಿದ ಜಿಗುಟ ಮಯವಾದ ಫೆಲ್ಟ್ ಚಾಪೆಯ ಮೇಲೆ ಮಲಗಿ ತನ್ನ ಮನಸ್ಸಿನಲ್ಲಿ ಹೀಗೆ ಯೋಚಿಸುತ್ತಿದ್ದನು :

" ಇದನ್ನೂ ಇವರೆಲ್ಲ ಕೇಳಿದ್ದಾರೆ ಎಂದಾಯಿತು ! ಆದರೆ, ಅದು ಹೇಗೆ ಕೇಳಿದರು ? ಆ ದಾರಿಯಲ್ಲಿದ್ದವರು ಇಬ್ಬರು ಮಾತ್ರ !—ಮುಲ್ಲಾ, ನಾನು ಈ ಇಬ್ಬರೇ. ನಾನು ಒಂದು ನರಪಿಳ್ಳೆಗೂ ಹೇಳಿಲ್ಲ. ತನ್ನ ಕುಂಬಳಕಾಯಿ ಗಳನ್ನು ಹೊತ್ತುಕೊಂಡು ಬರುತ್ತಿದ್ದವನು ಯಾರೆಂದು ಗೊತ್ತಾದ ಮೇಲೆ, ಆ ಮುಲ್ಲನೇ ಈ ಕಥೆಯನ್ನು ಹೇಳಿರಬೇಕು."

ಆ ಮೇಲೆ ಮೂರನೆಯವನು ತನ್ನ ಕಥೆಯನ್ನು ಪ್ರಾರಂಭಿಸಿದನು :

" ಒಂದು ದಿನ ಖೋಜಾ ನಸ್ರೆದ್ದೀನ್ ಪಟ್ಟಣದಿಂದ ತಾನು ಆಗ ವಾಸ ಮಾಡುತ್ತಿದ್ದ ತುರ್ಕಿಯ ಒಂದು ಹಳ್ಳಿಗೆ ಹಿಂದಿರುಗಿ ಬರುತ್ತಿದ್ದನು. ಆಯಾಸ ವಾಗಿ ಒಂದು ಹಳ್ಳದ ದಡದ ಮೇಲೆ ಮಲಗಿಕೊಂಡ. ಗುಳುಗುಳನೆ ಹರಿಯು ತ್ತಿದ್ದ ನೀರಿನ ಸದ್ದು ಹಿತವಾಗಿ ಕೇಳಿಸುತ್ತಿತ್ತು ; ವಸಂತಮಾಸದ ತಂಗಾಳಿ ಪರಿಮಳ ಹೊತ್ತು ಬೀಸುತ್ತಿತ್ತು; ಅವನಿಗೆ ಅರಿವಿಲ್ಲದಂತೆಯೇ ಖೋಜಾ ನಸ್ರೆದ್ದೀನನಿಗೆ ನಿದ್ದೆ ಹತ್ತಿತು. ತಾನು ಸತ್ತ ಹಾಗೆ ಕನಸು ಕಂಡ. ' ನಾನು ಸತ್ತಿರುವ ಪಕ್ಷದಲ್ಲಿ ನಾನು ಅಳ್ಳಾಡಲೂ ಬಾರದು ; ಕಣ್ಣುಬಿಡಲೂ ಬಾರದು ' ಎಂದು ತೀರ್ಮಾನಿಸಿದನು. ಹೀಗೆ ಅವನು ಮೆತ್ತನೆಯ ಹುಲ್ಲಿನ ಮೇಲೆ ಅಲುಗದೆ ಮಲಗಿದ್ದನು. ಸತ್ತುಹೋಗಿರುವುದು ಅಷ್ಟೇನೂ ಕೆಟ್ಟದ್ದಲ್ಲ ಎನ್ನಿಸಿತು ಅವನಿಗೆ. ಸಾಯುವುದೆಂದರೆ, ಈ ಭೂಮಿಯ ಮೇಲೆ ಬದುಕಿರುವಷ್ಟು ಕಾಲವೂ ಎಡೆಬಿಡದೆ ನಮ್ಮನ್ನು ಬೆನ್ನಟ್ಟಿ ಪೀಡಿಸುವ ಗಡಿಬಿಡಿ ಮತ್ತು ಚಿಂತೆ ಗಳೊಂದೂ ಇಲ್ಲದೆ ಸುಮ್ಮನೆ ಮಲಗಿರುವುದು ಮಾತ್ರ ಎನ್ನಿಸಿತು.

" ಆ ದಾರಿಯಲ್ಲಿ ಹೋಗುತ್ತಿದ್ದ ಕೆಲವರು ಪ್ರಯಾಣಿಕರು ಖೋಜಾ ನಸ್ರೆದ್ದೀನನನ್ನು ಕಂಡರು. ' ನೋಡಲ್ಲಿ ! ' ಎಂದ ಒಬ್ಬ. ' ಅವನೊಬ್ಬ ಮುಸ್ಲಿಂ ' ಎಂದ ಮತ್ತೊಬ್ಬ. ' ಅವನು ಸತ್ತುಹೋಗಿದ್ದಾನೆ ! ' ಎಂದ ಇನ್ನೊಬ್ಬ. ' ಅವನನ್ನು ನಾವು ಹತ್ತಿರದ ಹಳ್ಳಿಗೆ ಹೊತ್ತುಕೊಂಡುಹೋಗ

ಬೇಕು ' ಎಂದರು ಎಲ್ಲರೂ.

" ಖೋಜಾ ನಸ್ರೆದ್ದೀನ್ ಹೋಗುತ್ತಿದ್ದದ್ದು ಆ ಹಳ್ಳಿಗೇ. ಆ ಪ್ರಯಾಣಿಕರು ಕೆಲವು ಗಿಡಗಳನ್ನು ಕಡಿದು, ಒಂದು ಚಟ್ಟವನ್ನು ಕಟ್ಟಿದರು; ಖೋಜಾ ನಸ್ರೆದ್ದೀನನನ್ನು ಅದರ ಮೇಲೆ ಮಲಗಿಸಿದರು. ಬಹಳ ಹೊತ್ತು ಅವರು ಅವನನ್ನು ಹೊತ್ತುಕೊಂಡುಹೋದರು; ಅವನೋ ಸತ್ತವನ ಹಾಗೆ—ಸತ್ತು, ಆತ್ಮ ಆಗಲೇ ಸ್ವರ್ಗದ ಬಾಗಿಲು ಬಡಿಯುತ್ತಿರುವವನಿಗೆ ಒಪ್ಪುವಂತೆ—ಕಣ್ಣು ಮುಚ್ಚಿಕೊಂಡು ಅಳ್ಳಾಡದೆ ಮಲಗಿದ್ದನು.

" ಇದ್ದಕ್ಕಿದ್ದ ಹಾಗೆಯೇ ಚಟ್ಟ ಮುಂದೆ ಹೋಗದೆ ನಿಂತುಬಿಟ್ಟಿತು. ದಾರಿಹೋಕರು ಕಡುವಿನ ವಿಷಯವಾಗಿ ಚರ್ಚೆಮಾಡುತ್ತಿದ್ದರು. ಬಲಗಡೆಗೆ ಹೋಗಬೇಕೆಂದು ಒಬ್ಬ ಹೇಳಿದನು; ಎಡಗಡೆಗೆಂದು ಇನ್ನೊಬ್ಬ ಹೇಳಿದನು; ಮೂರನೆಯವನು ನೇರವಾಗಿ ಹಳ್ಳ ದಾಟಿ ಮುಂದುವರಿಯೋಣವೆಂದು ಸೂಚನೆ ಮಾಡಿದನು. ಖೋಜಾ ನಸ್ರೆದ್ದೀನ್ ಒಂದು ಕಣ್ಣು ಬಿಟ್ಟು ಇಣಿಕಿನೋಡಿದನು. ಬಹಳ ಆಳವಾಗಿ ಬಹಳ ವೇಗವಾಗಿ ಪ್ರವಾಹ ಬಹಳ ಅಪಾಯಕರವಾಗಿದ್ದ ಭಾಗದಲ್ಲಿ ಆ ಜನ ನಿಂತಿದ್ದರೆಂದು ಅವನಿಗೆ ಗೊತ್ತಾಯಿತು; ಆ ಸ್ಥಳದಲ್ಲಿ ಎಚ್ಚರಗೇಡಿಗಳಾದವರು ಎಷ್ಟೋ ಮಂದಿ ಮುಳುಗಿ ಸತ್ತಿದ್ದರು. ' ನನ್ನ ವಿಚಾರವಾಗಿ ನನಗೇನೂ ಚಿಂತೆಯಿಲ್ಲ, ಏಕೆಂದರೆ, ನಾನಾಗಲೇ ಸತ್ತಿದ್ದೇನೆ; ನಾನು ನೆಲದ ಮೇಲೆ ಸಮಾಧಿಯಲ್ಲಿ ಮಲಗಿದರೇನು, ಹೊಳೆಯ ತಳದಲ್ಲಿ ಮಲಗಿದರೇನು? ಎಲ್ಲಾ ಒಂದೇ ನನಗೆ. ಆದರೆ ಈ ಪ್ರಯಾಣಿಕರಿಗೆ ಮುನ್ನೆಚ್ಚರಿಕೆ ಕೊಡಬೇಕು; ಇಲ್ಲದಿದ್ದರೆ ನನಗೆ ಕರುಣೆ ತೋರಿಸಿ ಅದರ ಫಲವಾಗಿ ಅವರು ಪ್ರಾಣ ಕಳೆದುಕೊಂಡುಬಿಟ್ಟಾರು! ಅವರಿಗೆ ಎಚ್ಚರಿಕೆ ಕೊಡದೆ ಇದ್ದರೆ, ನಾನು ತುಂಬ ಕೃತಘ್ನನಾದಂತೆಯೇ ಆಗಿಬಿಡುತ್ತದೆ' ಎಂದು ಖೋಜಾ ನಸ್ರೆದ್ದೀನ್ ಯೋಚಿಸಿದನು.

" ಹಾಗೆ ಯೋಚಿಸಿ ಚಟ್ಟದ ಮೇಲೆ ಎದ್ದು ಕುಳಿತುಕೊಂಡು, ಹೊಳೆಯ ಕಡೆ ಕೈನೀಡಿ ತೋರಿಸುತ್ತಾ ಕುಗ್ಗಿದ ದನಿಯಿಂದ ಹೀಗೆಂದನು: ' ನಾನು ಬದುಕಿದ್ದಾಗ, ಓ ಪ್ರಯಾಣಿಕರೇ, ನಾನು ಆ ಪಾಪ್ಲರ್ ಮರಗಳ ಹತ್ತಿರಲೇ ಯಾವಾಗಲೂ ಹೊಳೆಯನ್ನು ಹಾಯುತ್ತಿದ್ದೆ.' ಹೀಗೆಂದು ಅವನು ಮತ್ತೆ ಕಣ್ಣು ಮುಚ್ಚಿಕೊಂಡನು. ಪ್ರಯಾಣಿಕರು ಆ ಉಪಕಾರಕ್ಕಾಗಿ ಅವನಿಗೆ

ವಂದಿಸಿ, ಅವನ ಆತ್ಮದ ಮುಕ್ತಿಗಾಗಿ ಗಟ್ಟಿಯಾಗಿ ಪ್ರಾರ್ಥನೆಗಳನ್ನು ಉಚ್ಚರಿಸುತ್ತಾ ಚಟ್ಟವನ್ನು ಹೊತ್ತುಕೊಂಡು ಮುಂದೆ ನಡೆದರು."

ಕೇಳುತ್ತಿದ್ದವರೂ ಕಥೆ ಹೇಳುತ್ತಿದ್ದವನೂ ಎಲ್ಲರೂ ಮೊಳಕೈಗಳಿಂದ ಒಬ್ಬರೊಬ್ಬರ ಪಕ್ಕಗಳನ್ನು ತಿವಿಯುತ್ತ ಗಟ್ಟಿಯಾಗಿ ನಗುತ್ತಿದ್ದರು. ಖೋಜಾ ನಸ್ರೆದ್ದೀನ್ ಗೊಣಗಿಕೊಂಡನು :

"ಎಲ್ಲಾ ತಪ್ಪುತಪ್ಪಾಗಿ ತಿಳಿದುಕೊಂಡಿದ್ದಾರೆ. ಮೊದಲನೆಯದಾಗಿ, ನಾನು ಸತ್ತಿದ್ದಂತೆ ನಾನೇನು ಕನಸು ಕಾಣಲಿಲ್ಲ. ನಾನು ಸತ್ತಿರುವುದು, ನಾನು ಬದುಕಿರುವುದು—ಈ ಎರಡಕ್ಕೂ ಇರುವ ವ್ಯತ್ಯಾಸವನ್ನು ತಿಳಿದುಕೊಳ್ಳಲಾರದಷ್ಟು ದಡ್ಡನಲ್ಲ, ನಾನು. ಏಕೆ, ಈಗಲೂ ಚೆನ್ನಾಗಿ ನೆನಪಿದೆ ನನಗೆ, ಆಗ ಒಂದು ಚಿಗುಟೆ ನನ್ನನ್ನು ಕಚ್ಚುತ್ತಿತ್ತು, ಆ ಸ್ಥಳವನ್ನು ಕೆರೆದುಕೊಳ್ಳಬೇಕು ಎನಿಸುತ್ತಿತ್ತು—ಎಂದು. ನಿಜವಾಗಿಯೂ ನಾನು ಬದುಕಿದ್ದೆನೆಂಬುದಕ್ಕೆ ಅದೇ ದೊಡ್ಡ ಪ್ರಮಾಣ! ಬದಲಾಗಿ ನಾನು ಸತ್ತಿದ್ದರೆ, ನನಗೆ ಚಿಗುಟದ ಕಡಿತ ಗೊತ್ತಾಗುತ್ತಲೇ ಇರಲಿಲ್ಲ. ಆಗ ನಾನು ದಣಿದು ಸೋತಿದ್ದೆ, ನಡೆಯುವುದು ಬೇಕಾಗಿರಲಿಲ್ಲ ನನಗೆ. ಪ್ರಯಾಣಿಕರು ಗಟ್ಟಿಮುಟ್ಟಾಗಿದ್ದರು; ನನ್ನನ್ನು ಹಳ್ಳಿಗೆ ಹೊತ್ತುಕೊಂಡು ಹೋಗುವುದಕ್ಕೆ ಅವರೇನೂ ಹೆಚ್ಚು ಕಷ್ಟಪಡಬೇಕಾಗಿರಲಿಲ್ಲ; ಸ್ವಲ್ಪ ಬಳಸಿ ಹೋಗಬೇಕಾಗಿತ್ತು ಅಷ್ಟೇ. ಆದರಿಂದಲೇ ನಾನು ಹಾಗೆ ಮಾಡಿದ್ದು. ಆಳೆತ್ತರಕ್ಕೆ ಮೂರರಷ್ಟು ಆಳವಾಗಿದ್ದ ಕಡೆ ಹಳ್ಳದಾಟಬೇಕೆಂದು ಅವರು ತೀರ್ಮಾನಿಸಿದಾಗ, ಅವರನ್ನು ನಾನು ತಡೆದೆ; ಆಗ ನಿಜವಾಗಿಯೂ ಅವರ ಕುಟುಂಬದವರ ಯೋಚನೆ ಬಂತೇ ಹೊರತು ನನ್ನ ಕುಟುಂಬದ ಯೋಚನೆ ಬರಲಿಲ್ಲ ನನಗೆ; ಏಕೆಂದರೆ ನನಗೆ ಕುಟುಂಬವೇ ಇಲ್ಲ. ತಕ್ಷಣವೇ ಕೃತಘ್ನತೆಯ ಕಹಿ ರುಚಿಯನ್ನು ನಾನು ಕಾಣಬೇಕಾಯಿತು; ನಾನು ಸಮಯಕ್ಕೆ ಸರಿಯಾಗಿ ಎಚ್ಚರಿಕೆ ಕೊಟ್ಟದ್ದಕ್ಕೆ ನನಗೆ ವಂದನೆ ಸಲ್ಲಿಸುವುದಕ್ಕೆ ಬದಲಾಗಿ, ಅವರು ನನ್ನನ್ನು ಚಟ್ಟದ ಮೇಲಿನಿಂದ ಕೆಳಕ್ಕೆತ್ತಿಹಾಕಿ ಮುಷ್ಟಿಗಳಿಂದ ಚೆನ್ನಾಗಿ ಹೊಡೆದುಬಿಟ್ಟರು. ನನ್ನ ಚುರುಕು ಕಾಲುಗಳ ದಯವಿಲ್ಲದೆ ಇದ್ದರೆ, ಅವರು ನನ್ನನ್ನು ಅಪಾಯವಾಗುವಂತೆ ಹೊಡೆದುಹಾಕಿಬಿಡುತ್ತಿದ್ದರು. ಏನು ವಿಚಿತ್ರ! ಜನ ಸತ್ಯವನ್ನು ಎಷ್ಟುಮಟ್ಟಿಗೆ ತಿರುಚಿ ಮುರಿಚಿ ವಿಕಾರಮಾಡಿಬಿಡುತ್ತಾರೆ!" ಎಂದು ಅವನು ತನ್ನಲ್ಲೇ ಅಂದುಕೊಳ್ಳುತ್ತಿದ್ದನು.

ಇಷ್ಟರಲ್ಲಿ ನಾಲ್ಕನೆಯವನೊಬ್ಬನು ತನ್ನದೊಂದು ಕಥೆಯನ್ನು ಪ್ರಾರಂಭಿಸಿದನು :

" ಖೋಜಾ ನಸ್ರೆದ್ದೀನನ ವಿಚಾರವಾಗಿ ಹೀಗೂ ಹೇಳುತ್ತಾರೆ : ಒಂದು ಸಲ ಒಂದು ಹಳ್ಳಿಯಲ್ಲಿ ಸುಮಾರು ಅರ್ಧ ವರ್ಷ ಕಾಲ ಅವನು ವಾಸವಾಗಿದ್ದನು. ಆಗ ಚುರುಕು ಬುದ್ಧಿ, ತಡೆಬಡೆಯಿಲ್ಲದ ಮಾತು—ಇವುಗಳಿಂದ ಅವನ ಖ್ಯಾತಿ ಎಲ್ಲೆಲ್ಲೂ ಹರಡಿತು...."

ಈ ಮಾತು ಕೇಳಿ ಖೋಜಾ ನಸ್ರೆದ್ದೀನ್ ಕಿವಿ ನೆಟ್ಟಗೆ ಮಾಡಿಕೊಂಡನು. ಈ ದನಿಯನ್ನು ಎಲ್ಲೋ ಕೇಳಿದಂತಿದೆ. ಎಲ್ಲಿರಬಹುದು ? ದನಿ ಗಟ್ಟಿಯಲ್ಲ, ಆದರೆ ಸ್ಪಷ್ಟವಾಗಿದೆ; ಸ್ವಲ್ಪ ಒಡಕಲು ಕಂಠ. ಬಹಳ ಇತ್ತೀಚೆಗೆ ಕೇಳಿದಂತಿದೆ,....ಈ ದಿನವೇ ಇದ್ದರೂ ಇರಬಹುದು,....ಎಷ್ಟೆಷ್ಟು ಪ್ರಯತ್ನಮಾಡಿದರೂ ಜ್ಞಾಪಕವಾಗಲಿಲ್ಲ.

ಆ ಮನುಷ್ಯ ಕಥೆಯನ್ನು ಮುಂದುವರಿಸಿದ :

" ಖೋಜಾ ನಸ್ರೆದ್ದೀನ್ ವಾಸಮಾಡುತ್ತಿದ್ದ ಆ ಹಳ್ಳಿಗೆ ಒಂದು ದಿನ ಆ ಪ್ರಾಂತದ ರಾಜ್ಯಪಾಲನು (ಗವರ್ನರ್) ತನ್ನದೊಂದು ಆನೆಯನ್ನು ಕಳಿಸಿದನು. ಊರಿನವರು ಅದಕ್ಕೆ ಮೇವು ಹಾಕಿ ಯೋಗಕ್ಷೇಮ ನೋಡಿಕೊಳ್ಳಬೇಕಾಗಿತ್ತು. ಆನೆ ತುಂಬ ತಿನ್ನುತ್ತಿತ್ತು. ಇಪ್ಪತ್ತುನಾಲ್ಕು ಗಂಟೆ ಹೊತ್ತಿಗೆ ಆ ಆನೆ ಐವತ್ತು ಕೊಳಗ ಬಾರ್ಲಿ, ಐವತ್ತು ಕೊಳಗ ಜೋಳ, ಐವತ್ತು ಕೊಳಗ ಮುಸುಕಿನ ಜೋಳ, ಒಂದು ನೂರು ಹೊರೆ ಹುಲ್ಲು—ಇಷ್ಟನ್ನೂ ತಿಂದುಹಾಕಿಬಿಡುತ್ತಿತ್ತು. ಹದಿನೈದು ದಿನ ಕಳೆಯುವುದರೊಳಗೆ ಹಳ್ಳಿಗರು ತಾವು ಕೂಡಿಟ್ಟುಕೊಂಡಿದ್ದದ್ದನ್ನೆಲ್ಲ ಆನೆಯ ಹೊಟ್ಟೆಗೆ ಹಾಕಿಬಿಟ್ಟಿದ್ದರು. ಅವರೆಲ್ಲ ಪೂರ್ತಿ ಹಾಳಾಗಿಬಿಟ್ಟರು. ಮುಂದೇನು ಮಾಡುವುದೆಂದು ತೋರದೆ ಎದೆಗೆಟ್ಟರು. ಕೊನೆಗೆ ಆನೆಯನ್ನು ಹಿಂದಕ್ಕೆ ಕರೆಸಿಕೊಳ್ಳುವಂತೆ ಪ್ರಾರ್ಥಿಸುವುದಕ್ಕಾಗಿ ಖೋಜಾ ನಸ್ರೆದ್ದೀನನನ್ನು ರಾಜ್ಯಪಾಲನ ಬಳಿ ಕಳಿಸಬೇಕೆಂದು ತೀರ್ಮಾನಿಸಿದರು.

" ತೀರ್ಮಾನಿಸಿ, ಖೋಜಾ ನಸ್ರೆದ್ದೀನನನ್ನು ಹುಡುಕಿಕೊಂಡು ಹೋಗಿ ತಮ್ಮ ಹಂಚಿಕೆಯನ್ನು ಹೇಳಿದರು. ಅವನೂ ಒಪ್ಪಿಕೊಂಡ. ತನ್ನ ಕತ್ತೆಗೆ ಜೀನು ಹಾಕಿದ. ಆ ಕತ್ತೆ ಮೊಂಡತನ, ನೀಚತನ, ಸೋಮಾರಿತನಗಳಲ್ಲಿ ಕಂಕನರಿ, ಹಾವು, ಕಪ್ಪೆ ಇವನ್ನೆಲ್ಲಾ ಒಟ್ಟುಗೂಡಿಸಿದಂತೆ ಇರುವು

ದೆಂದು ಲೋಕಕ್ಕೆಲ್ಲಾ ಗೊತ್ತು. ಆ ಕತ್ತೆಗೆ ಜೀನು ಹಾಕಿ, ರಾಜ್ಯಪಾಲನನ್ನು ಕಾಣಹೊರಟ; ಹೊರಡುವ ಮುಂಚೆ ತನಗೆ ಸಲ್ಲಬೇಕಾದ ಪ್ರತಿಫಲ ಎಷ್ಟೆಂದು ಹಳ್ಳಿಗರೊಡನೆ ಒಪ್ಪಂದ ಮಾಡಿಕೊಳ್ಳುವುದನ್ನು ಮರೆಯಲಿಲ್ಲ. ವಾಸ್ತವವಾಗಿ ಅವನು ಹಣವನ್ನು ಮೊದಲೇ ವಸೂಲು ಮಾಡಿಕೊಂಡ; ಬಹಳ ಜನ ಹಳ್ಳಿಗರು ಅವನಿಗೆ ಹಣ ಕೊಡುವುಕ್ಕಾಗಿ ತಮ್ಮ ಮನೆಗಳನ್ನು ಮಾರಿಕೊಂಡು ಭಿಕ್ಷುಕ ರಾಗಬೇಕಾಯಿತು "

ಖೋಜಾ ನಸ್ರೆದ್ದೀನ್ ಮಲಗಿದ್ದ ಮೂಲೆಯಿಂದ "ಹುಂ!" ಎಂದು ಒಂದು ದನಿ ಕೇಳಬಂತು. ಅವನಿಗೆ ರೋಷ ಉಕ್ಕಿಬರುತ್ತಿತ್ತು. ಅದನ್ನು ತಡೆದುಕೊಳ್ಳುವುದಕ್ಕೆ ಪ್ರಯತ್ನಮಾಡುತ್ತಾ ಫೆಲ್ಟ್ ಚಾಪೆಯ ಮೇಲೆ ಅತ್ತಿತ್ತ ಹೊರಳಾಡುತ್ತಿದ್ದನು.

ಆ ಮನುಷ್ಯ ಮುಂದುವರಿಸಿದನು :

"ಖೋಜಾ ನಸ್ರೆದ್ದೀನ್ ಅರಮನೆಗೆ ಬಂದ. ಪರಮ ಪ್ರಖ್ಯಾತ ರಾಜ್ಯ ಪಾಲನ ದರ್ಶನಕ್ಕಾಗಿ ಸೇವಕರ ಮತ್ತು ಕೀಳಧಿಕಾರಿಗಳ ಗುಂಪಿನಲ್ಲಿ ಸೇರಿ ಬಹಳ ಹೊತ್ತು ಕಾದುಕೊಂಡು ನಿಂತಿದ್ದ. ಪರಮ ಪ್ರಖ್ಯಾತ ರಾಜ್ಯಪಾಲನು ಪ್ರಕಾಶಮಾನವಾದ ತನ್ನ ದೃಷ್ಟಿಯನ್ನು ಬೀರಿ ಕೆಲವರ ಮೇಲೆ ಸುಖವರ್ಷ ವನ್ನೂ ಕೆಲವರ ಮೇಲೆ ಕೇಡಿನ ಮಳೆಯನ್ನೂ ಕರೆಯಲು ಅನುಗ್ರಹಿಸುವುದನ್ನೇ ಕಾಯುತ್ತ ನಿಂತನು. ರಾಜ್ಯಪಾಲನು ತನ್ನ ಮುಖಕಮಲವನ್ನು ಖೋಜಾ ನಸ್ರೆದ್ದೀನನ ಕಡೆಗೆ ತಿರುಗಿಸಿ ಅವನನ್ನು ಅನುಗ್ರಹಿಸಿದಾಗ, ಖೋಜಾ ನಸ್ರೆದ್ದೀನನು ಆ ಮಹಾವೈಭವವನ್ನು ಕಂಡು ಬೆದರಿ ಬೆರಗಾಗಿಹೋದನು; ಕಂಕ ನರಿಯ ಬಾಲದಂತೆ ಅವನ ತೊಡೆಗಳು ನಡುಗತೊಡಗಿದವು; ಅವನ ರಕ್ತ ನಿದಾನವಾಗಿ ಹರಿಯತೊಡಗಿತು; ಮೈಮೇಲೆಲ್ಲಾ ಬೆವರು ಕಿತ್ತುಕೊಂಡಿತು; ಮುಖ ಸುಣ್ಣಕ್ಕಿಂತ ಬೆಳ್ಳಗೆ ಬಿಳಿಚಿಕೊಂಡಿತು."

"ಹುಂ!" ಎಂದು ಮತ್ತೆ ಮೂಲೆಯಿಂದ ಸದ್ದು ಬಂತು. ಆದರೆ ಕಥೆ ಹೇಳುವವನು ಅದಕ್ಕೆ ಸ್ವಲ್ಪವೂ ಲಕ್ಷ್ಯಕೊಡದೆ ಕಥೆಯನ್ನು ಮುಂದುವರಿಸಿದನು.

"ಸಿಂಹಗರ್ಜನೆಯನ್ನು ಹೋಲುವ ಘನಗಂಭೀರ ಧ್ವನಿಯಲ್ಲಿ, 'ನಿನಗೇನು ಬೇಕು' ಎಂದು ರಾಜ್ಯಪಾಲ ಪ್ರಶ್ನೆಮಾಡಿದನು. ಭಯದಿಂದ ಖೋಜಾ

ನಸ್ರೆದ್ದೀನನಿಗೆ ನಾಲಿಗೆ ಕಟ್ಟಿಹೋಯಿತು. ದುರ್ನಾತದ ಕಿರುಬನ ಊಳಿನಂತೆ ಅವನ ದನಿ ಕೀಚಾಯಿತು. 'ಘನವಂತ ಮಹಾಸ್ವಾಮಿಗಳೇ!' ಎಂದು ಮೊದಲುಮಾಡಿದ ಖೋಜಾ ನಸ್ರೆದ್ದೀನ್. 'ನಮ್ಮ ಪ್ರಾಂತದ ಓ ಮಹಾ ಬೆಳಕೇ! ನಮ್ಮ ಪ್ರಾಂತದ ಸೂರ್ಯನೇ, ಚಂದ್ರನೇ! ನಮ್ಮ ಪ್ರಾಂತದಲ್ಲಿ ವಾಸಿಸುವವರೆಲ್ಲರಿಗೂ ಸುಖಸಂತೋಷಗಳನ್ನು ದಯಪಾಲಿಸುವ ಓ ಮಹಾ ನಿಧಿಯೇ! ಕೇಳಬೇಕು. ತಮ್ಮ ಅರಮನೆಯ ಹೊಸಿಲನ್ನು ತನ್ನ ಗಡ್ಡದಿಂದ ಗುಡಿಸಿ ಶುದ್ಧಿಮಾಡಲೂ ಅರ್ಹತೆಯಿಲ್ಲದ ಈ ಕೀಳು ಗುಲಾಮನು ಅರಿಕೆ ಮಾಡುವುದನ್ನು ಆಲಿಸಬೇಕು. ಓ ಮಹಾ ತೇಜೋನಿಧಿಯೇ, ತಮ್ಮ ಒಂದು ಆನೆಗೆ ನಮ್ಮ ಹಳ್ಳಿಗರು ಆಹಾರ ಕೊಟ್ಟು ಯೋಗಕ್ಷೇಮ ನೋಡಿಕೊಂಡು ಸೇವೆಸಲ್ಲಿಸಲು ಅನುಕೂಲವಾಗುವಂತೆ ತಮ್ಮ ಆನೆಯೊಂದನ್ನು ನಮ್ಮ ಹಳ್ಳಿಗೆ ಕಳಿಸುವ ಕೃಪೆಮಾಡಿದ್ದೀರಿ. ಅದರಿಂದ ನಮಗೆ ಸ್ವಲ್ಪ ಚಿಂತೆಯಾಗಿದೆ....'

"ರಾಜ್ಯಪಾಲನ ಮುಖ ಗಂಟಿಕ್ಕಿತು; ಅಪಾಯಸೂಚನೆ ತೋರಿತು. ಬಿರುಗಾಳಿಯ ಎದುರಿಗೆ ಜೊಂಡು ಹೇಗೆ ಬಳುಕಿ ಬಾಗುತ್ತದೆಯೋ ಹಾಗೆ ಖೋಜಾ ನಸ್ರೆದ್ದೀನ್ ರಾಜ್ಯಪಾಲನೆದುರಿಗೆ ಬಾಗಿದನು. 'ಏನು ಚಿಂತೆ ನಿನಗೆ?' ಎಂದು ಪ್ರಶ್ನೆಮಾಡಿದನು ರಾಜ್ಯಪಾಲ. 'ಮಾತಾಡು. ಅಥವಾ ನಿನ್ನ ಈ ಹಾಳು ಕೊಳಕು ಕಂಠದಲ್ಲಿ ನಿನ್ನ ನಾಲಿಗೆ ಒಣಗಿಹೋಯಿತೇನು?' ಈ ಮಾತು ಕೇಳಿ ಆ ಹೇಡಿ ಖೋಜಾ ನಸ್ರೆದ್ದೀನ್ ಗಡಗಡನೆ ನಡುಗಿ, 'ಆ....ನಾವು....ನಾವು....ಆ....' ಎಂದು ತಡವರಿಸಿದನು. ಸ್ವಲ್ಪ ತಡೆದು, 'ಜಾಜ್ವಲ್ಯಮಾನರಾದ ಓ ಮಹಾಪ್ರಭುವೇ! ಆ ಆನೆ ತಾನೊಂದೇ ಒಂಟಿಯಾಗಿ ಬೇಸರಪಟ್ಟಿರುವುದರಿಂದ ನಮಗೆಲ್ಲ ತುಂಬ ಚಿಂತೆಯಾಗಿದೆ. ಆ ಬಡ ಪ್ರಾಣಿಗೆ ಬಹಳ ಅಸುಖವಾಗಿದೆ; ಅದರ ದುಃಖವನ್ನು ಕಂಡು ಹಳ್ಳಿಗರೆಲ್ಲ ದುಃಖಿತರಾಗಿದ್ದಾರೆ; ಸಂಕಟಪಡುತ್ತಿದ್ದಾರೆ. ಆದ್ದರಿಂದ ಅವರು ನನ್ನನ್ನು ತಮ್ಮ ಸನ್ನಿಧಿಗೆ ಕಳಿಸಿದ್ದಾರೆ. ಘನದಲ್ಲಿ ಘನವಾಗಿ, ಈ ಭೂಮಂಡಲಕ್ಕೆ ಅಲಂಕಾರವಾಗಿರುವ ತಮ್ಮ ಸನ್ನಿಧಿಯಲ್ಲಿ ನಮ್ಮದು ಒಂದು ಪ್ರಾರ್ಥನೆಯಿದೆ; ಲಾಲಿಸಬೇಕು. ಆದರ ಜೊತೆಗೆ ಮತ್ತೊಂದು ಹೆಣ್ಣಾನೆಯನ್ನು ನಮ್ಮ ಹಳ್ಳಿಗೆ ಕಳಿಸುವ ಕೃಪೆ ಮಾಡಬೇಕು, ಮಹಾಪ್ರಭೂ." ಈ ಪ್ರಾರ್ಥನೆಯನ್ನು ಕೇಳಿ ರಾಜ್ಯಪಾಲನಿಗೆ ಬಹಳ ಸಂತೋಷವಾಯಿತು. ಆ ಕ್ಷಣವೆ ಹೆಣ್ಣಾನೆ

ಯೊಂದನ್ನು ಕಳಿಸುವಂತೆ ಅಪ್ಪಣೆಮಾಡಿದನು. ತನ್ನ ಸಂತೋಷದ ಸಂಕೇತವಾಗಿ, ತನ್ನ ಬೂಟನ್ನು ಮುಟ್ಟಿ ಮುತ್ತಿಡುವುದಕ್ಕೆ ಖೋಜಾ ನಸ್ರೆದ್ದೀನನಿಗೆ ಅನುಮತಿ ನೀಡಿದನು. ಖೋಜಾ ನಸ್ರೆದ್ದೀನ್ ಈ ಅನುಗ್ರಹದಿಂದ ಉಬ್ಬಿ ಹೋಗಿ ಬಹು ಶ್ರದ್ಧೆಯಿಂದ ರಾಜ್ಯಪಾಲನ ಬೂಟಿಗೆ ಮುತ್ತುಕೊಟ್ಟನು. ಎಷ್ಟು ಶ್ರದ್ಧೆಯಿಂದ ಮುತ್ತಿಟ್ಟನೆಂದರೆ, ರಾಜ್ಯಪಾಲನ ಬೂಟಿನ ಬಣ್ಣ ಹೋಯಿತು; ಖೋಜಾ ನಸ್ರೆದ್ದೀನನ ತುಟಿ ಕಪ್ಪಾಯಿತು—"

ಕಥೆಗಾರನ ಮಾತಿನ ಪ್ರವಾಹಕ್ಕೆ ಇಲ್ಲಿ ಅಡ್ಡಿಬಂತು. ಖೋಜಾ ನಸ್ರೆದ್ದೀನನೇ ಪ್ರತ್ಯಕ್ಷವಾಗಿ ಬಂದು ಸಿಡಿಲು ಹೊಡೆದಂತೆ ನುಡಿದನು:

"ಸುಳ್ಳು! ನೀನು ಹೇಳುವುದು ಶುದ್ಧ ಸುಳ್ಳು! ದೊಡ್ಡವರ ಕಾಲಿನ ಬೂಟುಗಳನ್ನು ನೆಕ್ಕಿ ನೆಕ್ಕಿ ಕಪ್ಪಾಗಿರುವುದು ನಿನ್ನ ತುಟಿ, ನಿನ್ನ ನಾಲಿಗೆ, ಮತ್ತು ನಿನ್ನೊಳಗಿನ ಅಂಗಾಂಗಗಳು. ಖೋಜಾ ನಸ್ರೆದ್ದೀನನು ದೊಡ್ಡವರೆದುರು ಎಂದೂ ಎಲ್ಲಿಯೂ ತಲೆ ತಗ್ಗಿಸಿದವನಲ್ಲ. ಖೋಜಾ ನಸ್ರೆದ್ದೀನನ ಮೇಲೆ ನೀನು ಚಾಡಿ ಹೇಳುತ್ತಿದ್ದೀಯೆ! ಓ ಮುಸ್ಲಿಮರೇ, ಅವನ ಮಾತಿಗೆ ಕಿವಿಗೊಡಬೇಡಿ! ಓಡಿಸಿಬಿಡಿ, ಅವನನ್ನು!"

ಅವನು ಆ ಅಪನಿಂದಕನನ್ನು ಬಡಿಯಲೆಂದು ನುಗ್ಗಿ ಬಂದನು. ಆದರೆ, ಚಪ್ಪಟೆಯಾದ ನಿಡುಬಿನ ಕಲೆಯ ಮುಖವನ್ನೂ ಅತ್ತಿತ್ತ ಹೊಂಚುತ್ತಿರುವ ಹಳದಿ ಕಣ್ಣುಗಳನ್ನೂ ಗುರುತಿಸಿ ತಟಕ್ಕನೆ ಅಲ್ಲೆ ನಿಂತುಬಿಟ್ಟನು. ಆ ಓಣಿಯಲ್ಲಿ ನಿಂತು ಸ್ವರ್ಗದ ಸೇತುವೆಗೆ ಇಕ್ಕೆಲಗಳಲ್ಲೂ ಇರಬೇಕಾದ ಕಟಕಟೆಯ ಉದ್ದವನ್ನು ಕುರಿತು ತನ್ನೊಡನೆ ಚರ್ಚಿಸಿದ ಸೇವಕನೇ ಇವನು.

"ಆಹಾ! ನೀನೋ!" ಎಂದನು ಖೋಜಾ ನಸ್ರೆದ್ದೀನ್. "ಎಲಾ ಗೂಢಚಾರಾ, ನಿನ್ನನ್ನು ನಾ ಚೆನ್ನಾಗಿ ಬಲ್ಲೆ. ಜನರ ಮೇಲೆ ಅಪವಾದ ಹೊರಿಸುವುದಕ್ಕಾಗಿ ನಿನಗೇನು ಕೊಡುತ್ತಾರೆ? ಹೇಳು. ನೀನು ದ್ರೋಹ ಮಾಡಿ ಸಿಕ್ಕಿಸಿಕೊಟ್ಟ ಒಬ್ಬೊಬ್ಬನಿಗೂ ನಿನಗೆ ಎಷ್ಟು ಪ್ರತಿಫಲ ಕೊಡುತ್ತಾರೆ, ಹೇಳು. ಎಲಾ, ಅಮೀರನ ಗೂಢಚಾರಾ! ಎಲಾ ಅಪನಿಂದಕಾ! ನಿನ್ನನ್ನು ನಾನು ಚೆನ್ನಾಗಿ ಬಲ್ಲೆ."

ಅದುವರೆಗೂ ಅಲುಗಾಡದೆ ಕೂತಿದ್ದ ಗೂಢಚಾರನು ಇದ್ದಕ್ಕಿದ್ದಂತೆ ಚಪ್ಪಾಳೆ ತಟ್ಟಿ, ತಾರಸ್ವರದಿಂದ,

"ಸಿಪಾಯಿಗಳೇ! ಇಲ್ಲಿ, ಇಲ್ಲಿ!" ಎಂದು ಕೂಗಿದನು.

ಸಿಪಾಯಿಗಳು ಓಡಿ ಬರುತ್ತಿರುವ ಹೆಜ್ಜೆಯ ಸದ್ದೂ, ಅವರ ಭರ್ಜಿ ಗುರಾಣಿಗಳು ತಾಕಿ ಆದ ಖಣಿ ಖಣಿ ಶಬ್ದವೂ ಖೋಜಾ ನಸ್ರೆದ್ದೀನನಿಗೆ ಕೇಳಿಸಿತು. ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆಯದೆ ಅವನು ಒಂದು ಪಕ್ಕಕ್ಕೆ ಹಾರಿದನು; ಹಾರಿ, ದಾರಿಯನ್ನು ಅಡ್ಡಗಟ್ಟಿ ನಿಂತಿದ್ದ ಸಿಡುಬಿನ ಕಲೆಯ ಗೂಢಚಾರನನ್ನು ಹೊಡೆದುರುಳಿಸಿದನು.

ಆದರೆ ಈಗ ಚೌಕದ ಮತ್ತೊಂದು ಕಡೆಯಿಂದ ಬರುತ್ತಿದ್ದ ಸಿಪಾಯಿಗಳ ಹೆಜ್ಜೆಯ ಸದ್ದು ಕೇಳಿಸಿತು. ಅವನು ಯಾವ ಕಡೆ ನುಗ್ಗಿದರೂ ಅಲ್ಲೆಲ್ಲ ಸಿಪಾಯಿಗಳೇ. ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವೇ ಇಲ್ಲವೆಂದು ಒಂದು ಕ್ಷಣ ಅವನಿಗೆ ಯೋಚನೆಯಾಯಿತು.

"ಅಯ್ಯೋ! ನಾನು ಸಿಕ್ಕಿಬಿದ್ದೆ!" ಎಂದುಕೊಂಡನು. "ಹೋಗಿ ಬರುತ್ತೇನೆ, ನನ್ನ ನೆಚ್ಚಿನ ಕತ್ತೇ!" ಎಂದು ಗಟ್ಟಿಯಾಗಿ ಕೂಗಿದನು.

ಆದರೆ ಇಷ್ಟರಲ್ಲಿ ಒಂದು ಅನಿರೀಕ್ಷಿತವಾದ ಮತ್ತು ಅತ್ಯದ್ಭುತವಾದ ಘಟನೆ ನಡೆಯಿತು; ಅದನ್ನು ಇಂದಿಗೂ ಬುಖಾರದಲ್ಲಿ ನೆನೆಯುತ್ತಿರುತ್ತಾರೆ; ಎಂದೆಂದಿಗೂ ಮರೆಯುವಂಥದಲ್ಲ; ಆಗ ಆದ ಗದ್ದಲ ಮತ್ತು ನಷ್ಟ ಅಷ್ಟು ಮಟ್ಟಿನದು.

ತನ್ನ ಯಜಮಾನನ ಆರ್ತಸ್ವರವನ್ನು ಕೇಳಿ ಕತ್ತೆ ಅವನ ಕಡೆಗೆ ಓಡಿತು. ಆದರೆ ಅದು ಓಡಿದೊಡನೆಯೇ ಒಂದು ಭಾರಿಯ ಭೇರಿ ಅದರ ಹಿಂದುಗಡೆಯೇ ಮೊಗಸಾಲೆಯ ಒಳಭಾಗದಿಂದ ಕಿತ್ತುಬಂತು; ನೆಲದ ಮೇಲೆ ಎದ್ದು ಬಿದ್ದು ದಬದಬನೆ ಸದ್ದು ಮಾಡುತ್ತ ಕತ್ತೆಯನ್ನು ಹಿಂಬಾಲಿಸಿತು. ಖೋಜಾ ನಸ್ರೆದ್ದೀನನು ಕತ್ತಲೆಯಲ್ಲಿ ಕಾಣದೆ ಈ ಭೇರಿಯ ಕಬ್ಬಿಣದ ಕೊಕ್ಕೆಗೆ ತನ್ನ ಕತ್ತೆಯನ್ನು ಕಟ್ಟಿಹಾಕಿದ್ದನು. ದೊಡ್ಡ ದೊಡ್ಡ ಹಬ್ಬಗಳಲ್ಲೂ ಜಾತ್ರೆಗಳಲ್ಲೂ ಜನ ತನ್ನ ಅಂಗಡಿಗೆ ಬರುವಂತೆ ಆಕರ್ಷಿಸಲು ಅಂಗಡಿಯ ಯಜಮಾನ ಈ ಭೇರಿಯನ್ನು ಬಡಿಯುತ್ತಿದ್ದನು. ಭೇರಿ ಒಂದು ಕಲ್ಲಿಗೆ ತಾಕಿ ಭಾರಿ ಸದ್ದು ಮಾಡಿತು; ಕತ್ತೆ ಹಿಂದಕ್ಕೆ ತಿರುಗಿ ನೋಡಿತು; ಮತ್ತೆ ಭಾರಿ ಸದ್ದಾಯಿತು. ಆಗ ಆ ಕತ್ತೆ, ಪಿಶಾಚಿಗಳು ತನ್ನ ಯಜಮಾನನನ್ನು ಮುಗಿಸಿಬಿಟ್ಟವೆಂದೂ, ಅವನನ್ನು ಮುಗಿಸಿ ತನ್ನನ್ನೂ ತಿನ್ನಲು ಬೆನ್ನಟ್ಟಬಂದಿವೆಯೆಂದೂ ಭಾವಿಸಿ

ಕೊಂಡು, ಭಯದಿಂದ ಕಿರಿಚುತ್ತಾ ಬಾಲವನ್ನು ಮೇಲಕ್ಕೆತ್ತಿ ಚೌಕದಲ್ಲಿ ಹಾದು ಆಚೆಯ ಕಡೆಗೆ ಓಡತೊಡಗಿತು.

ಅದೇ ಹೊತ್ತಿಗೆ ಸರಿಯಾಗಿ ಒಂದು ಕಾರವಾನಿನ ಕಟ್ಟಕಡೆಯ ಐವತ್ತು ಒಂಟೆಗಳು ಚೌಕದೊಳಕ್ಕೆ ಕಾಲಿಡುತ್ತಿದ್ದವು; ಮಡಕೆಕುಡಿಕೆ ಪಿಂಗಾಣಿ ಸಾಮಾನು ಮತ್ತು ತಾಮ್ರದ ತಗಡುಗಳನ್ನು ಹೊತ್ತು ತರುತ್ತಿದ್ದವು. ಭಯಂಕರ ವಾಗಿ ಕಿರಿಚುತ್ತಾ ವಿಚಿತ್ರವಾಗಿ ನೆಗೆದಾಡುತ್ತಾ ಸಿಕ್ಕಾಬಟ್ಟೆ ನುಗ್ಗುತ್ತಿದ್ದ ಆ ಪ್ರಾಣಿ ಕತ್ತಲೆಯಲ್ಲಿ ಈ ಒಂಟೆಗಳ ಮೇಲೆ ನುಗ್ಗಿಬಂತು; ಅದನ್ನು ಕಂಡು ದಿಗಿಲುಗೊಂಡು ಒಂಟೆಗಳು ಚೆದರಿ ಓಡಿದವು; ಮಡಕೆಕುಡಿಕೆಗಳು ಕೆಳಕ್ಕು ರುಳಿ ಚೆಲ್ಲಾಪಿಲ್ಲಿಯಾಗಿ ಬಿದ್ದವು; ತಾಮ್ರದ ತಗಡುಗಳ ಝುಂಝುನ ಶಬ್ದ ಎಲ್ಲ ಕಡೆಯೂ ತುಂಬಿತು.

ಒಂದು ಕ್ಷಣ ಕಳೆಯುವುದರೊಳಗಾಗಿ ಮಾರ್ಕಟ್ಟೆಯ ಚೌಕ ಮತ್ತು ಅದರ ಸುತ್ತಮುತ್ತಿನ ಕೆಲವು ಬೀದಿಗಳು ಭಯಭ್ರಾಂತಿಯಲ್ಲಿ ಮುಳುಗಿ ಹೋದವು ಹಿಂದೆಂದೂ ಕಾಣದಷ್ಟು ಗೊಂದಲವಾಯಿತು. ಗಟ್ಟಿ ಸಿಡಿತ, ಲೋಹಪದಾರ್ಥಗಳ ಝಣಝಣ, ಬಾಗಿಲು ಬಡಿತದಂಥ ದಬದಬ, ಜನರ ಕೂಗು, ಕಿರಿಚಾಟ, ಅರಚಾಟ, ನಾಯಿಗಳ ಬಗುಳು, ಸಾಮಾನುಗಳು ಬೀಳುವ ಒಡೆಯುವ ಸದ್ದು—ಎಲ್ಲಾ ಸೇರಿ ಕಿವಿ ಕೊರೆಯುವ ಭಯಂಕರ ಕೋಲಾಹಲವೆದ್ದಿತು ಪ್ರತಿಯೊಬ್ಬರಿಗೂ ಗಾಬರಿಯಿಂದ ದಿಕ್ಕುತೋಚ ದಂತಾಯಿತು. ನೂರಾರು ಒಂಟೆಗಳೂ ಕುದುರೆಗಳೂ ಕತ್ತೆಗಳೂ ಕಟ್ಟು ಗಳನ್ನು ಕಿತ್ತುಕೊಂಡು ಕತ್ತಲೆಯಲ್ಲಿ ಸಿಕ್ಕಾಬಟ್ಟೆ ನುಗ್ಗಿ ಓಡಿದವು; ಅಲ್ಲಲ್ಲಿ ಚೆಲ್ಲಿ ಬಿದ್ದಿದ್ದ ತಾಮ್ರದ ತಗಡುಗಳಿಂದ ಖಣಿಖಣಿ ಧ್ವನಿಯೆಬ್ಬಿಸುತ್ತ ಸಿಕ್ಕಾ ಬಟ್ಟೆ ಓಡಾಡುತ್ತಿದ್ದವು; ಅವುಗಳ ವಾಹಕರು ಪಂಜು ಹಿಡಿದು ಕೂಗಾಡುತ್ತಾ ಹುಡುಕತೊಡಗಿದರು.

ಈ ಭಯಂಕರ ಗದ್ದಲದಿಂದ ಜನಕ್ಕೆ ಅರೆನಿದ್ದೆಯಲ್ಲಿ ಎಚ್ಚರವಾಯಿತು; ನಿದ್ದೆಗಣ್ಣಿನಲ್ಲಿ ಅರೆಬೆತ್ತಲೆಯಾಗಿ ಅತ್ತಿತ್ತ ಓಡಾಡುತ್ತಾ ಒಬ್ಬರಿಗೊಬ್ಬರು ಡಿಕ್ಕಿ ಹೊಡೆದು ಮುಗ್ಗರಿಸಿ ಬಿದ್ದು ದುಃಖ ನಿರಾಶೆಗಳಿಂದ ಗೋಳಾಡತೊಡಗಿದರು; ಇದ್ದಕ್ಕಿದ್ದಂತೆ ಪ್ರಪಂಚದ ಕೊನೆಗಾಲ ಬಂದುಬಿಟ್ಟಿತೆಂದು ಭಾವಿಸಿ ಅವರು ಬೆದರಿದರು. ಹುಂಜಗಳು ಕೂಗಿ ರೆಕ್ಕೆಬಡಿದವು. ಗದ್ದಲ ಗಳಿಗೆ ಗಳಿಗೆಗೆ ಹೆಚ್ಚುತ್ತ

ಆ ಮಹಾನಗರದಲ್ಲೆಲ್ಲಾ ಹರಡಿತು ; ನಗರದ ಕೊಟ್ಟಕೊನೆಯ ಅಂಚಿನ ವರೆಗೂ ವ್ಯಾಪಿಸಿತು. ಕಟ್ಟಕಡೆಗೆ ಪಟ್ಟಣದ ಕೋಟೆಯ ಮೇಲಿನ ಫಿರಂಗಿಗಳಿಂದ ಗುಂಡು ಹಾರಿದವು ; ಕೋಟೆಯ ಕಾವಲುಗಾರ ಬುಖಾರ ಪಟ್ಟಣದೊಳಕ್ಕೆ ಶತ್ರುಗಳು ಹೊಕ್ಕಿರುವರೆಂದು ಭಾವಿಸಿ ಗುಂಡು ಹಾರಿಸಿದನು ; ಅರಮನೆಯ ಅಂಗಳದಲ್ಲಿದ್ದ ಫಿರಂಗಿಗಳೂ ಗುಂಡು ಹಾರಿಸಿದವು ; ಅರಮನೆಯ ಕಾವಲುಗಾರ ಊರಿನವರು ದಂಗೆಯೆದ್ದರೆಂದು ತಿಳಿದುಕೊಂಡನು. ಪಟ್ಟಣದ ಅಸಂಖ್ಯಾತ ಮಿನರೆಟ್ಟುಗಳೆಲ್ಲವುಗಳಿಂದಲೂ ಮುಯೆಸಿನ್‌ಗಳ ಭಯಭೀತ ಧ್ವನಿಯ ಕರೆ ಕೇಳಬರುತ್ತಿತ್ತು. ಕತ್ತಲೆಯಲ್ಲಿ ಗಡಿಬಿಡಿ, ಗೊಂದಲ, ಸಂಪೂರ್ಣವಾಯಿತು ; ಎಲ್ಲಿಗೆ ಓಡಿಹೋಗಬೇಕು, ಏನು ಮಾಡಬೇಕು—ಎಂದು ಯಾರೊಬ್ಬರಿಗೂ ಗೊತ್ತಾಗುವಂತಿರಲಿಲ್ಲ

ಈ ಗದ್ದಲದ ನಟ್ಟನಡುವೆ, ಅಪಾಯದ ಕೇಂದ್ರಸ್ಥಾನದಲ್ಲಿ ಖೋಜಾ ನಸ್ರೆದ್ದೀನ್ ಓಡಾಡುತ್ತಿದ್ದನು ; ಹುಚ್ಚು ಹಿಡಿದು ಅಲೆಯುತ್ತಿದ್ದ ಕುದುರೆ ಒಂಟೆಗಳಿಗೆ ಸಿಕ್ಕಿಕೊಳ್ಳದಂತೆ ಚಟುವಟಿಕೆಯಿಂದ ತಪ್ಪಿಸಿಕೊಳ್ಳುತ್ತ, ಭೇರಿಯ ಸದ್ದಿನ ಸುಳಿವನ್ನನುಸರಿಸಿ ತನ್ನ ಕತ್ತೆಯನ್ನು ಹಿಂಬಾಲಿಸಿ ಹಿಡಿಯಲು ಹೋಗುತ್ತಿದ್ದನು. ಸುಲಭದಲ್ಲಿ ಅದು ಸಿಕ್ಕಲಿಲ್ಲ; ಭೇರಿಗೆ ಕಟ್ಟಿದ್ದ ಹಗ್ಗ ಕಿತ್ತು ಹೋಗುವ ವರೆಗೂ ಅವನು ಕತ್ತೆಯನ್ನು ಹಿಡಿದುಕೊಳ್ಳಲಾಗಲಿಲ್ಲ. ಹಗ್ಗ ಕಿತ್ತ ಕೂಡಲೆ ಭೇರಿಯು ಒಂಟೆಗಳ ಕಾಲ ಕಡೆಗೆ ಉರುಳಿ ಹೋಯಿತು ; ಅವು ಅದನ್ನು ತಪ್ಪಿಸಿಕೊಳ್ಳಲೆಂದು ದಿಕ್ಕೆಟ್ಟು ಓಡಿದವು ; ಓಡುವಾಗ, ಗುಡಿಸಲುಗಳು, ಚಪ್ಪರಗಳು, ಗುಡಾರಗಳು, ಟೀ ಅಂಗಡಿಗಳು—ಎಲ್ಲವನ್ನೂ ಕೆಡವಿ ಬೀಳಿಸುತ್ತಿದ್ದವು.

ಖೋಜಾ ನಸ್ರೆದ್ದೀನ್ ಅಕಸ್ಮಾತ್ತಾಗಿ ತನ್ನ ಕತ್ತೆಯನ್ನು ಎದುರೆದುರಾಗಿ ಸಂಧಿಸಿದನು. ಹಾಗೆ ಸಂಧಿಸದಿದ್ದರೆ ಕತ್ತೆಯನ್ನು ಹುಡುಕಿ ಹಿಡಿಯುವುದಕ್ಕೆ ಬಹಳ ಹೊತ್ತು ಹಿಡಿಯುತ್ತಿತ್ತು. ಕತ್ತೆ ಗಡಗಡನೆ ನಡುಗುತ್ತ ಬಾಯಲ್ಲಿ ನೊರೆಗರೆಯುತ್ತಿತ್ತು.

ಖೋಜಾ ನಸ್ರೆದ್ದೀನ್ ಕತ್ತೆಯನ್ನು ಹಿಡಿದೆಳೆದುಕೊಂಡು ಹೋಗುತ್ತಾ ಹೀಗನ್ನುತ್ತಿದ್ದನು : “ ಬಾ, ಬಾ, ಬೇಗ ಬಾ. ಇಲ್ಲಿನ ಗದ್ದಲ ನಮಗೆ ಬಹಳ ಹೆಚ್ಚಾಯಿತು. ಒಂದೇ ಒಂದು ಕತ್ತೆ, ತನ್ನ ಬಾಲಕ್ಕೆ ಭೇರಿಯನ್ನು ಕಟ್ಟಿದ್ದ

ಪಕ್ಷದಲ್ಲಿ, ಇಂಥ ದೊಡ್ಡ ಪಟ್ಟಣದಲ್ಲಿ ಎಷ್ಟೊಂದು ಅನಾಹುತ ಮಾಡಿಬಿಡ ಬಲ್ಲದು! ಯೋಚಿಸಿದರೆ ಆಶ್ಚರ್ಯವಾಗುತ್ತದೆ. ನೀನೇನು ಮಾಡಿಬಿಟ್ಟೆ, ನೋಡು! ನಿಜ, ಸಿಪಾಯಿಗಳ ಕೈಗೆ ಸಿಕ್ಕದಂತೆ ನೀನು ನನ್ನನ್ನು ಬದುಕಿಸಿದೆ. ಆದರೂ ಬುಖಾರಪಟ್ಟಣದ ಬಡಪ್ರಜೆಗಳನ್ನು ನೆನೆದು ನನಗೆ ವ್ಯಥೆಯಾಗುತ್ತಿದೆ. ಈ ಅವ್ಯವಸ್ಥೆಯನ್ನೆಲ್ಲಾ ಸರಿಪಡಿಸಲು ಅವರು ಬೆಳಗಾಗುವವರೆಗೂ ದುಡಿಯ ಬೇಕಾಗುತ್ತದೆ. ಶಾಂತವಾಗಿ ಸಮಾಧಾನವಾಗಿರುವ ಸ್ಥಳ ಎಲ್ಲಿ ಸಿಕ್ಕೀತು, ನಮಗೆ?"

ಆ ರಾತ್ರಿಯನ್ನು ಶ್ಮಶಾನದಲ್ಲಿ ಕಳೆಯಬೇಕೆಂದು ಖೋಜಾ ನಸ್ರೆದ್ದೀನ್ ನಿರ್ಧಾರಮಾಡಿದನು ಎಷ್ಟೇ ಗದ್ದಲವಾದರೂ ಸತ್ತು ಸಮಾಧಿಯಲ್ಲಿ ಮಲಗಿರು ವವರು ಎದ್ದು ಬರುವುದಿಲ್ಲವೆಂದೂ ಕೈಯಲ್ಲಿ ಪಂಜು ಹಿಡಿದು ಅರಚಿ ಕಿರಿಚಿ ಗದ್ದಲ ಮಾಡುತ್ತಾ ಓಡಾಡುವುದಿಲ್ಲವೆಂದೂ ವಾದಿಸಿಕೊಂಡು ಹಾಗೆ ನಿರ್ಧಾರ ಮಾಡಿದನು

ಶಾಂತಿಭಂಗಕಾರಿ, ಕಲಹಬೀಜಗಳನ್ನು ಬಿತ್ತುವವನು—ಎಂದು ಪ್ರಸಿದ್ಧ ನಾದ ಆ ಖೋಜಾ ನಸ್ರೆದ್ದೀನ್ ತನ್ನ ಹುಟ್ಟೂರಿಗೆ ಹಿಂದಿರುಗಿದ ಮೊದಲನೆಯ ದಿನವನ್ನು ಹೀಗೆ ಕಳೆದನು; ಅವನ ಬಿರುದುಗಳಿಗೆ ತಕ್ಕಂತೆಯೇ ಆ ದಿನವನ್ನು ಕಳೆದನು. ತನ್ನ ಕತ್ತೆಯನ್ನು ಒಂದು ಸಮಾಧಿಯ ಕಲ್ಲಿಗೆ ಕಟ್ಟಿಹಾಕಿ, ತಾನೊಂದು ಗೋರಿಯ ಮೇಲೆ ಮಲಗಿದನು; ಬೇಗ ಅವನಿಗೆ ನಿದ್ದೆಹತ್ತಿತು. ಇತ್ತ ಪಟ್ಟಣದಲ್ಲಿ ಗದ್ದಲವೋ ಗದ್ದಲ—ಕೂಗಾಟ, ಕಿರಿಚಾಟ, ಹೊಡೆಯುವ ಚಚ್ಚುವ ಕುಟ್ಟುವ ಶಬ್ದ, ಫಿರಂಗಿಗಳ ಆರ್ಭಟ, ಒಟ್ಟಿನಲ್ಲಿ ಅವ್ಯವಸ್ಥೆ—ಎಷ್ಟೋ ಹೊತ್ತಿನ ವರೆಗೂ ನಿಲ್ಲಲೇ ಇಲ್ಲ.

## ೬

ಬೆಳಕು ಹರಿಯುತ್ತ ಬಂದಿತ್ತು; ನಕ್ಷತ್ರಗಳು ಮಸುಳಿಸಿದುವು; ಕತ್ತಲೆ ಯಲ್ಲಿ ಮೆಲ್ಲಮೆಲ್ಲನೆ ಪದಾರ್ಥಗಳ ರೂಪರೇಖೆ ಅಸ್ಪಷ್ಟವಾಗಿ ಕಾಣಿಸತೊಡ ಗಿತು. ಆ ಸಮಯದಲ್ಲಿ ನೂರಾರು ಮಂದಿ ಬೀದಿಗುಡಿಸುವವರು, ಕಸ ತೆಗೆಯು ವವರು, ಮಣ್ಣು ಹೊರುವವರು, ಬಡಗಿಗಳು ಮುಂತಾದ ಕೆಲಸಗಾರರು ಮಾರ್ಕಟ್ಟೆಯ ಚೌಕದಲ್ಲಿ ನೆರೆದು ಮನಃಪೂರ್ವಕವಾಗಿ ಕೆಲಸಮಾಡತೊಡಗಿ

ದರು. ಬಿದ್ದುಹೋದ ಛಾವಣಿಗಳನ್ನು ಎತ್ತಿಕಟ್ಟಿದರು; ಮುರಿದ ಸೇತುವೆಗಳನ್ನು ಸರಿಮಾಡಿದರು, ಬೇಲಿಗಳ ಕಂಡಿಗಳನ್ನು ಮುಚ್ಚಿದರು, ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಮಡಕೆಚೂರುಗಳನ್ನೂ ಚಿಕ್ಕ ತುಂಡುಗಳನ್ನೂ ಎತ್ತಿಹಾಕಿದರು. ಬೆಳಗಾಗಿ ಸೂರ್ಯಕಿರಣ ಚೌಕದಲ್ಲಿ ಬಿದ್ದಾಗ ರಾತ್ರಿಯ ಅಲ್ಲೋಲಕಲ್ಲೋಲದ ಅವ್ಯವಸ್ಥೆಯ ಸುಳಿವೂ ಕಾಣುತ್ತಿರಲಿಲ್ಲ. ಮಾರ್ಕಟ್ಟೆ ತೆರೆಯಿತು.

ರಾತ್ರಿಯೆಲ್ಲಾ ಸಮಾಧಿಕಂಬದ ಬಳಿ ಮಲಗಿ ಚೆನ್ನಾಗಿ ವಿಶ್ರಾಂತಿ ತೆಗೆದುಕೊಂಡು ಬೆಳಗ್ಗೆ ಎದ್ದು ಖೋಜಾ ನಸ್ರೆದ್ದೀನ್ ಮಾರ್ಕಟ್ಟೆಯ ಚೌಕಕ್ಕೆ ಬಂದನು. ಅಷ್ಟು ಹೊತ್ತಿಗಾಗಲೆ ಜನರ ಓಡಾಟ ಗಡಿಬಿಡಿ ಪ್ರಾರಂಭವಾಗಿತ್ತು; ಬಗೆಬಗೆಯ ಬಣ್ಣದ ಉಡುಪು ಧರಿಸಿ ನಾನಾ ಭಾಷೆಗಳನ್ನಾಡುವ ನಾನಾ ಜಾತಿಯ ಜನ ಕಿಕ್ಕಿರಿದು ತುಂಬಿದ್ದರು. "ದಾರಿಬಿಡಿ! ದಾರಿಬಿಡಿ!" ಎಂದು ಕೂಗುತ್ತಾ ಖೋಜಾ ನಸ್ರೆದ್ದೀನ್ ಮೆಲ್ಲಗೆ ಮುಂಬರಿದನು. ವರ್ತಕರು, ನೀರು ಹೊರುವವರು, ಕ್ಷೌರಕರು, ಸ್ಥಳದಿಂದ ಸ್ಥಳಕ್ಕೆ ಅಲೆದಾಡುವ ದರವೇಶಿಗಳು,* ಭಿಕ್ಷುಕರು, ಸಂತೆಸ್ಥಳದಲ್ಲಿ ಹಲ್ಲು ಕೀಳುವ ದಂತವೈದ್ಯರು—ಈ ವೊದಲಾದವರೆಲ್ಲ ಕೂಗಿ ಮಾತಾಡುತ್ತಿದ್ದ ಆ ಗದ್ದಲದಲ್ಲಿ ತನ್ನ ಮಾತೇ ತನಗೆ ಕೇಳುವುದಿಲ್ಲವೇನೋ ಎನ್ನುವಹಾಗಿತ್ತು. ಹಲವು ಬಣ್ಣದ ಖಿಲತ್ತುಗಳು, ರುಮಾಲುಗಳು, ಕುದುರೆ ಕೂದಲಿನ ಕಂಬಳಿಗಳು, ಜಂಖಾನಗಳು; ಚೀನಾ ಭಾಷೆ, ಅರಾಬಿಕ್, ಮಂಗೋಲಿಯನ್ ಮತ್ತು ಇನ್ನೂ ಅನೇಕ ಭಾಷೆಗಳು—ಇವೆಲ್ಲ ಒಂದರೊಡನೊಂದು ಬೆರೆತುಕೊಂಡು ಹೋಗಿದ್ದವು. ಗುಂಪು ತೂಗಾಡಿ ನೂಕಾಡಿ ಕಲಕಲನೆ ಸದ್ದುಮಾಡಿ ಸಾಗುತ್ತಿತ್ತು.

ಆಕಾಶ ಮುಚ್ಚುವಂತೆ ದೂಳೆಬ್ಬಿಸುತ್ತಾ ಜನಪ್ರವಾಹ ಮಾರ್ಕಟ್ಟೆಯೊಳಕ್ಕೆ ಬಂದು ತಮ್ಮ ತಮ್ಮ ಸಾಮಾನುಗಳನ್ನು ಹರಡಿಕೊಂಡರು. ಕುಂಬಾರರು ಸಣ್ಣ ಸಣ್ಣ ಕಡ್ಡಿಗಳಿಂದ ತಮ್ಮ ಮಡಕೆಕುಡಿಕೆಗಳನ್ನು ಮೆಲ್ಲಗೆ ತಟ್ಟುತ್ತ, ಅಲ್ಲಿ ಹಾದು ಹೋಗುವವರ ಖಿಲತ್ತಿನ ಅಂಚನ್ನು ಹಿಡಿದೆಳೆದುಕೊಂಡು, ಅವರಿಗೆ ತಮ್ಮ ಮಡಕೆಯ ನಾದ ಎಷ್ಟು ಚೆನ್ನಾಗಿದೆಯೆಂದು ತೋರಿಸುತ್ತಿದ್ದರು; ಆ ನಾದವನ್ನಾಲಿಸಿ ಅವರು ಕೊಂಡುಕೊಳ್ಳುವರೆಂದು

---

*ದರವೇಶಿ = ಒಂದು ಬಗೆಯ ಮುಸ್ಲಿಂ ಸಾಧು.

ಆವರಣಿಕೆ. ಕಂಚುಗಾರರ ಸಾಲಿನಲ್ಲಿ ತಾಮ್ರದ ಪಾತ್ರೆಗಳಿಂದ ಹೊರಡುವ ಕಾಂತಿ ಕಣ್ಣು ಕೋರೈಸುತ್ತಿತ್ತು; ತಟ್ಟೆಗಳು ಮತ್ತು ಹೂಜಿಗಳ ಮೇಲೆ ಬಗೆಬಗೆಯ ನಕಾಸೆ ಕೆತ್ತುವುದಕ್ಕಾಗಿ ಸಣ್ಣ ಸಣ್ಣ ಕೊಡತಿಗಳಿಂದ ಬಡಿಯುತ್ತಿರಲು ಸದ್ದು ಗಗನವನ್ನು ತುಂಬಿತು; ಅವರು ತಮ್ಮ ಕೆಲಸಗಾರಿಕೆಯನ್ನು ಹೊಗಳಿಕೊಳ್ಳುತ್ತಲೂ ಅಕ್ಕಪಕ್ಕದವರದನ್ನು ಹಳಿಯುತ್ತಲೂ ಗಿರಾಕಿಗಳನ್ನು ಕರೆಯುತ್ತಿದ್ದರು. ಆಭರಣಗಾರರು ಸಣ್ಣ ಸಣ್ಣ ಮೂಸೆಗಳಲ್ಲಿ ಬೆಳ್ಳಿಯನ್ನು ಕರಗಿಸುತ್ತಿದ್ದರು; ಚಿನ್ನದ ತಗಡು ಬಡಿಯುತ್ತಿದ್ದರು, ಮತ್ತು ಶ್ರೇಷ್ಠವಾದ ಇಂಡಿಯನ್ ವಜ್ರಗಳನ್ನು ತೊಗಲ ಬಿಲ್ಲೆಗಳ ಮೇಲೆ ಉಜ್ಜಿ ಮೆರುಗುಕೊಡುತ್ತಿದ್ದರು.

ಆಗಾಗ ತಂಗಾಳಿ ಬೀಸಿ ಸುಗಂಧಕಾರರ ಸಾಲಿನಿಂದ ಪರಿಮಳವನ್ನು ಹೊತ್ತು ತರುತ್ತಿತ್ತು. ಅಲ್ಲಿ ಗುಲಾಬಿ ಅತ್ತರು, ಪನ್ನಂಬರ, ಕಸ್ತೂರಿ ಮತ್ತು ಇತರ ಅನೇಕ ಬಗೆಯ ಮಸಾಲೆ ಪದಾರ್ಥಗಳನ್ನು ಮಾರುತ್ತಿದ್ದರು. ಒಂದು ಕಡೆ ಜಮಖಾನೆಯ ಸಾಲು; ಅಲ್ಲಿ ಪರ್ಷಿಯನ್ ಡಮಾಸ್ಕಸ್ ಮತ್ತು ತೆಕ್ಕೆ ರತ್ನಗಂಬಳಿಗಳು, ಕಾಷ್ಗರಿನ ಹೆಣಿಗೆ ಜಮಖಾನಗಳು, ಬಣ್ಣಬಣ್ಣದ ಕುದುರೆ ವಸ್ತ್ರಗಳು, ಅಗ್ಗವಾದವು ಮತ್ತು ದುಬಾರಿ ಬೆಲೆಯವು—ಎಲ್ಲವನ್ನೂ ಇಟ್ಟಿದ್ದರು. ರೇಷ್ಮೆಯ ಸಾಲು, ಜೀನುಗಾರರ ಸಾಲು, ಆಯುಧಗಾರರ ಸಾಲು, ಬಣ್ಣಗಾರರ ಸಾಲು, ಗುಲಾಮವ್ಯಾಪಾರದ ಕಟ್ಟೆ, ಉಣ್ಣೆ ಎಕ್ಕುವವರ ಸಾಲು—ಮುಂತಾದ ಕಡೆಗಳಲ್ಲೆಲ್ಲ ಖೋಜಾ ನಸ್ರೆದ್ದೀನ್ ಕತ್ತೆಯ ಮೇಲೆ ಸುತ್ತಾಡಿ ಬಂದನು.

ಇಷ್ಟೆಲ್ಲಾ ಸಂತೆಯ ಪ್ರಾರಂಭದಲ್ಲೇ; ಇನ್ನೂ ಮುಂದೆ ಬೇರೆ ಬೇರೆ ನೂರಾರು ಸಾಲುಗಳು ಹರಡಿದ್ದವು. ಖೋಜಾ ನಸ್ರೆದ್ದೀನ್ ಕತ್ತೆಯ ಮೇಲೆ ಕೂತು ಒಳಹೊಕ್ಕಂತೆಲ್ಲಾ ಸದ್ದುಗದ್ದಲ ಗುಂಪಿನ ನೂಕುನುಗ್ಗಲು ಹೆಚ್ಚುತ್ತಲೇ ಇತ್ತು. ಹೌದು, ಇದು ಅದೇ ಸಂತೆ; ಪ್ರಖ್ಯಾತವಾದ ಅಸದೃಶವಾದ ಬುಖಾರದ ಸಂತೆ; ದಮಸ್ಕಸಿನಲ್ಲಾಗಲಿ, ಕಡೆಗೆ ಪ್ರತ್ಯಕ್ಷ ಬಾಗ್ದಾದಿನಲ್ಲೇ ಆಗಲಿ ಇಂಥ ಸಂತೆ ಇಲ್ಲ.

ವ್ಯಾಪಾರದ ಸಾಲುಗಳನ್ನೆಲ್ಲಾ ಅಂತೂ ಇಂತೂ ದಾಟಿ ಬಂದನು. ಎದುರಿಗೆ ಅಮೀರನ ಅರಮನೆ ಕಾಣಿಸಿತು. ಅದರ ಸುತ್ತ ಎತ್ತರವಾದ ಕೋಟೆ ಆವರಿಸಿತ್ತು. ನಾಲ್ಕು ಮೂಲೆಯ ಗೋಪುರಗಳನ್ನೂ ಅಂದವಾಗಿ ಅಲಂಕರಿ

ಸಿದ್ದರು. ಅರಬ್ಬಿ ಮತ್ತು ಪರ್ಶಿಯಾ ದೇಶದ ಕೆಲಸಗಾರರು ಅನೇಕ ವರ್ಷ ಕಷ್ಟಪಟ್ಟು ಕೆಲಸಮಾಡಿ ಅದನ್ನು ಅಲಂಕರಿಸಿದ್ದರು.

ಅರಮನೆಯ ಹೆಬ್ಬಾಗಿಲ ಹೊರಗಡೆ ಒಂದು ವಿಚಿತ್ರವಾದ ಬೀಡು ಬಿಟ್ಟಿತ್ತು. ಹರುಕಲು ಬಟ್ಟೆಯ ಮೇಲ್ಛಾವಣಿಯ ನೆರಳಿನಲ್ಲಿ ಸೆಕೆಯಲ್ಲಿ ಬಳಲಿ ಬೆಂಡಾದ ಕೆಲವು ಜನ ಜೊಂಡುಚಾಪೆಗಳ ಮೇಲೆ ಕುಳಿತಿದ್ದರು—ಕೆಲವರು ಒಂಟೊಂಟಿಯಾಗಿ, ಕೆಲವರು ತಮ್ಮ ಕುಟುಂಬದವರ ಜೊತೆಯಲ್ಲಿ ಕುಳಿತಿದ್ದರು. ಹೆಂಗಸರು ಮಕ್ಕಳಿಗೆ ಮೊಲೆಯೂಡಿಸುತ್ತಲೋ ಮಡಕೆಗಳಲ್ಲಿ ಅಡಿಗೆ ಮಾಡು ತ್ತಲೋ ಖಲತ್ ಮತ್ತು ದಟ್ಟಿಗಳನ್ನು ಹೊಲಿಯುತ್ತಲೋ ಇದ್ದರು. ಅರೆ ಬೆತ್ತಲೆಯಾದ ಮಕ್ಕಳು ಕೂಗುತ್ತ, ಹೊಡೆದಾಡುತ್ತ, ಎಡವಿ ಬೀಳುತ್ತ ಸುತ್ತ ಮುತ್ತ ಓಡಾಡುತ್ತಿದ್ದವು; ಬಹಿರಂಗವಾಗಿ ಕಾಣುವಂತೆ ಬಿಡಬಾರದೆಂದು ಪರಿಗಣಿಸಿರುವ ತಮ್ಮ ದೇಹಭಾಗವನ್ನು ಸ್ವಲ್ಪವೂ ಗೌರವಭಾವವಿಲ್ಲದೆ ಪೂರ್ಣ ನಿರ್ಲಕ್ಷ್ಯದಿಂದ ಅರಮನೆಯ ಕಡೆಗೆ ತಿರುಗಿಸಿ ಬಿಡುತ್ತಿದ್ದವು. ಗಂಡಸರು ಮಲಗಿಯೋ, ಮಾಡಲು ಕೆಲಸವಿಲ್ಲದೆ ವ್ಯರ್ಥವಾಗಿ ಅಲೆದಾಡುತ್ತಲೋ ಇದ್ದರು; ಅಥವಾ ಟೀ ಪಾತ್ರೆಗಳ ಸುತ್ತ ಕುಳಿತು ಹರಟೆ ಹೊಡೆಯುತ್ತಿದ್ದರು.

"ಓಹೋ! ಈ ಜನರು ಇಲ್ಲಿ ಬೀಡುಬಿಟ್ಟು ಒಂದು ದಿನಕ್ಕಿಂತ ಹೆಚ್ಚಾಗಿರಬೇಕು!" ಎಂದುಕೊಂಡ ಖೋಜಾ ನಸ್ರೆದ್ದೀನ್.

ಇಬ್ಬರು ಅವನ ದೃಷ್ಟಿಯನ್ನು ಆಕರ್ಷಿಸಿದರು. ಒಬ್ಬ ಪಟ್ಟೆದಲೆಯ ವನು, ಮತ್ತೊಬ್ಬ ಗಡ್ಡದವನು. ಅವರಿಬ್ಬರೂ ನೆಲದ ಮೇಲೆ, ತಮ್ಮ ತಮ್ಮ ಬಟ್ಟೆಛಾವಣಿಯ ಕೆಳಗೆ, ಮಲಗಿದ್ದರು. ಇಬ್ಬರಿಗೂ ನಡುವೆ ಒಂದು ಬಡಕಲು ಆಡನ್ನು ಒಂದು ಪಾಪ್ಲರ್ ಗೂಟಕ್ಕೆ ಕಟ್ಟಿಹಾಕಿತ್ತು. ಆಡು ಎಷ್ಟು ಬಡಕ ಲಾಗಿತ್ತೆಂದರೆ, ಅದರ ಎದೆ ಮೂಳೆಗಳು ಚರ್ಮವನ್ನು ಚುಚ್ಚಿ ಹೊರಬರು ತ್ತವೆಯೋ ಎಂಬಂತೆ ಕಾಣುತ್ತಿತ್ತು. ಅದು ಎದೆ ಕರಗಿಸುವಂತೆ ಅರಚುತ್ತಿತ್ತು; ಆ ಗೂಟವನ್ನೇ ಕಚ್ಚಿ ತಿನ್ನಲು ಸಾಹಸ ಮಾಡುತ್ತಿತ್ತು.

ಖೋಜಾ ನಸ್ರೆದ್ದೀನ್ ಸ್ವಭಾವವಾಗಿಯೇ ಕುತೂಹಲಶಾಲಿ; ವಿಷಯ ಗಳನ್ನು ಹೊಕ್ಕು ಹೊಕ್ಕು ಅರಿಯಬೇಕೆಂದು ಮುನ್ನುಗ್ಗುವುದು ಅವನ ಜಾಯ ಮಾನ. ಅವನು ತಡೆಯಲಾರದೆ ಅವರನ್ನು ಪ್ರಶ್ನೆಮಾಡಿದನು

"ಘನವಾದ ಬುಖಾರ ಪಟ್ಟಣದ ಪೌರರೇ, ನಿಮಗೆ ಶಾಂತಿಯಿರಲಿ!

ನೀವು ಜಿಪ್ಸಿ ಗುಂಪಿಗೆ ಸೇರಿದ್ದು ಯಾವಾಗಿನಿಂದ, ಹೇಳಿ."

ಗಡ್ಡದ ಮನುಷ್ಯ ಉತ್ತರ ಕೊಟ್ಟನು: "ಅಯ್ಯಾ ಪ್ರಯಾಣಿಕಾ, ನಮ್ಮನ್ನು ಹಾಸ್ಯಮಾಡಬೇಡ. ನಾವು ಜಿಪ್ಸಿಗಳಲ್ಲ; ನಿನ್ನಷ್ಟೆಯೇ ಒಳ್ಳೆಯ ಮುಸ್ಲಿಮರು."

"ಹಾಗಾದರೆ, ನೀವು ಒಳ್ಳೆಯ ಮುಸ್ಲಿಮರಾದರೆ, ಮನೆಯಲ್ಲೇಕೆ ವಾಸಮಾಡುತ್ತಿಲ್ಲ? ಅರಮನೆಯ ಹೆಬ್ಬಾಗಿಲಲ್ಲಿ ಏನನ್ನು ನಿರೀಕ್ಷಿಸಿ ಕಾಯುತ್ತಿದ್ದೀರಿ?"

"ನಮ್ಮ ಅಮೀರರ, ಯಾರ ಪ್ರಭೆಯು ಸೂರ್ಯಪ್ರಭೆಯನ್ನು ಮುಚ್ಚಿ ಮರೆಮಾಡುವುದೋ ಆ ನಮ್ಮೊಡೆಯ ಪರಮ ಪ್ರಭು ಮಹಾಸ್ವಾಮಿಯವರ ನ್ಯಾಯವೂ ದಯಾಮಯವೂ ಆದ ತೀರ್ಮಾನವನ್ನು ನಿರೀಕ್ಷಿಸಿ ಕಾಯುತ್ತಿದ್ದೇವೆ."

ಖೋಜಾ ನಸ್ರೆದ್ದೀನ್, ಹಾಸ್ಯ ವ್ಯಂಗ್ಯವನ್ನು ಸ್ವಲ್ಪವೂ ಮರೆಮಾಡದೆ, "ಹಾಗೋ! ಸೂರ್ಯಪ್ರಭೆಯನ್ನು ಮರೆಮಾಡುವ ದಿವ್ಯ ಪ್ರಭೆಯುಳ್ಳ, ನಿಮ್ಮೊಡೆಯ ಪರಮ ಪ್ರಭು ಮಹಾಸ್ವಾಮಿಯವರಾದ ಅಮೀರರ ನ್ಯಾಯವೂ ದಯಾಮಯವೂ ಆದ ತೀರ್ಮಾನವನ್ನು ನಿರೀಕ್ಷಿಸಿಕೊಂಡು ನೀವು ಬಹಳ ಕಾಲದಿಂದ ಇಲ್ಲಿ ಕಾಯುತ್ತಿದ್ದೀರೋ?" ಎಂದು ಕೇಳಿದನು

ಬಕ್ಕದಲೆಯವನು ಉತ್ತರ ಕೊಟ್ಟನು: "ಓ ಪ್ರಯಾಣಿಕಾ; ನಾವು ಐದು ವಾರಕ್ಕೂ ಹೆಚ್ಚು ಕಾಲದಿಂದಲೂ ಇಲ್ಲಿ ಕಾಯುತ್ತಿದ್ದೇವೆ. ಈ ಗಡ್ಡದ ಕುತರ್ಕಿ—ಅಲ್ಲಾ ಇವನಿಗೆ ತಕ್ಕ ಶಿಕ್ಷೆ ಮಾಡಲಿ, ಅವನ ಹಾಸಿಗೆಯ ಮೇಲೆ ಸೈತಾನನು ತನ್ನ ಬಾಲ ಹರಡಲಿ—ಈ ಗಡ್ಡ ಬಿಟ್ಟಿರುವ ಹೋರಿಳು ಮಾತಿನ ಕುತರ್ಕಿ ನನ್ನ ಅಣ್ಣ. ನಮ್ಮಪ್ಪ ನಮಗೆ ಸ್ವಲ್ಪ ಆಸ್ತಿಯನ್ನು ಬಿಟ್ಟು ಸತ್ತು ಹೋದ. ಈ ಆಡೊಂದು ಹೊರತು ಉಳಿದದ್ದೆಲ್ಲವನ್ನೂ ಹಂಚಿಕೊಂಡಿದ್ದೇವೆ. ಇದು ಯಾರಿಗೆ ಸೇರಬೇಕೋ ಅಮೀರರೇ ನಿರ್ಧರಿಸಲಿ!" ಎಂದನು.

"ನಿಮ್ಮ ಉತ್ತರಾಧಿಕಾರದಿಂದ ನೀವು ಪಡೆದುಕೊಂಡ ಉಳಿದ ಆಸ್ತಿಯೆಲ್ಲಿದೆ?"

"ಎಲ್ಲವನ್ನೂ ಹಣಕ್ಕಾಗಿ ಮಾರಿಕೊಂಡು ಬಿಟ್ಟೆವು. ಮನವಿಗಳನ್ನು ಬರೆಯುವ ಕಾರಕೂನರು, ಅವನ್ನು ತೆಗೆದುಕೊಳ್ಳುವ ಗುಮಾಸ್ತರು, ಸಿಪಾಯಿ

ಗಳು, ಇನ್ನೂ ಬೇರೆಯವರು— ಇವರಿಗೆಲ್ಲ ಹಣ ಕೊಡಬೇಕಾಗುತ್ತದೆಯಷ್ಟೆ!"

ಅಷ್ಟು ಹೊತ್ತಿಗೆ ಅಲ್ಲಿಗೊಬ್ಬ ಕೊಳಕ ದರವೇಶಿ ಬಂದನು; ಅವನು ಬರಿಗಾಲಿನಲ್ಲಿದ್ದನು; ತುದಿ ಚೂಪಾದ ಟೋಪಿ ಹಾಕಿಕೊಂಡು, ಕಪ್ಪನೆಯ ಸೋರೆ ಬುರುಡೆಯನ್ನು ಅವಚಿಕೊಂಡಿದ್ದನು. ಅವನನ್ನು ಕಂಡ ಕೂಡಲೆ ಬಕ್ಕ ತಲೆಯವನು ತಟ್ಟನೆ ನೆಗೆದೆದ್ದು ಅವನ ಬಳಿಗೆ ಓಡಿದನು.

"ಸಾಧುಪುರುಷಾ, ನನಗೋಸ್ಕರ ಪ್ರಾರ್ಥನೆ ಮಾಡಿರಿ! ತೀರ್ಪು ನನಗೆ ಅನುಕೂಲವಾಗಲೆಂದು ಪ್ರಾರ್ಥನೆ ಮಾಡಿರಿ!"

ದರವೇಶಿ ಹಣ ತೆಗೆದುಕೊಂಡು ಪ್ರಾರ್ಥಿಸಲು ಪ್ರಾರಂಭಿಸಿದನು. ಅವನು ಪ್ರಾರ್ಥನೆಯ ಕಡೆಯ ಪದಗಳನ್ನು ಉಚ್ಚರಿಸಿದ ಕೂಡಲೆ ಬಕ್ಕದಲೆಯವನು ಅವನ ಸೋರೆ ಬುರುಡೆಯೊಳಕ್ಕೆ ಮತ್ತೊಂದು ನಾಣ್ಯವನ್ನೆಸೆದನು; ಮತ್ತೆ ಪ್ರಾರ್ಥನೆ ಮೊದಲಿನಿಂದ ಪ್ರಾರಂಭವಾಯಿತು.

ಗಡ್ಡದವನು ಕಳವಳಹೊಂದಿ ಎದ್ದು ನಿಂತು ಸುತ್ತಲೂ ಗುಂಪಿನ ಕಡೆ ಕಣ್ಣೋಡಿಸಿದನು. ತುಂಬ ಹೊತ್ತು ಹುಡುಕಿದ ಮೇಲೆ ಅವನಿಗೆ ಇನ್ನೊಬ್ಬ ದರವೇಶಿ ಕಾಣಿಸಿದನು. ಅವನು ಮೊದಲನೆಯವನಿಗಿಂತಲೂ ಹೆಚ್ಚು ಕೊಳಕ, ಅವನ ಬಟ್ಟೆ ಹೆಚ್ಚು ಹರುಕಲು; ಆದ್ದರಿಂದ ಅವನ ಪವಿತ್ರತೆ ಇನ್ನೂ ಹೆಚ್ಚು! ಈ ದರವೇಶಿ ದುಬಾರಿ ಹಣ ಕೇಳಿದನು. ಗಡ್ಡದವನು ಚೌಕಾಸಿ ಮಾಡಲು ನೋಡಿದನು; ಆದರೆ ದರವೇಶಿ ತನ್ನ ಟೋಪಿಯ ಕೆಳಕ್ಕೆ ಕೈ ಹಾಕಿ ತಡಕಿ ಒಂದು ಹಿಡಿ ದಪ್ಪ ದಪ್ಪ ಹೇನುಗಳನ್ನು ಹೊರದೆಗೆದನು; ಇವನ್ನು ಕಂಡು ಗಡ್ಡದವನಿಗೆ ಈ ದರವೇಶಿಯ ಪವಿತ್ರತೆಯಲ್ಲಿ ನಂಬಿಕೆ ಬಂತು; ಮರುಮಾತಾಡದೆ ಅವನು ಕೇಳಿದಷ್ಟು ಕೊಡಲು ಒಪ್ಪಿಕೊಂಡನು. ಗೆಲುವಿನ ದೃಷ್ಟಿ ಬೀರಿ ಜಂಬದಿಂದ ತಮ್ಮನ ಕಡೆ ನೋಡುತ್ತ ಅವನು ದರವೇಶಿಗೆ ಹಣ ಎಣಿಸಿ ಕೊಟ್ಟನು.

ಆ ದರವೇಶಿ ಮಂಡಿಯೂರಿ ಕುಳಿತು ಗಟ್ಟಿಯಾಗಿ ಪ್ರಾರ್ಥಿಸತೊಡಗಿದನು. ಅವನ ಮಂದ್ರಸ್ವರ ಮೊದಲನೆಯ ದರವೇಶಿಯ ಸಣ್ಣ ದನಿಯನ್ನು ಮುಳುಗಿಸಿಬಿಟ್ಟಿತು. ಬಕ್ಕದಲೆಯವನಿಗೆ ಆತಂಕ ಹತ್ತಿಕೊಂಡಿತು; ಕೂಡಲೆ ತನ್ನ ಕಡೆಯ ದರವೇಶಿಗೆ ಮತ್ತೆ ಕೆಲವು ನಾಣ್ಯಗಳನ್ನು ಕೊಟ್ಟನು. ಅದೇ ರೀತಿ ಗಡ್ಡದವನೂ ತನ್ನ ಕಡೆಯವನಿಗೆ ಕೊಟ್ಟನು. ಇಬ್ಬರು ದರವೇಶಿಗಳೂ

ಒಬ್ಬರನ್ನೊಬ್ಬರು ವಿಚಾರಿಸಬೇಕೆಂಬ ಹುರುಡಿನಿಂದ ತಮ್ಮ ಆರ್ಭಟವನ್ನು ಹೆಚ್ಚಿಸಿ ದೊಡ್ಡ ಬೊಬ್ಬೆಯೆಬ್ಬಿಸಿದರು. ಆ ಬೊಬ್ಬೆಯನ್ನು ಕೇಳಿ ತನ್ನ ಕಿವಿಯಲ್ಲಿ ಕಿವುಡಾಗುವುದೋ ಎಂಬ ಹೆದರಿಕೆಯಿಂದ ಸ್ವರ್ಗದಲ್ಲಿ ಅಲ್ಲಾ ತನ್ನ ದಿವ್ಯಮಂದಿರದ ಕಿಟಕಿಗಳನ್ನೆಲ್ಲಾ ಮುಚ್ಚಿಬಿಡುವಂತೆ ದೇವದೂತರಿಗೆ ಆಜ್ಞಾಪಿಸಿರಬೇಕು! ಮರದ ಗೂಟವನ್ನೇ ಹಲ್ಲಿನಿಂದ ಕಚ್ಚಿ ಕಡಿಯುತ್ತಿದ್ದ ಆಡು ಮನಕರಗಿಸುವಂತೆ ಒಂದೇ ಸಮನೆ ಅರಚುತ್ತಲೇ ಇತ್ತು.

ಬಕ್ಕತಲೆಯ ಸೋದರ ಅದಕ್ಕೊಂದು ಅರ್ಧ ಕಂತೆ ಕ್ಲೋವರ್ ಎಸೆದನು. ಅದನ್ನು ಕಂಡು ಗಡ್ಡದವನು,

"ಕೊಳೆತು ನಾರುವ ಆ ನಿನ್ನ ಕೊಳಕು ಕ್ಲೋವರನ್ನು ಆಚೆ ತೆಗೆದುಕೊ; ನನ್ನ ಆಡಿಗೆ ಹಾಕಬೇಡ!" ಎಂದು ಅಬ್ಬರಿಸಿದನು.

ಅವನು ಆ ಕ್ಲೋವರನ್ನು ಒದೆದು ಆಚೆ ನೂಕಿಬಿಟ್ಟು, ಆ ಪ್ರಾಣಿಯ ಮುಂದೆ ಒಂದು ತೌಡಿನ ಮಡಕೆಯನ್ನಿಟ್ಟನು.

"ಕೂಡದು!" ಎಂದು ಕೋಪದಿಂದ ಕೂಗಿದ ಬಕ್ಕತಲೆಯ ಸೋದರ. "ನನ್ನ ಆಡು ನಿನ್ನ ತೌಡನ್ನು ತಿನ್ನಕೂಡದು!"

ಮಡಕೆ ಕ್ಲೋವರ್ ಕಂತೆಯ ಜೊತೆಗೇ ಹೋಯಿತು. ಗಡಿಗೆಯೊಡೆದು ಅದರೊಳಗಿನ ತೌಡು ದಾರಿಯ ದೂಳಿನಲ್ಲಿ ಬೆರೆಯಿತು. ಅಣ್ಣತಮ್ಮಂದಿರು ಒಬ್ಬರಮೇಲೊಬ್ಬರು ನುಗ್ಗಿ, ಕೈಕೈ ಹತ್ತಿ ಹೊಡೆದಾಡುತ್ತಾ, ನೆಲದ ಮೇಲೆ ಬಿದ್ದು ಉರುಳಾಡತೊಡಗಿದರು.

"ಇಬ್ಬರು ಬೆಪ್ಪುತಕಡಿಗಳು ಹೊಡೆದಾಡುತ್ತಿದ್ದಾರೆ; ಇಬ್ಬರು ಆಷಾಢಭೂತಿಗಳು ಪ್ರಾರ್ಥನೆಮಾಡುತ್ತಿದ್ದಾರೆ; ಈ ನಡುವೆ ಆಡು ಹಸಿವಿನಿಂದ ಸತ್ತು ಹೋಯಿತು" ಎಂದನು ಖೋಜಾ ನಸ್ರೆದ್ದೀನ್, ತಲೆ ಅಳ್ಳಾಡಿಸುತ್ತಾ. "ಸದ್ಗುಣಶಾಲಿಗಳೂ ಪರಸ್ಪರ ಪ್ರೀತಿಪಾತ್ರರೂ ಆದ ಓ ಭ್ರಾತೃವರ್ಯರಾ, ಇತ್ತ ನೋಡಿರಿ!—ಅಲ್ಲಾ ತನ್ನದೇ ಆದ ರೀತಿಯಲ್ಲಿ ನಿಮ್ಮ ವಿವಾದವನ್ನು ಬಗೆಹರಿಸಿದ್ದಾನೆ: ನಿಮ್ಮಿಬ್ಬರ ಕೈಗೂ ಒಪ್ಪಿಸದೆ ಆಡನ್ನು ತಾನೇ ತೆಗೆದುಕೊಂಡಿದ್ದಾನೆ" ಎಂದನು.

ಅಣ್ಣತಮ್ಮಂದಿರಿಗೆ ಬುದ್ಧಿ ತಿಳಿಯಿತು; ಒಬ್ಬರನ್ನೊಬ್ಬರು ಹಿಡಿದಿದ್ದವರು ಕೈ ಬಿಟ್ಟು ಎದ್ದು ನಿಂತರು; ಮುಖವೆಲ್ಲ ರಕ್ತ ತುಂಬಿ ಕೆಂಚಗಾಗಿ ಬಹಳ

ಹೊತ್ತು ಆಡನ್ನೇ ನೆಟ್ಟು ನೋಡುತ್ತಿದ್ದರು. ಕಟ್ಟ ಕಡೆಗೆ ಬಕ್ಕತಲೆಯುವನೆಂದನು:

"ಅದರ ಚರ್ಮ ಸುಲಿಸಬೇಕು."

"ಆ ಕೆಲಸವನ್ನು ನಾನು ಮಾಡುತ್ತೇನೆ" ಎಂದು ಗಡ್ಡದ ಸೋದರ ತಟಕ್ಕನೆ ನುಡಿದನು.

"ನೀನೇ ಏಕೆ?" ಎಂದು ಇನ್ನೊಬ್ಬ ಕೇಳಿದ; ಅವನ ಬೋಳು ತಲೆ ರೋಷದಿಂದ ಕೆಂಪಾಯಿತು.

"ಆಡು ನನ್ನದು; ಅದರ ಚರ್ಮವೂ ನನ್ನದೇ."

"ಅಲ್ಲ; ಅದು ನನ್ನದು!"

ಖೋಜಾ ನಸ್ರೆದ್ದೀನ್ ಒಂದು ಮಾತಾಡುವುದಕ್ಕೂ ಇಲ್ಲ, ಅಷ್ಟರಲ್ಲಾಗಲೆ ಅವರಿಬ್ಬರೂ ಮತ್ತೆ ಕೈಕೈ ಹತ್ತಿ ತೆಕ್ಕೆಬಿದ್ದು ನೆಲದ ಮೇಲೆ ಉರುಳುತ್ತ ಇದ್ದರು. ಬಲವಾದ ಮುಷ್ಟಿಯೊಂದು ಕಪ್ಪುಗೂದಲ ಕಂತೆಯೊಂದನ್ನು ಹಿಡಿದಿರುವುದು ಕ್ಷಣಕಾಲ ಕಾಣಿಸಿತು; ಇದನ್ನು ಕಂಡು ಖೋಜಾ ನಸ್ರೆದ್ದೀನ್ ಅವರಿಬ್ಬರಲ್ಲಿ ಅಣ್ಣ ತನ್ನ ಗಡ್ಡದಲ್ಲಿ ತಕ್ಕಷ್ಟು ಭಾಗವನ್ನೇ ಕಳೆದುಕೊಂಡಿರಬೇಕೆಂದು ತೀರ್ಮಾನಿಸಿದನು.

ಇದನ್ನು ತಿದ್ದುವುದಸಾಧ್ಯವೆಂಬ ನಿರಾಶೆಯ ಸಿಟ್ಟುಸಿರುಬಿಡುತ್ತ ಅವನು ಮುಂದೆ ನಡೆದನು.

ನಡುಕಟ್ಟಿಗೆ ಇಕ್ಕುಳ ಸೆಕ್ಕಿಸಿಕೊಂಡಿದ್ದ ಕಮ್ಮಾರನೊಬ್ಬನು ಅವನೆದುರಿಗೆ ಬರುತ್ತಿದ್ದನು. ಹಿಂದಿನ ದಿನ ಕೊಳದ ಬಳಿ ಖೋಜಾ ನಸ್ರೆದ್ದೀನನನ್ನು ಮಾತಾಡಿಸಿದ್ದ ಕಮ್ಮಾರನೇ ಅವನು.

"ನಮಸ್ಕಾರವಯ್ಯಾ, ಕಮ್ಮಾರಾ" ಎಂದು ನಸ್ರೆದ್ದೀನ್ ಸಂತೋಷದಿಂದ ಅವನನ್ನು ವಂದಿಸಿದನು. "ಇಗೋ ಇಲ್ಲಿ ಮತ್ತೆ ನಾವು ಸಂಧಿಸಿದ್ದೇವೆ. ನನ್ನ ವಾಗ್ದಾನವನ್ನು ನೆರವೇರಿಸುವುದಕ್ಕೆ ನನಗಿನ್ನೂ ಅವಕಾಶವಾಗಿಲ್ಲ. ಅಯ್ಯಾ ಕಮ್ಮಾರಾ, ಇಲ್ಲೇನು ಮಾಡುತ್ತಿದ್ದೀಯ? ನೀನೂ ಅಮೀರನ ಹತ್ತಿರ ನ್ಯಾಯದ ತೀರ್ಪು ಪಡೆಯುವುದಕ್ಕೆ ಬಂದಿದ್ದೀಯೇನು?" ಎಂದು ಪ್ರಶ್ನೆಮಾಡಿದನು.

ಕಮ್ಮಾರನು ಚಿಂತೆಯಿಂದ ಉತ್ತರ ಕೊಟ್ಟನು: "ಅಂಥ ತೀರ್ಪಿನಿಂದ ಏನುತಾನೆ ಒಳ್ಳೆಯದಾದೀತು? ನಾನು ಕಮ್ಮಾರರ ಸಾಲಿನಿಂದ ಒಂದು ದೂರು

ತೆಗೆದುಕೊಂಡು ಬಂದಿದ್ದೇನೆ. ನಮಗೆ ಹದಿನೈದು ಮಂದಿ ಸಿಪಾಯಿಗಳನ್ನು ಕೊಟ್ಟಿದ್ದಾರೆ; ಮೂರು ತಿಂಗಳು ಕಾಲ ಅವರಿಗೆ ನಾವು ಆಹಾರ ಕೊಡಬೇಕೆಂದಿರುವುದಾಗಿ ನಂಬಿದ್ದೆವು. ಈಗಾಗಲೇ ಒಂದು ವರ್ಷ ಆಗಿಹೋಯಿತು. ಆದರೂ ಇನ್ನೂ ಅವರನ್ನು ಪೋಷಿಸುತ್ತಲೇ ಇದ್ದೇವೆ. ಇದರ ಪರಿಣಾಮವಾಗಿ ತುಂಬ ನಷ್ಟ ಅನುಭವಿಸುತ್ತಿದ್ದೇವೆ" ಎಂದನು.

"ಬಣ್ಣಗಾರರ ಸಾಲಿನಿಂದ ನಾನು ಬಂದಿದ್ದೇನೆ" ಎಂದು ಮತ್ತೊಬ್ಬಾತ ಮಾತು ಕೂಡಿಸಿದನು ಅವನ ಕೈಗಳ ಮೇಲೆಲ್ಲ ಬಣ್ಣಗಳ ಕಲೆ ಅಂಟಿಕೊಂಡಿತ್ತು; ಸೂರ್ಯೋದಯದಿಂದ ಸೂರ್ಯಾಸ್ತದ ವರೆಗೂ ವಿಷಮಿಶ್ರವಾದ ಹೊಗೆಯನ್ನು ಕುಡಿದು ಕುಡಿದು ಅವನ ಮುಖ ಹಸುರು ಛಾಯೆಗೆ ತಿರುಗಿಬಿಟ್ಟಿತ್ತು. ಅವನು, "ನಾನೂ ಇಂಥದೇ ಮೊರೆಯೊಂದನ್ನು ತಂದಿದ್ದೇನೆ. ನಮಗೆ ಇಪ್ಪತ್ತೈದು ಸಿಪಾಯಿಗಳನ್ನು ಕೊಟ್ಟಿದ್ದಾರೆ. ನಮ್ಮ ಉದ್ಯೋಗ ಹಾಳಾಯಿತು; ನಮ್ಮ ಲಾಭ ಕರಗಿಹೋಯಿತು. ಅಮೀರರು ನಮ್ಮ ಮೇಲೆ ದಯ ತೋರಿ ಈ ಹೊರಲಾರದ ಹೊರೆಯನ್ನಿಳಿಸಿ ನಮಗೆ ಬಿಡುಗಡೆ ಮಾಡಬಹುದೋ ಏನೋ!" ಎಂದನು.

ಖೋಜಾ ನಸ್ರೆದ್ದೀನ್, "ಆ ಬಡಸಿಪಾಯಿಗಳ ವಿಚಾರದಲ್ಲಿ ಅಷ್ಟೊಂದು ಅಸಮಾಧಾನವೇಕೆ, ನಿಮಗೆ" ಎಂದು ಕೇಳಿದನು. ಮುಂದುವರಿಸಿ, "ಬುಖಾರದ ನಿವಾಸಿಗಳಲ್ಲಿ ಅವರೇ ಅತ್ಯಂತ ನೀಚರಾಗಲಿ, ಅತ್ಯಂತ ದುರಾಶಾಪೀಡಿತರಾಗಲಿ ಅಲ್ಲವಲ್ಲ. ಅಮೀರ, ವಜೀರರು, ಇತರ ಅಧಿಕಾರಿಗಳು—ಎಲ್ಲರನ್ನೂ ನೀವು ಗೊಣಗದೆ ಪೋಷಿಸುತ್ತಿದ್ದೀರಿ. ಎರಡು ಸಾವಿರ ಮುಲ್ಲಗಳಿಗೂ ಆರು ಸಾವಿರ ದರವೇಶಿಗಳಿಗೂ ನೀವು ಅನ್ನ ಹಾಕುತ್ತಿದ್ದೀರಿ. ಹೀಗಿರುವಾಗ, ಈ ಅದೃಷ್ಟಹೀನ ಸಿಪಾಯಿಗಳು ಮಾತ್ರ ಅದೇಕೆ ಹಸಿದಿರಬೇಕು? ನಿಮಗೆ ಗಾದೆ ಗೊತ್ತಿಲ್ಲವೆ: ಎಲ್ಲಿ ಒಂದು ನರಿಗೆ ಆಹಾರ ಸಿಕ್ಕುತ್ತದೆಯೋ ಅಲ್ಲಿಗೆ ಮತ್ತೆ ಹತ್ತು ನರಿಗಳು ಆ ಕ್ಷಣ ಬಂದು ನೆರೆಯುತ್ತವೆ—ಎಂದು? ಓ ಕಮ್ಮಾರರಾ, ಓ ಬಣ್ಣಗಾರಾ, ನಿಮ್ಮ ಅಸಮಾಧಾನ ನನಗೆ ಅರ್ಥವೇ ಆಗುವುದಿಲ್ಲ!" ಎಂದನು.

ಕಮ್ಮಾರ ಸುತ್ತ ನೋಡುತ್ತ, "ಅಷ್ಟು ಗಟ್ಟಿಯಾಗಿ ಆಡಬಾರದಣ್ಣಾ!" ಎಂದನು.

ಬಣ್ಣಗಾರನು ಖೋಜಾ ನಸ್ರೆದ್ದೀನನನ್ನು ನಿಂದಿಸುವಂತೆ ಅಸಮಾಧಾನದ ನೋಟ ಬೀರಿದನು.

"ಅಯ್ಯಾ ಪ್ರಯಾಣಿಕಾ, ನೀನೊಬ್ಬ ಅಪಾಯಕಾರಿ ಮನುಷ್ಯನಯ್ಯಾ; ನಿನ್ನ ಮಾತುಗಳಲ್ಲಿ ನ್ಯಾಯವಿಲ್ಲ. ನಮ್ಮ ಅಮೀರರು ವಿವೇಕಿಗಳು, ಉದಾರಿಗಳು—"

ಅವನು ಅಷ್ಟಕ್ಕೇ ಮಾತು ನಿಲ್ಲಿಸಿದನು; ಏಕೆಂದರೆ, ತಟಕ್ಕನೆ ತುತೂರಿಗಳನ್ನೂದುವ ಮತ್ತು ಭೇರಿಗಳನ್ನು ಬಡಿಯುವ ಸದ್ದು ಕೇಳಿಸಿತು. ಅಲ್ಲಿದ್ದ ನಾನಾ ಲಕ್ಷಣದ ಜನಸಮೂಹವೆಲ್ಲ ಚೈತನ್ಯಹೊಂದಿ ಚಲಿಸತೊಡಗಿತು; ಹಿತ್ತಾಳೆ ಮಡಾಯಿಸಿದ ಅರಮನೆಯ ಹೆಬ್ಬಾಗಿಲು ನಿಧಾನವಾಗಿ ತೆರೆಯಿತು.

"ಅಮೀರರು! ಅಮೀರರು!" ಎಂದು ಎಲ್ಲ ಕಡೆಯಿಂದಲೂ ಘೋಷಣೆ ಕೇಳಬಂತು. ತಮ್ಮನ್ನು ಆಳುವಾತನನ್ನು ನೋಡಲೆಂದು ಜನ ಅರಮನೆಯ ಕಡೆ ಗುಂಪಾಗಿ ನಡೆದರು. ಖೋಜಾ ನಸ್ರೆದ್ದೀನನು ಮುಂದುಗಡೆಯ ಸಾಲುಗಳೊಂದರಲ್ಲಿ ಅನುಕೂಲ ಸ್ಥಳವನ್ನು ನೋಡಿಕೊಂಡು ಅಲ್ಲಿ ನಿಂತನು.

ಮೊದಲು ಅರಮನೆಯ ಬಾಗಿಲಿನಿಂದ ಹರಿಕಾರರು ಓಡುತ್ತ ಬಂದರು. ಅವರು, "ದಾರಿ ಬಿಡಿ! ಅಮೀರರಿಗೆ ದಾರಿ ಬಿಡಿ! ಪರಮ ಪ್ರಶಾಂತರಾದ ಅಮೀರರಿಗೆ ದಾರಿ ಬಿಡಿ! ಭಕ್ತರ ನಾಯಕನಿಗೆ ದಾರಿ ಬಿಡಿ!" ಎಂದು ಘೋಷಿಸುತ್ತ ಬರುತ್ತಿದ್ದರು. ಇವರನ್ನು ಹಿಂಬಾಲಿಸಿ ಸಿಪಾಯಿಗಳು ಬಂದರು; ಅವರು ಅತಿ ಕುತೂಹಲಕ್ಕೊಳಗಾಗಿ ಹೆಚ್ಚು ಹತ್ತಿರಕ್ಕೆ ನುಗ್ಗಿ ಬಂದಿದ್ದವರ ತಲೆ ಬೆನ್ನುಗಳ ಮೇಲೆ ಅತ್ತ ಇತ್ತ ಎರಡು ಕಡೆಯೂ ತಮ್ಮ ಕೈಯ ಕೋಲುಗಳಿಂದ ಚಚ್ಚುತ್ತಿದ್ದರು. ಗುಂಪಿನಲ್ಲಿ ಅಗಲವಾದ ಒಂದು ದಾರಿ ಏರ್ಪಟ್ಟಿತು. ಮದ್ದಳೆ, ಕೊಳಲು, ತಂಬೂರಿ, ಕರನೈ (Karanay) ಮೊದಲಾದ ವಾದ್ಯಗಳೊಡಗೂಡಿ ಗಾಯಕರು ಹೊರಬಂದರು. ಅವರಾದ ಮೇಲೆ ರೇಷ್ಮೆ ಜರತಾರಿ ಉಡುಪು ತೊಟ್ಟು, ಬಾಗಿದ ಕತ್ತಿಗಳನ್ನು ಅಮೂಲ್ಯ ರತ್ನಖಚಿತವಾದ ಕಿಂಕಾಪಿನ ಒರೆಗಳಲ್ಲಿ ಧರಿಸಿ ರಾಜಪರಿವಾರದವರು ಬಂದರು. ತಲೆಯ ಮೇಲೆ ಎತ್ತರವಾದ ಗರಿತುರಾಯಿಗಳಿಂದ ಅಲಂಕರಿಸಿದ ಎರಡು ಆನೆಗಳು ಅವರನ್ನು ಹಿಂಬಾಲಿಸಿದವು. ಆ ಮೇಲೆ ಕೊನೆಯದಾಗಿ ಅಮೂಲ್ಯಾಲಂಕಾರಗಳಿಂದ ಕೂಡಿದ ಪಲ್ಲಕ್ಕಿ ಹೊರಬಂದಿತು; ಅದರಲ್ಲಿ ಬಂಗಾರದ ಬಟ್ಟೆಯ ಮೇಲ್ಕಟ್ಟಿನ

ಕೆಳಗೆ ಮಹಾ ಪ್ರಖ್ಯಾತನಾದ ಅಮೀರನು ಮಲಗಿ ವಿಶ್ರಮಿಸುತ್ತ ಬರುತ್ತಿದ್ದನು.

ಪಲ್ಲಕ್ಕಿಯನ್ನು ಕಂಡ ಕೂಡಲೆ ಜನಸಮೂಹದಿಂದ ಜಯಘೋಷವೊಂದು ಹೊರಟಿತು; ಚೌಕದಲ್ಲಿ ದೊಡ್ಡ ಗಾಳಿ ತಟ್ಟನೆ ಬೀಸಿತೆಂಬಂತೆ ಜನವೊರೆತ ಕೇಳಿಸಿತು. ಅಮೀರನ ಆಜ್ಞೆಯ ಪ್ರಕಾರ ಜನರೆಲ್ಲ ನೆಲದ ಮೇಲೆ ಉದ್ದಕ್ಕೆ ಅಡ್ಡಬಿದ್ದರು. ನಿಷ್ಠಾವಂತ ಪ್ರಜೆಗಳೆಲ್ಲರೂ ತಮ್ಮ ರಾಜನನ್ನು ಸಂಪೂರ್ಣ ದಾಸಭಾವದಿಂದ ಸೇವಿಸಬೇಕೆಂದೂ, ಅವನನ್ನು ನೋಡಬೇಕಾದರೆ ದೃಷ್ಟಿಯನ್ನು ಮೇಲೆತ್ತಿ ಬೆರಗಿಸಿಂದಲ್ಲದೆ ಬೇರೆ ರೀತಿ ನೋಡಬಾರದೆಂದೂ ಆಜ್ಞೆಯಾಗಿತ್ತು. ಪಲ್ಲಕ್ಕಿಯ ಮುಂದೆ ಸೇವಕರು ದಾರಿಯುದ್ದಕ್ಕೂ ರತ್ನಗಂಬಳಿಗಳನ್ನು ಹಾಸುತ್ತ ಹೋಗುತ್ತಿದ್ದರು. ಪಲ್ಲಕ್ಕಿಯ ಬಲಗಡೆಯಲ್ಲಿ ಕುದುರೆ ಜವಿಯ ಬೀಸಣಿಗೆಯನ್ನು ಹೆಗಲ ಮೇಲಿಟ್ಟುಕೊಂಡು ಆಸ್ಥಾನದ ಮಕ್ಷಿಕ ನಿವಾರಕನೂ* ಎಡಗಡೆಯಲ್ಲಿ ತುರ್ಕಿ ತಯಾರಿಯ ಚಿನ್ನದ ಗುಡುಗುಡಿಯನ್ನು ಧರಿಸಿ ಆಸ್ಥಾನದ ಧೂಮನಾಳವಾಹಕನೂ ಬಹು ಗಾಂಭೀರ್ಯದಿಂದಲೂ ಪ್ರತಿಷ್ಠೆಯಿಂದಲೂ ನಡೆದು ಬರುತ್ತಿದ್ದರು.

ಪಲ್ಲಕ್ಕಿಯ ಹಿಂಭಾಗದಲ್ಲಿ ಸಿಪಾಯಿಗಳು ಬರುತ್ತಿದ್ದರು; ಹಿತ್ತಾಳೆಯ ಶಿರಸ್ತ್ರಾಣಗಳನ್ನು ಧರಿಸಿ, ಭರ್ಜಿ, ಅಡ್ಡಬಿಲ್ಲು, ಬಿಚ್ಚುಗತ್ತಿಗಳನ್ನು ಹಿಡಿದು ಸಜ್ಜಾಗಿ ಬರುತ್ತಿದ್ದರು. ಎಲ್ಲಕ್ಕಿಂತ ಕಡೆಯಲ್ಲಿ ಎರಡು ಸಣ್ಣ ಫಿರಂಗಿಗಳು ಸಾಗಿ ಬರುತ್ತಿದ್ದವು. ಈ ಮೆರವಣಿಗೆಗೆ ನಡುಮಧ್ಯಾಹ್ನದ ಸೂರ್ಯನ ಉಜ್ಜ್ವಲ ಪ್ರಕಾಶವು ಒಳ್ಳೆಯ ಮೆರುಗು ಕೊಟ್ಟಿದ್ದಿತು; ರತ್ನಗಳಲ್ಲಿ ಥಳಥಳಿಸಿ, ಬೆಳ್ಳಿ ಬಂಗಾರದ ಆಭರಣಗಳಲ್ಲಿ ಹೊಳೆದು, ಹಿತ್ತಾಳೆಯ ಗುರಾಣಿ ಶಿರಸ್ತ್ರಾಣಗಳಲ್ಲಿ ಬಿಸಿಬಿಸಿಯಾಗಿ ಪ್ರತಿಫಲಿಸಿ, ಬಿಚ್ಚುಗತ್ತಿಗಳ ಬಿಳಿಯುಕ್ಕಿನಲ್ಲಿ ಮಿರುಮಿರನೆ ಮಿನುಗಿ ಸೂರ್ಯಕಿರಣ ಪ್ರಕಾಶಿಸುತ್ತಿತ್ತು....ಆದರೆ ನೆಲದ ಮೇಲೆ ಅಡ್ಡಬಿದ್ದಿದ್ದ ಆ ದೊಡ್ಡ ಜನಸಮೂಹದಲ್ಲಿ ಯಾವ ಆಭರಣವೂ ಹೊಳೆಯುತ್ತಿರಲಿಲ್ಲ; ಚಿನ್ನ, ಬೆಳ್ಳಿ, ಕಡೆಗೆ ಒಂದು ಚೂರು ತಾಮ್ರ ಕೂಡ ಇರಲಿಲ್ಲ—ಸೂರ್ಯ ಪ್ರಕಾಶದಲ್ಲಿ ಹೊಳೆದು ಥಳಥಳಿಸಿ ಅವರ ಹೃದಯಕ್ಕೆ ಹರ್ಷವನ್ನು ಕೊಡುವಂಥದು ಏನೊಂದೂ ಇರಲಿಲ್ಲ: ಅಲ್ಲಿದ್ದದ್ದು ಹರುಕು ಚಿಂದಿ, ಬಡತನ, ಹಸಿವು—ಇಷ್ಟೇ. ಅಮೀರನ ಮಹಾ ವೈಭವದ ಮೆರವಣಿಗೆ ಕೊಳಕರೂ

* ನೊಣ ಓಡಿಸುವವನು.

ಅಜ್ಞರೂ ದಲಿತರೂ ಚಿಂದಿಯುಟ್ಟವರೂ ಆದ ಈ ಜನರ ಮಹಾ ಸಮುದ್ರದ ಮೂಲಕ ಹಾದು ಹೋಗುತ್ತಿದ್ದರೆ, ಕ್ಷುದ್ರವಾದ ಹರುಕು ಬಟ್ಟೆಯೊಳಗೆ ಬಂಗಾರದ ಸರಿಗೆಯನ್ನು ಎಳೆಯುತ್ತಿದ್ದಂತೆ ಕಾಣುತ್ತಿದ್ದಿತು.

ನೆಚ್ಚಿನ ತನ್ನ ಪ್ರಜೆಗಳಿಗೆ ನ್ಯಾಯವಿತರಣೆ ಮಾಡುವುದಕ್ಕಾಗಿ ಅಮೀರನು ಮಂಡಿಸಲೆಂದು ಎತ್ತರವಾದ ಜಗುಲಿಯ ಮೇಲೆ ರತ್ನಗಂಬಳಿ ಹಾಸಿ ಪೀಠವನ್ನು ಸಿದ್ಧಮಾಡಿಟ್ಟಿತ್ತು. ಜಗುಲಿಯ ಸುತ್ತಲೂ ರಕ್ಷಕ ದಳದ ಸಿಪಾಯಿಗಳು ಕಾವಲು ನಿಂತಿದ್ದರು. ಕೆಳಗಡೆ ವಧ್ಯಸ್ಥಾನದಲ್ಲಿ ವಧಕಾರರು ಅಮೀರನ ಅಪ್ಪಣೆಯನ್ನು ಬೇಗ ಬೇಗ ನೆರವೇರಿಸುವಂತೆ ತಕ್ಕ ಸನ್ನಾಹಮಾಡಿಕೊಳ್ಳುತ್ತಿದ್ದರು. ಕೋಲುಗಳು, ದಂಡಗಳು ಮತ್ತು ಬೆತ್ತಗಳು—ಇವುಗಳ ಶಕ್ತಿಯನ್ನು ಪರೀಕ್ಷಿಸುತ್ತಿದ್ದರು. ಹಸಿ ಚರ್ಮದ ಅನೇಕ ಸೀಳುಗಳನ್ನು ಕಟ್ಟಿ ಮಾಡಿದ ಬಾರುಕೋಲುಗಳನ್ನು ದ್ರವದ ತೊಟ್ಟಿಗಳಲ್ಲಿ ನೆನೆಹಾಕುತ್ತಿದ್ದರು; ಗಲ್ಲುಮರಗಳನ್ನು ನಿಲ್ಲಿಸುತ್ತಿದ್ದರು, ಕೊಡಲಿಗಳನ್ನು ಮಸೆಯುತ್ತಿದ್ದರು; ನೆಲಕ್ಕೆ ದಸಿಗಳನ್ನು ನೆಡುತ್ತಿದ್ದರು. ಇದರ ಮೇಲ್ವಿಚಾರಣೆ ವಹಿಸಿದ್ದವನು ಅರಮನೆಯ ರಕ್ಷಕದಳದ ಅಧ್ಯಕ್ಷನಾದ ಆರ್ಸ್‌ಲಾನ್-ಬೆಕ್; ಅವನ ಕ್ರೌರ್ಯ ಬುಖಾರದ ಎಲ್ಲೆಯಿಂದಾಚೆಗೂ ಹರಡಿತ್ತು. ಕಪ್ಪುಗೂದಲಿನ ದಪ್ಪ ಮೈಯಿಂದ ಕೂಡಿ ಅವನು ನೋಡುವುದಕ್ಕೆ ಲಕ್ಷಣವಾಗಿದ್ದನು. ಗಡ್ಡ ಎದೆಯನ್ನೆಲ್ಲ ಮುಚ್ಚಿ ಹೊಟ್ಟೆಯವರೆಗೂ ಇಳಿದಿತ್ತು; ಅವನ ದನಿ ಒಂಟೆ ಕಿರಿಚಿದಂತಿರುತ್ತಿತ್ತು.

ಅವನು ಗುಂಪಿನಲ್ಲಿ ನೆರೆದವರಿಗೆಲ್ಲ ಬಹು ಉದಾರವಾಗಿ ಹೊಡೆತಗಳನ್ನೂ ಒದೆತಗಳನ್ನೂ ಕೊಡುತ್ತಿದ್ದನು. ಹೀಗಿರುವಾಗ ಅವನು ತಟ್ಟನೆ ನೆಲಕ್ಕೆ ಬಗ್ಗಿ ದಾಸ್ಯವೃತ್ತಿಯಿಂದ ಕಂಪಿಸತೊಡಗಿದನು.

ಮೆಲ್ಲಗೆ ಅತ್ತಿತ್ತ ತೂಗಾಡುತ್ತ ಪಲ್ಲಕ್ಕಿ ಜಗುಲಿಯ ಮೇಲೇರಿತು. ಕಿನ್‌ಕಾಪಿನ ತೆರೆಗಳನ್ನು ಓಸರಿಸಿ ಅಮೀರನು ಪ್ರಜೆಗಳಿಗೆ ದರ್ಶನವನ್ನು ದಯಪಾಲಿಸಿದನು.

## ೧೦

ಯಾರೆಷ್ಟೇ ವರ್ಣಿಸಿದರೂ ಪರಮಪ್ರಶಾಂತ ಪ್ರಭು ಅಮೀರನೇನು ಸುಂದರನಲ್ಲ. ಆಸ್ಥಾನಕವಿಗಳು ಸದಾಕಾಲವೂ ಬೆಳ್ಳಿಯ ಪೂರ್ಣಚಂದ್ರನಿಗೆ

ಹೋಲಿಸುತ್ತಿದ್ದ ಅವನ ಮುಖ ಕೊಳೆತು ಜಬ್ಬಲಾದ ಕಲ್ಲಂಗಡಿ ಹಣ್ಣಿನಂತಿತ್ತು. ವಜೀರರ ಕೈಗಳ ಮೇಲೆ ಭಾರಬಿಟ್ಟು ಅಮೀರನು ಪಲ್ಲಕ್ಕಿಯಿಂದ ಹೊರಬಂದು ಬಂಗಾರದ ಸಿಂಹಾಸನದ ಮೇಲೆ ಕುಳಿತನು. ಆಸ್ಥಾನಕವಿಗಳು ಅವನ ಶರೀರ ಸೈಪ್ರೆಸ್ ಸಸಿಯಂತೆ ತೆಳ್ಳಗಿತ್ತೆಂದು ವರ್ಣಿಸುತ್ತಿದ್ದರು; ಆದರೆ, ನಿಜಸ್ಥಿತಿ ಅದಕ್ಕೆ ವ್ಯತಿರಿಕ್ತವಾಗಿತ್ತೆಂದು ಖೋಜಾ ನಸ್ರೆದ್ದೀನನಿಗೆ ಸ್ಪಷ್ಟವಾಗಿ ಗೋಚರವಾಯಿತು. ಸ್ಥೂಲ ಕಾಯ, ಬೊಜ್ಜು ಹೊಟ್ಟೆ; ಗಿಡ್ಡ ತೋಳುಗಳು; ಕಾಲುಗಳು ಹೊರಕ್ಕೆ ಬಹಳ ಬಾಗಿದ್ದವು; ಆ ಬಿಚ್ಚು ಮುಂಡಿಯ ಅವಲಕ್ಷಣ ವನ್ನು ತೊಟ್ಟ ಖಲತ್ತಿನಿಂದ ಕೂಡ ಮುಚ್ಚಲಾಗುತ್ತಿರಲಿಲ್ಲ.

ಅಮೀರನ ಬಲಗಡೆ ವಜೀರರೂ ಎಡಗಡೆ ಮುಲ್ಲಾಗಳೂ ಇತರ ಆಸ್ಥಾ ನಿಕರೂ ಅಧಿಕಾರಿಗಳೂ ಮುಂಡಿಸಿದರು ಕೆಳಗಡೆ ಸ್ವಲ್ಪ ದೂರದಲ್ಲಿ ಕರಣಿಕರು ಪುಸ್ತಕ ಮಸಿಕುಡಿಕೆಗಳನ್ನಿಟ್ಟುಕೊಂಡು ಕುಳಿತರು. ಆಸ್ಥಾನದ ಕವಿಗಳು ಸಿಂಹಾಸನದ ಹಿಂದುಗಡೆ ಅರ್ಧವರ್ತುಲಾಕಾರದಲ್ಲಿ ಮಂಡಲದಲ್ಲಿ ನಿಂತು ಅಮೀರನ ಕುತ್ತಿಗೆಯ ಹಿಂಭಾಗವನ್ನು ಬಹು ಭಕ್ತಿಯಿಂದ ನೋಡುತ್ತ ನಿಂತರು. ಅರಮನೆಯ ಮಕ್ಷಿಕನಿವಾರಕನು ತನ್ನ ಬೀಸಣಿಗೆಯನ್ನು ಬೀಸಿ ದನು. ಧೂಮನಾಳವಾಹಕನು ಗುಡುಗ ಡಿಯ ಬಂಗಾರದ ಮುಖನಾಳವನ್ನು ಪ್ರಭುವಿನ ತುಟಿಗಳ ನಡುವೆ ಸರಿಯಾಗಿ ಅಳವಡಿಸಿದನು. ಜಗುಲಿಯನ್ನು ಆವರಿಸಿದ್ದ ದೊಡ್ಡ ಗುಂಪು ಉಸಿರಾಡದೆ ನಿಶ್ಶಬ್ದವಾಗಿತ್ತು. ಖೋಜಾ ನಸ್ರೆದ್ದೀನ್ ಕತ್ತೆಯ ಮೇಲಿದ್ದವನು ರಿಕಾಪಿನ ಮೇಲೆ ಸಾಧ್ಯವಾದ ಮಟ್ಟಿಗೂ ಎದ್ದು ನಿಂತು ಕುತ್ತಿಗೆ ನೀಡಿ ಮೈಯೆಲ್ಲ ಕಿವಿಯಾಗಿ ಆಲಿಸತೊಡಗಿದನು.

ಅಮೀರನು ತೂಕಡಿಸುತ್ತಾ ತಲೆ ಅಲ್ಲಾಡಿಸಿದನು. ಕಾವಲು ಸಿಪಾಯಿ ಗಳು ಎರಡು ಪಕ್ಕಗಳಿಗೂ ಸರಿದು ಇಬ್ಬರು ಸೋದರರಿಗೂ ದಾರಿ ಬಿಟ್ಟರು. ಬಕ್ಕತಲೆಯವನು ಮತ್ತು ಗಡ್ಡದವನು ಇಬ್ಬರೂ—ಕಾದು ಕಾದು ಕಟ್ಟಕಡೆಗೆ ಅಮೀರನನ್ನು ಕಾಣುವ ಅವಕಾಶ ಪಡೆದಿದ್ದರು. ಅವರು ಸಿಂಹಾಸನದ ಜಗುಲಿಯ ವರೆಗೂ ಮುಂಡಿಯ ಮೇಲೆ ತೆವಳಿಕೊಂಡು ಹೋಗಿ, ನೆಲ ಮುಟ್ಟು ವಂತೆ ಇಳಿಯಬಿದ್ದಿದ್ದ ರತ್ನಗಂಬಳಿಗೆ ಮುತ್ತಿಟ್ಟರು.

"ಎದ್ದೇಳಿ!" ಎಂದು ಪ್ರಧಾನ ವಜೀರ ಬಖ್ತಿಯಾರ್ ಅಪ್ಪಣೆ ಮಾಡಿದನು.

ಸೋದರರರು ಎದ್ದರು; ತಮ್ಮ ಖಲತ್ತುಗಳಿಗೆ ಹತ್ತಿದ್ದ ಧೂಳನ್ನು ಕೊಡವುವುದಕ್ಕೂ ಹೆದರಿ ಹಾಗೆಯೇ ನಿಂತರು. ಭಯದಿಂದ ನಾಲಿಗೆ ಕಟ್ಟಿ ಹೋಗಿ ಅವರು ಮಾತಾಡಿದಾಗ ಬರಿಯ ಗುಜು ಗುಜು ಸದ್ದಾಯಿತೇ ಹೊರತು ಅರ್ಥವಾಗುವ ಒಂದು ಪದವೂ ಹೊರಡಲಿಲ್ಲ. ಬಖ್ತಿಯಾರ್ ತುಂಬ ಅನುಭವಶಾಲಿಯಾದ ವಜೀರನಾದ್ದರಿಂದ ತಟಕ್ಕನೆ ಅವನಿಗೆ ಪರಿಸ್ಥಿತಿಯ ಅರಿವಾಯಿತು.

ಅವರ ಗೊಜಗೊಜಕ್ಕೆ ಅಸಮಾಧಾನಗೊಂಡು, "ನಿಮ್ಮ ಆಡೆಲ್ಲಿ?" ಎಂದು ಅವರನ್ನು ಪ್ರಶ್ನೆಮಾಡಿದನು.

ಚಕ್ಕತಲೆಯವನು ಉತ್ತರ ಕೊಟ್ಟನು: "ಓ ಪರಮೋನ್ನತ ಕುಲಸಂಭೂತರಾದ ವಜೀರರೇ, ಅದು ಸತ್ತುಹೋಯಿತು; ಅಲ್ಲಾ ಅದನ್ನು ತನ್ನ ಸನ್ನಿಧಿಗೆ ತೆಗೆದುಕೊಂಡನು. ಆದರೆ ಅದರ ಚರ್ಮ ನಮ್ಮಿಬ್ಬರಲ್ಲಿ ಯಾರಿಗೆ ಸೇರಬೇಕೋ ಆಪ್ಪಣೆಯಾಗಬೇಕು."

ಬಖ್ತಿಯಾರ್ ಅಮೀರನ ಕಡೆ ತಿರುಗಿ, "ಪರಮ ಪ್ರಜ್ಞಾವಂತ ಮಹಾ ಪ್ರಭೂ! ಏನು ತೀರ್ಮಾನ ಹೇಳಬೇಕು?" ಎಂದನು.

ಅಮೀರನು ತೀರಾ ಉದಾಸೀನಭಾವದಿಂದ ಆಕಳಿಸಿ ಕಣ್ಣು ಮುಚ್ಚಿಕೊಂಡನು. ಬಖ್ತಿಯಾರ್ ದೊಡ್ಡ ರುಮಾಲಿನ ಭಾರ ಹೊತ್ತ ತನ್ನ ತಲೆಯನ್ನು ಬಹು ಮರ್ಯಾದೆಯಿಂದ ಬಗ್ಗಿಸಿ ನಮಸ್ಕರಿಸಿದನು.

"ಮಹಾಪ್ರಭೂ; ತೀರ್ಪು ತಮ್ಮ ಮುಖದ ಮೇಲೆ ವ್ಯಕ್ತವಾಗಿ ಗೋಚರಿಸುತ್ತಿದೆ" ಎಂದನು. ಆ ಮೇಲೆ ಅಣ್ಣತಮ್ಮಂದಿರ ಕಡೆ ತಿರುಗಿ, "ಕೇಳಿ" ಎಂದನು.

ಅವರು ಮಂಡಿಯೂರಿ ಕುಳಿತರು; ಅಮೀರನ ಜ್ಞಾನ, ನ್ಯಾಯ ಮತ್ತು ದಯಗಳಿಗಾಗಿ ಅವನಿಗೆ ಕೃತಜ್ಞತೆ ಸಲ್ಲಿಸಲು ಸಿದ್ಧರಾಗಿ ಕುಳಿತರು. ಬಖ್ತಿಯಾರ್ ತೀರ್ಮಾನವನ್ನು ಹೇಳಿದನು; ಅವನ ಮಾತುಗಳನ್ನು ಲೇಖಕರು ತಮ್ಮ ದೊಡ್ಡ ಪುಸ್ತಕಗಳಲ್ಲಿ ಬರೆದುಕೊಂಡರು; ಲೇಖನಿ ಕರಕರಗುಟ್ಟಿ ಸದ್ದಾಗುವಂತೆ ಬರೆದುಕೊಂಡರು.

"ಭಕ್ತಜನನಾಯಕನೂ ವಿಶ್ವಸೂರ್ಯನೂ ಆದ ಘನಹೊಂದಿದ ನಮ್ಮ ಅಮೀರರು—ಅಲ್ಲಾನ ಆಶೀರ್ವಾದಗಳು ಅವರನ್ನು ರಕ್ಷಿಸಲಿ—ಹೀಗೆ ತೀರ್ಮಾ

ನಿಸಿ ಅನುಗ್ರಹಿಸಿದ್ದಾರೆ : ಆಡನ್ನು ಅಲ್ಲಾ ತೆಗೆದುಕೊಂಡಿರುವ ಪಕ್ಷದಲ್ಲಿ ಅದರ ಚರ್ಮ ಭೂಮಂಡಲದಲ್ಲಿ ಅಲ್ಲಾನ ಪ್ರತಿನಿಧಿಯಾಗಿರುವವರಿಗೆ, ಎಂದರೆ, ಮಹಾಪ್ರಭು ಅಮೀರರಿಗೇ ಸಲ್ಲಬೇಕಾಗುತ್ತದೆ. ಆದ್ದರಿಂದ ಆಡಿನ ಚರ್ಮ ಸುಲಿದು, ಒಣಗಿಸಿ, ಹದಮಾಡಿ, ಆ ಬಳಿಕ ಆ ಹದಮಾಡಿದ ಚರ್ಮವನ್ನು ಅರಮನೆಗೆ ತಂದು ಅಮೀರರ ಖಜಾನೆಗೆ ಒಪ್ಪಿಸತಕ್ಕದ್ದು."

ಅಣ್ಣತಮ್ಮಂದಿರು ಕಂಕುಮಂಕಾಗಿ ಒಬ್ಬರ ಮುಖವನ್ನೊಬ್ಬರು ನೋಡಿದರು; ಗುಂಪೆಲ್ಲ ಮೆಲ್ಲಗೆ ಗೊಣಗಿತು. ಗಟ್ಟಿಯಾದ ಮತ್ತು ಸ್ಪಷ್ಟವಾದ ದನಿಯಲ್ಲಿ ಬಖ್ತಿಯಾರ್ ಮುಂದುವರಿಸಿದನು.

"ಇದಲ್ಲದೆ, ಕಕ್ಷಿಗಾರರು ಈ ತೆರಿಗೆಗಳನ್ನು ಸಲ್ಲಿಸುವಂತೆ ಮಾಡತಕ್ಕದ್ದು : ನ್ಯಾಯವಿಚಾರಣೆಯ ವೆಚ್ಚ ಇನ್ನೂರು ಟಂಗಗಳು ; ಅರಮನೆಯ ತೆರಿಗೆ ಒಂದು ನೂರೈವತ್ತು ಟಂಗಗಳು ; ಗುಮಾಸ್ತರುಗಳ ವೆಚ್ಚಕ್ಕಾಗಿ ತೆರಿಗೆ ಐವತ್ತು ಟಂಗಗಳು ; ಇದರ ಜೊತೆಗೆ ಮಸೀದಿಗಳ ಅಲಂಕಾರಕ್ಕಾಗಿ ಅವರು ತಕ್ಕಷ್ಟು ಚಂದಾ ಕೊಡತಕ್ಕದ್ದು. ಇದನ್ನೆಲ್ಲಾ ತಕ್ಷಣವೇ ನಗದಾಗಿ ವಸೂಲುಮಾಡತಕ್ಕದ್ದು. ನಗದು ಇಲ್ಲದಿದ್ದರೆ, ಉಡುಪಿನ ರೂಪದಲ್ಲಿಯೋ ಅಥವಾ ಇನ್ನು ಯಾವುದಾದರೂ ಬೇರೆ ಆಸ್ತಿಯ ರೂಪದಲ್ಲಿಯೋ ವಸೂಲು ಮಾಡತಕ್ಕದ್ದು."

ಅವನಿನ್ನೂ ಮಾತು ಮುಗಿಸಿಯೇ ಇರಲಿಲ್ಲ; ಅಷ್ಟರಲ್ಲಿ ಆರ್ಸ್ಲಾನ್-ಬೆಕ್ ಸನ್ನೆಮಾಡಲು ಸಿಪಾಯಿಗಳು ಆ ಇಬ್ಬರು ಸೋದರರನ್ನೂ ಮುತ್ತಿದರು. ಅವರ ನಡುಪಟ್ಟಿಗಳನ್ನು ಬಿಚ್ಚಿದರು; ಹಣದ ಚೀಲಗಳನ್ನು ಒಳಹೊರಗು ಮಾಡಿ ಕೊಡವಿದರು; ಖಲತ್‌ಗಳನ್ನು ಹರಿದು, ಬೂಟುಗಳನ್ನೆಳೆದುಕೊಂಡರು. ಹೀಗೆ, ಅವರನ್ನು ಬರಿಗಾಲಿನಲ್ಲಿ ಅರೆಬೆತ್ತಲೆಯಾಗಿ ಓಡಿಸಿದರು.

ಇಷ್ಟೆಲ್ಲ ನಡೆಯುವುದಕ್ಕೆ ಒಂದು ನಿಮಿಷವೂ ಹಿಡಿಯಲಿಲ್ಲ. ತೀರ್ಪು ಪ್ರಕಟವಾದ ಕೂಡಲೆ ಆಸ್ಥಾನದ ವಿದ್ವಾಂಸರೂ ಕವಿಗಳೂ ಅಮೀರನ ಪ್ರಶಸ್ತಿಗಳನ್ನು ಹಾಡಿ ಹೊಗಳಲು ಮೊದಲುಮಾಡಿದರು :

"ಓ, ಪ್ರಾಜ್ಞ ಅಮೀರಾ! ಓ, ಪ್ರಾಜ್ಞರಲ್ಲಿ ಪ್ರಾಜ್ಞತಮಾ! ಓ, ಪ್ರಾಜ್ಞರ ಪ್ರಾಜ್ಞತೆಯಿಂದೊಡಗೂಡಿದ ಪ್ರಾಜ್ಞಾ! ಪ್ರಾಜ್ಞರೆಲ್ಲರಿಗಿಂತಲೂ ಅತ್ಯಂತ ಹೆಚ್ಚಿನ ಪ್ರಾಜ್ಞನಾದ ಪರಮ ಪ್ರಾಜ್ಞ ಅಮೀರಾ!"

ಇದೇ ರೀತಿ ಅವರು ಬಹಳ ಹೊತ್ತು ಪ್ರಶಂಸಿಸುತ್ತ ಹೋದರು; ಪ್ರತಿ

ಯೊಬ್ಬನೂ ಸಿಂಹಾಸನದ ಕಡೆಗೆ ಸಾಧ್ಯವಾದ ಮಟ್ಟಿಗೂ ಕತ್ತು ನೀಡಿ, ಗಟ್ಟಿಯಾಗಿ ಕೂಗಿ ಉಳಿದವರೆಲ್ಲರ ದನಿಯನ್ನೂ ಮುಳುಗಿಸಿ ತನ್ನ ದನಿ ಅಮೀರನ ಕಿವಿಮುಟ್ಟಲೆಂದು ಸಾಹಸಮಾಡುತ್ತಿದ್ದನು. ಸಿಂಹಾಸನದ ಜಗುಲಿಯ ಸುತ್ತಲೂ ನೆರೆದಿದ್ದ ಗುಂಪು ಸೋದರರಿಬ್ಬರನ್ನೂ ಕರುಣಾದೃಷ್ಟಿಯಿಂದ ನೋಡುತ್ತ ಮೌನವಾಗಿತ್ತು.

ಅದೃಷ್ಟಹೀನರಾದ ಆ ಸೋದರರು ಒಬ್ಬರನ್ನೊಬ್ಬರು ತಬ್ಬಿಕೊಂಡು ಗಟ್ಟಿಯಾಗಿ ಗೋಳಾಡುತ್ತಿದ್ದರು. ಅವರನ್ನು ಕುರಿತು ಖೋಜಾ ನಸ್ರೆದ್ದೀನ್ ಹೀಗೆಂದನು: "ನೀವು ಈ ಚೌಕದಲ್ಲಿ ಆರು ವಾರಗಳ ವರೆಗೂ ಕೂತು ಕಾದದ್ದು ಕಡೆಗೂ ವ್ಯರ್ಥವಾಗಲಿಲ್ಲ. ನಿಮಗೆ ನ್ಯಾಯವಾದ ಮತ್ತು ದಯಾಪೂರ್ಣವಾದ ತೀರ್ಪೇ ದೊರೆತಿದೆ; ಏಕೆಂದರೆ, ನಮ್ಮ ಅಮೀರರಿಗಿಂತ ಹೆಚ್ಚು ಬುದ್ಧಿವಂತರೂ ಕರುಣಾಶಾಲಿಗಳೂ ಆದವರು ಈ ಪ್ರಪಂಚದಲ್ಲಿ ಬೇರೆ ಯಾರೂ ಇಲ್ಲವೆಂದು ಎಲ್ಲರಿಗೂ ಗೊತ್ತಿದೆ. ಈ ವಿಷಯದಲ್ಲಿ ಯಾರಾದರೂ ಸಂಶಯಪಟ್ಟರೆ—" ಇಲ್ಲಿ ಅವನು ಸುತ್ತಮುತ್ತ ತಿರುಗಿ ಗುಂಪಿನ ಜನರ ಕಡೆ ನೋಡಿ ಮಾತು ಮುಂದುವರಿಸಿದನು: "ಕಾವಲುದಳದವರನ್ನು ಕರೆಯುವುದಕ್ಕೆ ಹೆಚ್ಚು ಹೊತ್ತು ಹಿಡಿಯುವುದಿಲ್ಲ. ಅವರೇನು ಮಾಡುತ್ತಾರೆ, ಗೊತ್ತೋ? ಅವರು ಆ ಭ್ರಷ್ಟ ಸಂದೇಹಿಯನ್ನು ಘಾತುಕರ ಕೈಗೆ ಒಪ್ಪಿಸಿಬಿಡುತ್ತಾರೆ. ಆ ಘಾತುಕರು ಅವನ ತಪ್ಪೇನೆಂದು ಚೆನ್ನಾಗಿ ತೋರಿಸಿಕೊಡುತ್ತಾರೆ. ಅಯ್ಯಾ, ಸೋದರರೇ! ಶಾಂತವಾಗಿ ಮನೆಗೆ ಹೋಗಿ ಇನ್ನು ಮುಂದೆ ಎಂದಾದರೂ ಒಂದು ಕೋಳಿಯ ವಿಚಾರವಾಗಿ ನಿಮ್ಮಲ್ಲಿ ಜಗಳವಾದರೆ ಮತ್ತೆ ಅಮೀರರ ನ್ಯಾಯಾಸ್ಥಾನಕ್ಕೆ ಬನ್ನಿ. ಆದರೆ ಬರುವ ಮೊದಲು ನಿಮ್ಮ ಮನೆಗಳು, ದ್ರಾಕ್ಷಿ ತೋಟಗಳು, ಹೊಲಗದ್ದೆಗಳು ಎಲ್ಲವನ್ನೂ ಮಾರುವುದನ್ನು ಮಾತ್ರ ಮರೆಯಬೇಡಿ. ಇಲ್ಲದಿದ್ದರೆ, ತೆರಿಗೆಗಳನ್ನು ಕೊಡುವುದಕ್ಕೆ ನಿಮಗೆ ಸಾಧ್ಯವಾಗುವುದಿಲ್ಲ; ಅದರಿಂದ ಅಮೀರರ ಖಜಾನೆಗೆ ನಷ್ಟವಾದಂತಾಗುತ್ತದೆ. ನಿಷ್ಠಾವಂತ ಪ್ರಜೆಗಳಿಗೆ ಈ ರೀತಿ ಅಮೀರರ ಖಜಾನೆಗೆ ನಷ್ಟವುಂಟುಮಾಡುವ ಯೋಚನೆಯೂ ಕೂಡ ಸಹಿಸಲಸಾಧ್ಯವಾಗಿರುತ್ತದೆ."

ಅಣ್ಣತಮ್ಮಂದಿರು ಕಣ್ಣೀರು ಸುರಿಸುತ್ತಾ, "ನಮ್ಮ ಆಡಿನ ಜೊತೆಯಲ್ಲೆ ನಾವೂ ಸತ್ತಿದ್ದಿದ್ದರೆ ಚೆನ್ನಾಗಿತ್ತು" ಎಂದುಕೊಂಡರು.

ಖೋಜಾ ನಸ್ರೆದ್ದೀನನು, " ಸ್ವರ್ಗದಲ್ಲಿ ತಕ್ಕಷ್ಟು ಮಂದಿ ಬೆಪ್ಪುತಕಡಿಗಳಿಲ್ಲವೆಂದು ತಿಳಿದುಕೊಂಡಿರಾ ? ಈಗಿನ ಕಾಲದಲ್ಲಿ ಸ್ವರ್ಗ ನರಕಗಳೆರಡೂ ಬೆಪ್ಪುತಕಡಿಗಳಿಂದ ತುಂಬಿ ತುಳುಕುತ್ತಿವೆಯೆಂದೂ ಮತ್ತೆ ಬೇರೆ ಬೆಪ್ಪುತಕಡಿಗಳನ್ನು ಅಲ್ಲಿ ಸೇರಿಸುವಂತಿಲ್ಲವೆಂದೂ ನಂಬಿಕೆಗೆ ಅರ್ಹರಾದವರಿಂದ ಕೇಳಿ ತಿಳಿದಿದ್ದೇನೆ. ಸೋದರರೇ, ನೀವು ಅಮರರು, ಚಿರಕಾಲ ಬಾಳುವವರು —ಎಂಬುದರಲ್ಲಿ ಸಂಶಯವಿಲ್ಲ.... ಇಲ್ಲಿಂದ ಬೇಗ ಹೊರಟು ಹೋಗಿಬಿಡಿ; ಸಿಪಾಯಿಗಳು ಇತ್ತ ಕಡೆಯೇ ನೋಡುತ್ತಿದ್ದಾರೆ. ನಿಮ್ಮಂತಲ್ಲ ನಾನು; ನಾನು ಅಮರನಾಗಿರುವೆನೆಂದು ನಂಬಲಾರೆ " ಎಂದನು.

ಅಣ್ಣತಮ್ಮಂದಿರು ಗಟ್ಟಿಯಾಗಿ ಬಿಕ್ಕಿಬಿಕ್ಕಿ ಅಳುತ್ತಲೂ ತಮ್ಮ ಮುಖ ಪರಚಿಕೊಳ್ಳುತ್ತಲೂ, ರಸ್ತೆಯ ಹಳದಿ ಧೂಳನ್ನು ತಲೆಯ ಮೇಲೆ ಸುರಿದುಕೊಳ್ಳುತ್ತಲೂ ಅಲ್ಲಿಂದ ಹೊರಟುಹೋದರು.

ಆ ಮೇಲೆ ಕಮ್ಮಾರನು ಅಮೀರನೆದುರಿಗೆ ಬಂದನು. ಒಡೆದ ಗಂಟಲಿನಲ್ಲಿ ಮುನಿಸು ದನಿಯಲ್ಲಿ ಅವನು ತನ್ನ ಮೊರೆಯನ್ನು ಹೇಳಿಕೊಂಡನು. ಮಹಾವಜೀರ ಬಖ್ತಿಯಾರ್ ಅಮೀರನ ಕಡೆ ತಿರುಗಿದನು :

" ಪ್ರಭೂ, ತಮ್ಮ ತೀರ್ಪೇನು ? "

ಅಮೀರನಿಗೆ ನಿದ್ದೆ ಬಂದಿತ್ತು; ಬಾಯಿ ಬಿಟ್ಟುಕೊಂಡು ಮೆತ್ತಗೆ ಗೊರಕೆ ಹೊಡೆಯುತ್ತಿದ್ದನು. ಬಖ್ತಿಯಾರ್ ಸ್ವಲ್ಪವೂ ತಬ್ಬಿಬ್ಬಾಗಲಿಲ್ಲ.

" ಪ್ರಭೂ, ತಮ್ಮ ತೀರ್ಪು ತಮ್ಮ ಮುಖಮಂಡಲದಲ್ಲಿ ಗೋಚರಿಸುವುದನ್ನು ಅರಿಯಬಲ್ಲೆ."

ಗಂಭೀರವಾಗಿ ಅವನು ಹೀಗೆ ಉಚ್ಚರಿಸಿದನು :

" ಕಾರುಣಿಕನೂ ದಯಾಮಯನೂ ಆದ ಅಲ್ಲಾನ ಹೆಸರಿನಲ್ಲಿ : ಭಕ್ತರ ನಾಯಕನೂ ನಮ್ಮ ಪ್ರಭುವೂ ಆದ ಅಮೀರರು, ತಮ್ಮ ಪ್ರಜೆಗಳ ಯೋಗಕ್ಷೇಮದಲ್ಲಿ ನಿರಂತರ ಗಮನವಿಟ್ಟಿರುವವರಾಗಿ, ಅವರ ವಿಷಯದಲ್ಲಿ ತಮ್ಮ ಅಪಾರ ಕರುಣೆಯನ್ನೂ ಅನುಗ್ರಹವನ್ನೂ ವ್ಯಕ್ತಪಡಿಸುವುದಕ್ಕೋಸ್ಕರ, ತಮ್ಮ ಸೇವೆಯಲ್ಲಿರುವ ಸಿಪಾಯಿಗಳಿಗೆ ಅನ್ನವಸತಿಗಳನ್ನೊದಗಿಸುವ ಅವಕಾಶವನ್ನು ಆ ಪ್ರಜೆಗಳಿಗೆ ದಯಪಾಲಿಸಿದ್ದಾರೆ. ಈ ಬಗೆಯ ವಿಶೇಷ ಗೌರವವನ್ನು ತೋರುವುದರ ಮೂಲಕ, ನಮ್ಮ ಘನಹೊಂದಿದ ಬುಖಾರ ಪಟ್ಟಣದ ನಾಗ

ರಿಕರು ದಿನದಿನವೂ ಗಂಟೆಗಂಟೆಗೂ ತಮ್ಮ ಅಮೀರರಿಗೆ ಕೃತಜ್ಞತೆ ಸಲ್ಲಿಸುವ ಸದವಕಾಶವನ್ನು ಕಲ್ಪಿಸಿಕೊಟ್ಟಿದ್ದಾರೆ, ಮಹಾ ಪ್ರಭುಗಳು. ನಮ್ಮ ರಾಜ್ಯದ ಅಕ್ಕಪಕ್ಕದ ಯಾವ ರಾಜ್ಯದ ನಿವಾಸಿಗಳಿಗೂ ಇಂಥ ಗೌರವವನ್ನು ದಯಪಾಲಿಸಿಲ್ಲ. ಹೀಗಿದ್ದರೂ ಕಮ್ಮಾರರು ತಮ್ಮ ಶ್ರದ್ಧಾಭಕ್ತಿಗಳನ್ನು ಸರಿಯಾಗಿ ತೋರಿಸಿಕೊಂಡಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ, ಕಮ್ಮಾರ ಯೂಸೂಫನು ಪರಲೋಕದಲ್ಲಿ ಪಾಪಿಗಳಿಗೆ ಮೀಸಲಿರಿಸಿರುವ ಚಿತ್ರಹಿಂಸೆಗಳನ್ನೂ ಕೂದಲೆಳೆಗಳನ್ನು ಹೆಣೆದು ರಚಿಸಿರುವ ಸೇತುವೆಯನ್ನೂ ಕಡೆಗಣಿಸಿ, ಧೃಷ್ಟತನದಿಂದ ಕೃತಘ್ನತೆಯನ್ನು ನುಡಿಯಲು ಬಾಯಿ ಬಿಟ್ಟಿದ್ದಾನೆ. ಇಷ್ಟೇ ಅಲ್ಲ; ಸೂರ್ಯನನ್ನೇ ಮುಚ್ಚಿ ಮರೆಮಾಡುವ ಅಪಾರ ತೇಜೋರಾಶಿಯೂ, ಪರಮ ಪ್ರಶಾಂತರೂ ಆದ ನಮ್ಮ ಮಹಾಪ್ರಭು ಅಮೀರರ ಪಾದಗಳವರೆಗೂ ದೂರು ತರುವ ಸಾಹಸ ಮಾಡಿದ್ದಾನೆ.

"ಈ ಕಾರಣದಿಂದ ನಮ್ಮ ಪರಮಪ್ರಶಾಂತ ಅಮೀರರು ದಯಾಮಯರಾಗಿ ಈ ರೀತಿ ತೀರ್ಪು ಹೇಳಿದ್ದಾರೆ: ಕಮ್ಮಾರ ಯೂಸೂಫನಿಗೆ ಇನ್ನೂರು ಚಡಿಯೇಟು ಕೊಡತಕ್ಕದ್ದು. ಇದರಿಂದ ಅವನಿಗೆ ಸಹಜವಾಗಿಯೇ ಪಶ್ಚಾತ್ತಾಪ ಹುಟ್ಟುತ್ತದೆ; ಪಶ್ಚಾತ್ತಾಪ ಹುಟ್ಟದಿದ್ದರೆ, ಅವನಿಗೆ ಸ್ವರ್ಗದ ಬಾಗಿಲು ಎಂದಿಗೂ ತೆರೆಯಲಾರದು. ಕಮ್ಮಾರರ ಸಾಲಿನ ವಿಷಯದಲ್ಲಿ ಪರಮಪ್ರಶಾಂತರಾದ ಅಮೀರರು ನೂತನವಾಗಿ ಮತ್ತಷ್ಟು ಅನುಗ್ರಹ ತೋರಿಸುತ್ತಿದ್ದಾರೆ; ಅವರು ಅನ್ನವಸತಿಗಳನ್ನಿತ್ತು ಸೇವೆ ಸಲ್ಲಿಸುವುದಕ್ಕಾಗಿ ಮತ್ತೆ ಇಪ್ಪತ್ತು ಮಂದಿ ಸಿಪಾಯಿಗಳನ್ನು ಅವರಲ್ಲಿಗೆ ಕಳಿಸುತ್ತಾರೆ ಈ ಮೂಲಕ, ಅವರು ದಿನದಿನವೂ ಗಳಿಗೆ ಗಳಿಗೆಗೂ ನಮ್ಮ ಅಮೀರರ ವಿವೇಕವನ್ನೂ ಕಾರುಣ್ಯವನ್ನೂ ಪ್ರಶಂಸಿಸಿರುವ ಮಹದವಕಾಶ ಅವರಿಗೆ ತಪ್ಪಿಹೋಗದಂತೆ ಅನುಗ್ರಹಿಸಿದ್ದಾರೆ. ಇದು ಅವರ ತೀರ್ಪು. ಪ್ರಭುಭಕ್ತ ಪ್ರಜೆಗಳ ಮೇಲ್ಮೆಗಾಗಿ ಅಲ್ಲಾ ಅವರಿಗೆ ಚಿರಾಯುಸ್ಸನ್ನು ಅನುಗ್ರಹಿಸಲಿ."

ಮತ್ತೆ ಆಸ್ಥಾನದ ಹೊಗಳುಭಟ್ಟರ ಪ್ರಶಂಸೆಯ ಮೇಳ ಪ್ರಾರಂಭವಾಯಿತು. ಆ ಪ್ರಶಂಸೆ ಮೊಳಗುತ್ತಿರುವಾಗಲೇ, ಸಿಪಾಯಿಗಳು ಕಮ್ಮಾರ ಯೂಸೂಫನನ್ನು ಹಿಡಿದುಕೊಂಡು ವಧಸ್ಥಾನಕ್ಕೆ ಎಳೆದುಕೊಂಡು ಹೋದರು. ಅಲ್ಲಿ ವಧಕಾರರು ವಿಕಾರವಾಗಿ ಹಲ್ಲುಕಿರಿಯುತ್ತ ತಮ್ಮ ಭಾರಿಯ ಬಾರುಕೋಲುಗಳನ್ನು ಪರೀಕ್ಷಿಸುತ್ತಿದ್ದರು.

ಕಮ್ಮಾರನು ಚಾಪೆಯ ಮೇಲೆ ಮುಖ ಅಡಿಯಾಗಿ ಮಲಗಿದನು; ಚಾವಟಿ ಸ್ವಿಷ್ ಎಂದು ಸದ್ದುಮಾಡುತ್ತ ಮೇಲೆರಗಿತು; ತಕ್ಷಣವೆ ಕಮ್ಮಾರನ ಬೆನ್ನು ರಕ್ತರಂಜಿತವಾಯಿತು.

ವಧಕಾರರು ಅವನನ್ನು ಬಹು ಕ್ರೂರವಾಗಿ ಹೊಡೆದರು. ಅವನ ಚರ್ಮವನ್ನು ಪಟ್ಟಿಪಟ್ಟಿಯಾಗಿ ಸೀಳಿದರು; ಮಾಂಸಖಂಡವನ್ನು ಮೂಳೆ ಮುಟ್ಟುವ ವರೆಗೂ ಕತ್ತರಿಸಿದರು. ಆದರೆ ಅವನು ಒಂದು ಸಲವು ಕೂಗಲಿಲ್ಲ, ಕಿರಿಚಲಿಲ್ಲ; ಒಂದೇ ಒಂದು ನರಳಿಕೆಯನ್ನೂ ನರಳಲಿಲ್ಲ. ಅವನು ಎದ್ದು ನಿಂತಾಗ ಅವನ ತುಟಿಗಳ ಮೇಲೆ ಕಪ್ಪು ನೊರೆ ಕಟ್ಟಿತ್ತು; ದಂಡನೆಯ ಕಾಲದಲ್ಲಿ ಕಿರಿಚದಿರುವುದಕ್ಕಾಗಿ ಅವನು ಭದ್ರವಾಗಿ ನೆಲವನ್ನು ಕಚ್ಚಿದ್ದನು.

"ಈ ಕಮ್ಮಾರ ಯಾವುದನ್ನೂ ಮರೆಯುವಂಥವನಲ್ಲ. ಅಮೀರನ ಕರುಣೆಯನ್ನು ತನ್ನ ಆಯುಸ್ಸಿನ ಕೊನೆಯ ವರೆಗೂ ಇವನು ನೆನೆಯುತ್ತಿರುತ್ತಾನೆ" ಎಂದುಕೊಂಡನು ಖೋಜಾ ನಸ್ರೆದ್ದೀನ್. ಆ ಮೇಲೆ ಬಣ್ಣಗಾರನನ್ನು ಕುರಿತು, "ಅಯ್ಯಾ ಬಣ್ಣಗಾರಾ, ಏತಕ್ಕಾಗಿ ಕಾಯುತ್ತಿದ್ದೀಯ? ಇದು ನಿನ್ನ ಸರದಿ, ಹೋಗು" ಎಂದನು.

ಬಣ್ಣಗಾರನು 'ಥೂ' ಎಂದು ಉಗುಳಿ, ಗುಂಪಿನಿಂದ ಹೊರಬಂದು ಹಿಂದಿರುಗಿ ನೋಡದೆಯೇ ನಡೆದುಬಿಟ್ಟನು.

ಮುಖ್ಯ ವಜೀರನು ಉಳಿದ ವ್ಯವಹಾರಗಳನ್ನು ಬೇಗ ಬೇಗ ತೀರ್ಮಾನಿಸುತ್ತ ಬಂದನು. ಪ್ರತಿಯೊಂದು ವ್ಯವಹಾರದಲ್ಲಿಯೂ ಅಮೀರನ ಭಂಡಾರಕ್ಕೆ ತಪ್ಪದೆ ಆದಾಯವನ್ನು ಹೆಚ್ಚಿಸುತ್ತಿದ್ದನು. ಇದು ಇವನ ವೈಶಿಷ್ಟ್ಯ.

ವಧಕಾರರು ಬಿಡುವಿಲ್ಲದೆ ಕೆಲಸ ಮಾಡುತ್ತಿದ್ದರು. ಅವರಿದ್ದ ಕಡೆಯಿಂದ ಕೂಗಾಟ ಕಿರಿಚಾಟಗಳು ಕೇಳಬರುತ್ತಿದ್ದವು. ಮುಖ್ಯಮಂತ್ರಿ ಹೊಸ ಹೊಸ ಪಾಪಿಗಳನ್ನು ದಂಡನೆಗಾಗಿ ಅವರ ಬಳಿ ಕಳಿಸುತ್ತಿದ್ದನು. ಅಪರಾಧಿಗಳ ಸಾಲಿಗೆ ಸಾಲೇ ಕಾದು ನಿಂತಿತ್ತು; ಮುದುಕರು, ಮುದುಕಿಯರು, ಚಿಕ್ಕವರು, ಹತ್ತು ವರ್ಷದ ಒಬ್ಬ ಹುಡುಗನೂ ಇದ್ದನು ಅವರಲ್ಲಿ. ಆ ಹುಡುಗ ದುರಹಂಕಾರದಿಂದ ಎದುರು ಬಿದ್ದು ಅಮೀರನ ಅರಮನೆಯೆದುರಿಗೆ ನೆಲ ನೆನಸುತ್ತಿದ್ದನೆಂದು (ಎಂದರೆ, ಮೂತ್ರವಿಸರ್ಜನೆ ಮಾಡುತ್ತಿದ್ದನೆಂದು) ಅಪಾದಿಸಲಾಗಿತ್ತು. ಅವನು ಗಡಗಡನೆ ನಡುಗಿ ಅಳುತ್ತಿದ್ದನು; ಕಣ್ಣೀರನ್ನು ಮುಖದ

ಮೇಲೆಲ್ಲ ಒರಸಿಕೊಳ್ಳುತ್ತಿದ್ದನು. ಅವನನ್ನು ನೋಡನೋಡುತ್ತ ಖೋಜಾ ನಸ್ರೆದ್ದೀನನ ಹೃದಯ ಕರುಣೆಯಿಂದಲೂ ಆಕ್ರೋಶದಿಂದಲೂ ತುಂಬಿ ಬಿರಿಯುವಂತಾಯಿತು.

"ಈ ಹುಡುಗ ನಿಜವಾಗಿಯೂ ಬಹು ಅಪಾಯಕಾರಿಯಾದ ಅಪ ರಾಧಿ" ಎಂದು ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ನುಡಿದನು. "ಇಂಥ ಶತ್ರುಗಳಿಂದ ತನ್ನ ಸಿಂಹಾಸನಕ್ಕೆ ಒದಗಬಹುದಾದ ಅಪಾಯವನ್ನು ನಿವಾ ರಿಸಿ ರಕ್ಷಿಸಿಕೊಂಡ ಅಮೀರನ ಮುಂಜಾಗ್ರತೆಯನ್ನು ಎಷ್ಟು ಹೊಗಳಿದರೂ ತೀರದು. ಇವರು ಉಳಿದವರಿಗಿಂತ ಹೆಚ್ಚು ಅಪಾಯಕಾರಿಗಳು; ಏಕೆಂದರೆ ಇವರು ಮುಂದೆ ವ್ಯಕ್ತವಾಗಬಹುದಾದ ದುಷ್ಟ ಭಾವನೆಗಳನ್ನು ತಮ್ಮ ಚಿಕ್ಕ ವಯಸ್ಸಿನ ಮರೆಯಲ್ಲಿ ಅಡಗಿಸಿಟ್ಟಿರುತ್ತಾರೆ. ಇವತ್ತಿನ್ನೂ ಇನ್ನೊಬ್ಬ ಅಪ ರಾಧಿಯನ್ನು ಕಂಡೆ. ಇವನಿಗಿಂತಲೂ ಹೆಚ್ಚು ಕೀಳಾದ, ಹೆಚ್ಚು ಭಯಂಕರ ವಾದ ಅಪರಾಧ ಮಾಡಿದ್ದಾನೆ ಅವನು. ಈ ಎರಡನೆಯ ಅಪರಾಧಿ—ನೀವು ನಂಬುವಿರೋ ಇಲ್ಲವೋ ಕಾಣೆ—ಮೊದಲನೆಯವನಿಗಿಂತ ಕೀಳಾಗಿ ನಡೆದು ಕೊಂಡ. ಇನ್ನೂ ವಿಶೇಷವೇನೆಂದರೆ, ಹಾಗೆ ಮಾಡಿದ್ದು ಅರಮನೆಯ ಕೋಟೆ ಗೋಡೆಯ ನೇರ ಕೆಳಗಡೆಯೇ! ಅಂಥ ಅವಿನಯ ವರ್ತನೆಗೆ ಏನು ಶಿಕ್ಷೆ ಮಾಡಿದರೂ ಅದು ಕಡಮೆಯೆಂದೇ ಹೇಳಬೇಕು. ಅವನನ್ನು ಶೂಲಕ್ಕೇರಿಸು ವುದೇ ತಕ್ಕದ್ದೆಂದು ನನಗೆ ತೋರುತ್ತದೆ! ಆದರೂ, ಶೂಲದ ಕಂಬಿ ಅವನ ಮೈಯಲ್ಲಿ, ಸುಡುಗಂಬಿ ಕೋಳಿಮರಿಯ ಮೈಯಲ್ಲಿ ಹೇಗೋ ಹಾಗೆ ಸರಾಗ ವಾಗಿ ತೂರಿಹೋಗುತ್ತದೆಂದು ಕಾಣುತ್ತದೆ; ಏಕೆಂದರೆ, ಅವನಿಗಿನ್ನೂ ನಾಲ್ಕೇ ವರ್ಷ ವಯಸ್ಸು. ಅದರೇನು, ನಾನಾಗಲೇ ಹೇಳಿರುವಂತೆ, ಅವನ ವಯ ಸ್ಸನ್ನು ವಿನಾಯಿತಿಗೆ ಕಾರಣವಾಗಿ ಪರಿಗಣಿಸಲಾಗದು. ನಮ್ಮ ಈ ಬುಖಾರ ದಲ್ಲಿ ಎಂಥೆಂಥ ಅನಾಚಾರಗಳು ನೆಲಸಿವೆಯೆಂದು ನೆನೆದು ನನ್ನ ಹೃದಯ ವ್ಯಥೆಯಿಂದ ತುಂಬಿಹೋಗಿದೆ. ಹೀಗಿದ್ದರೂ ನಮ್ಮ ಅಮೀರರ ರಕ್ಷಕದಳದ ಸಿಪಾಯಿಗಳು ಮತ್ತು ವಧಕಾರರ ಸಹಾಯದಿಂದ ಅಂಥ ಅನಾಚಾರಗಳು ನಿರ್ಮೂಲವಾಗಿ ಅವುಗಳ ಸ್ಥಾನದಲ್ಲಿ ಸದಾಚಾರಗಳು ರೂಢಮೂಲವಾಗುತ್ತವೆ ಯೆಂದು ನಾವು ನಂಬಬಹುದು" ಎಂದು ಮಾತು ಮುಗಿಸಿದನು.

ಹೀಗೆ ಮುಲ್ಲನೊಬ್ಬನು ಉಪದೇಶ ಮಾಡುತ್ತಿರುವ ರೀತಿಯಲ್ಲಿ ಅವನು

ಮಾತಾಡಿದನು. ಅವನಾಡಿದ ಮಾತೂ ಅವನ ದನಿಯೂ ಸದುದ್ದೇಶವುಳ್ಳಂತೆಯೇ ತೋರುತ್ತಿದ್ದವು; ಆದರೂ, ಕಿವಿಯಿದ್ದವರು ಕೇಳಿ ತಿಳಿದುಕೊಂಡರು; ಅಂತರ್ಯವನ್ನರಿತು ಗುಪ್ತವಾಗಿ ಮತ್ತು ಆಕ್ರೋಶಪೂರ್ವಕವಾಗಿ ಮುಗುಳು ನಕ್ಕರು; ಆ ನಗು ಅವರ ಗಡ್ಡದಲ್ಲಿ ಅಡಗಿ ಮರೆಯಾಯಿತು.

೧೧

ಗುಂಪು ಕಡಮೆಯಾಗುತ್ತಿರುವುದು ಇದ್ದಕ್ಕಿದ್ದಂತೆ ಖೋಜಾ ನಸ್ರೆದ್ದೀನನ ಗಮನಕ್ಕೆ ಬಂತು. ಎಷ್ಟೋ ಜನ ಬೇಗ ಬೇಗ ಹೊರಟುಹೋದರು; ಕೆಲವರಂತೂ ಓಟಕಿತ್ತುಬಿಟ್ಟರು.

"ಸಿಪಾಯಿಗಳು ನನ್ನನ್ನು ಹಿಡಿಯಲು ಬರುತ್ತಿರಬಹುದೆ?" ಎಂದು ಆತಂಕದಿಂದ ಯೋಚಿಸುತ್ತಿದ್ದನು.

ಅತ್ತಕಡೆ ಬರುತ್ತಿದ್ದ ದುಬಾರಿ ಬಡ್ಡಿಗಾರನನ್ನು ಕಂಡ ಕೂಡಲೆ ಜನ ಓಡಿಹೋದದ್ದರ ಕಾರಣವನ್ನು ತಿಳಿದುಕೊಂಡನು. ಅವನ ಹಿಂದೆ ಸಿಪಾಯಿಗಳ ಕಾವಲಿನಲ್ಲಿ ಮಣ್ಣು ಹತ್ತಿದ ಖಲತ್ ತೊಟ್ಟ ನರೆತ ಗಡ್ಡದ ಕೈಕಾಲುಡುಗಿದ ಒಬ್ಬ ಮುದುಕನೂ ಒಬ್ಬ ಬುರುಕಿ ಹಾಕಿದ ಹೆಂಗಸೂ—ಹೆಂಗಸೇನು, ಹುಡುಗಿಯೇ—ಬರುತ್ತಿದ್ದರು. ಅವಳ ನಡಗೆಯ ರೀತಿಯನ್ನು ಕಂಡೊಡನೆಯೇ ಅನುಭವಸ್ಥನಾದ ಖೋಜಾ ನಸ್ರೆದ್ದೀನನಿಗೆ ಅವಳು ಹುಡುಗಿಯೆಂದು ಗೊತ್ತಾಗಿಹೋಯಿತು.

ದುಬಾರಿ ಬಡ್ಡಿಗಾರನು ನೆಟ್ಟಗಿರುವ ತನ್ನ ಒಂಟಿಗಣ್ಣಿನಿಂದ ಸುತ್ತಲೂ ನೆರೆದ ಜನರನ್ನು ನೋಡುತ್ತಾ, "ಸಕೀರ್, ಜೂರಾ, ಸಯಿದ್, ಸಾದಿಕ್—ಇವರೆಲ್ಲ ಎಲ್ಲಿ?" ಎಂದು ಕಿರುಕಲು ದನಿಯಲ್ಲಿ ಕೇಳಿದನು. ಅವನ ಇನ್ನೊಂದು ಕಣ್ಣು ಮಂದ; ಅಲುಗುತ್ತಿರಲಿಲ್ಲ; ಬಿಳಿಯ ಪೊರೆ ಮುಚ್ಚಿಕೊಂಡಿತ್ತು. "ಅವರೆಲ್ಲ ಈಗಿನ್ನೂ ಇಲ್ಲೇ ಇದ್ದರು; ದೂರದಿಂದಲೇ ಅವರನ್ನು ಕಂಡೆ ನಾನು. ಬಹು ಬೇಗ ಅವರ ಸಾಲದ ಅವಧಿ ಮುಗಿಯುತ್ತದೆ. ಹೀಗೆ ಓಡಿಹೋಗಿ ಅಡಗಿಕೊಂಡುಬಿಟ್ಟರೆ ಅವರಿಗೆ ಏನೂ ಪ್ರಯೋಜನವಿಲ್ಲ" ಎಂದನು.

ಗೂನುಬೆನ್ನು ಬಗ್ಗಿಸಿಕೊಂಡು ಕುಂಟುತ್ತ ಮುಂದೆ ನಡೆದನು.

ಜನ ತಮ್ಮತಮ್ಮಲ್ಲೆ ಆಡಿಕೊಳ್ಳತೊಡಗಿದರು:

"ನೋಡಿ, ಆ ಮುದಿ ಜೇಡನು ಕುಂಬಾರ ನಿಯಾಸನನ್ನೂ ಅವನ ಮಗಳನ್ನೂ ಅಮೀರನ ಬಳಿಗೆ ಎಳೆದುಕೊಂಡು ಹೋಗುತ್ತಿದ್ದಾನೆ!"

"ಅವನು ಕುಂಬಾರನಿಗೆ ಒಂದೇ ಒಂದು ದಿನ ಕೂಡ ಅವಕಾಶ ಕೊಡಲಿಲ್ಲ."

"ಅವನು ಹಾಳಾಗ! ನನ್ನ ಸಾಲಕ್ಕೆ ಇನ್ನು ಒಂದು ಪಕ್ಷದಲ್ಲಿ ಅವಧಿ ಮುಗಿಯುತ್ತದೆ."

"ನನ್ನದು ಇನ್ನೊಂದು ವಾರದಲ್ಲಿ ಕೊಡಬೇಕಾಗಿ ಬರುತ್ತದೆ."

"ಕುಷ್ಠರೋಗವನ್ನೋ ಕಾಲರವನ್ನೋ ಅವನು ಹೊತ್ತು ತರುತ್ತಿದ್ದಾನೆಯೋ ಎಂಬಂತೆ ಎಲ್ಲರೂ ಹೇಗೆ ಓಡಿಹೋಗಿ ಅಡಗಿಕೊಳ್ಳುತ್ತಿದ್ದಾರೆ, ನೋಡು!"

"ಈ ದುಬಾರಿ ಬಡ್ಡಿಯವನು ಕುಷ್ಠರೋಗಕ್ಕಿಂತಲೂ ಕೀಳು!"

ಖೋಜಾ ನಸ್ರೆದ್ದೀನನ ಅಂತರಾತ್ಮ ಪಶ್ಚಾತ್ತಾಪದಲ್ಲಿ ನೊಂದು ಬೆಂದು ಹೋಯಿತು. ಅವನು ತನ್ನ ಪ್ರತಿಜ್ಞೆಯನ್ನು ಮತ್ತೆ ನೆನೆದು ಉಚ್ಚರಿಸಿದನು:

"ಅವನನ್ನು ಅದೇ ಕೊಳದಲ್ಲಿ ಮುಳುಗಿಸಿಬಿಡುತ್ತೇನೆ!"

ದುಬಾರಿ ಬಡ್ಡಿಗಾರ ತನ್ನ ಸರದಿ ಬರುವ ವರೆಗೆ ಕಾಯದೆ ತಕ್ಷಣವೇ ಅಮೀರನ ಬಳಿ ಬರುವುದಕ್ಕೆ ಆರ್ಸ್‌ಲಾನ್-ಬೆಕ್ ಅವಕಾಶ ಕೊಟ್ಟನು. ಕುಂಬಾರನೂ ಅವನ ಮಗಳೂ ಅವನ ಹಿಂದೆಯೇ ಬಂದರು. ಅವರು ಮಂಡಿ ಊರಿ ನಮಸ್ಕರಿಸಿ ರತ್ನಗಂಬಳಿಯ ಅಂಚಿಗೆ ಮುತ್ತಿಟ್ಟರು.

ಮುಖ್ಯಮಂತ್ರಿ ಪ್ರಸನ್ನಭಾವದಿಂದ, "ಮಾನ್ಯ ಜಾಫರ್, ನಿನಗೆ ಶಾಂತಿ ಇರಲಿ. ಯಾವ ಕೆಲಸಕ್ಕಾಗಿ ನೀನು ಇಲ್ಲಿ ಬಂದಿದ್ದೀಯ? ನಿನ್ನ ಕೆಲಸವನ್ನು ಮಹಾಮಹಿಮ ಅಮೀರರಿಗೆ ಅರಿಕೆ ಮಾಡು" ಎಂದನು.

"ಓ, ಮಹಾಮಹಿಮ ಮಹಾರಾಜಾ! ಪ್ರಭೂ!" ಎಂದು ಜಾಫರ್ ಅಮೀರನನ್ನು ಕುರಿತು ಆಡತೊಡಗಿದನು. ಅಮೀರನು ನಿದ್ದೆಗಣ್ಣಿನಲ್ಲಿ ಅವನ ಕಡೆ ತಲೆ ಅಳ್ಳಾಡಿಸಿ ಮತ್ತೆ ಗೊರಕೆಗಳಲ್ಲಿ ಮೈಮರೆತನು. ಜಾಫರ್ ತನ್ನ ಅರಿಕೆಯನ್ನು ಮುಂದುವರಿಸಿದನು. "ಪ್ರಭೂ, ನಾನು ತಮ್ಮ ನ್ಯಾಯವನ್ನು ಪ್ರಾರ್ಥಿಸಲು ಬಂದಿದ್ದೇನೆ. ಈ ಮನುಷ್ಯ ನಿಯಾಸ್ ಎಂಬವನು, ವೃತ್ತಿಯಿಂದ ಕುಂಬಾರ. ನನಗೆ ನೂರು ಟಂಗ ಸಾಲ ತೀರಿಸಬೇಕಾಗಿದೆ; ಇದರ

ಜೊತೆಗೆ ಈ ಸಾಲಕ್ಕೆ ಮುನ್ನೂರು ಟಂಗ ಬಡ್ಡಿಯೂ ಬರಬೇಕಾಗಿದೆ. ಇವತ್ತು ಬೆಳಗ್ಗೆ ಈ ಸಾಲದ ಅವಧಿ ಮುಗಿಯಿತು. ಆದರೆ ಕುಂಬಾರ ನನಗೆ ಏನೂ ಕೊಟ್ಟಿಲ್ಲ. ಓ ಪ್ರಾಜ್ಞ ಅಮೀರಾ, ವಿಶ್ವಕ್ಕೆ ಸೂರ್ಯ; ಈ ವಿಷಯದಲ್ಲಿ ತಮ್ಮ ತೀರ್ಪು ದಯಪಾಲಿಸಬೇಕು" ಎಂದು ಬೇಡಿದನು

ಗುಮಾಸ್ತರು ತಮ್ಮ ಪುಸ್ತಕಗಳಲ್ಲಿ ದುಬಾರಿ ಬಡ್ಡಿಗಾರನ ಮನವಿ ಯನ್ನು ಬರೆದುಕೊಂಡರು. ಆ ಮೇಲೆ ಪ್ರಧಾನ ವಜೀರನು ಕುಂಬಾರನ ಕಡೆ ತಿರುಗಿದನು.

"ಕುಂಬಾರಾ, ಮಹಾಪ್ರಭು ಅಮೀರರಿಗೆ ಉತ್ತರ ಕೊಡು. ಈ ಸಾಲ ವನ್ನು ನೀನು ಒಪ್ಪಿಕೊಳ್ಳುತ್ತೀಯೋ ? ದಿನ, ಗಂಟೆ ಎರಡೂ ಸರಿಯಲ್ಲವೆಂದು ಪ್ರತಿವಾದಿಸುತ್ತೀಯಲ್ಲವೆ ?"

"ಇಲ್ಲ" ಎಂದನು ಆ ಕುಂಬಾರ ಕುಗ್ಗಿದ ದನಿಯಲ್ಲಿ. "ಇಲ್ಲ; ಮಹಾ ಬುದ್ಧಿಶಾಲಿಗಳೂ ನ್ಯಾಯವಂತರೂ ಆದ ವಜೀರರೇ, ನಾನು ಯಾವುದನ್ನೂ ಅಲ್ಲಗಳೆಯುವುದಿಲ್ಲ—ಸಾಲ, ತೀರಿಸಬೇಕಾದ ದಿನ, ಗಂಟೆ ಯಾವುದನ್ನೂ ಅಲ್ಲವೆನ್ನುವುದಿಲ್ಲ. ಒಂದೇ ಒಂದು ತಿಂಗಳ ಕಾಲಾವಕಾಶವನ್ನು ಬೇಡುತ್ತಿದ್ದೇನೆ. ಓ ಅಮೀರರೇ, ತಮ್ಮ ದಯೆ ಔದಾರ್ಯಗಳ ರಕ್ಷಣೆಯಲ್ಲಿ ಆಶ್ರಯ ಬೇಡುತ್ತಿದ್ದೇನೆ" ಎಂದು ಪ್ರಾರ್ಥಿಸಿದನು.

ಬಖ್ತಿಯಾರ್, "ಮಹಾಪ್ರಭೂ, ತಮ್ಮ ಮುಖಮಂಡಲದಲ್ಲಿ ಪ್ರಕಾಶಿಸುತ್ತಿರುವ ತೀರ್ಪನ್ನು ಪ್ರಕಟಿಸಲು ನನಗೆ ಅಪ್ಪಣೆಯಾಗಬೇಕು" ಎಂದು ತೀರ್ಪನ್ನು ಘೋಷಿಸಲು ಪ್ರಾರಂಭಿಸಿದನು : "ದಯಾಮಯನೂ ಕರುಣಾಕರನೂ ಆದ ಅಲ್ಲಾನ ಹೆಸರಿನಲ್ಲಿ. ಕಾಯಿದೆಯ ಪ್ರಕಾರ ಯಾವನೇ ಆದರೂ ಗೊತ್ತಾದ ಕಾಲಕ್ಕೆ ಸರಿಯಾಗಿ ಸಾಲ ತೀರಿಸದೆ ಹೋದರೆ, ಅವನು ಸಾಲ ಕೊಟ್ಟಿರುವವನಿಗೆ ಕುಟುಂಬಸಮೇತ ಗುಲಾಮನಾಗಬೇಕಾಗುತ್ತದೆ; ಮತ್ತು ಆ ಸಾಲವನ್ನು ಬಡ್ಡಿಸಮೇತ ತೀರಿಸುವ ವರೆಗೂ ಗುಲಾಮಗಿರಿಯಲ್ಲೆ ಇರಬೇಕಾಗುತ್ತದೆ—ಹಾಗೆ ಗುಲಾಮಗಿರಿಯಲ್ಲಿರುವ ಕಾಲಕ್ಕೂ ಬಡ್ಡಿಯನ್ನು ತೆರಲೇಬೇಕಾಗುತ್ತದೆ."

ಕುಂಬಾರನ ತಲೆ ಮೆಲ್ಲಮೆಲ್ಲನೆ ತಗ್ಗುತ್ತ ಬಂದು ಕಡೆಗೆ ನಡುಗತೊಡಗಿತು. ಗುಂಪಿನಲ್ಲಿ ಎಷ್ಟೋ ಜನ ಹೊರಹೊರಡಲಿದ್ದ ನಿಟ್ಟುಸುರುಗಳನ್ನು

ಹೇಗೋ ಅದುಮಿಕೊಂಡು ಬೇರೆ ಕಡೆ ಮುಖ ತಿರುಗಿಸಿದರು. ಹುಡುಗಿಯ ಭುಜಗಳು ಅಲುಗಿದವು; ಅವಳು ಬುರುಕಿಯೊಳಗೇ ಅಳುತ್ತಿದ್ದಳು. ಖೋಜಾ ನಸ್ರೆದ್ದೀನ್ ನೂರನೆಯ ಸಾರಿ ಅಂದುಕೊಂಡನು :

" ಅವನು ಮುಳುಗಲೇ ಬೇಕು ; ಬಡವರನ್ನು ಹೀಗೆ ಗೋಳುಹುಯ್ದು ಕೊಳ್ಳುವ ಈ ಪಾಪಿ ಮುಳುಗಿ ಸಾಯಲೇ ಬೇಕು ! "

ಬಖ್ತಿಯಾರ್ ದನಿ ಎತ್ತರಿಸಿ, " ಆದರೆ, ನಮ್ಮ ಪ್ರಭುಗಳ ದಯೆಯೂ ಔದಾರ್ಯವೂ ಅಪಾರ " ಎಂದು ಮುಂದುವರಿಸಿದನು.

ಗುಂಪೆಲ್ಲ ತಟ್ಟನೆ ನಿಶ್ಶಬ್ದವಾಯಿತು. ಮುದಿ ಕುಂಬಾರ ತಲೆಯೆತ್ತಿ ನೋಡಿದನು. ಆಶಾಕಿರಣ ಅವನ ಮುಖವನ್ನು ಬೆಳಗಿಸಿತು.

" ಈಗ ಹಣ ತೀರಿಸಬೇಕಾಗಿ ಬಂದಿರುವುದಾದರೂ ಅಮೀರರು ಕುಂಬಾರ ನಿಯಾಸನಿಗೆ ಕಾಲಾವಕಾಶ ಕೊಡುತ್ತಾರೆ—ಒಂದು ಗಂಟೆ ಹೊತ್ತು. ಈ ಒಂದು ಗಂಟೆ ಮುಗಿಯುವಷ್ಟರಲ್ಲಿ ಕುಂಬಾರ ನಿಯಾಸನು ನಮ್ಮ ಧರ್ಮದ ಆಜ್ಞೆಯನ್ನು ಮೀರಿ ಬಡ್ಡಿ ಸಮೇತವಾಗಿ ಸಾಲವನ್ನೆಲ್ಲಾ ಪೂರ್ತಿಯಾಗಿ ತೀರಿಸದೆ ಇದ್ದ ಪಕ್ಷದಲ್ಲಿ, ಹಿಂದೆಯೇ ತಿಳಿಸಿರುವಂತೆ ಕಾಯಿದೆಯ ಪ್ರಕಾರ ನಡಸಲಾಗುತ್ತದೆ. ಕುಂಬಾರಾ, ಹೊರಡಿನ್ನು. ಇಲ್ಲಿಂದ ಮುಂದೆ ಅಮೀರರ ದಯೆ ನಿನ್ನನ್ನು ಕಾಪಾಡಲಿ ! "

ಬಖ್ತಿಯಾರ್ ಮಾತು ಮುಗಿಸಿದನು. ಸಿಂಹಾಸನದ ಹಿಂದುಗಡೆ ಗುಂಪು ಕೂಡಿದ್ದ ಹೊಗಳುಭಟ್ಟರು ತಮ್ಮ ಏಕನಾದದ ಪ್ರಶಂಸೆಯನ್ನು ಪ್ರಾರಂಭಿಸಿದರು.

" ಓ, ನ್ಯಾಯನಿಷ್ಠ ಅಮೀರಾ ! ತಮ್ಮ ನ್ಯಾಯವಿಚಕ್ಷಣೆಯಿಂದ ಸ್ವತಃ ನ್ಯಾಯದೇವತೆಯನ್ನೇ ನೀವು ಮೀರಿಸಿದ್ದೀರಿ ! ಓ, ಕರುಣಾಮಯ ಪರಮಪ್ರಾಜ್ಞ ಅಮೀರಾ ! ಓ, ಉದಾರಿ ಅಮೀರಾ ! ಓ, ಭೂಮಂಡಲ ಮಂಡನಾಯಮಾನಾ ! ಸ್ವರ್ಗಭೂಷಣಾ ! ನಮ್ಮ ಪರಮ ಪ್ರಶಾಂತ ಅಮೀರಾ ! "

ಈ ಸಲ ಈ ಹೊಗಳುಭಟ್ಟರು ತಮ್ಮ ಶಕ್ತಿಯನ್ನು ಮೀರಿ ಗಟ್ಟಿಯಾಗಿ ಹೊಗಳಿಕೆಗಳನ್ನು ಹಾಡಿದ್ದರು. ಆ ಸದ್ದಿಗೆ ಅಮೀರನಿಗೆ ಎಚ್ಚರವಾಯಿತು. ಎಚ್ಚೆತ್ತು ಕೋಪದಿಂದ, " ಬಾಯಿ ಮುಚ್ಚಿ ! " ಎಂದು ಅವರಿಗೆ ಅಪ್ಪಣೆ

ಮಾಡಿದನು. ಅವರೆಲ್ಲ ತಕ್ಷಣ ತೆಪ್ಪಗಾದರು. ಚೌಕದಲ್ಲಿದ್ದ ಜನ ಕೂಡ ತೆಪ್ಪಗಿದ್ದರು. ಆಗ ಇದ್ದಕ್ಕಿದ್ದಂತೆ ಬಹು ಬಲವಾದ ಕಿವಿ ಕೊರೆಯುವ ಒಂದು ಕಿರಿಚು ಹೊರಹೊಮ್ಮಿ ಆ ಮೌನವನ್ನು ಭೇದಿಸಿತು.

ಅದು ಖೋಜಾ ನಸ್ರೆದ್ದೀನನ ಕತ್ತೆ. ಒಂದೇ ಕಡೆ ನಿಂತು ನಿಂತು ಅದಕ್ಕೆ ಬೇಜಾರಾಯಿತೋ ಅಥವಾ ಉದ್ದ ಕಿವಿಯ ಗೆಳೆಯನೊಬ್ಬನನ್ನು ಕಂಡು ಆ ಗೆಳೆಯನಿಗೆ ಸ್ವಾಗತ ಬಯಸಬೇಕೆಂಬ ಬಯಕೆ ಬಂತೋ, ಏನೋ ಗೊತ್ತಿಲ್ಲ. ಅಂತೂ, ಅದು ಕಿರಿಚಿತು; ಬಾಲವನ್ನು ಮೇಲಕ್ಕೆತ್ತಿ, ಮೂತಿಯನ್ನು ಮುಂದೆ ಚಾಚಿ, ಹಳದಿಯ ಹಲ್ಲುಗಳನ್ನು ಹೊರದೋರಿಸುತ್ತಾ ಕಿರಿಚುತ್ತಿತ್ತು. ಕಿವಿ ಕಿವುಡಾಗುವಂತೆ, ತಡೆಯಲಾರದೆ ಕಿರಿಚುತ್ತಿತ್ತು; ಆಕಸ್ಮಾತ್ ಸ್ವಲ್ಪ ನಿಲ್ಲಿಸಿದರೆ, ಅದು ಉಸಿರೆಳೆದುಕೊಳ್ಳುವುದಕ್ಕೆ ಮಾತ್ರ; ಮರುಕ್ಷಣವೇ ಇನ್ನೂ ಹೆಚ್ಚು ಅಗಲವಾಗಿ ಬಾಯಿ ಬಿಟ್ಟು ಇನ್ನೂ ಗಟ್ಟಿಯಾಗಿ ಕಿರಿಚುತ್ತಿತ್ತು.

ಅಮೀರನು ಕಿವಿ ಮುಚ್ಚಿಕೊಂಡನು. ಸಿಪಾಯಿಗಳು ಗುಂಪಿನೊಳಕ್ಕೆ ನುಗ್ಗಿದರು. ಆದರೆ, ಖೋಜಾ ನಸ್ರೆದ್ದೀನನಾಗಲೇ ಎಷ್ಟೋ ದೂರ ಹೋಗಿ ಬಿಟ್ಟಿದ್ದನು. ಅವನು ತನ್ನ ಆ ತುಂಟ ಕತ್ತೆಯನ್ನು ಲಗಾಮು ಎಳೆಯುತ್ತಾ ಬಯ್ಯುತ್ತಿದ್ದನು:

" ಅಯ್ಯೋ ಹಾಳು ಕತ್ತೇ, ಅದೇಕಿಷ್ಟು ಸಂತೋಷಪಡುತ್ತಿದ್ದೀಯೆ? ಅಮೀರನ ಕರುಣೆಯನ್ನೂ ಔದಾರ್ಯವನ್ನೂ ಇಷ್ಟೊಂದು ಗದ್ದಲ ಮಾಡದೆ ಹೊಗಳಲಾಗುವುದಿಲ್ಲವೇ, ನಿನಗೆ? ಇಷ್ಟು ಹೆಚ್ಚಾಗಿ ಶ್ರಮಿಸಿದರೆ, ಅಮೀರನ ಆಸ್ಥಾನದ ಹೊಗಳುಭಟ್ಟನಾದೇನೆಂದು ಆಶಿಸುತ್ತಿದ್ದೀಯೋ ಏನೋ! "

ಅವನ ಮಾತು ಕೇಳಿ ಗುಂಪಿಗೆ ಗುಂಪೇ ಗಟ್ಟಿಯಾಗಿ ನಗತೊಡಗಿತು. ನಗುನಗುತ್ತ ಅವನಿಗೆ ದಾರಿ ಬಿಟ್ಟುಕೊಟ್ಟಿತು. ಕಾವಲ ಸಿಪಾಯಿಗಳು ಅವನನ್ನು ಬೆನ್ನಟ್ಟಿ ಹಿಡಿಯಲೆಂದು ಅತ್ತ ತಿರುಗುವುದರೊಳಗಾಗಿ ಗುಂಪಿನ ಜನ ಮತ್ತೆ ಒಟ್ಟುಸೇರಿ ದಾರಿಯನ್ನು ಕಟ್ಟಿಬಿಟ್ಟರು. ಸಿಪಾಯಿಗಳೇನಾದರೂ ಖೋಜಾ ನಸ್ರೆದ್ದೀನನನ್ನು ಹಿಡಿದುಬಿಟ್ಟಿದ್ದರೆ, ಈ ರೀತಿ ದುರಹಂಕಾರದಿಂದ ಶಾಂತಿಭಂಗ ಮಾಡಿದ್ದಕ್ಕಾಗಿ ಅವನನ್ನು ಛಡಿ ಹೊಡೆಯುತ್ತಿದ್ದರು; ಅಲ್ಲದೆ ಅವನ ಕತ್ತೆಯನ್ನು ಮುಟ್ಟುಗೋಲು ಹಾಕಿಬಿಡುತ್ತಿದ್ದರು.

೧೨

" ತೀರ್ಪು ಕೊಟ್ಟಾಯಿತು. ಈಗ ನಿಮ್ಮ ಮೇಲೆ ನನ್ನ ಅಧಿಕಾರ ನಿರ್ಬಾಧಕವಾಗಿದೆ." ನ್ಯಾಯವಿತರಣೆ ನಡೆದ ಸ್ಥಳದಿಂದ ಹೊರಬಂದ ಬಳಿಕ ದುಬಾರಿ ಬಡ್ಡಿಯ ಜಾಫರನು ಕುಂಬಾರ ನಿಯಾಸ್ ಮತ್ತು ಅವನ ಮಗಳು ಗುಲ್ಜಾನ್—ಇಬ್ಬರಿಗೂ ಈ ಮಾತು ಹೇಳಿದನು " ಓ, ಸುಂದರೀ, ಅಕಸ್ಮಾತ್ತಾಗಿ ನಿನ್ನನ್ನು ಕಂಡಾಗಿನಿಂದಲೂ ನನ್ನ ಮನಶ್ಶಾಂತಿಯನ್ನೆಲ್ಲಾ ಕಳೆದುಕೊಂಡಿದ್ದೇನೆ. ನಾನು ನಿದ್ದೆ ಮಾಡಲಾರೆ. ಎಲ್ಲಿ, ಬೇಗ ತೋರಿಸು, ನಿನ್ನ ಮುಖವನ್ನು ! ಇವತ್ತು ಇನ್ನು ಒಂದು ಗಂಟೆ ಹೊತ್ತಿಗೆ ಸರಿಯಾಗಿ ನೀನು ನನ್ನ ಮನೆಗೆ ಬರಬೇಕಾಗುತ್ತದೆ. ನೀನು ನನ್ನ ಮೇಲೆ ದಯವಿಡುವುದಾದರೆ, ನಿಮ್ಮಪ್ಪನಿಗೆ ಸುಲಭವಾದ ಕೆಲಸ ಕೊಡುತ್ತೇನೆ ; ಒಳ್ಳೆಯ ಆಹಾರ ಒದಗಿಸುತ್ತೇನೆ. ನೀನು ಮೊಂಡತನ ಮಾಡಿದರೆ, ಆಗ ನನ್ನ ಕಣ್ಣಾಣೆಗೂ ಅವನಿಗೆ ಬೇಯಿಸದ ಹಸಿ ಹುರುಳಿಯನ್ನು ತಿನ್ನಕೊಡುತ್ತೇನೆ ; ಕಲ್ಲು ಹೊರುವ ಕೆಲಸ ಕೊಡುತ್ತೇನೆ ; ಮತ್ತು ಖೀವದವರಿಗೆ ಮಾರಿಬಿಡುತ್ತೇನೆ; ಖೀವದ ಜನ ತಮ್ಮ ಗುಲಾಮರನ್ನು ಬಹು ಕ್ರೂರವಾಗಿ ದುಡಿಸಿಕೊಳ್ಳುತ್ತಾರೆಂದು ನಿನಗೆ ಗೊತ್ತೇ ಇದೆ. ಮೂರ್ಖಳಾಗಬೇಡ; ಓ, ಮುದ್ದು ಗುಲ್ಜಾನ್, ನನಗೆ ಮುಖ ತೋರಿಸು "

ಅವನ ವಕ್ರವಾದ ಕೈಬೆರಳುಗಳು ಅವಳ ಮುಖಾವರಣವನ್ನು ಸ್ವಲ್ಪ ಮೇಲೆತ್ತಿದವು. ಅವಳು ಕೋಪದಿಂದ ಅವನ ಕೈಯನ್ನು ಒದರಿಹಾಕಿದಳು. ಗುಲ್ಜಾನಿನ ಮುಖ ಒಂದೇ ಒಂದು ಕ್ಷಣ ಅವಗುಂಠನವಿಲ್ಲದೆ ಅನಾವೃತವಾಗಿತ್ತು. ಆದರೆ ಆಗ ತನ್ನ ಕತ್ತೆಯ ಮೇಲೆ ಆ ಬಳಿ ಹಾದು ಹೋಗುತ್ತಿದ್ದ ಖೋಜಾ ನಸ್ರೆದ್ದೀನನಿಗೆ ಅಷ್ಟೇ ಸಾಕಾಯಿತು. ಹುಡುಗಿಯ ಸೌಂದರ್ಯವನ್ನು ಕಂಡು ಅವನು ಮುಗ್ಧನಾದನು ; ಕಣ್ಣಿಗೆ ಹೊರಪ್ರಪಂಚ ಮಸುಕಾಯಿತು ; ಹೃದಯದ ಬಡಿತ ನಿಂತಿತು, ಉಸಿರು ಭಾರವಾಯಿತು, ಮುಖ ಕಳೆಗುಂದಿತು ; ಕತ್ತೆಯ ಮೇಲೆ ಕೂತಿದ್ದಂತೆಯೇ ತತ್ತರಿಸಿಹೋದನು ; ದಿಗ್ಭ್ರಮೆಹಿಡಿದು ಕೈಯಿಂದ ಕಣ್ಣು ಮುಚ್ಚಿಕೊಂಡನು.

ಆ ಕ್ಷಣವೇ ಪ್ರೇಮದ ಸಿಡಿಲು ಅವನಿಗೆ ಬಡಿದಿತ್ತು.

ಸುಧಾರಿಸಿಕೊಳ್ಳುವುದಕ್ಕೆ ಸ್ವಲ್ಪ ಹೊತ್ತು ಹಿಡಿಯಿತು.

" ಇವಳಂಥ ಸುಂದರಿಯನ್ನು ಈ ಪ್ರಪಂಚದಲ್ಲಿ ಎಲ್ಲೂ ಕಂಡಿಲ್ಲ ; ಇವ

ಳನ್ನು ಈ ಕುಂಟ, ಗೂನುಬೆನ್ನಿನ ಒಕ್ಕಣ್ಣ ಕೋತಿ ಬಯಸುವುದೇ!" ಎಂದು ಖೋಜಾ ನಸ್ರೆದ್ದೀನ್ ತನ್ನಲ್ಲಿ ತಾನೇ ಅಂದುಕೊಂಡನು. ಮತ್ತೆ ಅದೇ ಧಾಟಿಯಲ್ಲಿ ಮುಂದುವರಿಸಿ, "ಅಯ್ಯೋ, ನಿನ್ನೆ ದಿನ ಇವನನ್ನು ಅದೇಕೆ ನೀರಿನಿಂದ ಮೇಲಕ್ಕೆತ್ತಿದೆನೋ? ನನ್ನ ಕರ್ಮ ಇದೀಗ ನನಗೇ ವಿರೋಧವಾಗಿ ತಿರುಗಿದೆ! ಆದರೆ, ಇರಲಿ, ಇರಲಿ! ಎಲಾ ಕೊಳಕು ಬಡ್ಡಿಗಾರಾ! ನೋಡೋಣ! ಈ ಕುಂಬಾರನಿಗೂ ಇವನ ಮಗಳಿಗೂ ನೀನಿನ್ನೂ ಯಜಮಾನನಾಗಿಲ್ಲ. ಅವರಿಗೆ ಇನ್ನೂ ಒಂದು ಗಂಟೆಯ ಅವಕಾಶವಿದೆ. ಬೇರೆಯವರು ಒಂದು ವರ್ಷದಲ್ಲಿ ಸಾಧಿಸುವುದಕ್ಕಿಂತ ಹೆಚ್ಚಿನ ಕಾರ್ಯವನ್ನು ಖೋಜಾ ನಸ್ರೆದ್ದೀನ್ ಒಂದು ಗಂಟೆಯಲ್ಲಿ ಸಾಧಿಸಬಲ್ಲ" ಎಂದು ಯೋಚಿಸುತ್ತಿದ್ದನು.

ಇತ್ತ ದುಬಾರಿ ಬಡ್ಡಿಗಾರನು ತನ್ನ ಜೇಬಿನಿಂದ ಒಂದು ಮರದ ನೆರಳು ಗಡಿಯಾರವನ್ನು ಹೊರದೆಗೆದು, ಹೊತ್ತನ್ನು ಗುರುತಿಸಿಕೊಂಡನು.

"ಕುಂಬಾರಾ, ಇಲ್ಲಿ ಈ ಮರದ ಕೆಳಗೆ, ಕಾದಿರು. ನಾನು ಇನ್ನು ಒಂದು ಗಂಟೆಯ ಹೊತ್ತಿಗೆ ಬರುತ್ತೇನೆ. ಎಲ್ಲೂ ಅಡಗಿಕೊಳ್ಳಬೇಡ; ಆ ಪ್ರಯತ್ನವನ್ನೇ ಮಾಡಬೇಡ. ನೀನು ಸಮುದ್ರದ ತಳವಲ್ಲೇ ಹೊಕ್ಕಿದ್ದರೂ ನಿನ್ನನ್ನು ಹುಡುಕಿ ಹಿಡಿತರಿಸಬಲ್ಲೆ; ನೀನೇನಾದರೂ ಅಡಗಿಕೊಂಡರೆ, ಆಗ ಓಡಿಹೋದ ಗುಲಾಮನಂತೆ ನಿನಗೆ ಶಿಕ್ಷೆ ಕೊಡಬೇಕಾದೀತು! ನೀನು, ಓ ಚೆಲುವೆ ಗುಲ್ಜಾನ್, ನನ್ನ ಮಾತು ಮರೆಯಬೇಡ: ನೀನು ನನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತೀಯೆಂಬುದರ ಮೇಲೆ ನಿಮ್ಮಪ್ಪನ ಅದೃಷ್ಟ ಅವಲಂಬಿಸಿದೆ."

ವಿಕಾರವಾದ ಅವನ ಅಸಹ್ಯ ಮುಖದ ಮೇಲೆ ತೃಪ್ತಿಯ ಮುಗುಳುನಗೆ ಮೂಡಿತು. ತನ್ನ ಹೊಸ ಉಪಪತ್ನಿಗೆ ಒಡವೆಗಳನ್ನು ಕೊಳ್ಳಲೆಂದು ಅವನು ರತ್ನವ್ಯಾಪಾರಿಗಳ ಅಂಗಡಿಬೀದಿಗೆ ನಡೆದನು.

ಕುಂಬಾರನು ದುಃಖದಿಂದ ಕುಗ್ಗಿ ಮಗಳೊಡನೆ ದಾರಿಪಕ್ಕದ ಆ ಮರದ ನೆರಳಿನಲ್ಲಿ ಕುಳಿತನು.

ಖೋಜಾ ನಸ್ರೆದ್ದೀನ್ ಅವರ ಬಳಿ ಬಂದನು.

"ಕುಂಬಾರಾ, ತೀರ್ಪು ನನಗೆ ತಿಳಿಯಿತು. ನೀನು ತುಂಬ ಕಷ್ಟದಲ್ಲಿ ಸಿಕ್ಕಿಕೊಂಡಿದ್ದೀಯೆ. ಆದರೆ, ಒಂದು ವೇಳೆ ನಾನು ನಿನಗೆ ಸಹಾಯ ಮಾಡಿ

ದರೂ ಮಾಡಬಹುದು."

ಕುಂಬಾರನು, "ಇಲ್ಲಪ್ಪಾ, ನೀನು ಸಹಾಯಮಾಡಲಾರೆ. ನಿನ್ನ ತೇಪೆ ಬಟ್ಟೆಯನ್ನು ನೋಡಿದರೆ ನೀನು ಐಶ್ವರ್ಯವಂತನಲ್ಲವೆಂದು ಸ್ಪಷ್ಟವಾಗುತ್ತದೆ. ನಾನೋ, ನಾಲ್ಕು ನೂರು ಟಂಗಗಳನ್ನು ಒದಗಿಸಬೇಕಾಗಿದೆ! ನನಗೆ ಧನ ವಂತರಾದ ಸ್ನೇಹಿತರಿಲ್ಲ. ನನ್ನ ಸ್ನೇಹಿತರೆಲ್ಲ ಬಡವರು. ಬಗೆಬಗೆಯ ತೆರಿಗೆ ಗಳನ್ನು ತೆತ್ತು ತೆತ್ತು ಹಾಳಾಗಿದ್ದಾರೆ" ಎಂದು ನಿರಾಶನಾಗಿ ನುಡಿದನು.

"ನನಗೂ ಬುಖಾರದಲ್ಲಿ ಸಿರಿವಂತರಾದ ಸ್ನೇಹಿತರಿಲ್ಲ. ಆದರೇನು, ಹಣ ಕೂಡಿಸಲು ಪ್ರಯತ್ನ ಮಾಡಿ ನೋಡುತ್ತೇನೆ" ಎಂದನು ಖೋಜಾನಸ್ರೆದ್ದೀನ್.

"ಒಂದು ಗಂಟೆಯೊಳಗೆ ನಾನೂರು ಟಂಗ ಹಣ ಕೂಡಿಸುವುದೆ!" ಎಂದು ಮುದುಕ ತಲೆ ಅಳ್ಳಾಡಿಸಿದನು, ನಿರಾಶೆಯ ನಗು ನಗುತ್ತ. "ಅಯ್ಯಾ, ಹೊಸಬಾ, ನೀನು ನಿಜವಾಗಿಯೂ ನನ್ನನ್ನು ಅಣಕಿಸುತ್ತಿದ್ದೀಯ. ಇಂಥ ಕೆಲಸದಲ್ಲಿ ಖೋಜಾ ನಸ್ರೆದ್ದೀನ್ ಒಬ್ಬ ಮಾತ್ರ ಜಯಶಾಲಿಯಾಗಬಲ್ಲ."

"ಅಯ್ಯಾ ಹೊಸಬಾ! ನಮ್ಮನ್ನು ಕಾಪಾಡು, ಕಾಪಾಡು!" ಗುಲ್ಜಾನ್ ಬೇಡಿಕೊಂಡಳು. ಹಾಗೆನ್ನುವಾಗ ಅವಳು ತನ್ನ ತೋಳುಗಳಿಂದ ಅಪ್ಪನನ್ನು ತಬ್ಬಿದಳು.

ಖೋಜಾ ನಸ್ರೆದ್ದೀನ್ ಅವಳ ಕಡೆ ನೋಡಿದನು. ಅವಳ ಕೈಗಳ ಅಂದ ವನ್ನು ಕಂಡನು. ಗುಲ್ಜಾನ್ ದೀರ್ಘ ಕಟಾಕ್ಷದಿಂದ ಅವನನ್ನು ದೃಷ್ಟಿಸಿದಳು. ಅವಳ ಕಣ್ಣುಗಳಲ್ಲಿ ಪ್ರಾರ್ಥನೆ ಭರವಸೆಗಳು ತುಂಬಿದ್ದವು; ಸೌಮ್ಯಕಾಂತಿ ಹೊಮ್ಮುತ್ತಿತ್ತು. ಮುಖಪರದೆಯೊಳಗಿನಿಂದಲೇ ಖೋಜಾ ನಸ್ರೆದ್ದೀನನಿಗೆ ಈ ಪ್ರಾರ್ಥನಾಪೂರ್ಣನಯನಕಾಂತಿ ಕಾಣಿಸಿತು. ಅವನ ನ್ಯರಕ್ತ ನಾಳ ನಾಳದಲ್ಲಿಯೂ ವೇಗದಿಂದ ಓಡತೊಡಗಿತು; ಅವನ ಪ್ರೇಮ ಸಾವಿರ ಪಾಲು ಹೆಚ್ಚಿತು. ಕುಂಬಾರನ ಕಡೆ ತಿರುಗಿ ಹೀಗೆಂದನು :

"ಮುದುಕಾ ಇಲ್ಲೇ ಇರು; ನಾನು ಬರುವವರೆಗೂ ಇಲ್ಲೇ ಕಾದಿರು. ದುಬಾರಿ ಬಡ್ಡಿಗಾರ ಹಿಂದಿರುಗಿ ಬರುವುದರೊಳಗಾಗಿ ನಾನೂರು ಟಂಗ ಹಣ ಕೂಡಿಸಿ ತರದಿದ್ದರೆ, ನಾನೇ ಅತ್ಯಂತ ತುಚ್ಛನೆಂದೂ ನೀಚನೆಂದೂ ತಿಳಿದುಕೊ."

ಅವನು ತನ್ನ ಕತ್ತೆಯ ಬೆನ್ನಿಗೆ ಹಾರಿ ಸುತ್ತಣ ಗುಂಪಿನಲ್ಲಿ ಮರೆಯಾಗಿ ಹೋದನು.

೧೩

ಬೆಳಗ್ಗೆ ಜನದ ನೂಕುನುಗ್ಗಲು ಹೆಚ್ಚು, ಕೂಗಾಟ ಕಿರಿಚಾಟ ಹೆಚ್ಚು; ತಡವಾದರೆ ಎಲ್ಲಿ ತಮಗೆ ಲಾಭದ ಅವಕಾಶ ತಪ್ಪಿಹೋಗುವುದೋ ಎಂದು ಗಡಿ ಬಿಡಿಯಿಂದ ಓಡಾಡುವುದೂ ಹೆಚ್ಚು. ವ್ಯವಹಾರಗಳು ಭರದಿಂದ ಸಾಗುವ ಬೆಳಗಿನ ಹೊತ್ತಿನಂತಲ್ಲದೆ ಈಗ ಶಾಂತವಾಗಿತ್ತು; ಜನಸಂದಣಿಯೂ ಕಡಮೆ ಯಾಗಿತ್ತು. ಮಧ್ಯಾಹ್ನವಾಗುತ್ತ ಬಂದದ್ದರಿಂದ ಸೆಕೆಯನ್ನು ತಾಳಲಾರದೆ ಜನ ಟೀ ಅಂಗಡಿಗಳಿಗೆ ಹೋಗುತ್ತಿದ್ದರು; ಅಲ್ಲಿ ಕೂತು ಶಾಂತವಾಗಿ ತಮ್ಮ ಲಾಭ ನಷ್ಟಗಳನ್ನು ಲೆಕ್ಕಹಾಕುತ್ತಿದ್ದರು. ಸುಡುಬಿಸಿಲು ಚೌಕವನ್ನೆಲ್ಲಾ ಆವರಿಸಿ ಬೆಳಗುತ್ತಿತ್ತು; ನೆರಳುಗಳು ಗಿಡ್ಡವಾಗಿ ಖಚಿತವಾದವು; ನೆಲದ ಮೇಲೆ ಕೆತ್ತಿದ್ದ ಚಿತ್ರದಂತೆ ಕಾಣುತ್ತಿದ್ದವು. ನೆರಳಿದ್ದ ಮೂಲೆಮೂಲೆಯಲ್ಲೂ ಭಿಕ್ಷುಕರು ಆಶ್ರಯ ಪಡೆದಿದ್ದರು; ಅವರ ಸುತ್ತ ಚೆಲ್ಲಿದ್ದ ಚೂರುಪಾರುಗಳನ್ನು ಆಯ್ದು ತಿನ್ನುತ್ತ ಗುಬ್ಬಚ್ಚಿಗಳು ಚಿಲಿಪಿಲಿಗುಟ್ಟುತ್ತ ಹಾರಾಡುತ್ತಿದ್ದವು.

ಭಿಕ್ಷುಕರು ತಮ್ಮ ಅಂಗವಿಕಾರಗಳನ್ನೂ ವ್ರಣಗಳನ್ನೂ ಖೋಜಾ ನಸ್ರೆದ್ದೀನನಿಗೆ ತೋರಿಸಿ, "ಅಯ್ಯಾ ಪುಣ್ಯಾತ್ಮಾ, ಅಲ್ಲಾನ ಹೆಸರಿನಲ್ಲಿ, ನಮಗೇನಾದರೂ ದಾನ ನೀಡು" ಎಂದು ದೈನ್ಯದಿಂದ ಬೇಡಿದರು.

ಅವನು ಸಿಡುಕಿನಿಂದ ಉತ್ತರ ಕೊಟ್ಟನು: "ಸ್ವಲ್ಪ ತಲೆ ನೆಟ್ಟಗಿಟ್ಟು ಕೊಳ್ಳಿ! ನಾನೂ ನಿಮ್ಮಷ್ಟೇ ಬಡವ. ನನಗೆ ನಾನೂರು ಟಂಗ ಕೊಡುವವ ರೊಬ್ಬರು ಬೇಕಾಗಿತ್ತು. ಅವರನ್ನು ಹುಡುಕುತ್ತಿದ್ದೇನೆ."

ಅವನು ತಮ್ಮನ್ನು ಹಾಸ್ಯಮಾಡುತ್ತಿದ್ದಾನೆಂದು ಭಿಕ್ಷುಕರು ತಿಳಿದು ಕೊಂಡರು; ಹಾಗೆ ತಿಳಿದು ಅವನ ಮೇಲೆ ಬೈಗುಳದ ಮಳೆ ಸುರಿಸಿದರು. ಆದರೆ, ಖೋಜಾ ನಸ್ರೆದ್ದೀನ್ ಆ ಬೈಗುಳವನ್ನು ಕಿವಿಗೇ ಹಾಕಿಕೊಳ್ಳಲಿಲ್ಲ. ತನ್ನ ಯೋಚನೆಗಳಲ್ಲೇ ಮುಳುಗಿಹೋಗಿದ್ದನು.

ಟೀ ಅಂಗಡಿಗಳ ಸಾಲಿನಲ್ಲಿ ಎಲ್ಲಕ್ಕಿಂತ ದೊಡ್ಡದಾದ ಮತ್ತು ಜನಸಂದಣಿ ಯಿಂದ ತುಂಬಿ ತುಳುಕುತ್ತಿದ್ದ ಅಂಗಡಿಯನ್ನು ಅವನು ಆಯ್ದುಕೊಂಡನು. ಅಲ್ಲಿ ಬಹುಬೆಲೆಯ ರತ್ನಗಂಬಳಿಗಳಾಗಲಿ ರೇಷ್ಮೆ ದಿಂಬುಗಳಾಗಲಿ ಇರಲಿಲ್ಲ. ಆ ಅಂಗಡಿಗೆ ಪ್ರವೇಶಮಾಡಿದನು. ಹೋಗುವಾಗ ಕತ್ತೆಯನ್ನು ಗೂಟಕ್ಕೆ ಕಟ್ಟದೆ ಅದರ ಲಗಾಮು ಜಗ್ಗಿಸುತ್ತಾ ತನ್ನ ಹಿಂದೆಯೇ ಎಳೆದುಕೊಂಡು ಹೋದನು.

ಅದನ್ನು ಕಂಡು ಜನ ಆಶ್ಚರ್ಯದಿಂದ ಮೂಕರಾದರು. ಈ ಮೌನ ದಿಂದ ಖೋಜಾ ನಸ್ರೆದ್ದೀನ್ ಸ್ವಲ್ಪವೂ ಗಾಬರಿಗೊಳ್ಳಲಿಲ್ಲ. ಜೇನಿನ ಚೀಲ ದಿಂದ ಹಿಂದಿನ ದಿನ ಆ ಮುದುಕ ತನಗೆ ಕೊಟ್ಟಿದ್ದ ಕುರಾನನ್ನು ಹೊರಕ್ಕೆ ತೆಗೆದನು. ಆಮೇಲೆ ಪುಸ್ತಕವನ್ನು ಬಿಚ್ಚಿ ಅದನ್ನು ಕತ್ತೆಯ ಮುಂದೆ ಇಟ್ಟನು.

ಈ ಕೆಲಸ ಮಾಡುವಾಗ ಅವನು ಸ್ವಲ್ಪವೂ ಆತುರಪಡಲಿಲ್ಲ; ನಸುನಗು ತ್ತಿರಲಿಲ್ಲ. ಈ ಪ್ರಪಂಚದಲ್ಲಿ ಅತ್ಯಂತ ಸಹಜವಾದ ಕಾರ್ಯವೋ ಎನ್ನುವಂತೆ ಆ ಕೆಲಸ ಮಾಡಿದನು. ಟೀ ಅಂಗಡಿಯಲ್ಲಿ ನೆರೆದಿದ್ದ ಜನ ಒಬ್ಬರಿಗೊಬ್ಬರು ಕಣ್ಣು ಮಿಟುಕಿಸತೊಡಗಿದರು.

ಕತ್ತೆ ಮರಹದ್ದಿಸಿದ ನೆಲದಮೇಲೆ ಸದ್ದಾಗುವಂತೆ ಗೊರಸನ್ನು ಊರಿತು.

"ಆಗಲೇ ಮುಗಿಯಿತೆ! ನೀನು ಬಹಳ ವಿಶೇಷ ರೀತಿಯಿಂದ ಮುನ್ನಡೆ ಯುತ್ತಿದ್ದೀಯ" ಎಂದು ನುಡಿಯುತ್ತಾ ಖೋಜಾ ನಸ್ರೆದ್ದೀನ್ ಪುಟ ಮಗುಚಿ ದನು.

ಈ ಸಮಯದಲ್ಲಿ ಬೊಜ್ಜು ಹೊಟ್ಟೆಯ ಸರಸ ಸ್ವಭಾವದ ಅಂಗಡಿಯ ಯಜಮಾನನು ಕೂತ ಕಡೆಯಿಂದ ಎದ್ದು ಖೋಜಾ ನಸ್ರೆದ್ದೀನನ ಬಳಿಗೆ ಬಂದನು.

"ಅಯ್ಯಾ, ನೋಡಿಲ್ಲಿ. ಇದು ನಿನ್ನ ಕತ್ತೆಗೆ ತಕ್ಕ ಸ್ಥಳವೇನಯ್ಯಾ? ಮತ್ತೆ, ಈ ಪವಿತ್ರಗ್ರಂಥವನ್ನು ಅದರ ಮುಂದೇಕೆ ಇಟ್ಟಿದ್ದೀಯ?"

ಖೋಜಾ ನಸ್ರೆದ್ದೀನ್ ಉತ್ತರಿಸಿದ:

"ನಾನು ಈ ಕತ್ತೆಗೆ ಕುರಾನ್ ಕಲಿಸುತ್ತಿದ್ದೇನೆ. ಕುರಾನ್ ಪಾಠ ಮುಗಿಯುತ್ತಾ ಬಂತು. ಇನ್ನು ಷರಿಯತ್ ಪ್ರಾರಂಭಿಸಬೇಕು."

ಅಂಗಡಿಯಲ್ಲೆಲ್ಲ ಗುಸುಗುಸು ಪಿಸಪಿಸ ಮೊದಲಾಯಿತು. ಚೆನ್ನಾಗಿ ನೋಡೋಣವೆಂದು ಎಷ್ಟೋ ಜನ ಎದ್ದುನಿಂತರು. ಯಜಮಾನನ ಕಣ್ಣು ಅರಳಿತು; ಅಗಲವಾಗಿ ಬಾಯಿ ಬಿಟ್ಟುಕೊಂಡು ನಿಂತನು. ಅಂಥ ಆಶ್ಚರ್ಯ ವನ್ನು ತನ್ನ ಜೀವಮಾನದಲ್ಲೇ ಕಂಡಿರಲಿಲ್ಲ. ಈಗ ಕತ್ತೆ ಮತ್ತೆ ಗೊರಸನ್ನು ಬಡಿಯಿತು.

ಖೋಜಾ ನಸ್ರೆದ್ದೀನ್ ಪುಟವನ್ನು ಮಗುಚಿಹಾಕಿ, "ಭೇಷ್, ಭೇಷ್! ಇನ್ನು ಸ್ವಲ್ಪವೇ ಸ್ವಲ್ಪ ಉಳಿದಿದೆ, ನೀನು ಮಿರ್-ಅರಬ್ ಮದ್ರಾಸಾದಲ್ಲಿ

ಪ್ರಧಾನ ಪಂಡಿತನ ಸ್ಥಾನಕ್ಕೆ ತಕ್ಕವನಾಗುತ್ತೀಯೆ" ಎಂದು ಹೊಗಳಿದನು. ಯಜಮಾನನ ಕಡೆ ತಿರುಗಿ, "ಇದಕ್ಕೆ ಸಾಧ್ಯವಾಗದ ಕೆಲಸ ಒಂದೇ ಒಂದು: ತಾನಾಗಿಯೇ ಪುಟ ತಿರುವಿಹಾಕಲಾರದು; ಯಾರಾದರೂ ಸಹಾಯಕ್ಕೆ ಬರಲೇ ಬೇಕು. ಅಲ್ಲಾ ಇದಕ್ಕೆ ಒಳ್ಳೆಯ ಚುರುಕುಬುದ್ಧಿಯನ್ನೂ ಅಪಾರ ಜ್ಞಾಪಕಶಕ್ತಿಯನ್ನೂ ದಯಪಾಲಿಸಿದ್ದಾನೆ. ಆದರೆ ಈ ಪ್ರಾಣಿಗೆ ಬೆರಳು ಕೊಡುವುದನ್ನು ಅವನು ಮರೆತುಬಿಟ್ಟ" ಎಂದು ನುಡಿದನು.

ನೆರೆದಿದ್ದವರೆಲ್ಲ ಟೀ ಪಾತ್ರೆಗಳನ್ನು ಅಲ್ಲಿಯೇ ಬಿಟ್ಟು ಎದ್ದು ಬಂದು ಹತ್ತಿರ ನೆರೆದರು. ಒಂದೆರಡು ಕ್ಷಣದೊಳಗೆ ಖೋಜಾ ನಸ್ರೆದ್ದೀನನ ಸುತ್ತ ಒಂದು ದೊಡ್ಡ ಗುಂಪು ಕೂಡಿತು.

"ಇದು ಸಾಧಾರಣ ಕತ್ತೆಯಲ್ಲ" ಎಂದು ಅವನು ವಿವರಿಸತೊಡಗಿದನು. "ಇದು ಸ್ವತಃ ಅಮೀರರಿಗೆ ಸೇರಿದ್ದು. ಒಂದು ದಿನ ಅಮೀರರು ನನ್ನನ್ನು ಕರೆದು, 'ನೀನು ನನ್ನ ಈ ಮೆಚ್ಚಿನ ಕತ್ತೆಗೆ ದೇವಶಾಸ್ತ್ರವನ್ನು ಕಲಿಸಬಲ್ಲೆಯಾ? ನನ್ನಷ್ಟೇ ತಿಳವಳಿಕೆ ಇದಕ್ಕೂ ಬರುವ ಹಾಗೆ ಮಾಡಬಲ್ಲೆಯಾ?' ಎಂದು ಕೇಳಿದರು. ನನಗೆ ಕತ್ತೆಯನ್ನು ತೋರಿಸಿದರು. ನಾನು ಅದನ್ನು ಪರೀಕ್ಷೆ ಮಾಡಿದೆ. ಅದರ ಶಕ್ತಿವಿಶೇಷಗಳನ್ನರಿತುಕೊಂಡು ಅಮೀರನಿಗೆ ವಿಜ್ಞಾಪಿಸಿಕೊಂಡೆ: 'ಓ ಪರಮಪ್ರಶಾಂತ ಅಮೀರಾ! ಈ ಕತ್ತೆಗೆ ಅಪಾರ ಬುದ್ಧಿಶಕ್ತಿಯಿದೆ. ನಿಮ್ಮ ಯಾವ ವಜೀರರ ಬುದ್ಧಿಶಕ್ತಿಗಿಂತಲೂ, ಕಡೆಗೆ ನಿಮ್ಮದಕ್ಕಿಂತಲೂ—ಇದರ ಬುದ್ಧಿ ಸ್ವಲ್ಪವೂ ಕಡಮೆಯಾಗಿಲ್ಲ. ಈ ಕತ್ತೆಗೆ ದೇವಶಾಸ್ತ್ರವನ್ನು ಕಲಿಸುವ ಹೊಣೆ ಹೊತ್ತುಕೊಳ್ಳುತ್ತೇನೆ. ನಿಮಗೆ ಗೊತ್ತಿರುವಷ್ಟೂ, ಇನ್ನೂ ಹೆಚ್ಚಾಗಿಯೂ ಇದು ತಿಳಿದುಕೊಳ್ಳುವಂತೆ ಮಾಡುತ್ತೇನೆ. ಆದರೆ, ಇಪ್ಪತ್ತು ವರ್ಷ ಹಿಡಿಯುತ್ತದೆ' ಎಂದೆ. ನನಗೆ ಐದು ಸಾವಿರ ಬಂಗಾರದ ಟಂಗಗಳನ್ನು ಕೊಡುವಂತೆ ಅಮೀರರು ಭಂಡಾರದ ಅಧಿಕಾರಿಗೆ ಅಪ್ಪಣೆಮಾಡಿದರು. ಆಮೇಲೆ ನನಗೆ ಹೀಗಂದರು: 'ಈ ಕತ್ತೆಯನ್ನು ಕರೆದುಕೊಂಡು ಹೋಗಿ ಪಾಠ ಕಲಿಸು. ಆದರೆ, ಚೆನ್ನಾಗಿ ನೆನಪಿಟ್ಟುಕೊ. ಇಪ್ಪತ್ತು ವರ್ಷ ಮುಗಿದಾಗ ಈ ಕತ್ತೆಗೆ ದೇವಶಾಸ್ತ್ರ ತಿಳಿಯದಿದ್ದರೆ, ಇದು ಕುರಾನನ್ನು ಬಾಯಿಪಾಠ ಒಪ್ಪಿಸಲಾರದಿದ್ದರೆ, ನಿನ್ನ ತಲೆ ಕತ್ತರಿಸಿಬಿಡುತ್ತೇನೆ; ಜೋಕೆ' ಎಂದರು."

"ಹಾಗಾದರೆ ನಿನ್ನ ತಲೆಗೆ ಈಗಲೆ ನಮಸ್ಕಾರ ಹೇಳಿಬಿಡು! ಕತ್ತೆ

ಯೊಂದು ದೇವಶಾಸ್ತ್ರವನ್ನು ಕಲಿತು ಕುರಾನ್ ಬಾಯಿಪಾಠ ಒಪ್ಪಿಸುವುದ ಯಾರು ತಾನೆ ಕಂಡಿದ್ದಾರೆ ! " ಎಂದು ಟೀ ಅಂಗಡಿಯ ಯಜಮಾನ ಘೋ ಸಿದನು.

" ಬುಖಾರದಲ್ಲಿ ಅಂಥ ಕತ್ತೆಗಳು ಕೆಲವಿವೆ " ಎಂದು ಖೋಜಾ ದ್ದೀನ್ ಉತ್ತರ ಕೊಟ್ಟನು. " ಆದರೂ, ಐದು ಸಾವಿರ ಚಿನ್ನದ ಟಂಗ ಒಳ್ಳೆಯ ಕತ್ತೆಯೂ ದಿನದಿನವೂ ಸಿಕ್ಕುವುದಿಲ್ಲ. ನನ್ನ ತಲೆ ಹೋಗುತ್ತದೆಯೆ ನೀವೇನೂ ಚಿಂತಿಸಬೇಡಿ ; ಇಪ್ಪತ್ತು ವರ್ಷದ ಅವಧಿಯಲ್ಲಿ ನಮ್ಮಲ್ಲಿ ಯ ದರೂ ಒಬ್ಬರು—ನಾನೋ, ಅಮೀರನೋ, ಕತ್ತೆಯೋ, ಯಾರೋ ಒಬ್ಬರ ಸಾಯುವುದು ಖಂಡಿತ. ಆಗ, ಮೂವರಲ್ಲಿ ಯಾರು ಹೆಚ್ಚಿನ ಧರ್ಮಶ ಪಂಡಿತನೆಂದು ಗೊತ್ತುಮಾಡುವ ತಂಟೆಯೇ ಇರುವುದಿಲ್ಲ ; ಕಾಲ ವಿ ಹೋಗಿರುತ್ತದೆ " ಎಂದನು.

ಅಂಗಡಿಯಲ್ಲಿದ್ದವರೆಲ್ಲ ಫಕ್ಕನೆ ಗಟ್ಟಿಯಾಗಿ ನಗತೊಡಗಿದರು. ೦ ಮಾನನಂತೂ ಫೆಲ್ಟ್ ಚಾಪೆಯ ಮೇಲೆ ಕುಸಿದು ಬಿದ್ದು ಬಿದ್ದು ನಗತೊ ದನು. ನಕ್ಕು ನಕ್ಕು ಕಣ್ಣೀರಿಳಿದು ಅವನ ಮುಖವೆಲ್ಲ ತೋಯ್ದು ಹೋಯಿ ಅವನು ತುಂಬ ಸರಸಿ, ವಿನೋದಪ್ರಿಯ.

ನಗುವಿನಿಂದ ಗಂಟಲು ಕಟ್ಟಿ ಗೊರಗುಡುತ್ತಿರಲು, " ಕೇಳಿದಿರಾ ಎಂದು ಗಟ್ಟಿಯಾಗಿ ಕೂಗಿದನು. " ಮೂವರಲ್ಲಿ ಯಾರು ಹೆಚ್ಚು ಪ ನೆಂದು ಗೊತ್ತುಮಾಡಲು ಕಾಲ ಮೀರಿ ಹೋಗಿರುತ್ತದೆಯಂತೆ ! " ಎ ಮತ್ತೆ ಮತ್ತೆ ಆಡುತ್ತಾ ನಗುವನ್ನು ಮುಂದುವರಿಸಿದನು. ಹೊಟ್ಟೆ ಬಿರಿಯ ವರೆಗೂ ನಗುತ್ತಲೇ ಇರುತ್ತಿದ್ದನೇನೋ ; ಅಷ್ಟರಲ್ಲಿ ಒಂದು ಯೋ ಹೊಳೆಯಿತು.

ತಟ್ಟನೆ ನಗು ನಿಲ್ಲಿಸಿ, " ತಡೆಯಿರಿ ! ತಡೆಯಿರಿ ! " ಎನ್ನುತ್ತಾ ಬೀಸಿ ಉಳಿದವರ ಗಮನ ಸೆಳೆದನು. ಆ ಮೇಲೆ ಹೊಸಬನ ಕಡೆ ತಿ " ಯಾರು ನೀನು ? ಎಲ್ಲಿಂದ ಬಂದೆ ? ದೇವಶಾಸ್ತ್ರ ಕಲಿಸುವ ಪಂಡಿತಾ, ಲ್ಲಿಂದ ಬಂದೆ ? ನೀನು ಬಹುಶಃ ಆ ಖೋಜಾ ನಸ್ರೆದ್ದೀನನೇ ಆಗಿದ್ದರೂ ಬಹುದು ; ಅಲ್ಲವೆ ? " ಎಂದು ಕೇಳಿದನು.

" ಏನು, ಇಷ್ಟು ಗಮನಾರ್ಹವಾಗಿದೆಯೆ, ಇದು ? ನಿನ್ನ ಊಹೆ

ನಾನು ಖೋಜಾ ನಸ್ರೆದ್ದೀನ್. ಬುಖಾರ ಪಟ್ಟಣಿಗರೇ ನಿಮಗೆ ನಮಸ್ಕಾರ!"

ಬಹಳ ಹೊತ್ತಿನ ವರೆಗೆ ಎಲ್ಲರೂ ಮಾತುಡುಗಿದವರಂತೆ ನಿಶ್ಶಬ್ದವಾಗಿ ನಿಂತರು. ತಟಕ್ಕನೆ ಒಂದು ಹರ್ಷಘೋಷ ಆ ಮೌನವನ್ನು ಭೇದಿಸಿ ಹೊರ ಹೊಮ್ಮಿತು :

"ಖೋಜಾ ನಸ್ರೆದ್ದೀನ್!"

"ಖೋಜಾ ನಸ್ರೆದ್ದೀನ್! ಖೋಜಾ ನಸ್ರೆದ್ದೀನ್!" ಎಂದು ಒಬ್ಬರಿಂದೊಬ್ಬರು ಆ ಘೋಷಣೆಯನ್ನೆತ್ತಿಕೊಂಡು ಕೂಗತೊಡಗಿದರು. ಆ ಘೋಷ ಉಳಿದ ಟೀ ಅಂಗಡಿಗಳಿಗೂ ಹರಡಿತು; ಅಲ್ಲಿಂದ ಪೇಟೆಗೆಲ್ಲಾ ಹರಡಿತು. ಅಂಗಡಿ ಬೀದಿ, ಮಾರ್ಕಟ್ಟೆಯ ಚೌಕ—ಎಲ್ಲ ಕಡೆಯೂ, "ಖೋಜಾ ನಸ್ರೆದ್ದೀನ್! ಖೋಜಾ ನಸ್ರೆದ್ದೀನ್!" ಎಂಬ ಘೋಷ ಸಾವಿರಾರು ಕಂಠಗಳಿಂದ ಹೊರಹೊಮ್ಮಿ ಮೊಳಗತೊಡಗಿತು.

ಎಲ್ಲ ಕಡೆಗಳಿಂದಲೂ ಆ ಟೀ ಅಂಗಡಿಗೆ ಜನ ಓಡೋಡಿ ಬಂದರು—ಉಸ್‌ಬೆಕ್ಕರು, ತಾಜಿಕರು, ಪಾರಸಿಕರು, ತರ್ಕೊಮನ್ನರು, ತುರ್ಕರು, ಜಾರ್ಜಿಯನ್ನರು, ಆರ್ಮೀನಿಯನ್ನರು, ತಾರ್ತರರು—ಎಲ್ಲರೂ ಓಡಿಬಂದರು. ಅಲ್ಲಿ ಬಂದು ಸೇರಿದ ಮೇಲೆ, ಗಟ್ಟಿಯಾಗಿ ಘೋಷಿಸಿ ತಮ್ಮ ಮೆಚ್ಚಿನ ಖೋಜಾ ನಸ್ರೆದ್ದೀನನಿಗೆ—ಸಂತೋಷಚಿತ್ತನೂ ಮಹಾಚತುರನೂ ಸುಪ್ರಸಿದ್ಧನೂ ಆದ ತಮ್ಮ ಪ್ರಿಯ ಖೋಜಾ ನಸ್ರೆದ್ದೀನನಿಗೆ—ಸ್ವಾಗತ ಬಯಸಿದರು.

ಗುಂಪು ಬೆಳೆಯುತ್ತ ಬಂತು. ಒಂದು ಚೀಲ ಓಟ್ಸ್, ಒಂದು ಕಂತೆ ಕ್ಲೋವರ್, ಒಂದು ಡಬ್ಬ ಒಳ್ಳೆಯ ಸಿಹಿ ನೀರು—ಇಷ್ಟೂ ಎಲ್ಲಿಂದಲೋ ಬಂದವು; ಅವನ್ನೆಲ್ಲಾ ಕತ್ತೆಯ ಮುಂದಿಟ್ಟರು.

"ಸ್ವಾಗತ! ಸ್ವಾಗತ, ನಿನಗೆ ಖೋಜಾ ನಸ್ರೆದ್ದೀನ್!" ಎಂದು ಗುಂಪಿನ ಎಲ್ಲ ಭಾಗಗಳಿಂದಲೂ ಆದರದ ನುಡಿ ಉಕ್ಕಿ ಬರುತ್ತಿತ್ತು. "ನೀನು ಎಲ್ಲೆಲ್ಲಿ ಅಲೆಯುತ್ತಿದ್ದೆ? ಬಾ, ಹೇಳು ನಮಗೆ, ಖೋಜಾ ನಸ್ರೆದ್ದೀನ್" ಎಂದು ಎಲ್ಲರೂ ಒಕ್ಕೊರಲಿನಿಂದ ಕೇಳುತ್ತಿದ್ದರು.

ಅವನು ಮೊಗಸಾಲೆಯ ಅಂಚಿಗೆ ಬಂದು ನಿಂತು ಗುಂಪಿಗೆ ತಲೆಬಾಗಿ ನಮಸ್ಕಾರಮಾಡಿದನು.

"ಬುಖಾರ ಪಟ್ಟಣಿಗರೇ, ನಿಮಗೆ ವಂದನೆ ಸಲ್ಲಿಸುತ್ತೇನೆ. ಹತ್ತು

ವರ್ಷಕಾಲ ನಿಮ್ಮನ್ನು ಅಗಲಿ ದೂರ ದೂರ ಇರಬೇಕಾಯಿತು. ಈಗ ಮತ್ತೆ ನಿಮ್ಮೊಡನೆ ಸೇರಿ ನನ್ನ ಹೃದಯ ಹರ್ಷದಿಂದ ತುಂಬಿದೆ. ನಾನು ನಿಮಗೆ ಏನಾದರೂ ಹೇಳಬೇಕೆಂದು ಕೇಳುತ್ತೀರಿ. ಅದನ್ನು ಹಾಡಬೇಕೆಂದುಕೊಂಡಿದ್ದೇನೆ."

ಹತ್ತಿರ ಇದ್ದ ಒಂದು ದೊಡ್ಡ ಮಣ್ಣುಮಡಕೆಯನ್ನು ತೆಗೆದುಕೊಂಡು ಅದರ ನೀರನ್ನು ಆಚೆಗೆ ಚೆಲ್ಲಿದನು. ಆಮೇಲೆ ತನ್ನ ಮುಷ್ಟಿಯಿಂದ ಅದನ್ನು ಬಡಿಯುತ್ತ ಆ ತಾಳಕ್ಕೆ ಸರಿಯಾಗಿ ಹಾಡಲು ಮೊದಲುಮಾಡಿದನು :

ಠಂಠಣಿಸು ಮಡಕೇ! ಹಾಡು ಮಡಕೇ!
ತಕ್ಕಂಥ ಹೊಗಳಿಕೆಯ ನೀಡಮಿರಾರನಿಗೆ!
ನಮ್ಮಮಿರಾರನುದಾರದಾಳಿಕೆಯಲೆಮಗೆ
ದೊರೆವ ಸುಖವನು ಸಾರು ಸರ್ವಲೋಕಕ್ಕೆ!

ಮಣ್ಣುಮಡಕೆಯಿದೀಗ ಮೊರೆದು ಝೇಂಕರಿಸುವುದು ;
ಕೋಪದಲಿ ಬಿರುಸು ದನಿಯಿಂದ ಹಾಡುವುದು.
ಒಡೆದ ಕಂಠದಲುಗ್ರಕರೆಯ ಕಳುಹುವುದು ;
ಎಲ್ಲೆಡೆಗೆ, ಎಲ್ಲರಿಗೆ, ಕರೆಯ ಕಳುಹುವುದು.

ಮಡಕೆಯೇನನು ಹೇಳಲಿರುವುದೋ ಕೇಳಿ :
" ನಿಯಾಸ ಕುಂಬಾರ ವಾಸಿಸುವನಿಲ್ಲಿ.
ಮಣ್ಣ ಕಲಸುವನವನು ; ಮಡಕೆ ಮಾಡುವನವನು ;
ಆದರೇನಲ್ಪವನೆ ಸಂಪಾದಿಸುವನು.
ಕೈಗೆ ಬರುವುದರಲ್ಲಿ ಅವನುಳಿಸಲರಿಯ
ಸಣ್ಣ ಮಡಕೆಯು ತುಂಬುವಷ್ಟು ಪುಡಿಯ!

" ಬಂಗಾರ ತುಂಬಿದಾ ಗಡಿಗೆಗಳ ಕಾಯುತ್ತ
ಆ ಗೂನ ಜಾಫರನು ಕಣ್ಮುಚ್ಚಲರಿಯ.
ರಾಜಭಂಡಾರದಲು ಬಂಗಾರ ಬಹಳುಂಟು.
ಯಾರಿಗಾ ಬಂಗಾರದಳತೆ ಗೊತ್ತುಂಟು ?
ಆ ದೊಡ್ಡ ಬಂಗಾರ ಗಡಿಗೆಗಳ ಕಾಯುತ್ತ
ಅರಮನೆಯ ಕಾವುದಳ ಕಣ್ಮುಚ್ಚಲರಿದು.

“ ದುಃಖ ಬಂತೊಂದು ದಿನ ಮುದಿ ನಿಯಾಸನ ಬಳಿಗೆ
ಸುಳಿವುಗೊಡದೆಯೆ ಕಳ್ಳ ಕದ್ದು ಬರುವಂತೆ.
ಕಾಪಿನಾಳ್ಗಳು ಬಂದು ಹಿಡಿದೊಯ್ದರವನನ್ನು,
ಅಮೀರನಾಸ್ಥಾನಕ್ಕೆ ತೀರ್ಪಿಗೆಂದು.
ಗೂನು ಬೆನ್ನನು ಹೊತ್ತು ಹಿಂದೆಯೇ ಬಂದನಾ
ಜಾಫರನು, ದುರ್ಮುಖನು, ದುಷ್ಕೀರ್ತಿಯವನು.”

ಎಷ್ಟು ದಿನ ಅನ್ಯಾಯವನ್ನು ಸಹಿಸುವುದು ?
ಹೇಳು ಮಡಕೇ! ಕೇಳುವರಿಗೆಲ್ಲ ಹೇಳು !
ನಿನ್ನ ಮಣ್ಣಾಲಗೆಯು ನಿಜವ ನುಡಿಯುವುದು—
ಕುಂಬಾರನಪರಾಧವೇನು ?—ಅದ ಹೇಳು !

ಮಡಕೆ ಠಂಠಣಿಸುವುದು ಮೊರೆಯುವುದು ಗಟ್ಟಿಯಾಗಿ ;
ಪ್ರಶ್ನೆಗುತ್ತರವ ತಾ ನುಡಿಯುವುದು ಸತ್ಯವಾಗಿ :
“ ಆ ಬಡವ ಮುದಿಯ ಕುಂಬಾರನಪರಾಧ
ಬಲೆಯೊಂದರಲಿ ತೊಡಕಿ ಬಿದ್ದದ್ದು ! ಸರ್ವಾಪರಾಧ!
ಜೇಡನಾ ಬಲೆಯವನ ಬಿಗಿದಿಹುದು ಗಟ್ಟಿಯಾಗಿ.
ಕಟ್ಟಕಡೆಗವನ ಗತಿ ಜೇಡನ ಗುಲಾಮನಾಗಿ.”

ಬಂದ ನಿಯಾಸನು ಒಡೆಯನ ಬಳಿಗೆ
ಕಣ್ಣೀರ ಕರೆದು ಮೈಚಾಚಿದನಡಿಗೆ.
ನುಡಿದನು : “ ಲೋಕವೆ ಬಲ್ಲದು ಜೀಯಾ,
ನಮ್ಮ ಅಮೀರ ದಯಾಶಾಲಿಯೆಂದು.
ಕರುಣೆಯ ತೋರಿ ಕಾಪಾಡು ನನ್ನೊಡೆಯಾ.
ನಿಜ ಮಾಡು ನೀನಿಂದು ಲೋಕದ ನುಡಿಯ.”
ನುಡಿದನಮೀರನು : “ ಅಳಬೇಡ, ಬಡವಾ !
ಕೊಡುವೆನು ನಿನಗೊಂದು ಗಂಟೆಯ ಗಡುವ !
ನಾನು ಉದಾರಿ ದಯಾಶಾಲಿಯೆಂದು
ಲೋಕದ ಜನಕೆಲ್ಲ ಗೊತ್ತು ಎಂದೆಂದೂ ! ”

ಎಷ್ಟು ದಿನ ಸಹಿಸುವುದು ಅನ್ಯಾಯವಿದನು ?
ಹೇಳು ಮಡಕೇ, ಹೇಳು, ಕೇಳುವರಿಗೆಲ್ಲ !
ಮಡಕೆ ಠಂಠಣಿಸುವುದು ಮೊರೆಯುವುದು ಗಟ್ಟಿಯಾಗಿ.
ಪ್ರಶ್ನೆಗುತ್ತರವ ತಾ ನುಡಿಯುವುದು ಸತ್ಯವಾಗಿ :

" ಹುಚ್ಚನವ, ಹುಚ್ಚನವ, ಹುಚ್ಚನೇ ಅವನು—
ಈ ಅಮೀರನ ಬಳಿಯೆ ನ್ಯಾಯ ಬಯಸುವನು ;
ನ್ಯಾಯ ದೊರೆಯುವುದೆಂದು ನಂಬುವವನು.
ಈ ಅಮೀರನ ಬೆಲೆಯು ಗೊತ್ತು ನಮಗೆಲ್ಲ ;
ಬಹು ಕೀಳು, ಬಹು ಕೀಳು, ಬಹು ಕೀಳು, ಹಾಳು !
ಕೊಳೆತ ಕಸಗೊಬ್ಬರದ ಚೀಲವಿವನದಕೆ
ಮೇಲಿಟ್ಟ ತಲೆಯೊಂದು ಖಾಲಿ ಮಣ್ಮಡಕೆ ! "

ಹೇಳು, ಮಡಕೇ, ಹೇಳು, ಎಷ್ಟು ದಿನ ತಾಳುವುದು ?
ನಮ್ಮಮೀರನ ಕೀಳು ಕಟ್ಟಾಳ್ಕೆಯಿದನು ?
ಮಿತಿಮೀರಿ ಕಷ್ಟಗಳ ಕಂಡುಂಡು ನೊಂದಿರುವ
ನಮ್ಮ ಜನರೆಂದು ಸುಖ ಶಾಂತಿಯಿಂದಿಹುದು ?

ಮಡಕೆ ಝೇಂಕರಿಸುವುದು, ಮೊರೆಯುವುದು ಗಟ್ಟಿಯಾಗಿ ;
ಪ್ರಶ್ನೆಗುತ್ತರವ ತಾ ನುಡಿಯುವುದು ಸತ್ಯವಾಗಿ :
" ಇಂದಮೀರನ ಶಕ್ತಿ ಪ್ರಬಲವಾಗಿಹುದು.
ಆದರೇನೊಂದು ದಿನ ಬೀಳಬೇಕವನು.
ನಿಮ್ಮ ದುಃಖದ ದಿನಗಳೋಡುವುವು ಬೇಗ.
ಉರುಳುವುವು ವರ್ಷಗಳು. ಸಮಯ ಬಂದಾಗ,
ಸಿಡಿದೊಡೆದು ನುಚ್ಚುನೂರಾಗುವನು ಅವನಿಂತೆ.
ಈ ಮಣ್ಣುಮಡಕೆಯಂತೆ ! "

ಕೊನೆಯ ಸಾಲನ್ನು ಹಾಡುತ್ತಾ, ಖೋಜಾ ನಸ್ರೆದ್ದೀನನು ಮಡಕೆಯನ್ನು ತಲೆಯ ಮೇಲೆ ಬಹಳ ಎತ್ತರಕ್ಕೆ ಎತ್ತಿ ರಭಸದಿಂದ ನೆಲಕ್ಕೆ ಎಸೆದು

ಬಿಟ್ಟನು. ತಕ್ಷಣ ಮಡಕೆ ನೂರಾರು ಚೂರುಗಳಾಗಿ ಸಿಡಿದುಹೋಯಿತು. ಗುಂಪಿನವರ ಗದ್ದಲ ಹೆಚ್ಚಾಯಿತು. ಆ ಗದ್ದಲದಲ್ಲಿ ತನ್ನ ಮಾತು ಜನಕ್ಕೆ ಕೇಳಲೆಂದು ಬಹು ಕಷ್ಟಪಟ್ಟು ನರಗಳನ್ನು ಬಿಗಿಹಿಡಿದು ಖೋಜಾ ನಸ್ರೆದ್ದೀನನು ಗಟ್ಟಿಯಾಗಿ ಕೂಗಿ ಹೇಳಿದನು :

" ಹಾಗಾದರೆ ನಾವು ಈ ಕುಂಬಾರ ನಿಯಾಸನ ನೆರವಿಗೆ ಹೋಗಬೇಕು. ದುಬಾರಿ ಬಡ್ಡಿಗಾರನ ಪೀಡೆಗೂ ಅಮೀರನ ಕರುಣೆಗೂ ಬಲಿಯಾಗದಂತೆ ಅವನನ್ನು ರಕ್ಷಿಸೋಣ! ನಿಮಗೆ ಖೋಜಾ ನಸ್ರೆದ್ದೀನ್ ಗೊತ್ತಷ್ಟೆ! ಅವನಿಗೆ ಕೊಟ್ಟ ಸಾಲ ಎಂದೂ ಮುಳುಗಿ ಹೋಗುವುದಿಲ್ಲ. ಯಾರು ಕೊಡುತ್ತೀರಿ ನನಗೆ ನಾನೂರು ಟಂಗ ಸಾಲವನ್ನು, ಕೇವಲ ಸ್ವಲ್ಪವೇ ಕಾಲದ ವರೆಗೆ?"

ಬರಿಗಾಲಿನ ನೀರು ಹೊರುವವನೊಬ್ಬನು ಮುಂದೆ ಬಂದನು :

" ಖೋಜಾ ನಸ್ರೆದ್ದೀನ್, ನಮ್ಮ ಹತ್ತಿರ ಹಣ ಹೇಗಿದ್ದೀತು? ನಾವು ಮಿತಿಮೀರಿ ತೆರಿಗೆ ಕೊಡುತ್ತಿದ್ದೇವೆ. ಆದರೆ, ನನ್ನ ಹತ್ತಿರ ಒಂದು ನಡುಪಟ್ಟಿ ಇದೆ. ಅದು ತೀರಾ ಹೊಸದಾಗಿಯೇ ಇದೆ. ಅದರಿಂದ ಸ್ವಲ್ಪ ಹಣ ದೊರೆತೀತು" ಎಂದನು.

ಹೀಗೆಂದು ತನ್ನ ನಡುಪಟ್ಟಿಯನ್ನು ಖೋಜಾ ನಸ್ರೆದ್ದೀನನ ಕಾಲ ಬಳಿಗೆ ಎಸೆದನು. ಗುಂಪು ಗುಜುಗುಜಿಸುತ್ತ, ತಳಮಳಿಸತೊಡಗಿತು. ಗುತ್ತನೆಯ ಟೋಪಿಗಳು, ನಡುಪಟ್ಟಿಗಳು, ಪಾಪಾಸುಗಳು, ಕರವಸ್ತ್ರಗಳು, ಖಲತ್‌ಗಳು ಕೂಡ ಖೋಜಾ ನಸ್ರೆದ್ದೀನನ ಕಾಲ ಬಳಿಗೆ ಹಾರಿ ಬರುತ್ತಿದ್ದವು. ಖೋಜಾ ನಸ್ರೆದ್ದೀನನಿಗೆ ಸಹಾಯಮಾಡುವುದು ತನಗೊಂದು ದೊಡ್ಡ ಗೌರವವೆಂದು ಪ್ರತಿಯೊಬ್ಬನೂ ಭಾವಿಸಿದನು. ಬೊಜ್ಜು ಹೊಟ್ಟೆಯ ಟೀ ಅಂಗಡಿ ಯಜಮಾನ ತನ್ನಲ್ಲಿದ್ದ ಅತ್ಯಂತ ಅಂದವಾದ ಎರಡು ಟೀ ಬಟ್ಟಲುಗಳನ್ನು ತಾಮ್ರದ ತಟ್ಟೆಯಲ್ಲಿಟ್ಟುಕೊಂಡು ತಂದೊಪ್ಪಿಸಿದನು. ಅವನ್ನು ತರುವಾಗ ಜಂಭದಿಂದ ಇತರರ ಕಡೆ ಕಣ್ಣೋಟ ಬೀರುತ್ತಿದ್ದನು. ಅಷ್ಟು ಉದಾರವಾಗಿ ಕೊಟ್ಟಿದ್ದ ಅವನು. ಕಾಣಿಕೆಯ ರಾಶಿ ಬೆಳೆಯುತ್ತಿತ್ತು. ಖೋಜಾ ನಸ್ರೆದ್ದೀನ್ ತನಗೆ ಸಾಧ್ಯವಿದ್ದ ಮಟ್ಟಿಗೂ ದನಿ ಎತ್ತರಿಸಿ ಕೂಗಿದನು :

" ಸಾಕು! ಸಾಕು! ಉದಾರಿಗಳಾದ ಓ, ಬುಖಾರಾ ಪಟ್ಟಣಿಗರೇ, ಸಾಕು! ಸಾಕು, ನಾನು ಹೇಳುವುದು ಕೇಳಲಿಲ್ಲವೆ? ಜೀನುಗಾರಾ, ನಿನ್ನ

ಜೀನನ್ನು ಹಿಂದಕ್ಕೆ ತೆಗೆದುಕೊ—ಇಷ್ಟು ಸಾಕು, ಖಂಡಿತ ಸಾಕು! ಏನು? ನಿಮ್ಮ ಖೋಜಾ ನಸ್ರೆದ್ದೀನನನ್ನು ಹಳೆಬಟ್ಟೆ ಮಾರುವವನನ್ನಾಗಿ ಮಾಡಿ ಬಿಡುತ್ತೀರೇನು? ಇಗೋ, ಈಗ ನಾನು ಮಾರಾಟವನ್ನು ಪ್ರಾರಂಭಿಸುತ್ತೇನೆ. ನೀರು ಹೊರುವವನ ನಡುಪಟ್ಟಿ ಇಲ್ಲಿದೆ, ನೋಡಿ. ಇದನ್ನು ಯಾರು ಕೊಳ್ಳು ತ್ತಾರೋ ಅವರಿಗೆ ಬಾಯಾರಿಕೆಯ ಭಯವಿರುವುದಿಲ್ಲ. ಬನ್ನಿ, ಬನ್ನಿ, ಅಗ್ಗದ ಬೆಲೆಗೆ ಕೊಡುತ್ತಿದ್ದೇನೆ! ಇಲ್ಲಿ ಕೆಲವು ತೇಪೆ ಹಾಕಿದ ಹಳೆಯ ಸ್ಲಿಪರ್ ಗಳಿವೆ. ಅವು ಕನಿಷ್ಠಪಕ್ಷ ಎರಡು ಸಲವಾದರೂ ಮಕ್ಕಾಯಾತ್ರೆ ಮಾಡಿ ಬಂದಿವೆ. ಅದನ್ನು ಯಾರು ಮೆಟ್ಟುತ್ತಾರೋ ಅವರು ಯಾತ್ರೆ ಮಾಡುತ್ತಿರು ವಂತೆ ಭಾವನೆಯಾಗುತ್ತದೆ! ಚಾಕುಗಳು, ಸ್ಲಿಪರ್‌ಗಳು, ಖಲತ್‌ಗಳು— ಎಲ್ಲಾ ಇವೆ! ಬನ್ನಿ, ಬನ್ನಿ! ಯಾವ ಲಾಭವನ್ನೂ ಇಟ್ಟುಕೊಳ್ಳದೆ ಅಗ್ಗ ವಾಗಿ ಮಾರುತ್ತಿದ್ದೇನೆ, ಕಾಲಕ್ಕೆ ತುಂಬ ಬೆಲೆ. ಈಗ ಅತ್ಯವಶ್ಯವಾಗಿದೆ!"

ಆದರೆ, ಮುಖ್ಯ ವಜೀರ ಬಖ್ತಿಯಾರ್ ಪ್ರಭುನಿಷ್ಠರಾದ ಪ್ರಜೆಗಳ ವಿಷಯದಲ್ಲಿ ಬಹಳ ಎಚ್ಚರಿಕೆ ವಹಿಸಿ ಮಾಡಿದ್ದ ಏರ್ಪಾಡಿನಿಂದ ಪ್ರಜೆಗಳ ಜೇಬಿನಲ್ಲಿ ಒಂದು ತಾಮ್ರದ ಕಾಸೂ ಉಳಿಯುವಹಾಗಿರಲಿಲ್ಲ. ಅದಕ್ಕೆ ಬದಲಾಗಿ ಅದು ನೇರವಾಗಿ ಅಮೀರನ ಭಂಡಾರಕ್ಕೆ ಹೋಗಿ ಸೇರುತ್ತಿತ್ತು. ಖೋಜಾ ನಸ್ರೆದ್ದೀನ್ ತನ್ನ ಪದಾರ್ಥಗಳ ಗುಣಗಳನ್ನು ಪ್ರಶಂಸಿಸಿ ಕೂಗಿ ದ್ದೆಲ್ಲಾ ವ್ಯರ್ಥವಾಯಿತು—ಕೊಳ್ಳುವವನು ಒಬ್ಬನೂ ಇರಲಿಲ್ಲ.

## ೧೪

ಆ ಸಮಯಕ್ಕೆ ಸರಿಯಾಗಿ ದುಬಾರಿ ಬಡ್ಡಿಗಾರ ಜಾಫರ್ ಆ ಕಡೆ ಬಂದು ಅಲ್ಲಿ ಹಾದು ಹೋಗುತ್ತಿದ್ದನು. ಅವನ ಚೀಲ ಜಗ್ಗುತ್ತಿತ್ತು; ರತ್ನಪಡಿ ವ್ಯಾಪಾರಿಗಳ ಅಂಗಡಿಬೀದಿಯಲ್ಲಿ ಗುಲ್ಜಾನಿಗಾಗಿ ಅವನು ಕೊಂಡುಕೊಂಡಿದ್ದ ಚಿನ್ನ-ಬೆಳ್ಳಿಯ ಒಡವೆಗಳು ಅದರಲ್ಲಿ ತುಂಬಿತ್ತು.

ಒಂದು ಗಂಟೆಯ ಗಡುವು ಮುಗಿಯುತ್ತಾ ಬಂದಿತ್ತು. ವಿಷಯಮೋಹ ದಿಂದ ಪ್ರೇರಿತನಾಗಿ ಸರಸರನೆ ಹೋಗುತ್ತಿದ್ದನು. ಆದರೂ ಖೋಜಾ ನಸ್ರೆ ದ್ದೀನ್ ಅಗ್ಗವಾಗಿ ಮಾರುವುದಾಗಿ ಘೋಷಿಸುತ್ತಿದ್ದದ್ದು ಕಿವಿಗೆ ಬಿದ್ದಾಗ ಅವನ ದುರಾಸೆ ಪ್ರಬಲವಾಯಿತು.

ದುಬಾರಿ ಬಡ್ಡಿಗಾರನನ್ನು ಕಂಡೊಡನೆಯೇ ಗುಂಪು ಬೇಗ ಬೇಗ ಕರಗುತ್ತ ಬಂತು. ಅಲ್ಲಿ ನೆರೆದವರಲ್ಲಿ ಪ್ರತಿ ಮೂವರಿಗೊಬ್ಬನಂತೆ ಅವನಿಗೆ ಸಾಲಗಾರರಾಗಿದ್ದರು.

ಖೋಜಾ ನಸ್ರೆದ್ದೀನನನ್ನು ಜಾಫರ್ ಗುರುತಿಸಿದನು.

"ಓ, ನೀನೋ! ನಿನ್ನೆ ನನ್ನನ್ನು ನೀರಿನಿಂದ ಮೇಲಕ್ಕೆ ಎತ್ತಿಹಾಕಿದವನು! ನೀನು ಇಲ್ಲಿ ವ್ಯಾಪಾರಮಾಡುತ್ತಿದ್ದೀಯೇನು? ಇಷ್ಟೊಂದು ಪದಾರ್ಥ ಎಲ್ಲಿ ಸಿಕ್ಕಿತು, ನಿನಗೆ?"

"ಓ, ಜಾಫರ್ ಮಹಾಶಯಾ, ನಿನ್ನೆ ದಿನ ನೀನು ನನಗೆ ಅರ್ಧ ಟಂಗ ಹಣ ಕೊಟ್ಟದ್ದು ನಿನಗೆ ನೆನಪಿಲ್ಲವೆ? ಆ ಹಣ ಕೆಲಸಮಾಡುವಂತೆ ಮಾಡಿದೆ. ನನ್ನ ವ್ಯಾಪಾರಕ್ಕೆ ಅದೃಷ್ಟ ಅನುಕೂಲ ಮಾಡಿಕೊಟ್ಟಿತು" ಎಂದನು ಖೋಜಾ ನಸ್ರೆದ್ದೀನ್.

ದುಬಾರಿ ಬಡ್ಡಿಗಾರನಿಗೆ ಬೆರಗಾಯಿತು. "ಈ ಸಾಮಾನನ್ನೆಲ್ಲಾ ಒಂದೇ ಒಂದು ಪ್ರಾತಃಕಾಲದಲ್ಲಿ ಕೂಡಹಾಕಿದ್ದೀಯಲ್ಲಾ! ನಿಜವಾಗಿಯೂ ನನ್ನ ಹಣ ನಿನಗೆ ಪ್ರಯೋಜನ ಮಾಡಿದೆ! ಈ ರಾಶಿಗೆಲ್ಲಾ ಒಟ್ಟು ಎಷ್ಟು ಹೇಳುತ್ತೀಯ?" ಎಂದು ಕೇಳಿದನು.

"ಆರುನೂರು ಟಂಗಗಳು."

"ನಿನಗೆ ಹುಚ್ಚು! ನಿನ್ನ ಉಪಕಾರಿಯಿಂದ ಅಷ್ಟೊಂದು ದೊಡ್ಡ ಮೊತ್ತವನ್ನು ಕೇಳುವುದಕ್ಕೆ ನಿನಗೆ ನಾಚಿಕೆಯಾಗಬೇಕು! ನಿನ್ನ ಏಳಿಗೆಗೆ ನಾನು ಕಾರಣನಲ್ಲವೆ? ಇನ್ನೂರು ಟಂಗ—ಅದು ನಾನು ಕೊಡುವ ಬೆಲೆ."

ಖೋಜಾ ನಸ್ರೆದ್ದೀನ್, "ಐನೂರು ಟಂಗಗಳು. ಜಾಫರ್ ಮಹಾಶಯಾ, ನಿನ್ನ ಮೇಲಿನ ಗೌರವದಿಂದ ಹೇಳುತ್ತಿದ್ದೇನೆ—ಐನೂರು ಟಂಗಗಳು!" ಎಂದು ಪ್ರತಿಯಾಗಿ ನುಡಿದನು.

"ಅಯ್ಯೋ ಕೃತಘ್ನಾ! ಇನ್ನೊಂದು ಸಲ ಯೋಚಿಸು, ನಿನ್ನ ಈ ಅಭಿವೃದ್ಧಿ ನನ್ನಿಂದ ಆದದ್ದಲ್ಲವೆ?"

ಖೋಜಾ ನಸ್ರೆದ್ದೀನನಿಗೆ ತಾಳ್ಮೆ ತಪ್ಪಿತು. "ಓ, ದುಬಾರಿ ಬಡ್ಡಿಗಾರಾ! ನಿನ್ನ ಪ್ರಾಣ ಉಳಿದದ್ದಕ್ಕೆ ನಾನು ಕಾರಣನಲ್ಲವೆ? ನಿನ್ನನ್ನು ಬದುಕಿಸಿದ್ದಕ್ಕೆ ನನಗೆ ಅರ್ಧ ಟಂಗ ಮಾತ್ರ ನೀನು ಕೊಟ್ಟದ್ದು ನಿಜ. ನಿನ್ನ

ಪ್ರಾಣದ ಬೆಲೆ ಅದಕ್ಕಿಂತ ಹೆಚ್ಚೇನಿಲ್ಲ. ಆದರಿಂದ ನನಗೇನೂ ಅಸಮಾಧಾನ ವಿಲ್ಲ. ಅದು ಹಾಗಿರಲಿ. ನೀನು ಇಲ್ಲಿ ಬಂದಿರುವುದು ಕೊಳ್ಳುವುದಕ್ಕೋಸ್ಕರ ವಾದರೆ, ಒಪ್ಪುವ ಬೆಲೆ ಹೇಳು" ಎಂದನು.

"ಮುನ್ನೂರು!"

ಖೋಜಾ ನಸ್ರೆದ್ದೀನ್ ಮಾತಾಡಲಿಲ್ಲ.

ದುಬಾರಿ ಬಡ್ಡಿಗಾರ ತಡೆದು ನಿಂತನು. ಅನುಭವದಿಂದ ನುರಿತ ದೃಷ್ಟಿ ಯನ್ನು ರಾಶಿಯ ಮೇಲೆ ಬೀರಿ ಬೆಲೆ ಕಟ್ಟಿದನು. ಖಲತ್‌ಗಳು, ಸ್ಲಿಪರ್‌ಗಳು, ಗುತ್ತನೆ ಟೋಪಿಗಳು—ಈ ಮೊದಲಾದ ಸಾಮಾನೆಲ್ಲ ಕನಿಷ್ಠ ಪಕ್ಷ ಏಳು ನೂರು ಟಂಗ ಬೆಲೆಬಾಳುವುದೆಂದು ಖಚಿತಮಾಡಿಕೊಂಡು, ಬೆಲೆಯನ್ನು ಏರಿಸಲು ನಿರ್ಧರಿಸಿದನು.

"ಮುನ್ನೂರೈವತ್ತು."

"ಮುನ್ನೂರ ಎಪ್ಪತ್ತೈದು."

"ನಾನೂರು."

ಖೋಜಾ ನಸ್ರೆದ್ದೀನ್ ಕದಲಲಿಲ್ಲ. ದುಬಾರಿ ಬಡ್ಡಿಗಾರನು ಎಷ್ಟೋ ಸಲ ಹೊರಟು ಹೋಗುವವನಂತೆ ನಟಿಸಿ ಮತ್ತೆ ಮತ್ತೆ ಹಿಂದಕ್ಕೆ ಬಂದನು. ಬಂದು ಒಂದೊಂದೇ ಟಂಗವಾಗಿ ಹೆಚ್ಚಿಸುತ್ತಿದ್ದನು. ಅಂತೂ ಕಟ್ಟಕಡೆಗೆ ಸೋತುಹೋದನು. ವ್ಯಾಪಾರ ಕುದುರಿತು. ಗೊಣಗುತ್ತ ನರಳುತ್ತ ದುಬಾರಿ ಬಡ್ಡಿಗಾರನು ಹಣ ಎಣಿಸಿಕೊಟ್ಟನು.

"ಅಲ್ಲಾನ ಆಣೆಗೂ, ಈ ಸಾಮಾನಿಗೆ ಇಮ್ಮಡಿ ಬೆಲೆಕೊಡುತ್ತಿದ್ದೇನೆ, ಇದೇ ನನ್ನ ಸ್ವಭಾವ: ಕೇವಲ ದಯಾಭಾವದಿಂದ ಭಾರಿ ನಷ್ಟಮಾಡಿಕೊಳ್ಳು ವುದು."

"ಇದು ಖೋಟಾ ನಾಣ್ಯ!" ಎಂದು ನುಡಿಯುತ್ತಾ ಖೋಜಾ ನಸ್ರೆ ದ್ದೀನ್ ಒಂದು ನಾಣ್ಯವನ್ನು ಹಿಂದಿರುಗಿ ಕೊಟ್ಟನು. "ಅಲ್ಲದೆ, ಇಲ್ಲಿ ನಾನೂರು ಟಂಗ ಪೂರ್ತಿಯಾಗಿಲ್ಲ. ಮುನ್ನೂರ ಎಂಬತ್ತು ಮಾತ್ರ ಇದೆ. ಜಾಫರ್ ಮಹನೀಯಾ! ನಿನ್ನ ದೃಷ್ಟಿ ಸರಿಯಾಗಿಲ್ಲ."

ದುಬಾರಿ ಬಡ್ಡಿಗಾರನು ಮತ್ತೆ ಇಪ್ಪತ್ತು ಟಂಗ ಕೊಡಲೇಬೇಕಾಯಿತು; ಖೋಟಾ ನಾಣ್ಯವನ್ನು ಹಿಂದೆಗೆದುಕೊಂಡು ಅದಕ್ಕೆ ಬದಲಾಗಿ ಮತ್ತೊಂದನ್ನು

ಕೊಡಲೂ ಬೇಕಾಯಿತು. ಇಷ್ಟಾದ ಮೇಲೆ ಕಾಲು ಟೆಂಗಕ್ಕೆ ಒಬ್ಬ ಕೂಲಿ ಆಳು ಮಾಡಿಕೊಂಡನು; ಅವನ ಮೇಲೆ ಸಾಮಾನಿನ ಮೂಟೆ ಹೊರಿಸಿ, ತನ್ನ ಹಿಂದೆ ಬರುವಂತೆ ಅವನಿಗೆ ಅಪ್ಪಣೆಮಾಡಿದನು. ಆ ಭಾರದ ಕೆಳಗೆ ಸಿಕ್ಕಿ ಆ ನಿರ್ಭಾಗ್ಯ ಕೂಲಿ ನೆಲಕ್ಕೆ ಬಗ್ಗಿಹೋದನು.

"ನಾನೂ ಇದೇ ದಾರಿಯಲ್ಲಿ ಬರಬೇಕಾಗಿದೆ" ಎಂದನು ಖೋಜಾ ನಸ್ರೆದ್ದೀನ್.

ಗುಲ್ಜಾನನ್ನು ನೋಡುವ ತವಕವನ್ನು ತಡೆಯಲಾರದೆ ಅವನು ಮುಂದೆ ಮುಂದೆ ಹೋಗುತ್ತಿದ್ದನು. ಬಡ್ಡಿಗಾರನಿಗೆ ಕುಂಟು; ಇದರಿಂದ ಅವನ ನಡಗೆಗೆ ಅಡ್ಡಿಯಾಗಿ, ಹಿಂದೆ ನಿಧಾನವಾಗಿ ಬರುತ್ತಿದ್ದನು.

ದುಬಾರಿ ಬಡ್ಡಿಗಾರನು ಮುಖದ ಬೆವರನ್ನೊರಸಿಕೊಳ್ಳುತ್ತ, "ಎಲ್ಲಿಗೆ ಹೋಗುತ್ತಿದ್ದೀಯ ನೀನು, ಇಷ್ಟೊಂದು ಆತುರವಾಗಿ ?" ಎಂದು ಕೇಳಿದನು.

ಖೋಜಾ ನಸ್ರೆದ್ದೀನ್ ರಹಸ್ಯವಾಗಿ ಕಣ್ಣುಮಿಟುಕಿಸುತ್ತ ಉತ್ತರ ಕೊಟ್ಟನು: "ನೀನು ಹೋಗುವ ಕಡೆಗೇ. ಜಾಫರ್ ಮಹಾಶಯಾ, ನೀನೂ ನಾನೂ ಇಬ್ಬರೂ ಹೋಗುತ್ತಿರುವುದು ಒಂದೇ ಕಡೆಗೆ; ಮತ್ತು ಒಂದೇ ಕೆಲಸಕ್ಕೆ."

"ಆದರೆ ನನ್ನ ಕೆಲಸ ಏನೆಂದು ನಿನಗೆ ಗೊತ್ತಿಲ್ಲ. ಗೊತ್ತಿದ್ದಿದ್ದರೆ, ನನ್ನನ್ನು ನೋಡಿ ನೀನು ಕರುಬುತ್ತಿದ್ದೆ."

ಈ ಮಾತುಗಳಲ್ಲಿ ಅಡಗಿದ್ದ ಒಳಗಿನ ಅಭಿಪ್ರಾಯ ಖೋಜಾ ನಸ್ರೆದ್ದೀನನಿಗೆ ತಟ್ಟದೆ ಹೋಗಲಿಲ್ಲ. ವಿನೋದವಾಗಿ ನಗುತ್ತ ಅವನು,

"ಆದರೆ, ಅಯ್ಯಾ ಬಡ್ಡಿಗಾರಾ, ನನ್ನ ಕೆಲಸ ಏನೆಂದು ನಿನಗೆ ಅರಿವಿದ್ದಿದ್ದರೆ, ಅದಕ್ಕೆ ಹತ್ತರಷ್ಟು ಹೊಟ್ಟೆಕಿಚ್ಚುಪಡುತ್ತಿದ್ದೆ ನೀನು, ನನ್ನ ಮೇಲೆ" ಎಂದು ಉತ್ತರ ಕೊಟ್ಟನು.

ಆ ಉತ್ತರದಲ್ಲಡಗಿದ್ದ ಔದ್ಧತ್ಯವನ್ನು ಕಂಡು ಜಾಫರ್ ಹುಬ್ಬುಗಂಟಿಕ್ಕಿದನು!

"ನಿನ್ನ ನಾಲಗೆಯನ್ನು ತುಂಬ ಹರಿಯಬಿಟ್ಟಿದ್ದೀಯೆ. ನಿನ್ನಂಥವನು ನನ್ನಂಥವನೊಡನೆ ಮಾತಾಡುವಾಗ ನಯಭಯದಿಂದಿರಬೇಕು. ನಾನು ನೋಡಿ ಕರುಬುವಂಥವರು ಈ ಬುಖಾರದಲ್ಲಿ ಯಾರೂ ಇಲ್ಲ. ನಾನು ಸಿರಿ

ವಂತ; ನನ್ನ ಇಚ್ಛೆಗೆ ಯಾವುದೊಂದು ಅಡ್ಡಿಯೂ ಇಲ್ಲ. ಬುಖಾರದಲ್ಲಿರುವ ಅತ್ಯಂತ ರೂಪವತಿ ಕನ್ಯೆಯನ್ನು ನಾನು ಬಯಸಿದೆ; ಇವತ್ತು ಅವಳು ನನ್ನವಳಾಗುತ್ತಾಳೆ."

ಅಷ್ಟು ಹೊತ್ತಿಗೆ ಸರಿಯಾಗಿ ಒಬ್ಬ ಮನುಷ್ಯ ಚಪ್ಪಟೆ ಕುಕ್ಕೆಯೊಂದರಲ್ಲಿ ಚೆರಿ ಹಣ್ಣುಗಳನ್ನು ಹೊತ್ತುಕೊಂಡು ಮಾರುವುದಕ್ಕೆ ಅಲ್ಲಿ ಬಂದನು. ಆ ಕುಕ್ಕೆಯಿಂದ ಉದ್ದ ತೊಟ್ಟಿನ ಹಣ್ಣೊಂದನ್ನು ಖೋಜಾ ನಸ್ರೆದ್ದೀನ್ ಎತ್ತಿಕೊಂಡು ಅದನ್ನು ಬಡ್ಡಿಗಾರನಿಗೆ ತೋರಿಸಿದನು.

"ಜಾಫರ್ ಮಹಾಶಯಾ, ನನ್ನ ಮಾತನ್ನು ಪೂರ್ತಿ ಕೇಳು. ಒಂದು ದಿನ ಒಂದು ನರಿ ಮರದಲ್ಲಿ ಎತ್ತರದಲ್ಲಿದ್ದ ಒಂದು ಚೆರಿ ಹಣ್ಣು ಕಂಡಿತಂತೆ. ಕಂಡು ತನ್ನ ಮನಸ್ಸಿನಲ್ಲಿ 'ಆ ಚೆರಿಹಣ್ಣನ್ನು ತಿನ್ನುವ ವರೆಗೂ ನನಗೆ ತಡೆಯುಲಾಗುವುದಿಲ್ಲ' ಎಂದುಕೊಂಡಿತು. ಹೀಗೆ ನಿರ್ಧರಿಸಿ ಅದು ಮರ ಹತ್ತತೊಡಗಿತು. ಎರಡು ಗಂಟೆಯ ವರೆಗೂ ಹತ್ತುತ್ತಲೇ ಇತ್ತು; ಹತ್ತುತ್ತ ಹತ್ತುತ್ತ ಮೈಯನ್ನೆಲ್ಲ ತರಚಿಕೊಂಡಿತು. ಮರ ಹತ್ತಿ ಇನ್ನೇನು ಹಣ್ಣು ತಿನ್ನಲೆಂದು ಬಾಯಿಬಿಡಬೇಕು, ಅಷ್ಟರಲ್ಲಿ ಒಂದು ಡೇಗೆ ಹಾರಿ ಬಂದು ಹಣ್ಣನ್ನು ಹಿಡಿದು ಎತ್ತಿಕೊಂಡುಹೋಯಿತು. ಇದಾದ ಮೇಲೆ ನರಿ ಮರ ಇಳಿಯತೊಡಗಿ ಇನ್ನೆರಡು ಗಂಟೆ ಇಳಿಯುತ್ತಲೇ ಇತ್ತು. ಇಳಿಯುವಾಗ ಇನ್ನಷ್ಟು ತರಚಿತು ಅದರ ಮೈ. ದುಃಖದಿಂದ ಕಣ್ಣೀರು ಸುರಿಸುತ್ತ 'ನಾನೇಕೆ ಚೆರಿ ಹಣ್ಣು ಬಯಸಿ ಮರ ಹತ್ತಿದೆನೊ! ಏಕೆಂದರೆ, ಮರದ ಮೇಲೆ ಚೆರಿ ಹಣ್ಣು ಬಿಡುವುದು ನರಿಗಳಿಗಲ್ಲ ಎಂಬುದು ಎಲ್ಲರಿಗೂ ಗೊತ್ತು' ಎಂದುಕೊಳ್ಳುತ್ತಿತ್ತು."

"ನೀನೊಬ್ಬ ಬೆಪ್ಪುತಕಡಿ. ನಿನ್ನ ಈ ಕಥೆಯಲ್ಲಿ ನನಗೆ ಅರ್ಥವೇ ಕಾಣುವುದಿಲ್ಲ" ಎಂದನು.

"ಆಳವಾದ ಅರ್ಥ ತಟಕ್ಕನೆ ಹೊಳೆಯುವುದಿಲ್ಲ" ಎಂದು ಖೋಜಾ ನಸ್ರೆದ್ದೀನ್ ಮರುನುಡಿದನು.

ಚೆರಿ ಹಣ್ಣು ಅವನ ಕಿವಿಯ ಹಿಂದೆ ಜೋಲಾಡುತ್ತಿತ್ತು; ಅದರ ತೊಟ್ಟನ್ನು ತಲೆಟೋಪಿಗೆ ಸಿಕ್ಕಿಸಿಕೊಂಡಿದ್ದನು.

ದಾರಿ ತಿರುಗಿತು. ತಿರುವಿನ ಆಚೆ ಕಡೆ ಕುಂಬಾರನೂ ಅವನ ಮಗಳೂ ಕಲ್ಲ ಮೇಲೆ ಕೂತಿದ್ದರು.

ಕುಂಬಾರ ಎದ್ದು ನಿಂತನು. ಅವನ ಕಣ್ಣುಗಳಲ್ಲಿ ಅದುವರೆಗೂ ಆಸೆಯ ಕಿರಣ ಮಿನುಗುತ್ತಿದ್ದದ್ದು ಈಗ ತಟ್ಟನೆ ಮರೆಯಾಯಿತು. ಆ ಅಪರಿಚಿತ ಮನುಷ್ಯನಿಗೆ ಹಣ ಕೂಡಿಸಲಾಗಲಿಲ್ಲವೆಂಬ ಯೋಚನೆ ಹೊಳೆದು ಕಾಂತಿ ಉಡುಗಿ ಕಣ್ಣು ಮಂಕಾಯಿತು. ಗುಲ್ಜಾನ್ ಸಣ್ಣಗೆ ನರಳುತ್ತಾ ಮುಖವನ್ನು ಅತ್ತ ತಿರುಗಿಸಿಕೊಂಡಳು.

" ಅಪ್ಪಾ, ನಾವು ಹಾಳಾದೆವು ! " ಎಂದು ಅವಳು ನೊಂದು ನುಡಿದಳು. ಅವಳ ದನಿಯಲ್ಲಿ ಹೊಮ್ಮಿದ ನೋವಿಗೆ ಕಲ್ಲೂ ಕಣ್ಣೀರು ಕರೆಯುವಂತಿತ್ತು. ಆದರೆ ಆ ಬಡ್ಡಿಗಾರನ ಹೃದಯ ಯಾವ ಕಲ್ಲಿಗಿಂತಲೂ ಕಠಿನವಾಗಿತ್ತು. ಕ್ರೂರ ವಿಜಯ ಮತ್ತು ಅಸಹ್ಯಕಾಮ—ಇಷ್ಟು ಮಾತ್ರ ಅವನ ಮುಖದಲ್ಲಿ ಎದ್ದು ಕಾಣುತ್ತಿತ್ತು. ಅವನು,

" ಕುಂಬಾರಾ, ಅವಧಿ ಮುಗಿಯಿತು. ಇನ್ನು ಮೇಲೆ ನೀನು ನನ್ನ ಗುಲಾಮ ; ನಿನ್ನ ಮಗಳು ನನ್ನ ತೊತ್ತು, ಉಪಪತ್ನಿ " ಎಂದನು.

ಖೋಜಾ ನಸ್ರದ್ದೀನನ ಮನಸ್ಸು ನೋಯಿಸಿ ಅವನಿಗೆ ಅಪಮಾನ ಮಾಡಬೇಕೆಂಬ ಉದ್ದೇಶದಿಂದ ಅವನೆದುರಿಗೆ ಹುಡುಗಿಯ ಮುಖಸರಡೆಯನ್ನೆತ್ತಿದನು ; ಒಡೆತನದ ದರ್ಪದಿಂದ ಮುಖಾವರಣವನ್ನೆತ್ತಿದನು.

" ನೋಡು, ಇವಳು ಸುಂದರಿಯಲ್ಲವೆ ? ಇವತ್ತು ನಾನು ಇವಳ ಜೊತೆ ಮಲಗುತ್ತೇನೆ. ಈಗ ಹೇಳು, ಯಾರು ಯಾರನ್ನು ನೋಡಿ ಹೊಟ್ಟೆಕಿಚ್ಚು ಪಡಬೇಕು ? "

" ಇವಳು ಸುಂದರಿ, ನಿಜ " ಎಂದು ಖೋಜಾ ನಸ್ರದ್ದೀನ್ ಒಪ್ಪಿ ಕೊಂಡನು. " ಆದರೆ, ಕುಂಬಾರನಿಗೆ ಹಣ ಕೊಟ್ಟದ್ದಕ್ಕೆ ನಿನ್ನ ಹತ್ತಿರ ದಾಖಲೆ ಇದೆಯೊ ? " ಎಂದು ಕೇಳಿದನು.

" ಇದ್ದೇ ಇದೆ. ದಾಖಲೆಯಿಲ್ಲದೆ ಯಾರು ತಾನೆ ವ್ಯವಹಾರ ನಡಸುತ್ತಾರೆ ? ಎಲ್ಲರೂ ಮೋಸಗಾರರು, ಕಳ್ಳರು ಇಗೋ ನೋಡು, ದಾಖಲೆ. ಇದರಲ್ಲಿ ಸಾಲದ ಲೆಕ್ಕ, ಅದನ್ನು ತೀರಿಸಬೇಕಾದ ದಿನ ಎಲ್ಲವನ್ನೂ ನಮೂದಿಸಿದೆ ; ಪತ್ರದ ಕೆಳಗೆ ಕುಂಬಾರ ಹೆಬ್ಬೆಟ್ಟೊತ್ತಿದ್ದಾನೆ."

ಅವನು ಖೋಜಾ ನಸ್ರದ್ದೀನನಿಗೆ ಪತ್ರವನ್ನು ತೋರಿಸಿದನು.

" ಪತ್ರ ಸರಿಯಾಗಿದೆ " ಎಂದು ಅವನು ಒಪ್ಪಿಕೊಂಡನು. ಆ ಮೇಲೆ,

"ಈ ಪತ್ರಕ್ಕನುಸಾರವಾಗಿ ಈಗ ನಿನ್ನ ಸಾಲದ ಹಣವನ್ನು ತೆಗೆದುಕೊ" ಎಂದನು. ಅಲ್ಲಿ ಹಾದು ಹೋಗುತ್ತಿದ್ದ ಕೆಲವರ ಕಡೆ ತಿರುಗಿ, "ಮಾನ್ಯರೇ, ಸ್ವಲ್ಪ ನಿಲ್ಲಿ; ಇದಕ್ಕೆ ನೀವು ಸಾಕ್ಷಿಗಳಾಗಿರಿ" ಎಂದು ಕೇಳಿಕೊಂಡನು.

ಅವನು ಪತ್ರವನ್ನು ಎರಡು ತುಂಡಾಗಿ ಹರಿದನು; ಮತ್ತೆ ನಾಲ್ಕು ಪಾಲಾಗಿ ಮಡಿಚಿ ಹರಿದು ಚೂರುಗಳನ್ನು ಗಾಳಿಗೆ ತೂರಿಬಿಟ್ಟನು. ಆ ಮೇಲೆ ತನ್ನ ನಡುಪಟ್ಟಿಯನ್ನು ಬಿಚ್ಚಿಕೊಂಡು ದುಬಾರಿ ಬಡ್ಡಿಗಾರನಿಂದ ಆಗತಾನೆ ತೆಗೆದುಕೊಂಡಿದ್ದ ಹಣವನ್ನೆಲ್ಲ ಅವನಿಗೇ ಹಿಂದಿರುಗಿಸಿದನು.

ಕುಂಬಾರನೂ ಅವನ ಮಗಳೂ ಸಂತೋಷಾಶ್ಚರ್ಯಗಳಿಂದ ಕಲ್ಲಿನಂತೆ ಸ್ತಬ್ಧರಾದರು; ದುಬಾರಿ ಬಡ್ಡಿಗಾರನೂ ಕಲ್ಲಿನಂತೆ ಸ್ತಬ್ಧನಾದನು—ಉಗ್ರ ಕೋಪದಿಂದ. ಸಾಕ್ಷಿಗಳು ಒಬ್ಬರೊಬ್ಬರಿಗೆ ಕಣ್ಣು ಮಿಟುಕಿಸಿ ನಕ್ಕರು; ಆ ಹಾಳು ದುಬಾರಿ ಬಡ್ಡಿಗಾರನಿಗೆ ಆದ ಪರಾಭವದಿಂದ ಅವರಿಗೆ ಪರಮ ಸಂತೋಷವಾಯಿತು.

ಖೋಜಾ ನಸ್ರೆದ್ದೀನ್ ತನ್ನ ಕಿವಿಯ ಹಿಂದೆ ಜೋತಾಡುತ್ತಿದ್ದ ಚೆರಿ ಹಣ್ಣನ್ನು ತೆಗೆದು ಬಾಯಿಗಿಟ್ಟುಕೊಂಡನು; ದುಬಾರಿ ಬಡ್ಡಿಗಾರನ ಕಡೆ ಕಣ್ಣು ಮಿಟುಕಿಸಿ ಲೊಟ್ಟೆ ಹೊಡೆದನು.

ದುಬಾರಿ ಬಡ್ಡಿಗಾರನ ಅವೀಕ್ಷಣದ ಮೈಯಲ್ಲಿ ನಿದಾನವಾಗಿ ಭೀತಿ ಸಂಚಾರವಾಯಿತು. ನೆಟ್ಟಗಿದ್ದ ಅವನ ಒಂಟಿಗಣ್ಣು ಕೋಪದಿಂದ ಮುಂದಕ್ಕೆ ಚಾಚಿತು, ಬೆನ್ನ ಡುಬ್ಬ ನಡುಗಿತು.

ಕುಂಬಾರನೂ ಅವನ ಮಗಳೂ ಬೇಡಿದರು:

"ಓ ಅಪರಿಚಿತನೇ! ನಿನ್ನ ಹೆಸರೇನು ತಿಳಿಸು; ಯಾರ ಹೆಸರು ಹೇಳಿ ನಾವು ಪ್ರಾರ್ಥನೆ ಸಲ್ಲಿಸಬೇಕೋ ಗೊತ್ತಾಗಲಿ, ನಮಗೆ."

"ಹೌದು! ಹೌದು! ನಿನ್ನ ಹೆಸರು ತಿಳಿಸು ನಮಗೆ. ಯಾರ ಹೆಸರು ಹೇಳಿ ನಾನು ಶಾಪ ಹಾಕಬೇಕೋ ಗೊತ್ತಾಗಲಿ" ಎಂದು ದುಬಾರಿ ಬಡ್ಡಿಗಾರನು ಒದರಾಡಿದನು.

ಖೋಜಾ ನಸ್ರೆದ್ದೀನನ ಮುಖ ಕಳೆದುಂಬಿತು. ಸ್ಪಷ್ಟವಾದ ದೃಢಸ್ವರದಿಂದ ಅವನು ಉತ್ತರ ಕೊಟ್ಟನು:

"ಬಾಗ್ದಾದಿನಲ್ಲಿ, ಟೆಹ್ರಾನಿನಲ್ಲಿ, ಸ್ಟಾಂಬೂಲಿನಲ್ಲಿ, ಬುಖಾರದಲ್ಲಿ—

ಎಲ್ಲೆಲ್ಲಿಯೂ ನನಗೆ ಒಂದೇ ಒಂದು ಹೆಸರು ಪ್ರಸಿದ್ಧವಾಗಿದೆ—ಖೋಜಾ ನಸ್ರೆದ್ದೀನ್ ಎಂದು!"

ದುಬಾರಿ ಬಡ್ಡಿಗಾರನ ಮುಖ ಬಿಳಿಚಿಕೊಂಡಿತು. ಗಾಬರಿಯಿಂದ ಹಿನ್ನೆಗೆದು ಕೂಗಿದನು:

"ಖೋಜಾ ನಸ್ರೆದ್ದೀನ್!"

ಮಹಾ ಭಯದಿಂದ ಅಲ್ಲಿ ನಿಲ್ಲಲಾರದೆ ಕೂಲಿಯವನನ್ನು ಆತುರಪಡಿಸುತ್ತಾ ಓಡಿಬಿಟ್ಟನು.

ಉಳಿದವರೋ, ಅವರೆಲ್ಲರೂ ಅವನನ್ನು ಆನಂದದಿಂದ ಸ್ವಾಗತಿಸಿದರು: "ಖೋಜಾ ನಸ್ರೆದ್ದೀನ್! ಖೋಜಾ ನಸ್ರೆದ್ದೀನ್!" ಎಂದು ಮತ್ತೆ ಮತ್ತೆ ಆ ಹೆಸರನ್ನು ಘೋಷಿಸುತ್ತಿದ್ದರು. ಗುಲ್ಜಾನಿನ ಕಣ್ಣುಗಳು ಮುಖಾವರಣದೊಳಗಿನಿಂದಲೇ ಉಜ್ಜ್ವಲವಾಗಿ ಹೊಳೆಯತೊಡಗಿದವು. ಕುಂಬಾರನಿಗೆ ಸರಿಯಾಗಿ ಮಾತೇ ಹೊರಡಲಿಲ್ಲ; ಬಚ್ಚುಬಾಯಿಂದ ಅಸ್ಪಷ್ಟವಾಗಿ ಏನೇನೋ ಗೊಣಗಿದನು. ಆಶ್ಚರ್ಯಚಕಿತನಾಗಿ ಸಮಾಧಾನಮಾಡಿಕೊಳ್ಳಲರಿಯದೆ ಕೇವಲ ಸನ್ನೆಗಳಿಂದಲೇ ತನ್ನ ಕೃತಜ್ಞತೆಯನ್ನು ಸೂಚಿಸಿದನು.

## ೧೫

ಅಮೀರನ ನ್ಯಾಯಾಸ್ಥಾನದ ವ್ಯವಹಾರ ಇನ್ನೂ ಭರದಿಂದ ಸಾಗುತ್ತಿತ್ತು. ವಧಕಾರರನ್ನು ಹಲವು ಸಲ ಅದಲುಬದಲು ಮಾಡಲಾಗಿತ್ತು. ಅಂಗಾಲಿನ ಮೇಲೆ ಬೆತ್ತದೇಟು ತಿನ್ನಲು ಕಾದು ನಿಂತ ಅದೃಷ್ಟಹೀನರ ಸಂಖ್ಯೆ ಬೆಳೆಯುತ್ತಲೇ ಇತ್ತು. ಶೂಲಕ್ಕೇರಿಸಿದವರಿಬ್ಬರು ಶೂಲದ ಮೇಲೆ ವಿಲಿವಿಲಿ ಒದ್ದಾಡುತ್ತಿದ್ದರು. ಮೂರನೆಯವನೊಬ್ಬ ಶಿರಶ್ಛೇದ ಹೊಂದಿ ರಕ್ತದಿಂದ ನೆನೆದ ನೆಲದ ಮೇಲೆ ಬಿದ್ದಿದ್ದನು. ಆದರೆ ಶಿಕ್ಷೆ ಹೊಂದಿದವರ ನರಳಾಟ ಕಿರಿಚಾಟಗಳ ಸದ್ದು ತೂಕಡಿಸುವ ಅಮೀರನ ಕಿವಿಗೆ ಕೇಳಿಸುತ್ತಿರಲಿಲ್ಲ; ಅದೆಲ್ಲ ಅಮೀರನ ಸುತ್ತಲೂ ನೆರೆದು ಗಟ್ಟಿ ಗಂಟಲಿನಿಂದ ಕೂಗಿ ಹೇಳುತ್ತಿದ್ದ ಹೊಗಳುಭಟ್ಟರ ಸ್ತುತಿಪಾಠದಲ್ಲಿ ಮುಳುಗಿಹೋಗುತ್ತಿತ್ತು. ಆ ಹೊಗಳಿಕೆಯಲ್ಲಿ ಮುಖ್ಯ ವಜೀರ, ಉಳಿದ ಮಂತ್ರಿಗಳು ಮತ್ತು ಅರ್ಸ್‌ಲಾನ್-ಬೆಕ್—

ಇವರನ್ನು ಮರೆಯದೆ ಅವರು ಸೇರಿಸಿಕೊಳ್ಳುತ್ತಿದ್ದರು. ಮಕ್ಷಿಕನಿವಾರಕ* ಮತ್ತು ನಾಳವಾಹಕರನ್ನು ಕೂಡ ಅವರು ಆಗಾಗ ನೆನೆಯುತ್ತಿದ್ದರು. ಏಕೆಂದರೆ ಎಲ್ಲರನ್ನೂ ತೃಪ್ತಿಪಡಿಸುವುದೇ ಕ್ಷೇಮವೆಂದು ಅವರು ತೀರ್ಮಾನಿಸಿದ್ದರು. ಅದು ನ್ಯಾಯವೇ ಸರಿ: ಕೆಲವರಿಂದ ಪ್ರಯೋಜನವಾಗಬಹುದು; ಕೆಲವರಿಂದ ಕೇಡಾಗದಿರಬಹುದು; ಅಂತೂ ಎಲ್ಲರನ್ನೂ ಹೊಗಳುವುದೇ ಸರ್ವವಿಧದಿಂದಲೂ ಕ್ಷೇಮಕರ.

ಸ್ವಲ್ಪ ಹೊತ್ತಿನಿಂದಲೂ ಬಹು ದೂರದಿಂದ ಏನೋ ಒಂದು ವಿಚಿತ್ರ ಗುಜುಗುಜು ಸದ್ದು, ಹಲವು ಬಗೆಯ ಸದ್ದುಗಳು ಒಟ್ಟುಗೂಡಿ ಆದ ಮರ್ಮರ, ಕೇಳಿಬರುತ್ತಿದ್ದುದನ್ನು ಆಲಿಸಿ ಆರ್ಸ್‌ಲಾನ್-ಬೆಕ್ ಆತಂಕಗೊಂಡಿದ್ದನು. ತನ್ನ ಕೈಕೆಳಗಿನ ಗೂಢಚಾರರಲ್ಲಿ ಅತ್ಯಂತ ಸಮರ್ಥರಾದವರಿಬ್ಬರನ್ನು ಕರೆದು,

"ಹೋಗಿ, ಜನ ಅದೇಕೆ ಅಷ್ಟು ಗದ್ದಲಮಾಡುತ್ತಿದ್ದಾರೋ ಗೊತ್ತುಮಾಡಿಕೊಳ್ಳಿ. ಹೋಗಿ ತಿಳಿದುಕೊಂಡು ಬಂದು ತಕ್ಷಣ ನನಗೆ ವರದಿಮಾಡಿ" ಎಂದು ಅಪ್ಪಣೆ ಮಾಡಿದನು.

ಗೂಢಚಾರರು ಹೊರಟರು. ಒಬ್ಬನು ಭಿಕ್ಷುಕನ ಹಾಗೆ, ಇನ್ನೊಬ್ಬನು ದರವೇಶಿಯ ಹಾಗೆ ವೇಷ ಹಾಕಿಕೊಂಡು ಹೊರಟರು. ಆದರೆ ಅವರಿನ್ನೂ ಹಿಂದಿರುಗಿರಲಿಲ್ಲ, ಅಷ್ಟರಲ್ಲೇ ದುಬಾರಿ ಬಡ್ಡಿಗಾರನು ಓಡೋಡಿ ಬಂದನು. ಅವನ ಮುಖ ಬಿಳಿಚಿಹೋಗಿತ್ತು; ಹೆಜ್ಜೆ ತತ್ತರಿಸಿ ಎಡವುತ್ತಿದ್ದವು. ಖಲತ್ತಿನ ಅಂಚುಗಳು ತೊಡರಿಕೊಂಡು ಮುಗ್ಗರಿಸುತ್ತಿದ್ದನು.

"ಏನಾಯಿತು, ಮಾನ್ಯ ಜಾಫರ್?" ಎಂದು ಆರ್ಸ್‌ಲಾನ್-ಬೆಕ್ ಕಾತರನಾಗಿ ಕೇಳಿದನು.

"ಅಯ್ಯೋ! ಅಯ್ಯೋ!" ಎಂದು ನರಳಿದ ಆ ದುಬಾರಿ ಬಡ್ಡಿಗಾರ; ಅವನ ನಡುಗುದುಟಿಗಳಿಂದ ತಡೆತಡೆದು ಮಾತು ಹೊರಟಿತು. "ಓ, ಬಹು ಮಾನ್ಯನಾದ ಆರ್ಸ್‌ಲಾನ್-ಬೆಕ್, ನಮಗೆ ದೊಡ್ಡದೊಂದು ದುರ್ಭಾಗ್ಯವೊದಗಿಬಂದಿದೆ! ಖೋಜಾ ನಸ್ರೆದ್ದೀನ್ ನಮ್ಮ ಪಟ್ಟಣಕ್ಕೆ ಬಂದಿದ್ದಾನೆ. ಈಗ ತಾನೆ ಅವನನ್ನು ಕಂಡು ಮಾತಾಡಿ ಬಂದಿದ್ದೇನೆ" ಎಂದನು.

---

*ನೊಣ ಹೊಡೆಯುವವನು.

ಆರ್ಸ್‌ಲಾನ್-ಬೆಕ್ಕನ ಕಣ್ಣುಗಳು ಮುಂಚಾಚಿದವು; ಚಾಚಿ ನೆಟ್ಟ ದೃಷ್ಟಿಯಿಂದ ನೋಡತೊಡಗಿದವು. ಒಂದು ಕ್ಷಣ ಮಾತ್ರ ತಡೆದು ನೆಟ್ಟನೆ ಜಗುಲಿಯನ್ನು ಹತ್ತಿ ಅಮೀರನ ಬಳಿ ಹೋದನು. ಅವನ ಮೈಯ ಭಾರಕ್ಕೆ ಜಗುಲಿಯ ಮೆಟ್ಟಲುಗಳು ಜಗ್ಗಿದವು. ನಿದ್ದೆಯ ಮಂಪರದಲ್ಲೇ ಇದ್ದ ಪ್ರಭುವಿನ ಕಿವಿಯ ಹತ್ತಿರ ಬಗ್ಗಿ ವಿಷಯ ತಿಳಿಸಿದನು.

ಕೇಳಿ ಅಮೀರನು ಮೈಗೇನಾದರೂ ಚುಚ್ಚಿಕೊಂಡಿದ್ದರೆ ಹೇಗೋ ಹಾಗೆ ಗಾಬರಿಯಿಂದ ಮೈ ಕೊಡವಿಕೊಂಡೆದ್ದನು.

" ನೀನು ಹೇಳುವುದು ಸುಳ್ಳು ! " ಎಂದನು. ಭಯದಿಂದಲೂ ರೋಷದಿಂದಲೂ ಅವನ ಮುಖ ವಿಕಾರವಾಗಿ ಹಿಂಡರಿಸಿಕೊಂಡಿತು. " ಅದು ನಿಜವಲ್ಲ ! ಈಗ ಸ್ವಲ್ಪ ದಿನಗಳ ಹಿಂದೆ ಬಾಗ್ದಾದಿನ ಕಲೀಫನು ಅವನನ್ನು ಶಿರಚ್ಛೇದ ಮಾಡಿಸಿದ್ದಾಗಿ ನನಗೆ ಬರೆದಿದ್ದಾನೆ. ಟರ್ಕಿಯ ಸುಲ್ತಾನನು ಅವನನ್ನು ಶೂಲಕ್ಕೇರಿಸಿದ್ದಾಗಿ ತಿಳಿಸಿದ್ದಾನೆ ! ಪರ್ಷಿಯದ ಷಾ ಅವನನ್ನು ನೇಣು ಹಾಕಿಸಿದ್ದಾಗಿ ತಾನೇ ಸ್ವಹಸ್ತದಲ್ಲಿ ಬರೆದು ಕಳಿಸಿದ್ದಾನೆ ! ಖೀವದ ಖಾನನು ಹೋದ ವರ್ಷ ಅವನನ್ನು ಜೀವಸಹಿತ ಚರ್ಮ ಸುಲಿಸಿದ್ದಾಗಿ ಬಹಿರಂಗವಾಗಿ ಘೋಷಿಸಿದ್ದಾನೆ ! ಈ ಹಾಳು ಖೋಜಾ ನಸ್ರೆದ್ದೀನ್ ಈ ನಾಲ್ಕು ಮಂದಿ ರಾಜರ ಕೈಯಿಂದಲೂ ಹೇಗೆ ತಾನೇ ಅಪಾಯವಿಲ್ಲದಂತೆ ತಪ್ಪಿಸಿಕೊಂಡು ಹೋಗಿದ್ದಾನು ? "

ಖೋಜಾ ನಸ್ರೆದ್ದೀನನ ಹೆಸರು ಹೇಳಿದ ಕೂಡಲೇ ವಜೀರರೂ ಅಧಿಕಾರಿಗಳೂ ಕಳೆಗುಂದಿದರು. ಮಕ್ಷಿಕನಿವಾರಕನು ಬೆಚ್ಚಿ ಕೈಯಲ್ಲಿದ್ದ ನೊಣ ಹೊಡೆಯುವ ಸಾಧನವನ್ನು ಕೆಳಕ್ಕೆ ಬೀಳಿಸಿದನು. ನಾಳವಾಹಕನು ಹೊಗೆಯಿಂದ ಗಂಟಲು ಒಟ್ಟಿ ಕೆಮ್ಮತೊಡಗಿದನು. ಪ್ರಶಂಸೆಯ ಮಳೆ ಸುರಿಸುತ್ತಿದ್ದ ಕವಿಗಳ ನಾಲಗೆಗಳು ಅಲುಗಲಾರದೆ ಹೆದರಿಕೆಯಿಂದ ಅಂಗುಳಿಗೆ ಅಂಟಿಕೊಂಡುಬಿಟ್ಟವು.

" ಅವನು ಇಲ್ಲಿದ್ದಾನೆ ! " ಎಂದು ಆರ್ಸ್‌ಲಾನ್-ಬೆಕ್ ಮತ್ತೆ ನುಡಿದನು.

ಅಮೀರನು, " ನೀನು ಸುಳ್ಳು ಹೇಳುತ್ತೀಯ ! " ಎಂದು ತನ್ನ ರಾಜಹಸ್ತದಿಂದಲೇ ಬಲವಾಗಿ ಅವನ ಕೆನ್ನೆಗೆ ಹೊಡೆದನು. ಹೊಡೆದು, " ನೀನು ಸುಳ್ಳು ಹೇಳುತ್ತಿದ್ದೀಯ ! ಆದರೆ, ಅವನು ನಿಜವಾಗಿಯೂ ಇಲ್ಲಿ ಬಂದಿರುವು

ದಾದರೆ, ಅದು ಹೇಗೆ ತಾನೆ ಅವನು ಬುಖಾರಕ್ಕೆ ಪ್ರವೇಶಿಸುವುದು ಸಾಧ್ಯ ವಾಯಿತು ? ನಿನ್ನ ಕಾವಲು ದಳವೂ ನೀನೂ ಇದ್ದು ಸಾರ್ಥಕ ತಾನೆ ಏನು ? ಹಾಗಾದರೆ ನಿನ್ನೆ ರಾತ್ರಿ ಮಾರ್ಕಟ್ಟೆಯಲ್ಲಿ ಅಷ್ಟು ಗದ್ದಲ ಹತ್ತಿಸಿದವನು ಅವನೇ ಆಗಿರಬೇಕು ! ನೀನು ಏನೂ ಅರಿಯದೆ ಮಲಗಿ ನಿದ್ರಿಸುತ್ತಿದ್ದಾಗಲೇ ಅವನು ಜನರನ್ನು ನನ್ನ ಮೇಲೆ ಎತ್ತಿಕಟ್ಟಿ ದಂಗೆ ಎಬ್ಬಿಸಲು ಯತ್ನಿಸಿದನು ! ” ಎಂದನು.

ಹೀಗೆಂದು ಅಮೀರನು ಮತ್ತೊಮ್ಮೆ ಆರ್ಸ್‌ಲಾನ್-ಬೆಕ್ಕನ್ನು ಹೊಡೆ ದನು. ಆರ್ಸ್‌ಲಾನ್-ಬೆಕ್ ನೆಲಮುಟ್ಟಿ ಕೆಳಕ್ಕೆ ಬಾಗಿದನು. ಏಟು ಹೊಡೆದು ಕೆಳಗಿಳಿಯುತ್ತಿರುವ ಅಮೀರನ ಕೈಗೆ ಮುತ್ತಿಟ್ಟು ಗೌರವಿಸಿದನು.

“ ಓ ಪ್ರಭೂ, ಅವನು ಇಲ್ಲಿದ್ದಾನೆ ; ಈ ಬುಖಾರದಲ್ಲೇ ಇದ್ದಾನೆ ! ನಿಮಗೆ ಕೇಳಿಸುವುದಿಲ್ಲವೆ ? ”

ದೂರದ ಗುಡುಗುಡು ಸದ್ದು ಮೆಲ್ಲಮೆಲ್ಲನೆ ಹತ್ತಿರ ಬರುತ್ತಿತ್ತು. ಭೂಕಂಪ ವಾಗುವ ಮೊದಲು ಕೇಳುವ ಮೊಳಗಿನಂತೆ ಆ ಸದ್ದು ಎಲ್ಲೆಲ್ಲಿಯೂ ಹರಡಿತು. ನ್ಯಾಯಾಸ್ಥಾನದ ಸುತ್ತಲೂ ನೆರೆದಿದ್ದ ಗುಂಪಿಗೂ ಅದು ಬಂದು ತಟ್ಟಿತು. ಸರ್ವವ್ಯಾಪಿಯಾದ ಸಂಭ್ರಮದಲ್ಲಿ ಅದೂ ಭಾಗವಹಿಸಿ ಘೋಷಿಸತೊಡಗಿತು. ಮೊದಮೊದಲು ಮೆಲ್ಲಗೆ ಅಸ್ಪಷ್ಟವಾಗಿ, ಆ ಮೇಲೆ ಕ್ರಮಕ್ರಮವಾಗಿ ಗಟ್ಟಿ ಯಾಗಿ ಗರ್ಜಿಸತೊಡಗಿತು ; ಮೊಳಗು ಹೆಚ್ಚುತ್ತ ಬರುತ್ತಿರಲು ಕಟ್ಟಕಡೆಗೆ ಜಗುಲಿಯೂ ಅದರ ಮೇಲಿನ ಸಿಂಹಾಸನವೂ ನಡುಗಿದಂತೆ ಭಾಸವಾಯಿತು ಅಮೀರನಿಗೆ ! ಹಲವು ದನಿಗಳ ಅವ್ಯಕ್ತ ಮರ್ಮರ ಮತ್ತು ಘೋಷಣೆಗಳ ಮೊಳಗಿನೊಳಗಿನಿಂದ ಇದ್ದಕ್ಕಿದ್ದಂತೆ ಒಂದು ಹೆಸರು ಕೇಳಬಂತು ; ಆ ತುದಿ ಯಿಂದ ಈ ತುದಿಯ ವರೆಗೂ ಒಬ್ಬರಾದಮೇಲೊಬ್ಬರು ಅದನ್ನೆತ್ತಿಕೊಂಡು ಉಚ್ಚಕಂಠದಿಂದ ಕೂಗಿ ಹೇಳುತ್ತಿದ್ದರು :

“ ಖೋಜಾ ನಸ್ರೆದ್ದೀನ್ ! ”

“ ಖೋಜಾ ನಸ್ರೆದ್ದೀನ್ ! ” ಎಂದು ಎಲ್ಲೆಡೆಯೂ ಪ್ರತಿಧ್ವನಿಸುತ್ತಿತ್ತು.

ಕಾವಲು ದಳದ ಸಿಪಾಯಿಗಳು ಉರಿಯುವ ಪಂಜು ಹಿಡಿದುಕೊಂಡು ಫಿರಂಗಿಗಳ ಬಳಿಗೋಡಿದರು. ಅಮೀರನ ಮುಖ ಹಲವು ಭಾವಾವೇಗಗಳಿ ಗೊಳಗಾಗಿ ವಿಕಾರವಾಯಿತು.

" ಇದನ್ನೆಲ್ಲ ಮುಗಿಸಿಬಿಡಿ! ಅರಮನೆಗೆ ಹಿಂದಿರುಗಿ!" ಎಂದು ಕಿರಿಚಿದನು.

ತಾನು ಧರಿಸಿದ್ದ ಕಿಂಕಾಪಿನ ರಾಜವಸ್ತ್ರಗಳ ಅಂಚುಗಳನ್ನು ಮೇಲಕ್ಕೆತ್ತಿ ಹಿಡಿದುಕೊಂಡು ಅಮೀರನು ಅರಮನೆಯ ಕಡೆಗೆ ಓಟಕಿತ್ತನು. ಅವನ ಹಿಂದೆ ಬರಿಯ ಪಲ್ಲಕ್ಕಿಯನ್ನು ಹೊತ್ತುಕೊಂಡು ಸೇವಕರು ಎಡವುತ್ತ ಮುಗ್ಗರಿಸುತ್ತ ಓಡಿ ನಡೆದರು. ವಜೀರರು, ವಧೆಕಾರರು, ಸಂಗೀತಗಾರರು, ಕಾಪಿನ ಸಿಪಾಯಿಗಳು, ಮಕ್ಷಿಕನಿವಾರಕ, ನಾಳವಾಹಕ—ಎಲ್ಲರೂ ಪ್ರಾಣಭಯದಿಂದ ಪಲಾಯನಮಾಡಿದರು; ಭೀತಿಯಿಂದ ಮುಂದುಗೆಟ್ಟು, ಉಳಿದವರಿಗಿಂತ ತಾವೇ ಮುಂದೆ ಹೋಗಿ ತಪ್ಪಿಸಿಕೊಳ್ಳಬೇಕೆಂಬ ಆತುರದಲ್ಲಿ ಅವರು ಒಬ್ಬರನ್ನೊಬ್ಬರು ತಳ್ಳಾಡುತ್ತಾ ನುಗ್ಗಿದರು; ನುಗ್ಗಾಟದಲ್ಲಿ ಪಾದರಕ್ಷೆ ಬಿದ್ದುಹೋದರೂ ಅದನ್ನೆತ್ತಿಕೊಳ್ಳಲು ನಿಲ್ಲದೆ ದಿಕ್ಕೆಟ್ಟು ಓಡಿದರು. ಆನೆಗಳು ಮಾತ್ರ ತಮ್ಮ ಪೂರ್ವದ ಗಾಂಭೀರ್ಯವನ್ನು ಬಿಡದೆ ಯಥಾಪ್ರಕಾರ ನಿಧಾನವಾಗಿ ಮುಂದೆ ಸಾಗುತ್ತಿದ್ದವು. ಅವು ಕೂಡ ಅಮೀರನ ಪರಿವಾರಕ್ಕೆ ಸೇರಿದವೇ ಆದರೂ ಅವು ಜನಕ್ಕೆ ಹೆದರಬೇಕಾದ ಕಾರಣವೇನೂ ಇರಲಿಲ್ಲ!

ಅಮೀರನೂ ಆಸ್ಥಾನಿಕರೂ ಒಳಹೊಕ್ಕ ಕೂಡಲೆ ಹಿತ್ತಾಳೆ ತಗಡು ಬಡಿದ ಭಾರಿಯಾದ ಅರಮನೆಯ ಹೆಬ್ಬಾಗಿಲುಗಳು ಢಂಢಣಿಸುತ್ತ ಮುಚ್ಚಿಕೊಂಡುಬಿಟ್ಟವು.

ಹೀಗಿರುವಲ್ಲಿ ಇತ್ತ ಮಾರ್ಕಟ್ಟೆಯ ಚೌಕದಲ್ಲಿ ಜನಸಂದಣಿ ಮಿತಿಮೀರಿತು. ಚೌಕವೆಲ್ಲ ಜನರಿಂದ ತುಂಬಿತುಳುಕುತ್ತಿತ್ತು. ನೂಕುನುಗ್ಗಲು, ಗುಜುಗುಜು, ಮೊರೆತ, ಮೊಳಗುಗಳಿಂದ ಕೂಡಿದ ಆ ದಟ್ಟ ಗುಂಪಿನಲ್ಲಿ ಖೋಜಾ ನಸ್ರೆದ್ದೀನನ ಹೆಸರು ಎಲ್ಲೆಲ್ಲೂ ಕೇಳಲುಗೊಡುತ್ತಿತ್ತು.

---

*

# ಎರಡನೆಯ ಭಾಗ

" ಇವು ವಿಚಿತ್ರ ಘಟನೆಗಳು ; ಕೆಲವು ನನ್ನ ಕಣ್ಣ ಮುಂದೆ ನಡೆದವು ; ಉಳಿದವು ನಂಬಿಕೆಗೆ ಅರ್ಹರಾದವರಿಂದ ನನಗೆ ತಿಳಿಯಬಂದವು."

ಉಸ್ಮಾನ್ ಇಬಿನ್ ಮಂಕಿಥ್ : ನೀತಿಬೋಧೆ
(The Book of Edification).

೧

ಅನಾದಿಕಾಲದಿಂದಲೂ ಬುಖಾರದ ಕುಂಬಾರರು ಪಟ್ಟಣದ ಪೂರ್ವದ ಹೆಬ್ಬಾಗಿಲ ಬಳಿ, ಒಂದು ದೊಡ್ಡ ಎರೆಮಣ್ಣು ಗುಡ್ಡದ ಸುತ್ತಲೂ ವಸತಿ ಮಾಡಿಕೊಂಡಿದ್ದರು. ಅದಕ್ಕಿಂತ ಉತ್ತಮವಾದ ವಾಸಸ್ಥಾನ ಅವರಿಗೆ ಬೇರೆಲ್ಲೂ ಇರಲಿಲ್ಲವೆನ್ನಬಹುದು : ಜೇಡಿಮಣ್ಣು ಹತ್ತಿರದಲ್ಲೇ ಸಿಕ್ಕುತ್ತಿತ್ತು ; ಪಟ್ಟಣದ ಕೋಟೆಯ ಬುಡದಲ್ಲಿ ಹರಿಯುತ್ತಿದ್ದ ನಾಲೆಯಲ್ಲಿ ನೀರು ಯಥೇಚ್ಛವಾಗಿ ದೊರೆಯುತ್ತಿತ್ತು. ಕುಂಬಾರರ ಅಜ್ಜಂದಿರು, ಮುತ್ತಜ್ಜಂದಿರು, ಅವರಜ್ಜಂದಿರು ಹೀಗೆ ಹಿಂದಿನ ಪೀಳಿಗೆಯವರು ಗುಡ್ಡವನ್ನು ಕರಗಿಸಿ ಅದರ ಗಾತ್ರವನ್ನು ಅರ್ಧಕ್ಕಿಳಿಸಿದ್ದರು. ಅವರು ತಮ್ಮ ಮನೆಗಳನ್ನು ಜೇಡಿಮಣ್ಣಿನಿಂದ ಕಟ್ಟಿಕೊಂಡರು; ಮಡಕೆಗಳನ್ನು ಜೇಡಿಮಣ್ಣಿನಿಂದ ಮಾಡಿಕೊಂಡರು ; ಕಡೆಗೆ ತಮ್ಮಳಿವಿಗಾಗಿ ಗೋಳಾಡುವ ಬಂಧುಬಳಗದವರಿಂದ ಜೇಡಿಮಣ್ಣಿನೊಳಗೆ ಗೋರಿಮಾಡಿಸಿಕೊಂಡರು. ಎಷ್ಟೋ ವೇಳೆ ಯಾವನಾದರೊಬ್ಬ ಕುಂಬಾರನು ಮಡಕೆಯನ್ನೋ ಹೂಜಿಯನ್ನೋ ಮಾಡಿ, ಬಿಸಿಲಲ್ಲಿ ಒಣಗಿಸಿ, ಬೆಂಕಿಯಲ್ಲಿ ಬೇಯಿಸಿ, ಮಿಡಿದು ನೋಡಿದಾಗ ಅದರಿಂದ ಹೊರಡುವ ಸುಸ್ಪಷ್ಟವಾದ ಬಲವಾದ ರಂಠಣ ನಿನಾದವನ್ನು ಕೇಳಿ ಬೆರಗಾಗಿರಬೇಕು; ತನ್ನ ಯಾವನೋ ದೂರದ ಪೂರ್ವಪಿತೃವೊಬ್ಬನು ತನ್ನ ಮುಂದಿನ ವಂಶಿಕರ ಅಭಿವೃದ್ಧಿಗೂ ಅವರು ನಿರ್ಮಿಸಿದ ಪದಾರ್ಥಗಳ ವ್ಯಾಪಾರದ ಹಿತಕ್ಕೂ ಕಾತರಗೊಂಡು ತನ್ನ ವ್ಯೆಯ ಮಣ್ಣಕಣವನ್ನು ಆ ಜೇಡಿಮಣ್ಣಿಗೆ ಬೆರಸಿ ಅದನ್ನು ಉತ್ತಮಗೊಳಿಸಿದ್ದನೆಂದೂ ಅದರಿಂದಲೇ ಆ ಮಡಕೆ ಹಾಗೆ ಶುದ್ಧ ಬೆಳ್ಳಿಯಂತೆ ಠಂಠಣಿಸುವುದೆಂದೂ ಅರಿಯದೆಯೇ ಅದರ ಆ ದನಿಗೆ ಆಶ್ಚರ್ಯಪಟ್ಟಿರಬೇಕು.

ಇಲ್ಲಿ ದೊಡ್ಡ ದೊಡ್ಡ ಪುರಾತನ ಪ್ಲೇನ್ ಮರಗಳ ನೆರಳಿನಲ್ಲಿ, ನೀರ್ಗಾಲುವೆಯ ದಡಕ್ಕೆ ಅತಿ ಸಮೀಪವಾಗಿಯೇ ಕುಂಬಾರ ನಿಯಾಸನ ಮನೆಯಿತ್ತು. ಸುಳಿಗಾಳಿಯಲ್ಲಿ ಮರದೆಲೆಗಳು ಮರ್ಮರಿಸುತ್ತಿದ್ದವು; ನೀರು ಕಲಕಲನೆ ಹರಿಯುತ್ತಿತ್ತು; ಚಿಕ್ಕ ಕೈತೋಟದಲ್ಲಿ ಚೆಲುವೆ ಗುಲ್ಜಾನಿನ ಗಾನ ಬೆಳಗಿನಿಂದ ಬೈಗಿನವರೆಗೂ ಇನಿನಾದವನ್ನು ಹೊಮ್ಮಿಸುತ್ತಿತ್ತು.

ಖೋಜಾ ನಸ್ರೆದ್ದೀನ್ ನಿಯಾಸನ ಮನೆಯಲ್ಲೇ ವಾಸವಾಗಿರಲು ಒಪ್ಪಲಿಲ್ಲ.

" ಇಲ್ಲ, ನಿಯಾಸ್. ನಿನ್ನ ಮನೆಯಲ್ಲಿದ್ದರೆ, ನಾನು ಸಿಕ್ಕಿಬೀಳಬಹುದು. ಇಲ್ಲಿಗೆ ಹತ್ತಿರದಲ್ಲೇ ಒಂದು ಸುರಕ್ಷಿತವಾದ ಸ್ಥಳವನ್ನು ನೋಡಿದ್ದೇನೆ. ರಾತ್ರಿ ಹೊತ್ತು ಅಲ್ಲಿರುತ್ತೇನೆ; ಹಗಲು ಹೊತ್ತು ಇಲ್ಲಿಗೆ ಬಂದು ನಿನ್ನ ಕೆಲಸದಲ್ಲಿ ನೆರವಾಗುತ್ತೇನೆ " ಎಂದನು.

ಅವನು ಆಡಿದಂತೆಯೇ ನಡೆದುಕೊಂಡನು. ಪ್ರತಿದಿನವೂ ಬೆಳಗ್ಗೆ ಸೂರ್ಯೋದಯವಾಗುವುದರೊಳಗೆ ಅವನು ನಿಯಾಸನ ಮನೆಗೆ ಬಂದು, ಕೆಲಸದ ಮಣೆಯ ಮೇಲೆ ಮುದುಕನ ಪಕ್ಕದಲ್ಲಿ ಕೂರುತ್ತಿದ್ದನು. ಖೋಜಾ ನಸ್ರೆದ್ದೀನನು ಅರಿಯದ ಉದ್ಯೋಗ ಈ ಪ್ರಪಂಚದಲ್ಲಿ ಒಂದೂ ಇರಲಿಲ್ಲ. ಕುಂಬಾರಗೆಲಸ ಅವನಿಗೆ ಚೆನ್ನಾಗಿ ಬರುತ್ತಿತ್ತು. ಅವನು ಮಾಡಿದ ಮಡಕೆಗಳು ನಯವಾಗಿರುತ್ತಿದ್ದವು; ಅವುಗಳ ನಾದ ಸ್ಫುಟವಾಗಿರುತ್ತಿತ್ತು; ಅವುಗಳಲ್ಲಿಟ್ಟ ನೀರು ಬೇಸಗೆಯಲ್ಲಿ ಮಂಜಿನಂತೆ ತಣ್ಣಗಿರುತ್ತಿತ್ತು ಹಿಂದೆ ಮುದುಕ —ಅವನ ಕಣ್ಣು ದೃಷ್ಟಿ ಈಚೀಚೆಗೆ ಮಂದವಾಗುತ್ತಿದ್ದುದರಿಂದ—ದಿನಕ್ಕೆ ಐದಾರು ಮಡಕೆಗಳನ್ನು ತಯಾರಿಸುವುದೇ ಕಷ್ಟವಾಗುತ್ತಿತ್ತು. ಈಗಲಾದರೋ ಸಾಲು ಸಾಲು ಮಡಕೆಗಳು—ಮೂವತ್ತು, ನಾಲ್ವತ್ತು ಮತ್ತು ಕೆಲವು ವೇಳೆ ಐವತ್ತು ಕೂಡ— ಬಿಸಿಲಿನಲ್ಲಿ ಒಣಗುತ್ತಿದ್ದವು. ಸಂತೆದಿನಗಳಲ್ಲಿ ಮುದುಕನು ಮನೆಗೆ ಚೀಲದ ತುಂಬ ಹಣ ತರುತ್ತಿದ್ದನು. ರಾತ್ರಿಯಾಗುತ್ತಿದ್ದಂತೆ ಮಾಂಸದ ಅಡಿಗೆಯ ಹಿತವಾದ ವಾಸನೆ ಅವನ ಮನೆಯಿಂದ ಬೀದಿಯುದ್ದಕ್ಕೂ ಹರಡುತ್ತಿತ್ತು. ಮುದುಕನ ಸ್ಥಿತಿಯನ್ನು ಕಂಡು ನೆರೆಹೊರೆಯವರೆಲ್ಲ ಹರ್ಷಗೊಂಡು ಹೀಗೆ ಆಡಿಕೊಳ್ಳುತ್ತಿದ್ದರು :

" ಕಟ್ಟಕಡೆಗೆ ನಿಯಾಸನಿಗೆ ಒಳ್ಳೆಯ ಅದೃಷ್ಟ ಬಂತು; ಬಡತನ

ಹೋಯಿತು. ದೇವರೇ, ಕೊನೆಯ ವರೆಗೂ ಅವನನ್ನು ಹಾಗೆಯೇ ಇಟ್ಟರು!"

"ತನಗೆ ನೆರವಾಗಲೆಂದು ಇನ್ನೊಬ್ಬ ಕೆಲಸಗಾರನನ್ನು ಇಟ್ಟುಕೊಂಡಿದ್ದಾನೆ ಎನ್ನುತ್ತಾರೆ. ಹೀಗೂ ಅನ್ನುತ್ತಾರೆ: ಆ ಕೆಲಸಗಾರ ಕುಂಬಾರರಲ್ಲೆಲ್ಲ ಸರ್ವಶ್ರೇಷ್ಠ ಕುಂಬಾರನಂತೆ."

"ಹೌದು. ನಾನೂ ಹಾಗೆ ಕೇಳಿದೆ, ಒಂದು ದಿನ ಆ ಕೆಲಸಗಾರನನ್ನು ನೋಡೋಣವೆಂದು ನಿಯಾಸನ ಮನೆಗೆ ಹೋದೆ. ಆದರೆ, ನಾನು ತೋಟದ ಬಾಗಿಲಿಗೆ ಹೋದೆನೋ ಇಲ್ಲವೋ, ಆ ಕೆಲಸಗಾರ ಎದ್ದುಹೋಗಿಬಿಟ್ಟನು; ಮತ್ತೆ ಮುಖ ತೋರಿಸಲಿಲ್ಲ."

"ಹೌದು, ಮುದುಕ ತನ್ನ ಕೆಲಸಗಾರನನ್ನು ಮುಚ್ಚಿಟ್ಟುಕೊಂಡಿದಾನೆ. ನಮ್ಮಲ್ಲಿ ಯಾರಾದರೂ ಅಂಥ ಚತುರ ಕೆಲಸಗಾರನನ್ನು ಪುಸಲಾಯಿಸಿ, ಅವನ ಬಳಿಯಿಂದ ಬಿಟ್ಟು ಬರುವಂತೆ ಮಾಡಿಯೇವೆಂದು ಮುದುಕ ಹೆದರಿರಬೇಕು. ವಿಚಿತ್ರ ಆಸಾಮಿ! ನಮಗೆ, ಕುಂಬಾರರಿಗೆ, ಆತ್ಮಸಾಕ್ಷಿಯಿಲ್ಲವೆಂದು ಕೊಂಡಿರುವಂತಿದೆ. ಬಹು ಕಾಲ ಕಷ್ಟಪಟ್ಟು ಕಟ್ಟಕಡೆಗೆ ಸುಖ ಕಂಡಿರುವ ಮುದುಕನ ಅದೃಷ್ಟವನ್ನು ನಾವು ಹಾಳುಮಾಡುತ್ತೇವೆಯೇ!"

ಹೀಗೆ ನೆರೆಹೊರೆಯವರು ತಮ್ಮತಮ್ಮಲ್ಲೆ ಮಾತಾಡಿಕೊಂಡು ಆ ವಿಷಯವನ್ನು ತೀರ್ಮಾನಿಸಿಬಿಟ್ಟರು. ಮುದುಕನ ಹತ್ತಿರವಿರುವ ಕೆಲಸಗಾರ ಖೋಜಾ ನಸ್ರೆದ್ದೀನನೇ ಹೊರತು ಬೇರೆ ಯಾರೂ ಅಲ್ಲವೆಂಬ ಸಂಶಯ ಯಾರೊಬ್ಬರಿಗೂ ಉಂಟಾಗಲಿಲ್ಲ. ಖೋಜಾ ನಸ್ರೆದ್ದೀನನು ಎಷ್ಟೋ ದಿನದ ಹಿಂದೆಯೇ ಬುಖಾರವನ್ನು ಬಿಟ್ಟು ಹೊರಟುಹೋದನೆಂದು ಎಲ್ಲರೂ ನಂಬಿದ್ದರು. ಅವನೇ ಹಾಗೆಂದು ಸುದ್ದಿ ಹಬ್ಬಿಸಿದ್ದನು; ಗೂಢಚಾರರಿಗೆ ದಿಗ್ಭ್ರಮೆ ಹಿಡಿಸಲೆಂದೂ, ಹುಡುಕುವ ಉತ್ಸಾಹ ಕುಗ್ಗುವಂತೆ ಮಾಡಬೇಕೆಂದೂ ಆ ರೀತಿ ವದಂತಿ ಹರಡಿದ್ದನು. ಅವನ ಉದ್ದೇಶ ಸಫಲವಾಯಿತೆಂಬುದು ಎಂಟು ಹತ್ತು ದಿನಗಳಲ್ಲೇ ಸ್ಪಷ್ಟವಾಯಿತು: ಪಟ್ಟಣದ ಪ್ರತಿಯೊಂದು ಹೆಬ್ಬಾಗಿಲಿನಲ್ಲಿಯೂ ಕಟ್ಟಿದ್ದ ಹೆಚ್ಚಿನ ತಡೆಗಳನ್ನೆಲ್ಲಾ ಕಿತ್ತುಹಾಕಿದರು; ರಾತ್ರಿಯೆಲ್ಲಾ ಸಿಪಾಯಿಗಳು ಪಂಜು ಹಿಡಿದು ಆಯುಧಗಳನ್ನು ಝಣಿಗುಟ್ಟಿಸುತ್ತಾ ಗಸ್ತು ಹೊಡೆಯುವುದು ನಿಂತಿತು; ಬುಖಾರ ಪಟ್ಟಣಿಗರಿಗೆ ಈ ಗಸ್ತಿನ ಕಾಟ ತಪ್ಪಿತು.

ಮುದುಕ ನಿಯಾಸ್ ಬಹು ದಿನಗಳ ವರೆಗೂ ಖೋಜಾ ನಸ್ರೆದ್ದೀನನನ್ನು

ಚೆನ್ನಾಗಿ ಗಮನಿಸುತ್ತಾ ಅವನ ವಿಷಯವಾಗಿ ಆತಂಕಪಟ್ಟು ಗೊಣಗುತ್ತಲೇ ಇದ್ದವನು, ಒಂದು ದಿನ ಹೀಗೆಂದನು :

" ಖೋಜಾ ನಸ್ರೆದ್ದೀನ್, ನಾನು ಗುಲಾಮಗಿರಿಗೆ ಬೀಳದಂತೆಯೂ, ನನ್ನ ಮಗಳಿಗೆ ಅಗೌರವ ತಟ್ಟದಂತೆಯೂ ನೀನು ಕಾಪಾಡಿದ್ದೀಯೆ. ನನ್ನ ಜೊತೆಯಲ್ಲೆ ನೀನು ಕೆಲಸ ಮಾಡುತ್ತೀಯೆ. ನಾನು ಮಾಡುವುದರ ಹತ್ತರಷ್ಟು ಪದಾರ್ಥಗಳನ್ನು ನೀನು ನಿರ್ಮಿಸುತ್ತಿದ್ದೀಯೆ. ನೀನು ನನಗೆ ನೆರವಾಗಿ ಬಂದ ಮೇಲೆ, ಎಲ್ಲಾ ಖರ್ಚೂ ಕಳೆದು ನನ್ನಲ್ಲಿ ಉಳಿದಿರುವ ಲಾಭ ಮುನ್ನೂರ ಐವತ್ತು ಟಂಗ ಇಗೋ, ಇಲ್ಲಿದೆ. ಈ ಹಣವನ್ನು ನೀನು ತೆಗೆದುಕೊ. ನ್ಯಾಯವಾಗಿ ಇದು ನಿನ್ನದು."

ಖೋಜಾ ನಸ್ರೆದ್ದೀನ್ ತನ್ನ ತಿಗುರಿಯನ್ನು ನಿಲ್ಲಿಸಿದನು. ಆಶ್ಚರ್ಯ ಚಕಿತನಾಗಿ ಮುದುಕನ ಮೇಲೆ ದೃಷ್ಟಿಯನ್ನು ನೆಟ್ಟನು.

" ಓ, ಮಾನ್ಯ ನಿಯಾಸ್, ನಿನಗೆ ನಿಜವಾಗಿ ಸ್ವಸ್ಥವಿಲ್ಲವೆಂದು ಕಾಣುತ್ತದೆ! ಅಂಥ ವಿಚಿತ್ರ ಮಾತಾಡುತ್ತಿದ್ದೀಯೆ. ಇಲ್ಲಿ ನೀನು ಯಜಮಾನ; ನಾನು ನಿನ್ನ ಆಳು. ಲಾಭದಲ್ಲಿ ಹತ್ತನೆಯ ಒಂದು ಪಾಲನ್ನು—ಮೂವತ್ತೈದು ಟಂಗ ಎಂದುಕೋ—ಕೊಟ್ಟರೆ ನನಗೆ ಯಥೇಚ್ಛವಾಗುತ್ತದೆ."

ನಿಯಾಸನ ಹಳೆಯ ಚೀಲವನ್ನು ತೆಗೆದುಕೊಂಡು ಅದರಲ್ಲಿ ಮೂವತ್ತೈದು ಟಂಗಗಳನ್ನು ಎಣಿಸಿ ತನ್ನ ನಡುಪಟ್ಟಿಗೆ ಸೇರಿಸಿಕೊಂಡನು. ಆ ಮೇಲೆ ಉಳಿದದ್ದನ್ನೆಲ್ಲ ಮುದುಕನಿಗೆ ಹಿಂದಿರುಗಿ ಕೊಟ್ಟುಬಿಟ್ಟನು ಆದರೆ ನಿಯಾಸ್ ಆ ಹಣವನ್ನು ಮತ್ತೆ ತೆಗೆದುಕೊಳ್ಳುವುದಿಲ್ಲವೆಂದು ಮೊಂಡು ಹಿಡಿದು ಪ್ರತಿಭಟಿಸಿದನು.

" ಅದು ನ್ಯಾಯವಲ್ಲ, ಖೋಜಾ ನಸ್ರೆದ್ದೀನ್. ಈ ಹಣ ನಿನಗೆ ಸೇರಿದ್ದು! ಎಲ್ಲವನ್ನೂ ತೆಗೆದುಕೊಳ್ಳುವುದಿಲ್ಲವೆಂದರೆ, ಅರ್ಧವನ್ನಾದರೂ ತೆಗೆದುಕೊ."

ಖೋಜಾ ನಸ್ರೆದ್ದೀನನಿಗೆ ಸಿಟ್ಟು ಬಂತು.

" ಮಾನ್ಯ ನಿಯಾಸ್, ನಿನ್ನ ಚೀಲವನ್ನು ತೆಗೆದಿಟ್ಟುಕೊ. ಲೋಕದ ಸಂಪ್ರದಾಯವನ್ನು ಏರುಪೇರು ಮಾಡಬೇಡ. ಯಜಮಾನರೆಲ್ಲರೂ ತಮ್ಮ ಕೆಲಸಗಾರರೊಡನೆ ಲಾಭವನ್ನು ಅರ್ಧರ್ಧ ಹಂಚಿಕೊಳ್ಳತೊಡಗಿದರೆ ಏನಾಗುತ್ತದೆಯೆಂದು ಯೋಚಿಸಿ ನೋಡು. ಈ ಪ್ರಪಂಚದಲ್ಲಿ ದಣಿಗಳೂ ಇಲ್ಲ, ಆಳು

ಗಳೂ ಇಲ್ಲ; ಭಾಗ್ಯವಂತರೂ ಇಲ್ಲ, ಬಡವರೂ ಇಲ್ಲ; ಕಾವಲುಸಿಪಾಯಿಗಳೂ ಇಲ್ಲ, ಅಮೀರರೂ ಇಲ್ಲ. ಯೋಚಿಸಿ ನೋಡು: ಅಂಥ ಅವ್ಯವಸ್ಥೆಯನ್ನು ಅಲ್ಲಾ ಹೇಗೆ ತಾನೆ ಸಹಿಸಿಕೊಂಡಾನು? ಅವನು ತಕ್ಷಣ ಮತ್ತೊಂದು ಮಹಾ ಪ್ರಳಯವನ್ನು ಕಳಿಸಿಬಿಟ್ಟಾನು! ನಿನ್ನ ಚೀಲವನ್ನು ತೆಗೆದುಕೊಂಡು ಭದ್ರವಾಗಿ ಮುಚ್ಚಿಡು. ಹಾಗಿಲ್ಲದಿದ್ದರೆ, ನಿನ್ನ ಹುಚ್ಚು ಭಾವನೆಗಳಿಂದ ಅಲ್ಲಾ ಕೋಪ ಗೊಂಡು ಮಾನವಕುಲವನ್ನೇ ನಾಶಮಾಡಿಬಿಡಬಹುದು!"

ಹೀಗೆ ಮಾತಾಡಿ ಖೋಜಾ ನಸ್ರೆದ್ದೀನ್ ಮತ್ತೆ ಚಕ್ರವನ್ನು ತಿರುಗಿಸ ತೊಡಗಿದನು.

"ಇದು ಒಳ್ಳೆಯ ಸೊಗಸಾದ ಮಡಕೆಯಾಗುತ್ತದೆ!" ಎಂದನು ಹಸಿ ಮಣ್ಣನ್ನು ಕೈಗಳಿಂದ ತಟ್ಟುತ್ತಾ. "ಇದು ನಮ್ಮ ಅಮೀರನ ತಲೆಯಂತೆಯೇ ಠಣಗುಟ್ಟುತ್ತದೆ! ನಾನು ಈ ಮಡಕೆಯನ್ನು ಅರಮನೆಗೆ ತೆಗೆದುಕೊಂಡು ಹೋಗಬೇಕಾಗಿ ಬರುತ್ತದೆ. ಅದನ್ನು ಅವರು ಅರಮನೆಯಲ್ಲಿಟ್ಟುಕೊಂಡಿರಲಿ; ಅಮೀರನು ತನ್ನ ತಲೆಯನ್ನು ಕಳೆದುಕೊಳ್ಳುವ ಸಂದರ್ಭ ಬಂದರೆ, ಆಗ ಇದು ಬೇಕಾಗುತ್ತದೆ!"

"ಎಚ್ಚರ! ಖೋಜಾ ನಸ್ರೆದ್ದೀನ್. ಇಂಥ ಮಾತಾಡಿ ಒಂದಲ್ಲ ಒಂದು ದಿನ ನಿನ್ನ ತಲೆಯನ್ನೇ ಕಳೆದುಕೊಳ್ಳಬಹುದು."

"ಓಹೋ! ಖೋಜಾ ನಸ್ರೆದ್ದೀನನ ತಲೆಯನ್ನು ಕಡಿದುಹಾಕುವುದು ಅಷ್ಟು ಸುಲಭವೆಂದು ತಿಳಿದುಕೊಂಡೆಯೋ?

"ನಾನು ಖೋಜಾ ನಸ್ರೆದ್ದೀನ್; ಸರ್ವದಾ ಸ್ವತಂತ್ರ ನಾನ್.
ಹೇಳುವೆ ನಾನಿದು ಸುಳ್ಳಲ್ಲ; 'ನಾನು ಸಾಯುವುದೇ ಇಲ್ಲ!'
ಹರಿತ ಕೊಡಲಿಯು ನಿರ್ಮಿಸಲಿ; ಅಮೀರನಿಂತು ಘೋಷಿಸಲಿ:
ದೋಚುವೆನೆಂದು, ಸುಲಿಯುವೆನೆಂದು, ಲೋಕದ ಶಾಂತಿಯು
ಕಲಕುವೆನೆಂದು
ಅಮೀರ ತಾನು ಘೋಷಿಸಲಿ!
ನಾನು ಖೋಜಾ ನಸ್ರೆದ್ದೀನ್; ಸರ್ವದಾ ಸ್ವತಂತ್ರ ನಾನ್.
ಹೇಳುವೆ ನಾನಿದು ಸುಳ್ಳಲ್ಲ: 'ನಾನು ಸಾಯುವುದೇ ಇಲ್ಲ!'
ಬಾಳುವೆನು, ಹಾಡುವೆನು, ಹೊಂಬಿಸಿಲನು ನಾ ಮೆಚ್ಚುವೆನು.

ಲೋಕಕ್ಕೆಲ್ಲಾ ಸಾರುವೆನು : ' ಅಮೀರನುರುಳಲಿ ಉಸಿರುಡುಗಿ ! '
ಹೌದು, ಸುಲ್ತಾನನು ನುಡಿದ, ನನ್ನ ತಲೆ ಕಡಿಸುವೆನೆಂದ.
ಷಾ ನನಗೆ ನೇಣೆಂದ, ಶೂಲವೆಂದ ಖೀವದವ !
ನಾನು ಖೋಜಾ ನಸ್ರೆದ್ದೀನ್, ಸರ್ವದಾ ಸ್ವತಂತ್ರ ನಾನ್.
ನುಡಿಯುವೆ ನಾನಿದು ಸುಳ್ಳಲ್ಲ : ನಾನು ಸಾಯುವುದೇ ಇಲ್ಲ !
ಬಡವ, ಬರಿಯ, ಅಲೆಮಾರಿ ; ಆದರೂ ಚಿಂತೆಗೆ ನಾ ಮಾರಿ.
ಜನಗಳ ಮಿಗಿಲೊಲವೆನಗಿಹುದು ; ಒಳ್ಳೆಯದೃಷ್ಟದ ದಯವಿಹುದು.
ಸುಲ್ತಾನ್, ಖಾನ, ಷಾ, ಅಮೀರ—ಯಾರದ್ದೂ ಭಯ ನನಗಿಲ್ಲ !
ನಾನು ಖೋಜಾ ನಸ್ರೆದ್ದೀನ್ ; ಸರ್ವದಾ ಸ್ವತಂತ್ರ ನಾನ್.
ನುಡಿಯುವೆ ನಾನಿದು ಸುಳ್ಳಲ್ಲ : ನಾನು ಸಾಯುವುದೇ ಇಲ್ಲ ! "

ನಿಯಾಸನ ಬೆನ್ನ ಹಿಂದೆ ದ್ರಾಕ್ಷಿ ಎಲೆಗಳ ಮರೆಯಿಂದ ಗುಲ್ಜಾನಿನ ನಗುಮುಖ ಹೊರಕ್ಕಿಣಿಕಿತು. ಖೋಜಾ ನಸ್ರೆದ್ದೀನ್ ಹಾಡನ್ನು ಅಷ್ಟಕ್ಕೇ ನಿಲ್ಲಿಸಿ, ಅವಳ ಕಡೆ ನೋಡಿದನು, ಇಬ್ಬರೂ ಒಬ್ಬರಿಗೊಬ್ಬರು ರಹಸ್ಯವಾಗಿ ಸನ್ನೆಮಾಡಿಕೊಂಡರು.

" ಏನು ನೋಡುತ್ತಿದ್ದೀಯ ? ಅಲ್ಲೇನು ಕಾಣುತ್ತಿದೆ, ನಿನಗೆ ? " ಎಂದು ನಿಯಾಸ್ ಕೇಳಿದನು.

" ಸ್ವರ್ಗದ ಒಂದು ಪಕ್ಷಿಯನ್ನು ಕಾಣುತ್ತಿದ್ದೇನೆ ; ಅದು ಪ್ರಪಂಚದಲ್ಲೆಲ್ಲ ಅತ್ಯಂತ ಸುಂದರವಾದದ್ದು ! "

ಮುದುಕ ನಿದಾನವಾಗಿ ಪ್ರಯತ್ನಪೂರ್ವಕವಾಗಿ ಹಿಂದುಗಡೆ ತಿರುಗಿದನು. ಆದರೆ ಗುಲ್ಜಾನ್ ಆಗಲೆ ಎಲೆಗಳ ಹಿಂದೆ ಮರೆಯಾಗಿ ಹೋಗಿಬಿಟ್ಟಿದ್ದಳು ; ಬೆಳ್ಳಿಯ ನಾದದ ಅವಳ ನಗು ಮಾತ್ರ ದೂರದಿಂದ ಕೇಳಿಸುತ್ತಿತ್ತು. ಮುದುಕ ಬಹಳ ಹೊತ್ತಿನ ವರೆಗೆ ತನ್ನ ದುರ್ಬಲವಾದ ಕಣ್ಣುಗಳನ್ನು ಕೊಂಕಿಸಿಕೊಂಡು, ಕೈಯಿಂದ ಬಿಸಿಲಿಗೆ ಮರೆಮಾಡಿಕೊಂಡು ನೋಡುತ್ತಿದ್ದನು. ಆದರೆ, ಅವನು ಕಂಡದ್ದು ಕೊಂಬೆಯಿಂದ ಕೊಂಬೆಗೆ ಹಾರುತ್ತಿದ್ದ ಒಂದು ಗುಬ್ಬಚ್ಚಿ ಮಾತ್ರ.

" ವಿವೇಕ ಇಟ್ಟುಕೋ, ಖೋಜಾ ನಸ್ರೆದ್ದೀನ್ ! ಎಂಥ ಸ್ವರ್ಗದ ಪಕ್ಷಿ ಅದು ? ಅದು ಬರಿಯ ಗುಬ್ಬಚ್ಚಿ ! "

ಖೋಜಾ ನಸ್ರೆದ್ದೀನ್ ಮನಃಪೂರ್ವಕವಾಗಿ ಗಟ್ಟಿಯಾಗಿ ನಕ್ಕನು. ನಿಯಾಸ್ ಅಷ್ಟೊಂದು ಸಂತೋಷಕ್ಕೆ ಕಾರಣವನ್ನು ಕಾಣದೆ ತಲೆ ಅಳ್ಳಾಡಿಸಿದನು.

ರಾತ್ರಿ ಊಟವಾದ ಮೇಲೆ ಖೋಜಾ ನಸ್ರೆದ್ದೀನ್ ಹೊರಟುಹೋದನು. ಆ ಮೇಲೆ ನಿಯಾಸ್ ಚಾವಣಿಯ ಮೇಲಕ್ಕೆ ಹೋಗಿ ತಂಗಾಳಿಯಲ್ಲಿ ಮಲಗಿಕೊಂಡನು. ಬೇಗ ನಿದ್ದೆ ಹತ್ತಿ ಅವನು ಗೊರಕೆಹೊಡೆಯತೊಡಗಿದನು. ಆಗ ತಗ್ಗುಬೇಲಿಯ ಆಚೆ ಕಡೆಯಿಂದ ಸಣ್ಣನೆಯ ಒಂದು ಕೆಮ್ಮು ಕೇಳಿಸಿತು. ಖೋಜಾ ನಸ್ರೆದ್ದೀನ್ ಹಿಂದಕ್ಕೆ ಬಂದಿದ್ದನು.

“ ಅವನಿಗೆ ನಿದ್ದೆ ಹತ್ತಿದೆ.” ಗುಲ್ಜಾನ್ ಪಿಸುಗುಟ್ಟಿದಳು.

ಒಂದೇ ಒಂದು ಹಾರಿನಲ್ಲಿ ಅವನು ಬೇಲಿಯನ್ನು ದಾಟಿದನು.

ಅವರು ಪಾಪ್ಲರ್ ಮರಗಳ ನೆರಳಿಗೆ ನಡೆದರು. ಮರಗಳು ತಮ್ಮ ಉದ್ದನೆಯ ಹಸುರುಡುಪಿನಲ್ಲಿ ಮೆಲ್ಲಗೆ ತೂಕಡಿಸುತ್ತಿರುವಂತೆ ತೋರಿತು. ತಿಳಿಯಾದ ಆಕಾಶದಲ್ಲಿ ಚಂದ್ರಮಂಡಲ ಎತ್ತರದಲ್ಲಿ ನಿಂತಿತ್ತು ; ಅದರ ಪ್ರಕಾಶ ಪ್ರತಿಯೊಂದು ವಸ್ತುವಿಗೂ ಒಂದು ಬಗೆಯ ವಿಚಿತ್ರ ನೀಲವರ್ಣವನ್ನು ಕೊಟ್ಟಿತ್ತು. ನೀರ್ಗಾಲುವೆ ಜುಳುಜುಳು ದನಿ ಮಾಡುತ್ತಿತ್ತು ; ಅಲ್ಲಲ್ಲೇ ಅದರ ಮೇಲೆ ಬೆಳದಿಂಗಳು ಬಿದ್ದು ಬೆಳಗುತ್ತಿತ್ತು ; ಕಡೆಗೆ ನೆರಳಿನಲ್ಲಿ ಅದೆಲ್ಲೋ ಮರೆಯಾಗಿಹೋಯಿತು.

ಗುಲ್ಜಾನ್ ಪೂರ್ಣಚಂದ್ರಿಕೆಯಲ್ಲಿ ಖೋಜಾ ನಸ್ರೆದ್ದೀನನ ಮುಂದೆ ನಿಂತಳು. ತೆಳ್ಳಗೆ ಬಳುಕುತ್ತ, ಉದ್ದನೆಯ ಕಪ್ಪು ಜಡೆಗಳ ಆವರಣದಲ್ಲಿ ತಾನೇ ಪೂರ್ಣಚಂದ್ರನಂತೆ ಪ್ರಕಾಶಿಸುತ್ತ ನಿಂತಿದ್ದಳು. ಖೋಜಾ ನಸ್ರೆದ್ದೀನ್ ಬಹು ಮೆತ್ತಗೆ ಮಾತಾಡಿದನು :

“ ನಾನು ನಿನ್ನನ್ನು ಪ್ರೀತಿಸುತ್ತೇನೆ ! ಓ ನನ್ನ ಅಂತರಾತ್ಮದ ರಾಣೀ, ನೀನೇ ನನ್ನ ಮೊದಲನೆಯ ಏಕಮಾತ್ರ ಪ್ರೇಯಸಿ. ನಾನು ನಿನ್ನ ಗುಲಾಮ ; ನಿನ್ನ ಅತಿ ಸಣ್ಣ ಅಭಿಲಾಷೆಯನ್ನು ಕೂಡ ತಪ್ಪದೆ ನೆರವೇರಿಸುವ ನಿನ್ನ ದಾಸಾನುದಾಸ. ನನ್ನ ಜೀವಮಾನವೆಲ್ಲ ನಿನಗಾಗಿ ಕಾದಿದ್ದ ನಿರೀಕ್ಷೆಯೆನ್ನಬಹುದು. ಈಗ ನಿನ್ನನ್ನು ಕಂಡಿದ್ದೇನೆ ; ಇನ್ನು ನಿನ್ನನ್ನೆಂದಿಗೂ ಮರೆಯುವುದಿಲ್ಲ. ನೀನಿಲ್ಲದೆ ನಾನು ಜೀವಿಸಲಾರೆ ! ”

ಅವಳು, " ನನಗೆ ಚೆನ್ನಾಗಿ ಗೊತ್ತು, ಇದೇ ಮೊದಲಲ್ಲ ನೀನು ಈ ಮಾತಾಡುತ್ತಿರುವುದು " ಎಂದಳು ಈರ್ಷ್ಯೆಯಿಂದ.

" ನಾನೇ? ಓ, ಗುಲ್ಜಾನ್! ಇಂಥ ಮಾತನ್ನು ಹೇಗೆ ತಾನೆ ಆಡು ತ್ತೀಯೆ, ನೀನು ? " ಎಂದು ಕೋಪದಿಂದ ಕೇಳಿದನು.

ಅವನು ನಿಜವಾಗಿಯೂ ನಿರ್ವಂಚನೆಯಿಂದ ಆಡುತ್ತಿರುವಂತೆ ತೋರಿ ಗುಲ್ಜಾನ್ ಅವನನ್ನು ನಂಬಿದಳು. ಬಿಗುಮಾನವನ್ನು ಸಡಿಲಿಸಿ ಮಣ್ಣುದಿಣ್ಣೆಯ ಮೇಲೆ ಅವನ ಪಕ್ಕದಲ್ಲಿ ಕುಳಿತುಕೊಂಡಳು. ಅವನು ತನ್ನ ತುಟಿಗಳನ್ನು ಅವಳ ತುಟಿಗಳ ಮೇಲೆ ಒತ್ತಿದನು ; ಅವಳಿಗೆ ಉಸಿರು ಕಟ್ಟಿದಂತಾಗುವಷ್ಟು ಹೊತ್ತು ತುಟಿಯೊತ್ತಿದನು.

ಸ್ವಲ್ಪ ತಡೆದು ಅವಳೆಂದಳು : " ಕೇಳಿಲ್ಲಿ. ನಿನಗೂ ಗೊತ್ತಿರಬಹುದು ; ಮುತ್ತಿಟ್ಟ ಹುಡುಗಿಗೆ ಏನಾದರೂ ಮೆಚ್ಚು ಕೊಡುವುದು ನಮ್ಮ ಪದ್ಧತಿ. ಇಲ್ಲಿ, ಈಗ ಒಂದು ವಾರಕ್ಕಿಂತಲೂ ಹೆಚ್ಚು ಕಾಲದಿಂದ ಪ್ರತಿ ರಾತ್ರಿಯೂ ನೀನು ನನಗೆ ಮುತ್ತಿಡುತ್ತಿದ್ದೀಯ. ಆದರೂ ಒಂದು ಸೂಜಿಯನ್ನೂ ನನಗೆ ಕೊಟ್ಟಿಲ್ಲವಲ್ಲ."

" ನನ್ನ ಹತ್ತಿರ ಹಣವಿರಲಿಲ್ಲ ; ಅಷ್ಟೇ ಅದರ ಕಾರಣ. ಆದರೆ ಇವತ್ತು ನಿಮ್ಮಪ್ಪ ನನಗೆ ಹಣ ಕೊಟ್ಟಿದ್ದಾನೆ. ನಾಳೆ, ಗುಲ್ಜಾನ್, ನಿನಗೊಂದು ಸೊಗಸಾದ ಬಹುಮಾನ ತಂದುಕೊಡುತ್ತೇನೆ. ನಿನಗೇನು ಇಷ್ಟ ? ಮಣಿಗಳೇ ? ಕರವಸ್ತ್ರವೇ ? ಅಥವಾ ಪದ್ಮರಾಗ ಮಣಿ ಕೆತ್ತಿದ ಉಂಗುರವನ್ನು ತರಲೇ ? "

" ಏನಾದರೂ ಚಿಂತೆಯಿಲ್ಲ " ಎಂದು ಪಿಸುಗುಟ್ಟಿದಳು. " ನನ್ನ ಪ್ರಿಯ ಖೋಜಾ ನಸ್ರೆದ್ದೀನ್, ಏನಾದರೂ ಆಗಲಿ, ನನಗೆ ಚಿಂತೆಯಿಲ್ಲ ; ನೀನು ಕೊಟ್ಟ ಬಹುಮಾನವಾದರೆ ಸರಿ ; ಅದು ಏನು ಬೇಕಾದರೂ ಆಗಬಹುದು. ನೀನು ಅವತ್ತು ಮಾರ್ಕಟ್ಟೆಯ ಹತ್ತಿರ ನಮ್ಮ ಬಳಿ ಬಂದೆಯಲ್ಲ, ಆ ಕ್ಷಣ ದಿಂದಲೂ ನಿನ್ನನ್ನು ನಾನು ಪ್ರೀತಿಸಿದ್ದೇನೆ. ಕೆಟ್ಟ ಬಡ್ಡಿಗಾರ ಜಾಫರನನ್ನು ಓಡಿಸಿದಾಗಿನಿಂದಂತೂ ಇನ್ನೂ ಹೆಚ್ಚಾಗಿ ಪ್ರೀತಿಸುತ್ತಿದ್ದೇನೆ."

ನೆರಳಿನಲ್ಲಿ ನೀರು ಕಲಕಲನಿನಾದ ಮಾಡಿತು ; ನಿರ್ಮಲಾಕಾಶದಲ್ಲಿ ನಕ್ಷತ್ರಗಳು ಉಜ್ಜ್ವಲವಾಗಿ ಮಿನುಗುತ್ತಿದ್ದವು. ಖೋಜಾ ನಸ್ರೆದ್ದೀನ್ ಹುಡುಗಿಗೆ ಇನ್ನೂ ಹತ್ತಿರ ಸರಿದನು ; ಹತ್ತಿರ ಹೋಗಿ ತೋಳು ನೀಡಿ ಅವಳ

ಬಿಸಿಯೆದೆಯ ಮೇಲೆ ಅಂಗೈಯೂರಿದನು. ಉಸಿರಾಡದೆ ಸ್ತಬ್ಧನಾಗಿ ಸುಖದಲ್ಲಿ ಮೈಮರೆತನು. ತಟಕ್ಕನೆ ಅವನ ಕಣ್ಣಿಗೆ ಕಿಡಿಗಳು ಕಾಣಿಸಿದವು; ಕೆನ್ನೆಯ ಮೇಲೆ ಫಟೀರೆಂದು ಏಟು ಬಿದ್ದು ಕೆನ್ನೆ ಚುಮುಚುಮಿಸತೊಡಗಿತು. ಮೊಳ ಕೈಯಿಂದ ರಕ್ಷಣೆ ಮಾಡಿಕೊಳ್ಳುತ್ತ ಅವನು ಹಿಂದೆ ಸರಿದನು. ಗುಲ್ಜಾನ್ ಕೋಪದಿಂದ ಎದ್ದು ನಿಂತಳು.

ಅವನು ಮೆಲು ದನಿಯಲ್ಲಿ ನುಡಿದನು: "ಕಪಾಳಕ್ಕೆ ಹೊಡೆದ ಸದ್ದು ಕೇಳಿದಂತಾಯಿತು. ಮಾತಾಡಬಹುದಾಗಿರುವಾಗ ಹೊಡೆದಾಡಬೇಕೆ?" ಎಂದನು.

"ಮಾತು!" ಗುಲ್ಜಾನ್ ನಡುವೆ ಬಾಯಿ ಹಾಕಿದಳು. "ನಿನ್ನೆದುರಿಗೆ ಮುಖಪರದೆಯನ್ನು ತೆಗೆದುಹಾಕುವಷ್ಟು ಮಟ್ಟಿಗೆ ನಾನು ಲಜ್ಜೆಗೆಟ್ಟ ಕೇಡೇ ಸಾಕಾಗಿದೆ. ನಿನ್ನ ಉದ್ದ ತೋಳುಗಳನ್ನು ಮುಟ್ಟಬಾರದ ಬಳಿಗೂ ಏಕೆ ಚಾಚುತ್ತೀಯ?"

ಖೋಜಾ ನಸ್ರೆದ್ದೀನನಿಗೆ ಬಹಳ ಮುಖಭಂಗವಾಯಿತು. "ಯಾರು ನಿರ್ಧರಿಸುವವರು, ಹೇಳು, ತೋಳು ಎಲ್ಲಿಯ ವರೆಗೆ ಚಾಚಬಹುದು ಅಥವಾ ಬಾರದು ಎಂದು?" ಎಂದು ಎದುರು ವಾದಿಸಿದನು. "ನೀನು ಪರಮಪ್ರಾಜ್ಞ ನಾದ ಇಬಿನ್ ತುಫಾಯಿಲನ ಪುಸ್ತಕಗಳನ್ನು ಓದಿದ್ದರೆ—"

ಬಿರುಸಿನಿಂದ ಅವಳು ಮತ್ತೆ ಮಧ್ಯೆ ಬಾಯಿ ಹಾಕಿದಳು: "ದೇವರ ದಯೆ! ದೇವರ ದಯದಿಂದ ನಾನು ಅಂಥ ಅಶ್ಲೀಲ ಬರಹಗಳನ್ನು ಓದಲಿಲ್ಲ! ಯೋಗ್ಯಳಾದ ಹುಡುಗಿಗೆ ತಕ್ಕಂತೆ ನನ್ನ ಶೀಲವನ್ನು ನಾನು ರಕ್ಷಣೆಮಾಡಿ ಕೊಳ್ಳುತ್ತೇನೆ!" ಎಂದಳು.

ಅವನ ಬಳಿಯಿಂದ ಅತ್ತ ತಿರುಗಿ ಹೊರಟು ಹೋದಳು. ಅವಳ ಹಗುರ ಹೆಜ್ಜೆಗಳ ಭಾರಕ್ಕೆ ಮೆಟ್ಟಲುಗಳು ಕಿರುಗುಟ್ಟಿದವು; ಮೇಲಿನ ಮೊಗಸಾಲೆಯ ಕದದ ಸಂದಿಯಿಂದ ಬೆಳಕು ಕಾಣಿಸಿತು.

"ನಾನು ಅವಳ ಮನಸ್ಸು ನೋಯಿಸಿಬಿಟ್ಟೆ. ನಿಜವಾಗಿಯೂ ನಾನೊಬ್ಬ ದಡ್ಡ. ಹೂಂ! ಹೋಗಲಿ. ಅವಳ ಕೋಪದ ರೀತಿಯಾದರೂ ಗೊತ್ತಾಯಿತಲ್ಲ, ನನಗೆ. ಅವಳು ನನ್ನ ಕಪಾಳಕ್ಕೆ ಹಾಗೆ ಹೊಡೆಯಬಲ್ಲಳಾದರೆ, ಬೇರೆ ಯಾವನ ಕಪಾಳಕ್ಕಾದರೂ ಹೊಡೆದೇ ಹೊಡೆಯುತ್ತಾಳೆ; ಒಳ್ಳೆಯ ನಿಷ್ಠೆಯುಳ್ಳ

ಹೆಂಡತಿಯಾಗುತ್ತಾಳೆ. ಹೌದು, ಮದುವೆಯಾಗುವ ಮೊದಲು ಅವಳಿಂದ ನೂರು ಸಲ ಬೇಕಾದರೂ ಕಪಾಳಕ್ಕೆ ಹೊಡೆಸಿಕೊಳ್ಳುವುದಕ್ಕೆ ಸಿದ್ಧನಾಗಿದ್ದೇನೆ, ಮದುವೆಯಾದ ಮೇಲೆ ಅವಳು ಪರಪುರುಷರಿಗೆ ಅಷ್ಟೇ ಉದಾರವಾಗಿ ಹೊಡೆತ ಕೊಡುವಹಾಗಿದ್ದರೆ" ಎಂದು ಯೋಚಿಸುತ್ತಿದ್ದನು.

ಅವನು ಮೆಟ್ಟುಂಗಾಲಿಟ್ಟುಕೊಂಡು ನಡೆಯುತ್ತ ಮೇಲ್ಮೊಗಸಾಲೆಯ ಬಳಿಗೆ ಹೋದನು. ಹೋಗಿ ಮೆತ್ತಗೆ ಕರೆದನು:

"ಗುಲ್ಜಾನ್!"

ಉತ್ತರವಿಲ್ಲ.

"ಗುಲ್ಜಾನ್!"

ಪರಿಮಳ, ಕತ್ತಲೆ, ಮೌನ. ಖೋಜಾ ನಸ್ರೆದ್ದೀನ್ ದುಃಖಿತನಾದನು. ಮೆಲು ದನಿಯಲ್ಲಿ ಮುದುಕನಿಗೆ ಎಚ್ಚರವಾಗದ ಹಾಗೆ ಹಾಡಲು ಮೊದಲು ಮಾಡಿದನು:

"ನಿನ್ನೆವೆಗಳೆನ್ನ ಹೃದಯುವ ಕದ್ದುಕೊಂಡಿಹವು.
ನನ್ನ ನಿಂದಿಸುತಿರುವೆ; ಎವೆಗಳಿಂ ಕದಿಯುತಿರುವೆ.
ಈಗ ನೀ ಬೆಲೆಗೇಳುತಿಹೆ ನನ್ನ ಹೃದಯುವನು ಕದ್ದುದಕ್ಕೆ!
ಆಶ್ಚರ್ಯಗಳಲಿ ಮಹದಾಶ್ಚರ್ಯ! ಯಾರು ಕೇಳಿರುವರಿದನು?
ಕಳ್ಳರಿಗೆ ಒಡವೆ ಕಳಕೊಂಡವರೆ ಕೂಲಿ ಕೊಡುವುದನು?
ಯಾರು ಕೇಳಿರುವರಿದನು?
ಹಾಗಾದರೆನಗೀಗ ನೀಡುವುದು ನೀನೆರಡು ಮೂರು ಮುತ್ತುಗಳ.
ಬೇಡ, ಸಾಲದು ಅಷ್ಟು, ಅಷ್ಟೆ ಅಷ್ಟು!
ಉಪ್ಪುನೀರುಗಳಂಥ ಮುತ್ತುಗಳು ಇಹವು;
ಕುಡಿದಂತೆ ಕುಡಿದಂತೆ ತೃಷೆ ಹೆಚ್ಚುತಿಹುದು.
ಬಾಗಿಲನು ಮುಚ್ಚಿರುವೆ ನನ್ನ ಕಣ್ಣೆದುರೇ—
ಇದಕಿಂತ ನನ್ನ ಮೈ ಬಿಸಿ ರಕ್ತ ನೆಲದಲ್ಲಿ ಚೆಲ್ಲುವುದೆ ಲೇಸು!
ನಿದ್ದೆ ಶಾಂತಿಗಳೀಗ ದೊರೆವುದೆನಗೆಲ್ಲಿ?
ಯಾರು ಹೇಳುವರದನು ನಿನ್ನನುಳಿದು?
ನಿನ್ನ ಕಂಗಳ ಬಯಕೆ ಮಾರಿರುವುದೆನಗೆ.

ಗಾಯಗೊಂಡಿದ್ದರೂ ಕಟಾಕ್ಷಬಾಣಗಳಿಗೆ!
ಎಷ್ಟು ಬಯಕೆಯೊ ನನಗೆ ಗಮಗಮಿಪ ನಿನ್ನ ಕುರುಳ್ಗೆ!
ಕಸ್ತೂರಿಪರಿಮಳದ ಕುರುಳ್ಗೆ!"

ಈ ಹಾಡು ಹಾಡಿದನು. ಗುಲ್ಜಾನ್ ಹೊರಗೆ ಕಾಣಿಸಿಕೊಳ್ಳಲೂ ಇಲ್ಲ, ಉತ್ತರ ಕೊಡಲೂ ಇಲ್ಲ. ಆದರೂ ಅವಳು ಹಾಡನ್ನು ಗಮನಿಸಿ ಕೇಳುತ್ತಿದ್ದಾಳೆಂದು ಅವನಿಗೆ ಗೊತ್ತಿತ್ತು. ಅಂಥ ಹಾಡಿಗೆ ಯಾವ ಹೆಂಗಸೂ ಮನ ಕರಗದೆ ಇರಲಾರಳೆಂದು ಅವನು ಬಲ್ಲ. ಅವನ ಊಹೆ ನಿಜವಾಯಿತು. ಬಾಗಿಲು ಸ್ವಲ್ಪ ತೆರೆಯಿತು.

"ಬಾ! ನಿಶ್ಶಬ್ದವಾಗಿ ಬಾ! ನಮ್ಮಪ್ಪನಿಗೆ ಎಚ್ಚರವಾದೀತು!" ಎಂದು ಗುಲ್ಜಾನ್ ಪಿಸುಗುಟ್ಟಿದಳು.

ಮೆಟ್ಟಲು ಹತ್ತಿ ಬಂದು ಅವಳ ಪಕ್ಕದಲ್ಲಿ ಕುಳಿತುಕೊಂಡನು. ಕರಗಿದ ಕುರಿಕೊಬ್ಬನ್ನು ತುಂಬಿದ ಕುಡಿಕೆಯಲ್ಲಿ ತೇಲುತ್ತಿದ್ದ ಬತ್ತಿ ಚಟಪಟನೆ ಸದ್ದು ಮಾಡಿಕೊಂಡು ಬೆಳಗಾಗುವ ವರೆಗೂ ಉರಿಯುತ್ತಿತ್ತು. ಅವರು ಮಾತಾಡುತ್ತಿದ್ದರು; ಎಷ್ಟು ಆಡಿದರೂ ಮುಗಿಯಲೇ ಇಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ, ವಸ್ತುಸ್ಥಿತಿ ಹೇಗಿರಬೇಕೋ ಹಾಗೆಯೇ ಇತ್ತು; ಮಹಾ ಪ್ರಾಜ್ಞನಾದ ಅಬುಮುಹಮ್ಮದ್ ಆಲಿ ಇಬಿನ್ ಹಸಮ್, 'ಪಾರಿವಾಳದ ಹಾರ' ಎಂಬ ತನ್ನ ಗ್ರಂಥದಲ್ಲಿ ಪ್ರೇಮದ ಸ್ವರೂಪವನ್ನು ವಿವರಿಸಿರುವ ಪ್ರಕರಣದಲ್ಲಿ ಹೇಗೆ ಹೇಳಿದೆಯೋ ಹಾಗೆಯೇ ಇತ್ತು. "ಪ್ರೇಮವು—ಅಲ್ಲಾ ಅದರ ಘನತೆಯನ್ನು ಹೆಚ್ಚಿಸಲಿ—ಆಟವಾಗಿ ಪ್ರಾರಂಭವಾಗುತ್ತದೆ; ಆದರೆ ಬಹು ಮುಖ್ಯ ವಿಷಯವಾಗಿ ಪರಿಣಮಿಸುತ್ತದೆ. ಅದರ ಗುಣಗಳು ವರ್ಣಿಸಲಸದಳವಾದಷ್ಟು ಪರಮೋತ್ಕೃಷ್ಟವಾಗಿವೆ. ಅದರ ನಿಜವಾದ ಅಂತಸ್ಸತ್ವವನ್ನು ಬಹು ಕಷ್ಟದಿಂದ ಮಾತ್ರ ಅರಿಯಲಾಗುತ್ತದೆ. ಬಹು ಹೆಚ್ಚು ಸಂದರ್ಭಗಳಲ್ಲಿ ಸುಂದರವಾದ ಆಕಾರದಿಂದ ಪ್ರೇಮಕ್ಕೆ ಪ್ರೇರಣೆ ದೊರೆಯುತ್ತದೆಯಷ್ಟೆ. ಇದಕ್ಕೆ ಕಾರಣವೇನೆಂದು ಪ್ರಶ್ನಿಸಬಹುದು. ಇದನ್ನು ತಿಳಿದುಕೊಳ್ಳುವುದು ಬಹು ಸುಲಭ: ಆತ್ಮ ಸುಂದರ ವಸ್ತು; ಸುಂದರ ವಸ್ತು ಯಾವುದೇ ಇರಲಿ ಅದರಿಂದ ಆಕರ್ಷಿತವಾಗುತ್ತದೆ; ಪರಿಪೂರ್ಣ ರೂಪದ ಕಡೆಗೆ ಅದರ ಒಲವು. ಅಂಥ ಪರಿಪೂರ್ಣ ರೂಪವೊಂದು ಕಂಡುಬಂದಾಗ ಆತ್ಮ ಅದನ್ನು ಪರೀಕ್ಷಿಸುತ್ತದೆ.

ಪರೀಕ್ಷಿಸಿದಾಗ ಹೊರತೋರ್ಕೆಯಿಂದಾಚೆ ಆ ವಸ್ತುವಿನಲ್ಲಿ ತನಗೆ ಸಾಮ್ಯ ವುಳ್ಳದ್ದೇನಾದರೂ ಕಂಡುಬಂದರೆ, ಆಗ ಪರಸ್ಪರ ಮಿಲನವೇರ್ಪಡುತ್ತದೆ; ಆಗ ಪ್ರೇಮ ಉತ್ಪತ್ತಿಯಾಗುತ್ತದೆ........ನಿಜವಾಗಿಯೂ ಬಾಹ್ಯದ ಆಕಾರ ಆತ್ಮದ ದೂರ ಕಣಗಳನ್ನು ಅದ್ಭುತ ರೀತಿಯಿಂದ ಒಂದುಗೂಡಿಸುತ್ತದೆ!"

೨

ಚಾವಣಿಯ ಮೇಲೆ ಮುದುಕ ಗುಸಗುಸನೆ ಕೆಮ್ಮುತ್ತ ಹೊರಳಿದನು; ನಿದ್ದೆಗಣ್ಣಿನಲ್ಲೇ ಗುಲ್ಜಾನನ್ನು ಕೂಗಿ ಕುಡಿಯಲು ನೀರು ತರುವಂತೆ ಹೇಳಿದನು. ಅವಳು ಖೋಜಾ ನಸ್ರೆದ್ದೀನನನ್ನು ಬಾಗಿಲ ಕಡೆ ನೂಕಿದಳು. ಅವನು ಮೆಟ್ಟಲಿಳಿದು ಓಡಿಹೋದನು; ಮೆಟ್ಟಲಿಗೆ ಹೆಜ್ಜೆ ಸೋಕಿಸಲೇ ಇಲ್ಲವೋ ಎಂಬಂತೆ ಹಗುರಗಾಲಿನಿಂದ ಓಡಿಹೋಗಿ ಬೇಲಿಯನ್ನು ಹಾರಿದನು. ಸ್ವಲ್ಪ ಹೊತ್ತಾದ ಮೇಲೆ ಹತ್ತಿರದ ಕಾಲುವೆಯಲ್ಲಿ ಮುಖ ತೊಳೆದು ಖಲತ್ತಿನ ಅಂಚಿನಿಂದ ಒರಸಿಕೊಂಡು ಅಂಗಳದ ಬಾಗಿಲಿಗೆ ಬಂದನು.

"ನಮಸ್ಕಾರ, ಖೋಜಾ ನಸ್ರೆದ್ದೀನ್!" ಎಂದು ಮುದುಕ ಚಾವಣಿಯ ಮೇಲಿನಿಂದಲೇ ಅವನನ್ನು ಸ್ವಾಗತಿಸಿದನು "ಈಗ ಕೆಲವು ದಿನಗಳಿಂದ ನೀನು ಎಷ್ಟು ಮುಂಚೆ ಏಳುತ್ತಿದ್ದೀಯಪ್ಪಾ. ಮಲಗುವುದಕ್ಕೆ ನಿನಗೆ ಹೊತ್ತೆಲ್ಲಿ ಸಿಕ್ಕುತ್ತದೆ? ಈಗ, ಕೆಲಸಕ್ಕೆ ಕೂರುವುದಕ್ಕೆ ಮೊದಲು ಟೀ ಕುಡಿಯೋಣ" ಎಂದನು.

ಮಧ್ಯಾಹ್ನ ಖೋಜಾ ನಸ್ರೆದ್ದೀನ್ ಮುದುಕನನ್ನು ಮನೆಯಲ್ಲಿ ಬಿಟ್ಟು, ಗುಲ್ಜಾನಿಗೆ ಬಹುಮಾನವೊಂದನ್ನು ಕೊಳ್ಳೋಣವೆಂದು ಪೇಟೆಗೆ ಹೊರಟನು. ಹೊರಡುವ ಮೊದಲು ಎಂದಿನಂತೆಯೇ ಮುನ್ನೆಚ್ಚರಿಕೆಯಿಂದ ಬಣ್ಣಬಣ್ಣದ ಬದಕ್ಷಾನ್ ರುಮಾಲು ಸುತ್ತಿ ಒಂದು ಗಡ್ಡ ಕಟ್ಟಿಕೊಂಡನು. ಹೀಗೆ ವೇಷ ಹಾಕಿಕೊಂಡಾಗ ಅವನನ್ನು ಗುರುತಿಸುವುದಕ್ಕಾಗುತ್ತಿರಲಿಲ್ಲ. ಈ ವೇಷ ಧರಿಸಿ ಅವನು ಅಂಗಡಿಬೀದಿಗಳಲ್ಲೂ ಟೀ ಅಂಗಡಿಗಳಲ್ಲೂ ಗೂಢಚಾರರ ಭಯವಿಲ್ಲದೆ ನಿರಾತಂಕವಾಗಿ ಸುತ್ತಾಡಬಹುದಾಗಿತ್ತು.

ಅವನು ಒಂದು ಮುತ್ತಿನ ಸರವನ್ನು ಆಯ್ದುಕೊಂಡನು; ಅದರ ಬಣ್ಣ ತನ್ನ ಪ್ರೇಯಸಿಯ ತುಟಿಯನ್ನು ನೆನಪಿಗೆ ತರುತ್ತಿತ್ತು. ಒಡನೆ ವ್ಯಾಪಾರಿ

ಸುಲಭವಾಗಿ ಹೊಂದಿಕೊಳ್ಳುವಂಥವನು; ಕೇವಲ ಒಂದೇ ಗಂಟೆ ಹೊತ್ತು ಗದ್ದಲದಿಂದ ಚೌಕಾಸಿ ಮಾಡಿದ್ದು ಸಾಕಾಯಿತು. ಆ ಸರ ಮೂವತ್ತು ಟಂಗ ಬೆಲೆಗೆ ಖೋಜಾ ನಸ್ರೆದ್ದೀನನ ಕೈಗೆ ಬಂತು.

ಹಿಂದಿರುಗಿ ಬರುತ್ತಿರುವಾಗ ಮಾರ್ಕಟ್ಟೆಯ ಮಸೀದಿಯ ಬಳಿ ಖೋಜಾ ನಸ್ರೆದ್ದೀನನಿಗೆ ಒಂದು ಭಾರಿ ಗುಂಪು ಕಂಡುಬಂತು. ಜನ ಒತ್ತೊತ್ತಾಗಿ ಮುಂದೆ ನುಗ್ಗುತ್ತಿದ್ದರು; ಒಬ್ಬರೊಬ್ಬರ ಭುಜದ ಮೇಲೆ ಕತ್ತೆತ್ತಿ ನೀಡಿ ನೋಡುತ್ತಿದ್ದರು. ಹತ್ತಿರ ಬರುತ್ತಲೆ ಖೋಜಾ ನಸ್ರೆದ್ದೀನನಿಗೆ ಕರ್ಕಶವಾದ ಕೀಚುದನಿಯಿಂದ ಯಾರೋ ಮಾತಾಡುತ್ತಿರುವುದು ಕೇಳಿಸಿತು. ಅವರು ಹೀಗೆ ಹೇಳುತ್ತಿದ್ದರು:

"ನೀವೇ ನೋಡಿ; ಓ, ನಿಜವಾದ ಭಕ್ತರೇ, ಶ್ರದ್ಧಾಳುಗಳೇ, ನೀವೇ ನೋಡಿ! ಅವನಿಗೆ ಪಾರ್ಶ್ವವಾಯು ಬಂದು ಹತ್ತು ವರ್ಷದಿಂದ ಅಳ್ಳಾಡದೆ ಬಿದ್ದಿದ್ದಾನೆ. ಅವನ ಕೈಕಾಲುಗಳು ತಣ್ಣಗಾಗಿ ಸತ್ವಹೀನವಾಗಿವೆ. ನೋಡಿ, ಅವನು ಕಣ್ಣು ಕೂಡ ಬಿಡಲಾರ. ಅವನು ಬಹು ದೂರದಿಂದ ನಮ್ಮ ಪಟ್ಟಣಕ್ಕೆ ಬಂದಿದ್ದಾನೆ. ಇನ್ನುಳಿದಿರುವ ಒಂದೇ ಒಂದು ಪರಿಹಾರೋಪಾಯವನ್ನು ಮಾಡಿ ನೋಡೋಣವೆಂದು ಕರುಣಾಳುಗಳಾದ ಬಂಧುಗಳೂ ಸ್ನೇಹಿತರೂ ಅವನನ್ನು ಇಲ್ಲಿಗೆ ತಂದಿದ್ದಾರೆ. ಪರಮಪವಿತ್ರನೂ ನಿರುಪಮನೂ ಆದ ಬಾಬಾ ಬಹಾ ಎದ್-ದೀನನ ಸ್ಮರಣೆಗಾಗಿ ಜರುಗುವ ಜಾತ್ರೆ ಇನ್ನೊಂದು ವಾರದಲ್ಲಿ ಬರುತ್ತದೆಯಲ್ಲ, ಆಗ ಇವನನ್ನು ಗೋರಿಯ ಮೆಟ್ಟಿಲ ಮೇಲಿಡುತ್ತಾರೆ. ಹೀಗೆ ಮಾಡುವುದರಿಂದ ಕುರುಡರೂ ಕುಂಟರೂ ಹಾಸಿಗೆಹತ್ತಿದವರೂ ಗುಣ ಹೊಂದಿದ್ದಾರೆ; ಒಂದೇ ಸಲವಲ್ಲ, ಎಷ್ಟೋ ಸಲ ಹೀಗೆ ನಡೆದಿದೆ. ಓ, ನಿಜವಾದ ಭಕ್ತರೇ! ನಾವೀಗ ಪ್ರಾರ್ಥನೆ ಮಾಡೋಣ. ಪವಿತ್ರನಾದ ಷೇಕನು ಈ ಅದೃಷ್ಟಹೀನ ಮನುಷ್ಯನ ಮೇಲೆ ಕರುಣೆ ತೋರಿ ಇವನ ರೋಗ ವಾಸಿಯಾಗುವಂತೆ ಅನುಗ್ರಹಿಸಲೆಂದು ಪ್ರಾರ್ಥಿಸೋಣ."

ನೆರೆದ ಜನವೆಲ್ಲ ಪ್ರಾರ್ಥನೆ ಹೇಳಿದರು. ಆ ಮೇಲೆ ಅದೇ ಕೀಚುದನಿ ಮತ್ತೆ ಮುಂದುವರಿಸಿತು:

**"ನೋಡಿ, ನಿಜವಾದ ಭಕ್ತರೇ, ನೀವೇ ನೋಡಿ. ಹತ್ತು ವರ್ಷದಿಂದ ಇವನು ಅಳ್ಳಾಡದೆ ಬಿದ್ದಿದ್ದಾನೆ."**

ಖೋಜಾ ನಸ್ರೆದ್ದೀನ್ ಗುಂಪಿನಲ್ಲಿ ನುಗ್ಗಿ ದಾರಿ ಮಾಡಿಕೊಂಡು ಮುಂದೆ ಬಂದನು. ಬಂದು ಮೆಟ್ಟಂಗಾಲಿಟ್ಟು ನಿಂತು ನೋಡಿದನು. ಮಾತಾಡು ತ್ತಿದ್ದವನೊಬ್ಬ ಮುಲ್ಲ; ಎತ್ತರವಾದ ನರಪೇತಲ; ಸಣ್ಣನೆಯ ಕೆಟ್ಟ ಕಣ್ಣು; ಗಿಡ್ಡನೆಯ ಹರುಕಲು ಗಡ್ಡ. ಅವನು ಗಟ್ಟಿಯಾಗಿ ಕೂಗುತ್ತಾ, ತನ್ನ ಕಾಲ ಬಳಿ ಕೈಮಂಚದಲ್ಲಿ ಮಲಗಿಸಿದ್ದ ಪಾರ್ಶ್ವವಾಯು ರೋಗಿಯ ಕಡೆ ಬೆರಳು ಮಾಡಿ ತೋರಿಸುತ್ತಾ ಹೇಳುತ್ತಿದ್ದನು:

"ನೋಡಿ, ಓ, ಮುಸ್ಲಿಮರೇ, ನೋಡಿ! ಎಷ್ಟು ಚಿಂತಾಜನಕವಾಗಿದೆ, ಅವನ ಸ್ಥಿತಿ! ಎಂಥ ದುರದೃಷ್ಟ ಅವನದು! ನೋಡಿ, ನೀವೇ ನೋಡಿ! ಆದರೆ ಇನ್ನೊಂದು ವಾರದಲ್ಲಿ ಪವಿತ್ರನಾದ ಬಹಾ ಎದ್-ದೀನನು ಅವನಿಗೆ ವಿಮೋ ಚನೆಯನ್ನು ಕರುಣಿಸುತ್ತಾನೆ! ಅವನು ಬದುಕಿ ಉದ್ಧಾರವಾಗುತ್ತಾನೆ!"

ಪಾರ್ಶ್ವವಾಯು ಹೊಡೆದ ಈ ಮನುಷ್ಯ ಅಲ್ಲಿ ಕಣ್ಣು ಮುಚ್ಚಿಕೊಂಡು, ಮುಖದ ಮೇಲೆ ಕರುಣಾಜನಕವಾದ ದುಃಖಭಾವವನ್ನು ಮೂಡಿಸಿಕೊಂಡು ಮಲಗಿದ್ದನು. ಖೋಜಾ ನಸ್ರೆದ್ದೀನ್ ಬೆರಗಾಗಿ ಬಾಯಿಬಿಟ್ಟುಕೊಂಡನು. ಈ ಮುಖವನ್ನು, ಸಿಡುಬಿನ ಕಲೆಯ ಚಪ್ಪಟೆ ಮೂಗಿನ ಈ ಮುಖವನ್ನು— ಅವನು ಸಾವಿರ ಜನರ ನಡುವೆಯೂ ಗುರ್ತಿಸಬಲ್ಲವನಾಗಿದ್ದನು. ಆ ಮನುಷ್ಯ ನಿಗೆ ಬಹು ಕಾಲದಿಂದ ಪಾರ್ಶ್ವವಾಯು ತಗುಲಿರಬೇಕೆಂದು ತೋರಿತು; ಏಕೆಂದರೆ, ಕೆಲಸವಿಲ್ಲದೆ ಸೋಮಾರಿತನದಿಂದ ಅವನ ಮುಖ ಮೊದಲಿಗಿಂತ ದುಂಡುದುಂಡಾಗಿತ್ತು.

ಅವತ್ತಿನಿಂದ ಖೋಜಾ ನಸ್ರೆದ್ದೀನ್ ಆ ಮಸೀದಿಯ ಹತ್ತಿರ ಹಾದು ಹೋದಾಗಲೆಲ್ಲ ಅದೇ ನರಪೇತಲ ಮುಲ್ಲನೂ ಅದೇ ಲಕ್ವ ಹೊಡೆದ ಮನು ಷ್ಯನೂ ಅಲ್ಲಿ ಕಾಣಿಸುತ್ತಿದ್ದರು. ಆ ಸಿಡುಬಿನ ಕಲೆಯ ಮುಖ ಮಾತ್ರ ದಿನ ದಿನಕ್ಕೆ ಹೆಚ್ಚು ಹೆಚ್ಚು ಕೊಬ್ಬುತ್ತಿತ್ತು, ಹೆಚ್ಚು ಹೆಚ್ಚು ಮಿರುಗುತ್ತಿತ್ತು.

ಪವಿತ್ರ ಷೇಕನ ಸ್ಮರಣೆಗಾಗಿ ನಡೆಯುವ ಜಾತ್ರೆಯ ದಿನ ಕಟ್ಟಕಡೆಗೆ ಬಂದೇ ಬಂತು. ಸಂಪ್ರದಾಯದ ಪ್ರಕಾರ, ಅವನು ಸತ್ತದ್ದು ಮೇ ತಿಂಗಳು, ಮಧ್ಯಾಹ್ನದ ಹೊತ್ತಿನಲ್ಲಿ. ಆ ದಿನ ಒಂದೇ ಒಂದು ಮೋಡವೂ ಇಲ್ಲದೆ ಆಕಾಶ ನಿರ್ಮಲವಾಗಿದ್ದರೂ, ಅವನ ಸಾವಿನ ಸಮಯದಲ್ಲಿ ಸೂರ್ಯಮಂಡಲ ಮರೆಯಾಗಿ ಕತ್ತಲೆ ತುಂಬಿತು; ಭೂಮಿ ನಡುಗಿತು; ಪಾಪಿಗಳು ವಾಸಿಸುತ್ತಿದ್ದ

ಅನೇಕ ಮನೆಗಳು ಉರುಳಿ ಬಿದ್ದು ಪಾಪಿಗಳೆಲ್ಲ ಅಲ್ಲಿ ಹೂತುಹೋದರು. ಮಸೀದಿಗಳಲ್ಲಿ ಮುಲ್ಲಾಗಳು ಹೇಳುತ್ತಿದ್ದ ಕಥೆ ಇದು. ಈ ಕಥೆಯನ್ನು ಹೇಳಿ, ಮುಸ್ಲಿಮರೆಲ್ಲರೂ ಷೇಕನ ಗೋರಿಗೆ ತಪ್ಪದೆ ಬಂದು ದರ್ಶನ ಮಾಡಿ ಅವನ ಅವಶೇಷಕ್ಕೆ ಗೌರವಸಲ್ಲಿಸಬೇಕೆಂದೂ ಹಾಗೆ ಮಾಡದಿದ್ದರೆ, ಧರ್ಮದಲ್ಲಿ ನಂಬಿಕೆ ಯಿಲ್ಲದ ನಾಸ್ತಿಕರೆಂದು ಪರಿಗಣಿಸಲ್ಪಟ್ಟು ಆ ಪಾಪಿಗಳಿಗೆ ಆದ ಗತಿಯನ್ನೇ ಅನುಭವಿಸಬೇಕಾಗಿ ಬರಬಹುದೆಂದೂ ಒತ್ತಿ ಒತ್ತಿ ಹೇಳುತ್ತಿದ್ದರು.

ಯಾತ್ರಿಕರು ಹೊರಟಾಗ ಇನ್ನೂ ಕತ್ತಲೆಯಾಗಿಯೇ ಇತ್ತು. ಸೂರ್ಯ ಉದಿಸಿದಾಗ ಗೋರಿಯ ಸುತ್ತಣ ದೊಡ್ಡ ಬಯಲೆಲ್ಲ ಜನಸಂದಣಿಯಿಂದ ತುಂಬಿ ತುಳುಕುತ್ತಿತ್ತು. ಇನ್ನೂ ಎಷ್ಟೋ ಜನ ರಸ್ತೆಗಳಲ್ಲಿ ಬರುತ್ತಲೇ ಇದ್ದರು. ಪದ್ಧತಿಯ ಪ್ರಕಾರ ಎಲ್ಲರೂ ಬರಿಗಾಲಿನಲ್ಲೇ ನಡೆಯುತ್ತಿದ್ದರು. ಇಲ್ಲಿ ಉಳಿದವರ ಜೊತೆಯಲ್ಲಿ, ದೂರ ದೇಶದಿಂದ ಬಂದವರು—ಮುಖ್ಯವಾಗಿ ದೈವಭಕ್ತರಾದ ಸತ್ಪುರುಷರು, ಮತ್ತು ಯಾವುದೋ ಮಹಾ ಪಾಪ ಮಾಡಿದ್ದು ಅದರಿಂದ ತಮಗೆ ವಿಮೋಚನೆ ದೊರೆಯುವುದೆಂದು ನಂಬಿದ್ದವರು—ನೆರೆದಿದ್ದರು. ಗಂಡಂದಿರು ತಮ್ಮ ಬಂಜೆ ಹೆಂಡಿರನ್ನು ಕರೆತಂದಿದ್ದರು; ತಾಯಿಯರು ಕಾಯಿ ಲೆಯ ಮಕ್ಕಳನ್ನು ಎತ್ತಿಕೊಂಡು ಬಂದಿದ್ದರು; ಊರೆಗಳ ಮೇಲೆ ಅವಲಂಬಿಸಿ ಮುದುಕರು ಕುಂಟಿಕೊಂಡು ಬಂದಿದ್ದರು; ಕುಷ್ಠರೋಗಿಗಳು ದೂರದಲ್ಲಿ ಕುಳಿತು ಗೋರಿಯ ಬಳಿಯ ಗುಂಡು ಗೋಪುರವನ್ನು ಆಶಾದೃಷ್ಟಿಯಿಂದ ನೋಡುತ್ತಿದ್ದರು.

ಆರಾಧನೆ ಬಹಳ ಹೊತ್ತಿನ ವರೆಗೂ ಪ್ರಾರಂಭವಾಗಲಿಲ್ಲ. ಅವಿಾರ ನಿಗಾಗಿ ಕಾದಿದ್ದರು. ಜನವೆಲ್ಲ ಸುಡುಬಿಸಲಿನಲ್ಲಿ ಒತ್ತೊತ್ತಾಗಿ ಒತ್ತಿಕೊಂಡು ನಿಂತೇ ಇದ್ದರು; ಕೂರಲು ಯಾರಿಗೂ ಧೈರ್ಯವಿಲ್ಲ. ಅವರ ಕಣ್ಣುಗಳು ಆಶಾಜ್ಯೋತಿಯಿಂದ ಉರಿಯುತ್ತಿದ್ದವು. ಈ ಲೋಕದ ಸುಖದಲ್ಲಿ ನಿರಾಶೆ ಹೊಂದಿ, ಈ ದಿನ ಒಂದು ಪವಾಡ ನಡೆಯುವುದೆಂದು ನಂಬಿ ಕಾದು ನೋಡು ತ್ತಿದ್ದರು; ಗಟ್ಟಿಯಾಗಿ ಆಡಿದ ಒಂದೊಂದು ಮಾತಿಗೂ ಬೆಚ್ಚಿಬೀಳುತ್ತಿದ್ದರು. ಏನೋ ಅದ್ಭುತ ಜರುಗುವುದೆಂದು ಕಾದು ಕಾದು ಜನರ ಮನಸ್ಸು ಉತ್ಕಟ ಸ್ಥಿತಿಗೆ ಬಂದಿತ್ತು. ಆಗಲೇ ಇಬ್ಬರು ದರವೇಶಿಗಳು ಆವೇಶಹೊಂದಿ ಅದುರು ವಾಯು ಬಂದವರಂತೆ ಕೈಕಾಲು ಬಡಿಯುತ್ತ, ನೆಲ ಕಚ್ಚಿ ನೊರೆಗರೆಯುತ್ತಿದ್ದರು.

ಜನಸಂದಣಿ ಮುಲುಮುಲುಗುಟ್ಟುತ್ತಿತ್ತು ; ಆ ನೂಕುನುಗ್ಗಾಟದಲ್ಲಿ ಹೆಂಗಸರು ಕಿರಿಚಿ ಅಳುತ್ತಿದ್ದರು. ಇದ್ದಕ್ಕಿದ್ದಂತೆ ಸಾವಿರಾರು ಕಂಠಗಳಿಂದ ತಗ್ಗುದನಿಯ ಗರ್ಜನೆ ಹೊರಹೊಮ್ಮಿತು :

"ಅಮೀರರು ! ಅಮೀರರು !"

ಅರಮನೆಯ ಕಾಪುದಳದವರು ತಮ್ಮ ಕೈಯ ದೊಣ್ಣೆಗಳನ್ನು ಸುತ್ತ ತಿರುಗಿಸುತ್ತ ಗುಂಪಿನ ನಡುವೆ ದೊಡ್ಡದಾಗಿ ದಾರಿಬಿಡಿಸಿದರು. ಈ ದಾರಿಯಲ್ಲಿ ಅಮೀರನು ಬರಿಗಾಲಿನಿಂದ ನಡೆದು ಬರುತ್ತಿದ್ದನು ; ಭಕ್ತಿಯಿಂದ ಧ್ಯಾನಾಸಕ್ತನಾಗಿ ತಲೆಬಗ್ಗಿಸಿಕೊಂಡು ಭೂಮಿಯ ಮೇಲಿನ ಯಾವ ಸದ್ದುಗದ್ದಲವನ್ನೂ ಕಿವಿಗೆ ಹಾಕಿಕೊಳ್ಳದೆ ಯಾತ್ರೆ ಬರುತ್ತಿದ್ದನು. ಅವನನ್ನೇ ಹಿಂಬಾಲಿಸಿ ಪರಿವಾರದವರು ಮೌನವಾಗಿ ನಡೆದರು. ಸೇವಕರು ರತ್ನಗಂಬಳಿಗಳನ್ನು ಉರುಳಿಸುತ್ತಲೂ ಅವನ್ನು ಮುಂದಕ್ಕೆ ಸಾಗಿಸುತ್ತಲೂ ಹಿಂದೆ ಮುಂದೆ ಓಡಾಡುತ್ತಿದ್ದರು.

ಮನಮುಟ್ಟುವ ಈ ದೃಶ್ಯವನ್ನು ಕಂಡು ಎಷ್ಟೋ ಮಂದಿಯ ಕಣ್ಣುಗಳಲ್ಲಿ ನೀರು ತುಂಬಿತು.

ಅಮೀರನು ಗೋರಿಯ ಬುಡದಲ್ಲಿನ ಮರದ ದಿಣ್ಣೆಯ ಮೇಲೆ ಹತ್ತಿದನು. ಅವನ ಮುಂದೆ ಪ್ರಾರ್ಥನೆಯ ಕಂಬಳಿಯೊಂದನ್ನು ಹಾಸಿತ್ತು. ಎರಡು ಕಡೆಯೂ ಇಬ್ಬರು ವಜೀರರು ಹಿಡಿದುಕೊಂಡು ಆಸರೆಗೊಡುತ್ತಿರಲು ಅವನು ಆ ಕಂಬಳಿಯ ಮೇಲೆ ಮಂಡಿಯೂರಿದನು. ಬಿಳಿಯುಡುಪು ಧರಿಸಿದ ಮುಲ್ಲಾಗಳು ಅರ್ಧವರ್ತುಲಾಕಾರದಲ್ಲಿ ನಿಂತು, ಬಿಸಿಲ ಝಳದಿಂದ ಮಂಜು ಮುಸುಕಿದಂತೆ ಕಾಣುತ್ತಿದ್ದ ಆಕಾಶಕ್ಕೆ ತೋಳೆತ್ತಿಕೊಂಡು ಮಂತ್ರ ಪಠಿಸತೊಡಗಿದರು.

ಆರಾಧನೆ ಕೊನೆಯೇ ಇಲ್ಲದಂತೆ ನಡೆಯುತ್ತಿತ್ತು. ನಡುನಡುವೆ ಉಪದೇಶಭಾಷಣಗಳಾಗುತ್ತಿದ್ದವು. ಖೋಜಾ ನಸ್ರೆದ್ದೀನ್ ಯಾರಿಗೂ ಕಾಣದಂತೆ ಮೆಲ್ಲಗೆ ಗುಂಪಿನಿಂದ ನುಣುಚಿಕೊಂಡು ಪ್ರತ್ಯೇಕವಾಗಿದ್ದ ಒಂದು ಸಣ್ಣ ಗುಡಿಸಲ ಬಳಿಗೆ ಹೋದನು. ಅಲ್ಲಿ ಆ ದಿನ ವಿಮೋಚನೆ ದೊರೆಯುವುದೆಂದು ಭರವಸೆಯಾಗಿದ್ದ ಕುರುಡರೂ ಕುಂಟರೂ ಹಾಸಿಗೆಹತ್ತಿದ್ದವರೂ ತಮ್ಮ ತಮ್ಮ ಸರದಿ ಬರುವುದನ್ನೇ ಕಾಯುತ್ತಿದ್ದರು.

ಗುಡಿಸಲಿನ ಬಾಗಿಲನ್ನು ಹಾರುಹೊಡೆದಿತ್ತು. ಕುತೂಹಲಶಾಲಿಗಳು ಒಳಕ್ಕಿಣಿಕಿ ತಮ್ಮತಮ್ಮಲ್ಲೆ ಮಾತಾಡಿಕೊಳ್ಳುತ್ತಿದ್ದರು. ಅಲ್ಲಿ ಕಾರ್ಯನಿರತ ರಾಗಿದ್ದ ಮುಲ್ಲಾಗಳು ಕಾಣಿಕೆಗಾಗಿ ದೊಡ್ಡ ದೊಡ್ಡ ತಾಮ್ರದ ತಟ್ಟೆಗಳನ್ನು ಹಿಡಿದು ನಿಂತಿದ್ದರು. ಹಿರಿಯ ಮುಲ್ಲಾ ಹೇಳುತ್ತಿದ್ದನು :

"....ಅವತ್ತಿನಿಂದ ಪರಮಪವಿತ್ರನಾದ ಷೇಕ್ ಬಹಾ ಎದ್-ದೀನನ ಅನುಗ್ರಹ ಆಶೀರ್ವಾದಗಳು ಪವಿತ್ರ ಬುಖಾರದ ಮೇಲೂ ಅದರ ಸೂರ್ಯಸದೃಶ ಅಮೀರರ ಮೇಲೂ ನಿರಂತರವಾಗಿ ನಿರ್ವಿಕಾರವಾಗಿ ನೆಲಸಿವೆ. ಪ್ರತಿ ವರ್ಷವೂ ಈ ದಿವಸ ಪವಿತ್ರನಾದ ಬಹಾ ಎದ್-ದೀನನು, ಭಗವಂತನ ನಮ್ರಸೇವಕರಾದ ನಮಗೆ ಪವಾಡಗಳನ್ನು ನಡಸುವ ಸಾಮರ್ಥ್ಯವನ್ನು ದಯಪಾಲಿಸುತ್ತಾನೆ. ಈ ಕುರುಡರು, ಈ ಹೆಳವರು, ಈ ಪಿಶಾಚಿ ಹಿಡಿದವರು, ಹಾಸಿಗೆಹತ್ತಿದವರು —ಎಲ್ಲರೂ ವಿಮೋಚನೆಗಾಗಿ ಕಾದಿದ್ದಾರೆ. ಪವಿತ್ರ ಬಹಾ ಎದ್-ದೀನನ ದಯದಿಂದ, ಇವರೆಲ್ಲರನ್ನೂ ಅವರವರ ಸಂಕಟಗಳಿಂದ ಬಿಡಿಸಿ ಪಾರುಮಾಡು ತ್ತೇವೆಂಬ ಭರವಸೆ ನಮಗಿದೆ."

ಈ ಮಾತುಗಳಿಗೆ ಉತ್ತರವಾಗಿಯೋ ಎಂಬಂತೆ ಗುಡಿಸಲಿನಿಂದ ಗೋಳಾಟ, ಕಿರಿಚಾಟ ಮತ್ತು ಹಲ್ಲುಕಡಿತಗಳ ಸದ್ದು ಹೊಮ್ಮಿ ಬಂತು. ಮುಲ್ಲನು ದನಿಯನ್ನೇರಿಸಿ ಮತ್ತೆ ಮುಂದುವರಿಸಿದನು :

" ಉದಾರವಾಗಿ ನೀಡಿರಿ, ಓ, ನಿಜವಾದ ಭಕ್ತರೇ! ಮಸೀದಿಗಳ ಅಲಂಕಾರಕ್ಕೆ ಉದಾರವಾಗಿ ದಾನಮಾಡಿ. ನಿಮ್ಮ ದಾನಗಳನ್ನು ಅಲ್ಲಾ ಅಂಗೀಕರಿಸುತ್ತಾನೆ! "

ಖೋಜಾ ನಸ್ರೆದ್ದೀನ್ ಗುಡಿಸಲಿನೊಳಗೆ ಇಣಿಕಿ ನೋಡಿದನು. ಸಿಡು ಬಿನ ಕಲೆಯು ಕೊಬ್ಬಿದ ಮುಖದ ಸೇವಕನು ಕೈಮಂಚದ ಮೇಲೆ ಬಾಗಿಲ ಹತ್ತಿರವೇ ಮಲಗಿದ್ದನು. ಅವನಿಂದ ಆಚೆ ಕಡೆ ಮಬ್ಬಿನಲ್ಲಿ ಜನರ ಗುಂಪಿಗೆ ಗುಂಪೇ ಕಂಡುಬಂತು ; ಊರೆಗಳನ್ನೊರಗಿಕೊಂಡೋ, ಬಟ್ಟೆಯ ಪಟ್ಟಿಗಳನ್ನು ಕಟ್ಟಿಕೊಂಡೋ ಕೈಮಂಚಗಳ ಮೇಲೆ ಮಲಗಿಕೊಂಡೋ ಹಲವರು ಕಾದಿದ್ದರು. ಇದ್ದಕ್ಕಿದ್ದ ಹಾಗೆಯೇ ಗೋರಿಯ ಕಡೆಯಿಂದ ಆಗ ತಾನೆ ತನ್ನ ಉಪದೇಶ ಭಾಷಣವನ್ನು ಮುಗಿಸಿದ್ದ ಪ್ರಧಾನ ಮುಲ್ಲನ ಕರೆ ಬಂತು :

" ಕುರುಡನನ್ನು ಕರೆಯಿರಿ! ಆ ಕುರುಡನನ್ನು ನನ್ನ ಬಳಿ ಕರೆತನ್ನಿ! "

ಖೋಜಾ ನಸ್ರೆದ್ದೀನನನ್ನು ದಾರಿಯಿಂದ ಅತ್ತ ಕಡೆ ಒತ್ತರಿಸಿ ನೂಕಿ ಮುಲ್ಲಾಗಳು ಗುಡಿಸಿಲಿನೊಳಕ್ಕೆ ನುಗ್ಗಿದರು. ಗಾಳಿಯಾಡದೆ ಕತ್ತಲೆ ತುಂಬಿದ್ದ ಒಳಭಾಗಕ್ಕೆ ಹೋಗಿ ಅಲ್ಲಿಂದ ಭಿಕ್ಷುಕರ ಚಿಂದಿ ತೊಟ್ಟಿದ್ದ ಒಬ್ಬ ಕುರುಡನನ್ನು ಹೊರಕ್ಕೆ ಕರೆದುಕೊಂಡು ಬಂದರು. ಅವನು ಕೈನೀಡಿ ಮುಂದೆ ತಡವರಿಸಿ ತಡವರಿಸಿ ಎಡವುತ್ತಾ ಹೋಗುತ್ತಿದ್ದನು.

ಅವನು ಪ್ರಧಾನ ಮುಲ್ಲನ ಬಳಿ ಹೋಗಿ, ಅವನೆದುರಿಗೆ ಮುಖವಡಿಯಾಗಿ ಮಲಗಿ ಅಡ್ಡಬಿದ್ದು ಗೋರಿಯ ಮೆಟ್ಟಲಿಗೆ ಮುತ್ತಿಟ್ಟನು. ಪ್ರಧಾನ ಮುಲ್ಲ ಅವನ ತಲೆಯ ಮೇಲೆ ಕೈಯಿಟ್ಟನು—ಆ ಕ್ಷಣವೇ ಅವನಿಗೆ ವಾಸಿಯಾಯಿತು.

"ನಾನು ನೋಡಬಲ್ಲೆ! ನೋಡಬಲ್ಲೆ!" ಎಂದು ಅವನು ಕೂಗಿದನು; ಏರು ಕಂಠದ ನಡುಗುದನಿಯಿಂದ ಅವನು ಕೂಗಿದನು. "ಓ, ಪರಮಪವಿತ್ರ ಬಹಾ ಎದ್-ದೀನ್! ನನಗೆ ಕಣ್ಣು ಕಾಣುತ್ತದೆ! ಕಾಣುತ್ತದೆ! ಓ! ಎಂಥ ಮಹಾ ಅದ್ಭುತ ಪವಾಡವಿದು!" ಎಂದು ಗಟ್ಟಿಯಾಗಿ ಕೂಗಿದನು.

ಭಕ್ತರ ಗುಂಪೆಲ್ಲ ಅವನ ಸುತ್ತ ಒತ್ತಿ ಬಂತು. ಹಲವರು ಅವನ ಬಳಿ ಬಂದು ಕೇಳಿದರು:

"ಹೇಳು, ನಾನು ಯಾವ ಕೈ ಎತ್ತಿದ್ದೇನೆ—ಬಲವೋ, ಎಡವೋ?"

ಅವನು ಸರಿಯಾಗಿ ಉತ್ತರ ಕೊಟ್ಟನು. ಅವನಿಗೆ ನಿಜವಾಗಿಯೂ ಕಣ್ಣು ಬಂದಿದೆಯೆಂದು ಎಲ್ಲರಿಗೂ ದೃಢವಾಯಿತು. ಆಗ ಮುಲ್ಲಾಗಳ ದಂಡಿಗೆ ದಂಡೇ ಗುಂಪಿನೊಳಕ್ಕೆ ನಡೆಯಿತು. ತಾಮ್ರದ ತಟ್ಟೆಗಳನ್ನು ಕೈಯಲ್ಲಿ ಹಿಡಿದು,

"ಓ, ನಿಜವಾದ ಭಕ್ತರೇ! ದೊಡ್ಡ ಪವಾಡವನ್ನು ನೀವು ಪ್ರತ್ಯಕ್ಷವಾಗಿ ಕಂಡಿದ್ದೀರಿ. ಮಸೀದಿಗಳ ಅಲಂಕಾರಕ್ಕಾಗಿ ಏನಾದರೂ ದಾನ ಮಾಡಿ" ಎಂದು ಕೇಳುತ್ತಿದ್ದರು.

ಅಮೀರನೇ ಮೊದಲು ಕಾಣಿಕೆ ಹಾಕಿದನು; ಒಂದು ಹಿಡಿ ಚಿನ್ನದ ನಾಣ್ಯಗಳನ್ನು ತಟ್ಟೆಗೆ ಸುರಿದನು. ಆ ಮೇಲೆ ವಜೀರರೂ ಅಧಿಕಾರಿಗಳೂ ತಲಾ ಒಂದೊಂದು ಚಿನ್ನದ ನಾಣ್ಯವನ್ನು ಹಾಕಿದರು. ಆ ಮೇಲೆ ಗುಂಪಿನ ಜನ ಬೆಳ್ಳಿ–ತಾಮ್ರದ ನಾಣ್ಯಗಳನ್ನು ಬಹು ಉದಾರವಾಗಿ ಕೊಡಲು ಪ್ರಾರಂಭಿಸಿದರು. ತಟ್ಟೆಗಳು ಬೇಗ ಬೇಗ ತುಂಬುತ್ತಿದ್ದವು; ಮುಲ್ಲಾಗಳು ಮೂರು ಸಾರಿ

ಅವನ್ನು ಬದಲಾಯಿಸಬೇಕಾಗಿ ಬಂತು.

ಜನ ದಾನ ನೀಡುವ ವೇಗ ನಿದಾನವಾದಂತೆ ಕಂಡೊಡನೆಯೇ ಗುಡಿಸಿಲಿನಿಂದ ಕುಂಟನೊಬ್ಬನನ್ನು ಕರೆತಂದರು. ಗೋರಿಯ ಮೆಟ್ಟಿಲನ್ನು ಮುಟ್ಟುವುದೇ ತಡ ಅವನಿಗೂ ವಾಸಿಯಾಯಿತು; ತಕ್ಷಣವೇ ಅವನು ತನ್ನ ಊರೆಯನ್ನು ಅತ್ತ ಎಸೆದು ಕುಣಿಯತೊಡಗಿದನು—ಕಾಲುಗಳನ್ನು ಮೇಲಕ್ಕೆ ಎತ್ತೆತ್ತಿ ಕುಣಿಯತೊಡಗಿದನು. ಮತ್ತೆ ಮುಲ್ಲಾಗಳು ತಟ್ಟೆಗಳನ್ನು ತೆಗೆದುಕೊಂಡು ಜನಗಳ ಮಧ್ಯೆ ಹೋಗಿ ಗಟ್ಟಿಯಾಗಿ ಕೂಗುತ್ತಿದ್ದರು:

"ನೀಡಿರಿ! ಓ ನಿಜವಾದ ಭಕ್ತರೇ, ನೀಡಿರಿ!"

ಬಿಳಿಯ ಗಡ್ಡದ ಒಬ್ಬ ಮುಲ್ಲಾ ಖೋಜಾ ನಸ್ರೆದ್ದೀನನ ಬಳಿ ಬಂದನು. ಆಗ ನಸ್ರೆದ್ದೀನ್ ಗುಡಿಸಿಲಿನ ಗೋಡೆಯ ಮೇಲೆ ನೋಟವನ್ನು ನೆಟ್ಟು ಯಾವುದೋ ಯೋಚನೆಯಲ್ಲಿ ಮುಳುಗಿದ್ದನು. ಆ ಮುಲ್ಲಾ ಎಂದನು:

"ಓ, ಸತ್ಯಶ್ರದ್ಧಾಳುವೇ! ನೀನೊಂದು ಮಹಾ ಅದ್ಭುತವನ್ನು ನೋಡಿದ್ದೀಯೆ. ದಾನಮಾಡು; ನಿನ್ನ ದಾನವನ್ನು ಅಲ್ಲಾ ಅಂಗೀಕರಿಸುತ್ತಾನೆ!"

ಖೋಜಾ ನಸ್ರೆದ್ದೀನ್ ಗಟ್ಟಿಯಾಗಿ, ಅಲ್ಲಿ ಸುತ್ತಮುತ್ತ ಇದ್ದವರೆಲ್ಲ ಕೇಳುವಂತೆ, ಉತ್ತರ ಕೊಟ್ಟನು:

"ನೀನು ಇದೊಂದು ಅದ್ಭುತವೆಂದು, ಪವಾಡವೆಂದು ಕರೆಯುತ್ತೀಯೆ. ಹಾಗೆ ಕರೆದು ದಾನ ಬೇಡುತ್ತೀಯೆ! ಮೊದಲನೆಯದಾಗಿ, ನನ್ನ ಹತ್ತಿರ ಹಣವಿಲ್ಲ. ಎರಡನೆಯದಾಗಿ, ಓ! ಮುಲ್ಲಾ, ನಿನಗೆ ಗೊತ್ತಿದೆಯೇ, ನಾನು ಒಬ್ಬ ಸಂತನೆಂದು? ಮತ್ತು ಇದಕ್ಕೂ ಹೆಚ್ಚಿನ ಪವಾಡಗಳನ್ನು ಮಾಡಬಲ್ಲೆನೆಂದು?"

"ನೀನೊಬ್ಬ ದೈವನಿಂದಕ! ಪಾಖಂಡಿ!" ಎಂದು ಗಟ್ಟಿಯಾಗಿ ಕೂಗಿದನು. ಆ ಮುಲ್ಲ ಬಹು ಕೋಪದಿಂದ: "ಓ, ಮುಸ್ಲಿಮರೇ! ಅವನ ಮಾತಿಗೆ ಕಿವಿಗೊಡಬೇಡಿ! ಅವನ ಬಾಯಿಂದ ಪಿಶಾಚಿ ಮಾತಾಡುತ್ತಿದೆ!"

ಖೋಜಾ ನಸ್ರೆದ್ದೀನ್ ಗುಂಪಿನ ಕಡೆ ತಿರುಗಿದನು.

"ನಾನು ಪವಾಡಗಳನ್ನು ಮಾಡಬಲ್ಲೆನೆಂದು ಮುಲ್ಲಾ ನಂಬುವುದಿಲ್ಲ. ನಾನು ಹೇಳಿದ್ದಕ್ಕೆ ತಕ್ಕ ಪ್ರಮಾಣವನ್ನು ಕೊಡುತ್ತೇನೆ. ಈ ಗುಡಿಸಿಲಿನಲ್ಲಿ ಕುರುಡರೂ ಕುಂಟರೂ ಕಾಯಿಲೆಯವರೂ ಹಾಸಿಗೆಹತ್ತಿದವರೂ ಎಲ್ಲಾ ನೆರೆ

ದಿರುವವರಷ್ಟೆ. ಇವರನ್ನೆಲ್ಲಾ ತಕ್ಷಣ, ಒಂದೇ ಸಾರಿ, ಕೈಯಿಂದ ಮುಟ್ಟುವುದು ಕೂಡ ಇಲ್ಲದೆ ಗುಣಪಡಿಸಿಬಿಡುತ್ತೇನೆ ನಾನು ಒಂದೆರಡು ಮಾತುಗಳನ್ನು ಮಾತ್ರ ಆಡುತ್ತೇನೆ; ಅಷ್ಟಕ್ಕೇ ಅವರಿಗೆ ವಾಸಿಯಾಗುತ್ತದೆ. ಅವರು ಎದ್ದು ಎಲ್ಲ ಕಡೆಗೂ ಚೆದರಿ ಹೋಗುತ್ತಾರೆ; ಓಡಿ ಓಡಿ ಹೋಗುತ್ತಾರೆ. ಅತ್ಯಂತ ವೇಗಶಾಲಿಯಾದ ಅರಬ್ಬಿ ಕುದುರೆ ಕೂಡ ಓಡಿಹೋಗಿ ಅವರನ್ನು ಹಿಡಿಯ ಲಾರದೆಂಬಷ್ಟು ವೇಗವಾಗಿ ಓಡಿಹೋಗುತ್ತಾರೆ" ಎಂದನು.

ಗುಡಿಸಿಲಿನ ಗೋಡೆ ತೆಳ್ಳಗಿತ್ತು; ಎಷ್ಟೋ ಕಡೆ ಬಿರುಕು ಬಿಟ್ಟಿತ್ತು. ಗೋಡೆಯಲ್ಲಿ ಒಂದೇ ಕಡೆ ಹಲವು ಬಿರುಕುಗಳಿದ್ದ ಒಂದು ಸ್ಥಳವನ್ನು ನೋಡಿ ಕೊಂಡು ಖೋಜಾ ನಸ್ರೆದ್ದೀನ್ ಅಲ್ಲಿ ಹೋಗಿ ಹೆಗಲಿನಿಂದ ಮೆಲ್ಲಗೆ ಒತ್ತಿದನು. ಮಣ್ಣು ಉದುರಿತು. ಒಳಗೆ ಸ್ವಲ್ಪ ಮರ್ಮರ ಶಬ್ದವಾಯಿತು; ಸ್ವಲ್ಪವೇ ಸ್ವಲ್ಪ, ಆದರೆ ಅಪಾಯಸೂಚಕವಾದ ಸದ್ದಾಯಿತು. ಇನ್ನೂ ಸ್ವಲ್ಪ ಬಲವಾಗಿ ಒತ್ತಿದನು. ಕೂಡಲೆ ಗೋಡೆಯ ಒಂದು ಭಾಗ ಒಳಕ್ಕೆ ಬಾಗಿ ಧೊಪ್ಪನೆ ಕೆಳಕ್ಕೆ ಬಿದ್ದುಬಿಟ್ಟಿತು. ಬಾಯಿ ತೆರೆದ ಆ ಕಂಡಿಯಿಂದ ದಟ್ಟವಾಗಿ ದೂಳೆದ್ದಿತು.

"ಭೂಕಂಪ! ಓಡಿ! ಓಡಿ!" ಎಂದು ಖೋಜಾ ನಸ್ರೆದ್ದೀನ್ ವಿಕಾರ ವಾಗಿ ಕಿರಿಚಿಕೊಂಡನು; ಕಿರಿಚುತ್ತಲೆ ಗೋಡೆಯ ಮತ್ತೊಂದು ಭಾಗವನ್ನು ಒಳಕ್ಕೆ ನೂಕಿದನು.

ಒಂದು ಕ್ಷಣದ ವರೆಗೆ ಗುಡಿಸಿಲಿನೊಳಗೆ ಎಲ್ಲ ಶಾಂತವಾಗಿತ್ತು. ಆ ಮೇಲೆ ಭಾರಿ ಬೊಬ್ಬೆ ಪ್ರಾರಂಭವಾಯಿತು. ಲಕ್ವ ಹೊಡೆದಿದ್ದ ಸಿಡುಬಿನ ಕಲೆಯ ಸೇವಕನೇ ಮೊಟ್ಟಮೊದಲು ಬಾಗಿಲ ಕಡೆಗೆ ನೆಗೆದು ನುಗ್ಗಿದನು. ಆದರೆ ಅವನ ಕೈಮಂಚ ಬಾಗಿಲಿನಲ್ಲಿ ಸಿಕ್ಕಿಹಾಕಿಕೊಂಡು ಉಳಿದವರ ದಾರಿಯನ್ನು ಕಟ್ಟಿತು. ಕುರುಡರು, ಕುಂಟರು, ಹಾಸಿಗೆಹತ್ತಿದವರು—ಎಲ್ಲರೂ ಕೂಗಿ ಕಿರಿಚಿ ಬೊಬ್ಬೆ ಹಾಕುತ್ತಾ ಒಬ್ಬರನ್ನೊಬ್ಬರು ತಳ್ಳಿಹಾಕತೊಡಗಿದರು. ಖೋಜಾ ನಸ್ರೆದ್ದೀನ್ ಗೋಡೆಯಲ್ಲಿ ಮೂರನೆಯ ತುಂಡೊಂದನ್ನು ಕೆಡವಿದಾಗ ಅವರೆಲ್ಲ ಒಟ್ಟು ಗೂಡಿ ನುಗ್ಗಿಬಂದು ಸಿಡುಬಿನ ಕಲೆಯ ಮನುಷ್ಯ, ಅವನ ಕೈಮಂಚ, ಬಾಗಿಲು, ಬಾಗಿಲು ನಿಲುವು—ಎಲ್ಲವನ್ನು ಹೊರಕ್ಕೆ ನೂಕಿ ದಾರಿಮಾಡಿಕೊಂಡು, ತಮ್ಮ ತಮ್ಮ ರೋಗಗಳನ್ನು ಮರೆತು ದಿಕ್ಕಾಪಾಲಾಗಿ ಓಟಕಿತ್ತರು.

ಗುಂಪು ಸಿಳ್ಳುಹೊಡೆದು, ಅಟ್ಟಹಾಸ ಮಾಡಿ ಗೊಳ್ಳೆಂದು ನಕ್ಕು ಚಿತ್ರ

ವಿಚಿತ್ರವಾಗಿ ಬೊಬ್ಬೆಯೆಬ್ಬಿಸಿ ಗೇಲಿಮಾಡತೊಡಗಿತು. ಆ ಗದ್ದಲದಲ್ಲೂ ಖೋಜಾ ನಸ್ರೆದ್ದೀನ್ ಜನಕ್ಕೆಲ್ಲ ಕೇಳುವಂತೆ ಹೀಗೆ ಹೇಳಿದನು :

"ನೋಡಿದಿರಾ, ಮುಸ್ಲಿಮರೆ! ನಾನಾಡಿದ್ದು ನಿಜವಾಯಿತು! ಒಂದೆರಡೇ ಮಾತುಗಳಿಂದ ಇವರನ್ನೆಲ್ಲಾ ಗುಣಪಡಿಸಬಹುದೆಂದ ನನ್ನ ಮಾತು ಸರಿ!"

ಉಪದೇಶ ಭಾಷಣದಲ್ಲಿ ಯಾವ ಸ್ವಾರಸ್ಯವನ್ನೂ ಕಾಣದೆ ಜನರೆಲ್ಲ ನಾನಾ ಕಡೆಗಳಿಂದಲೂ ಇತ್ತ ಕಡೆಗೇ ಓಡಿಬಂದರು. ನಡೆದ ಸಂಗತಿಯನ್ನು ಕೇಳಿ ನಗುವಿನ ಬೊಬ್ಬೆ ಗೆಬ್ಬಿಸಿದರು. ಈ ಕಥೆ ಒಬ್ಬರಿಂದೊಬ್ಬರಿಗೆ ಹರಡಿತು. ಆರಾಧನೆಗೆಂದು ಬಂದಿದ್ದ ಯಾತ್ರಿಕರಿಗೆಲ್ಲ ಗುಡಿಸಿಲಿನ ಬಳಿ ನಡೆದ ಘಟನೆ ತಿಳಿಯುವುದಕ್ಕೆ ಕ್ಷಣ ಹೊತ್ತೂ ಹಿಡಿಯಲಿಲ್ಲ. ಪ್ರಧಾನ ಮುಲ್ಲನು ಗದ್ದಲ ನಿಲ್ಲಿಸುವಂತೆ ಹೇಳಲು ಕೈಯೆತ್ತಿದಾಗ, ಗುಂಪಿನ ಜನ ಅದಕ್ಕೆ ಗಮನವನ್ನೆ ಕೊಡಲಿಲ್ಲ; ಸುಮ್ಮನಾಗುವ ಬದಲು ಗಟ್ಟಿಯಾಗಿ ಅಬ್ಬರಿಸಿದರು, ಸಿಳ್ಳು ಹೊಡೆದರು; ಬೈದರು.

ಚಿರಸ್ಮರಣೀಯವಾದ ಆ ದಿನ ಮಾರುಕಟ್ಟೆಯಲ್ಲಿ ನಡೆದಂತೆಯೇ ಜನವೆಲ್ಲ ಉತ್ಸಾಹದಿಂದ ಗಜಬಜಿಸಿ, ಅಬ್ಬರಿಸಿ ಮೊಳಗಿತು :

"ಖೋಜಾ ನಸ್ರೆದ್ದೀನ್! ಅವನು ಮತ್ತೆ ಬಂದಿದ್ದಾನೆ! ಇಲ್ಲಿ ಬಂದಿದ್ದಾನೆ! ನಮ್ಮ ಖೋಜಾ ನಸ್ರೆದ್ದೀನ್ ಬಂದಿದ್ದಾನೆ!"

ಅಪಹಾಸ್ಯಗಳನ್ನೂ ಅಣಕದ ಅಬ್ಬರಗಳನ್ನೂ ತಡೆಯಲಾರದೆ ಮುಲ್ಲಾಗಳು ತಾಮ್ರದ ತಟ್ಟೆಗಳನ್ನು ಎತ್ತಿಹಾಕಿ, ಬೇಗ ಬೇಗ ಗುಂಪಿನಿಂದ ಆಚೆ ನುಸುಳಿಕೊಂಡು ಹೋದರು. ಇಷ್ಟು ಹೊತ್ತಿಗೆ ಖೋಜಾ ನಸ್ರೆದ್ದೀನ್ ಬಹು ದೂರ ಹೋಗಿದ್ದನು. ಅವನು ತನ್ನ ಬಣ್ಣದ ರುಮಾಲನ್ನೂ ಕೃತಕ ಗಡ್ಡವನ್ನೂ ಖಲತ್ತಿನೊಳಗೆ ಮುಚ್ಚಿಟ್ಟುಕೊಂಡನು. ಈಗ ಯಾವ ಗೂಢಚಾರನಿಗೂ ಅವನು ಹೆದರಬೇಕಾಗಿರಲಿಲ್ಲ. ಅವರಿಗೆಲ್ಲ ಗೋರಿಯ ಬಳಿ ಬೇಕಾದಷ್ಟು ಕೆಲಸವಿತ್ತು.

ಆದರೆ ಒಂದು ಸಂಗತಿ ಮಾತ್ರ ಅವನ ಅರಿವಿಗೆ ಬರಲಿಲ್ಲ. ದುಬಾರಿ ಬಡ್ಡಿಗಾರ ಜಾಫರನು ತನ್ನನ್ನು ಹಿಂಬಾಲಿಸಿ ಬರುತ್ತಿದ್ದದ್ದು ಅವನಿಗೆ ತಿಳಿಯಲಿಲ್ಲ. ಜಾಫರ್ ಮನೆಗಳ ಮೂಲೆಗಳಲ್ಲಿಯೂ ರಸ್ತೆಯ ಮರಗಳ ಹಿಂದೆಯೂ ಅಡಗಿಕೊಂಡು ಅವನನ್ನು ಅನುಸರಿಸಿ ಬರುತ್ತಿದ್ದನು.

ಜನರಹಿತವಾಗಿದ್ದ ಒಂದು ಓಣಿಯಲ್ಲಿ ಖೋಜಾ ನಸ್ರೆದ್ದೀನ್ ಗೋಡೆಯ ಹತ್ತಿರ ಹೋಗಿ, ಕೈಯಿಟ್ಟು ಮೇಲೆ ಹಾರಿ ಮೆತ್ತಗೆ ಕೆಮ್ಮಿದನು. ಕೂಡಲೆ ಒಳಗೆ ಹಗುರವಾದ ಹೆಜ್ಜೆಸದ್ದು ಕೇಳಿಸಿತು ; ಹೆಂಗಸಿನ ದನಿ ಕೇಳಬಂತು :

" ಓ, ನೀನೇ, ನನ್ನ ನಲ್ಲ ? "

ಮರದ ಹಿಂದೆ ಅವಿತುಕೊಂಡಿದ್ದ ಜಾಫರನಿಗೆ ಆ ದನಿ ಚೆಲುವೆ ಗುಲ್ಜಾನಿನದೆಂದು ಗುರುತಿಸುವುದು ಕಷ್ಟವಾಗಲಿಲ್ಲ. ಆ ಮೇಲೆ ಪಿಸುಮಾತು ಅಡಗಿಸಿದ ನಗು ಮತ್ತು ಮುತ್ತಿಟ್ಟ ಸದ್ದು ಕೇಳಿಸಿತು.

" ಹೀಗೋ, ಅವಳನ್ನು ನನ್ನಿಂದ ಕಿತ್ತುಕೊಂಡೆ ; ನಿನಗೋಸ್ಕರವೇ ಕಿತ್ತುಕೊಂಡೆ ! " ಎಂದು ಯೋಚಿಸಿ, ದುಬಾರಿ ಬಡ್ಡಿಗಾರನು ಮಾತ್ಸರ್ಯ ದಿಂದ ಕುದಿಯತೊಡಗಿದನು.

ಗುಲ್ಜಾನಿಗೆ ಹೇಳಿ ಹೊರಟ ಮೇಲೆ ಖೋಜಾ ನಸ್ರೆದ್ದೀನ್ ಬಹಳ ವೇಗವಾಗಿ ನಡೆದನು. ದುಬಾರಿ ಬಡ್ಡಿಗಾರನಿಗೆ ಅವನನ್ನು ಹಿಂಬಾಲಿಸುವುದು ಅಸಾಧ್ಯವಾಯಿತು. ಕಡೆಗೆ ಕಿರಿಯಗಲದ ಸಂದುಗೊಂದುಗಳ ಬಲೆಯಲ್ಲಿ ಅವನು ಕಣ್ಮರೆಯಾದನು.

ದುಬಾರಿ ಬಡ್ಡಿಗಾರ ಜಾಫರನಿಗೆ ದೊಡ್ಡ ಸೋಲಾಯಿತು ; ಅಸಮಾಧಾನದಿಂದ ಹೀಗೆ ಯೋಚಿಸಿದನು : " ಈಗ ಅವನನ್ನು ಹಿಡಿದು ಕೊಟ್ಟ ಬಹುಮಾನ ನನಗೆ ಸಿಕ್ಕುವ ಹಾಗಿಲ್ಲ. ಆದರೇನಂತೆ ! ಇರಲಿ, ಖೋಜಾ ನಸ್ರೆದ್ದೀನ್, ಜ್ಞಾಪಕವಿರಲಿ ! ಇನ್ನು ನಾನು ಸೇಡು ತೀರಿಸಿಕೊಂಡೇ ತೀರುತ್ತೇನೆ ! "

೩

ಅಮೀರನ ಭಂಡಾರಕ್ಕೆ ವಿಪರೀತ ನಷ್ಟವಾಗಿತ್ತು. ಪವಿತ್ರ ಬಹಾ ಎದ್-ದೀನನ ಗೋರಿಯ ಬಳಿ ಹಿಂದಿನ ವರ್ಷಗಳಲ್ಲಿ ವಾಡಿಕೆಯಾಗಿ ಶೇಖರವಾಗುತ್ತಿದ್ದದ್ದರ ಹತ್ತನೆಯ ಒಂದು ಭಾಗಕ್ಕಿಂತಲೂ ಕಡಮೆ ಹಣ ಕೂಡಿತ್ತು. ಇದಕ್ಕಿಂತ ಕೇಡೆಂದರೆ ಜನರ ಮನಸ್ಸಿನಲ್ಲಿ ಧೈರ್ಯವಾಗಿ ಸ್ವತಂತ್ರವಾಗಿ ವಿಚಾರಮಾಡುವ ಸಾಹಸದ ಬೀಜವನ್ನು ಮತ್ತೆ ಬಿತ್ತಲಾಗಿತ್ತು. ಗೋರಿಯ ಹತ್ತಿರ ನಡೆದ ಸಂಗತಿಯ ಸುದ್ದಿ ನಾಡಿನ ಮೂಲೆ ಮೂಲೆಗೂ ಹರಡಿತ್ತೆಂದೂ

ಆಗಲೇ ಅದರ ಫಲವೂ ಕಾಣಿಸುತ್ತಿತ್ತೆಂದೂ ಗೂಢಚಾರರು ವರದಿ ಮಾಡಿದರು. ಮೂರು ಹಳ್ಳಿಗಳಲ್ಲಿ ಹಳ್ಳಿಗರು ಮಸೀದಿಯ ಕಟ್ಟಡವನ್ನು ಕಟ್ಟಿ ಮುಗಿಸುವುದಿಲ್ಲವೆಂದು ತಿರಸ್ಕರಿಸಿದ್ದರು; ನಾಲ್ಕನೆಯದರಲ್ಲಿ ತಮ್ಮ ಮುಲ್ಲನನ್ನು ಜನ ತೀರ ಅವಮಾನಮಾಡಿ ಓಡಿಸಿಬಿಟ್ಟಿದ್ದರು.

ದಿವಾನನ್ನು ಎಂದರೆ ರಾಜ್ಯಸಭೆಯನ್ನು ಕೂಡಿಸಬೇಕೆಂದು ಮುಖ್ಯ ವಜೀರ ಬಖ್ತಿಯಾರನಿಗೆ ಅಮೀರ ಅಪ್ಪಣೆಮಾಡಿದನು. ಅರಮನೆಯ ಉದ್ಯಾನದಲ್ಲಿ 'ದಿವಾನ್' ನೆರೆಯಿತು. ಅದೊಂದು ಅದ್ಭುತ ಉದ್ಯಾನ; ಪ್ರಪಂಚದ ಅತ್ಯಂತ ಸುಂದರವಾದ ಉದ್ಯಾನಗಳಲ್ಲಿ ಅದೂ ಒಂದು. ಬಹು ಶೋಭಾಯಮಾನವಾದ ಮರಗಳಲ್ಲಿ ಅಪರೂಪವಾದ ಹಣ್ಣುಗಳು ಮಾಗಿ ನಿಂತಿದ್ದವು: ಅನೇಕ ಬಗೆಯ ಆಪ್ರಿಕಾಟ್‌ಗಳು, ಪ್ಲಮ್‌ಗಳು, ಅಂಜೂರಗಳು, ಕಿತ್ತಳೆಗಳು ಮತ್ತು ಇತರ ಅನೇಕ ಜಾತಿಯ ಹಣ್ಣುಗಳು. ಅವುಗಳ ಹೆಸರನ್ನೆಲ್ಲಾ ಹೇಳುವುದು ಶಕ್ಯವಲ್ಲ. ಗುಲಾಬಿಗಳು, ವಯೊಲೆಟ್‌ಗಳು, ಸ್ಟಾಕ್‌ಗಳು, ಲ್ಯಾವೆಂಡರುಗಳು ಮತ್ತು ಆನಿಮೋನಿಗಳು—ಇವೇ ಮೊದಲಾದ ಹೂವುಗಳು ಗೊಂಚಲುಗೊಂಚಲಾಗಿ ಅರಳಿ ಗಾಳಿಗೆ ದಿವ್ಯ ಪರಿಮಳವನ್ನೆರೆಯುತ್ತಿದ್ದವು. ಚಿಲುಮೆಗಳು ಚಿಮ್ಮುತ್ತಿದ್ದವು; ಅಮೃತಶಿಲೆಯ ತೊಟ್ಟಿಗಳಲ್ಲಿ 'ಗೋಲ್ಡ್-ಫಿಷ್'ಗಳು* ಓಡಾಡುತ್ತಿದ್ದವು ಎಲ್ಲ ಕಡೆಯೂ ಬೆಳ್ಳಿಯ ಪಂಜರಗಳಲ್ಲಿ ಬಗೆಬಗೆಯ ವಿಚಿತ್ರ ಪಕ್ಷಿಗಳು ಚಿಲಪಿಲಿಗುಟ್ಟಿ, ಸಿಳ್ಳುಹೊಡೆದು, ಹಾಡಿ ಆನಂದದ ಅಲೆಯೆಬ್ಬಿಸುತ್ತಿದ್ದವು.

ಆದರೆ ವಜೀರರು, ಅಧಿಕಾರಿಗಳು, ಜ್ಞಾನಿಗಳು—ಎಲ್ಲರೂ ಸುತ್ತಲೂ ಹರಡಿದ್ದ ಈ ಅದ್ಭುತ ಸೌಂದರ್ಯಕ್ಕೆ ಕುರುಡರೂ ಕಿವುಡರೂ ಆಗಿ ಉದಾಸೀನದಿಂದ ನಡೆಯುತ್ತಿದ್ದರು. ಏಕೆಂದರೆ ಅವರ ಮನಸ್ಸೆಲ್ಲ ತಮ್ಮ ಸ್ವಂತ ಸುಖ ಸಾಧನೆ, ತಮ್ಮ ಶತ್ರುಗಳ ಏಟನ್ನು ತಪ್ಪಿಸಿಕೊಳ್ಳುವುದು, ಅದಕ್ಕೆ ಪ್ರತಿಯಾಗಿ ತಾವು ಅವರಿಗೆ ಎದುರೇಟು ಹೊಡೆಯುವುದು—ಇವುಗಳ ಮೇಲೆಯೇ ಕೇಂದ್ರೀಕೃತವಾಗಿತ್ತು. ಹೀಗಾಗಿ ಅವರ ಸುಕ್ಕಿಹೋದ ಕಠಿನಹೃದಯದಲ್ಲಿ ಬೇರೆ ಯಾವ ಯೋಚನೆಗೂ ಸ್ಥಳವಿರಲಿಲ್ಲ. ಪ್ರಪಂಚದ ಹೂವುಗಳೆಲ್ಲ ಇದ್ದಕ್ಕಿದ್ದಂತೆ

*ಒಂದು ಜಾತಿಯ ಅಲಂಕಾರದ ಮೀನು.

ಬತ್ತಿ ಬಾಡಿಹೋಗಿದ್ದರೆ, ಅಥವಾ ಈ ಸೃಷ್ಟಿಯಲ್ಲಿರುವ ಹಕ್ಕಿಗಳೆಲ್ಲ ಹಾಡುವುದನ್ನು ತಟಕ್ಕನೆ ನಿಲ್ಲಿಸಿಬಿಟ್ಟದ್ದರೆ, ಅದನ್ನು ಅವರು ಗಮನಿಸುತ್ತಲೇ ಇರಲಿಲ್ಲ. ತಮ್ಮ ಸ್ವಂತ ಮಹತ್ವಾಕಾಂಕ್ಷೆಗಳು ಮತ್ತು ದುರಾಸೆಯ ಸಂಚುಗಳಲ್ಲಿ ಅಷ್ಟುಮಟ್ಟಿಗೆ ಮುಳುಗಿಹೋಗಿದ್ದರು.

ಅವರೆಲ್ಲ ಕಾಂತಿಹೀನವಾದ ಕಣ್ಣುಗಳಿಂದ ಕೂಡಿ, ರಕ್ತಹೀನವಾದ ತುಟಿಗಳನ್ನು ಗಂಟಿಕ್ಕಿಕೊಂಡು, ತಾವು ಮೆಟ್ಟಿರುವ ತೊಗಲು ಸ್ಲಿಪ್ಪರುಗಳನ್ನು ಮರಳು ಹರಡಿಪ ದಾರಿಗಳ ಮೇಲೆ ಎಳೆದೆಳೆದು ಕಾಲಿಡುತ್ತ ಬಂದು ಸುಗಂಧ ಬೀರುವ ಬಸಿಲ್ ಎಲೆಗಳಿಂದ ತುಂಬಿದ ಚೇಸಗೆ ಮನೆಗೆ ಪ್ರವೇಶಿಸಿದರು. ಇಲ್ಲಿ ವೈಡೂರ್ಯ ರತ್ನವನ್ನು ಕೆತ್ತಿದ ತಮ್ಮ ಊರುಗೋಲುಗಳನ್ನು ಗೋಡೆಗೆ ಒರಗಿಸಿ ರೇಷ್ಮೆಯ ಸುಪ್ಪತ್ತಿಗೆಗಳ ಮೇಲೆ ಕುಳಿತುಕೊಂಡರು. ಬಹು ಭಾರಿಯ ಬಿಳಿಯ ರುಮಾಲುಗಳನ್ನು ಹೊತ್ತ ತಲೆಗಳನ್ನು ಬಾಗಿಸಿಕೊಂಡು ತಮ್ಮ ಪ್ರಭು ಬರುವುದನ್ನೆ ಮೌನವಾಗಿ ಕಾಯುತ್ತಿದ್ದರು.

ಅವನು ಮಂಕು ಕವಿಸುವ ನಿರುತ್ಸಾಹದ ಯೋಚನೆಗಳನ್ನು ಹೊತ್ತು ಹುಬ್ಬು ಮುದುಡಿಕೊಂಡು ಭಾರವಾಗಿ ಹೆಜ್ಜೆಯಿಡುತ್ತಾ ಸಭೆಯನ್ನು ಪ್ರವೇಶಿಸಿದಾಗ ಎಲ್ಲರೂ ಎದ್ದು ನೆಲವನ್ನು ಮುಟ್ಟಿಬಿಡುತ್ತಾರೇನೋ ಎಂಬಷ್ಟು ಕೆಳಕ್ಕೆ ಬಗ್ಗಿ, ಅವನು ಸನ್ನೆಮಾಡುವ ವರೆಗೂ ಹಾಗೆ ಬಗ್ಗಿಯೇ ಇದ್ದರು. ಆ ಮೇಲೆ ಸಂಪ್ರದಾಯ ಪ್ರಕಾರವಾಗಿ ಅವರು ಮಂಡಿಯೂರಿ ಮತ್ತೆ ಕುಕ್ಕುರಗಾಲಿನಲ್ಲಿ ಕುಳಿತು ಬೆರಳುಗಳಿಂದ ನೆಲ ಮುಟ್ಟಿದರು. ಇವತ್ತು ಅಮೀರನ ಕೋಪ ಯಾರ ತಲೆಯ ಮೇಲೆ ಬೀಳುವುದೋ, ಅದರಿಂದ ತಮಗೆ ಏನು ಪ್ರಯೋಜನ ದೊರೆಯಬಹುದೋ ಎಂದು ಪ್ರತಿಯೊಬ್ಬರೂ ಊಹಿಸುತ್ತಿದ್ದರು.

ಆಸ್ಥಾನ ಕವಿಗಳು ಎಂದಿನ ರೂಢಿಯಂತೆ ಅಮೀರನ ಹಿಂದುಗಡೆ ಅರ್ಧ ವರ್ತುಳಾಕಾರದಲ್ಲಿ ನೆಲಸಿ, ಗಂಟಲು ಸರಿಮಾಡಿಕೊಳ್ಳಲು ಮೆತ್ತಗೆ ಕೆಮ್ಮುತ್ತಿದ್ದರು.

ಆ ಕವಿಗಳಲ್ಲೆಲ್ಲ ಹೆಚ್ಚು ಸಮರ್ಥನಾದಾತನಿಗೆ 'ಕವಿರಾಜ' ಎಂಬ ಬಿರುದಿತ್ತು. ಅವನು ಅವತ್ತು ಬೆಳಗ್ಗೆ ತಾನೆ ತಾನು ರಚಿಸಿದ್ದ ಪದ್ಯಗಳನ್ನು ಮನಸ್ಸಿನಲ್ಲೇ ತಿರುವಿಹಾಕುತ್ತಿದ್ದನು; ಆ ಪದ್ಯಗಳನ್ನು ಅಮೀರನ ಮುಂದೆ, ತಟಕ್ಕನೆ ಬಂದ ದಿವ್ಯಕವಿತಾವೇಶದಿಂದ ಆಗತಾನೆ ಹೇಳುತ್ತಿರುವಂತೆ ತೋರಿಸಿ

ಕೊಳ್ಳಬೇಕೆಂದು ಅವನೆಣಿಕೆ!

ಆಸ್ಥಾನದ ಮಕ್ಷಿಕನಿವಾರಕನೂ ಅಮೀರನ ನಾಳವಾಹಕನೂ ತಮ್ಮ ತಮ್ಮ ಸ್ಥಾನಗಳಲ್ಲಿ ನೆಲಸಿದರು.

"ಬುಖಾರದಲ್ಲಿ ಆಳುವವರು ಯಾರು?" ಎಂದು ಅಮೀರನು ತಗ್ಗಿದ ದನಿಯಲ್ಲಿ ಪ್ರಾರಂಭಿಸಿದನು. ಈ ಪ್ರಶ್ನೆ ನೆರೆದ ಸಭಿಕರೆಲ್ಲ ನಡುಗುವಂತೆ ಮಾಡಿತು. "ಬುಖಾರದಲ್ಲಿ ಆಳುತ್ತಿರುವವರು ಯಾರು?—ಎಂದು ಕೇಳುತ್ತೇವೆ. ನಾವೋ! ಇಲ್ಲ ಈ ಹಾಳು ನೀಚ ಪಾಪಿ ಖೋಜಾ ನಸ್ರೆದ್ದೀನನೋ?" ಈ ಮಾತಾಡುವಾಗ ಅವನಿಗೆ ಉಸಿರೇ ಕಟ್ಟಿಹೋಗುವಂತಾಯಿತು. ಆ ಮೇಲೆ ಹೇಗೋ ಕಷ್ಟಪಟ್ಟು ರೋಷವನ್ನು ತಡೆದುಕೊಂಡು, ಭಯಂಕರ ಮುಖ ಮುದ್ರೆಯಿಂದ, "ಅಮೀರರು ಕೇಳುತ್ತಿದ್ದಾರೆ! ಹೇಳಿ! ಮಾತಾಡಿ!" ಎಂದು ಮುಗಿಸಿದನು.

ನೊಣ ಓಡಿಸುವ ಕುದುರೆಜವಿಯ ಚಾಮರ ಅವನ ತಲೆಯ ಮೇಲೆ ಆಡಿತು. ಆಸ್ಥಾನಿಕರು ಮೌನವಾಗಿದ್ದರು; ಭಯಭೀತರಾಗಿದ್ದರು. ವಜೀರರು ಒಳಗೊಳಗೇ ಒಬ್ಬರನ್ನೊಬ್ಬರು ಮೊಳಕೈಯಿಂದ ತಿವಿದರು.

"ಅವನು ದೇಶದಾದ್ಯಂತದಲ್ಲೂ ಅನಾಹುತ ಮಾಡಿಬಿಟ್ಟಿದ್ದಾನೆ" ಎಂದು ಅಮೀರ ಮತ್ತೆ ಮಾತು ಮುಂದುವರಿಸಿದನು. "ನಮ್ಮ ರಾಜಧಾನಿಯಲ್ಲಿ ಮೂರು ಸಲ ಶಾಂತಿಯನ್ನು ಕಲಕಿದ್ದಾನೆ; ನಮಗೆ ನಿದ್ದೆ ವಿಶ್ರಾಂತಿಗಳಿಲ್ಲದಂತೆ ಮಾಡಿದ್ದಾನೆ; ನಮ್ಮ ಭಂಡಾರಕ್ಕೆ ನ್ಯಾಯವಾಗಿ ಬರಬೇಕಾದ ಆದಾಯ ಬರದಂತೆ ಮಾಡಿದ್ದಾನೆ. ಇಷ್ಟೇ ಅಲ್ಲ. ನಮ್ಮನ್ನು ಪ್ರತಿಭಟಿಸಿ ನಮ್ಮ ಮೇಲೆ ದಂಗೆಯೇಳುವಂತೆ ಬಹಿರಂಗವಾಗಿ ಜನರನ್ನು ಎತ್ತಿಕಟ್ಟುತ್ತಿದ್ದಾನೆ. ಈ ಪಾಪಕರ್ಮಿಯನ್ನು ನಾವು ಏನು ಮಾಡಬೇಕು? ಅವನ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕು, ಹೇಳಿ. ನಿಮ್ಮನ್ನು ನಾವು ಕೇಳುತ್ತಿರುವುದು."

ವಜೀರರೂ ಅಧಿಕಾರಿಗಳೂ ಜ್ಞಾನಿಗಳೂ ಎಲ್ಲಾ ಒಟ್ಟಿಗೆ ಒಂದೇ ಉಸಿರಿನಲ್ಲಿ ಉತ್ತರ ಕೊಟ್ಟರು:

"ವಿಶ್ವಕೇಂದ್ರವೂ ಶಾಂತಿನಿಲಯನೂ ಆದ ಮಹಾಪ್ರಭುವೇ! ಅವನಿಗೆ ಅತ್ಯಂತ ಘೋರವಾದ ಶಿಕ್ಷೆ ವಿಧಿಸಬೇಕೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ!"

" ಹಾಗಾದರೆ, ಅವನಿನ್ನೂ ಏಕೆ ಬದುಕಿದ್ದಾನೆ ? " ಎಂದು ಕೇಳಿದನು ಅಮೀರ. " ಏನು, ನಾವೇ ಹೋಗಬೇಕೆ, ಅವನನ್ನು ಹಿಡಿಯುವುದಕ್ಕೆ ? ನಾವು, ನಿಮ್ಮ ಮಹಾಪ್ರಭು, ಯಾರ ಹೆಸರನ್ನು ಕೂಡ ನೀವು ಭಯಭಕ್ತಿಗಳಿಂದ ಉಚ್ಚರಿಸಬೇಕೋ, ಅದೂ ನೆಲದ ಮೇಲೆ ಅಡ್ಡಬಿದ್ದು ಉಚ್ಚರಿಸಬೇಕೋ, ಹಾಗೆ ಸಾಷ್ಟಾಂಗ ನಮಸ್ಕಾರ ಮಾಡಿಯಲ್ಲದೆ ಯಾರ ಹೆಸರನ್ನು ನೀವು ಉಚ್ಚರಿಸಲೂ ಆಗದೋ—ಆ ನಿಮ್ಮ ಕರ್ತವ್ಯವನ್ನು ಸೋಮಾರಿತನದಿಂದಲೂ ಉದ್ಧಟತನದಿಂದಲೂ ಉದಾಸೀನಭಾವದಿಂದಲೂ ನೀವು ಈಗ ಪಾಲಿಸುತ್ತಿಲ್ಲವೆಂದು ನಾವು ಹೇಳಲೇಬೇಕಾಗಿದೆ—ಆ ನಾವು ಅವನನ್ನು ಹಿಡಿಯುವುದಕ್ಕಾಗಿ ಸ್ವತಃ ಮಾರುಕಟ್ಟೆಗೆ ಹೋಗಬೇಕೆ ? ಹಾಗೆ ಆ ಕಾರ್ಯವನ್ನು ನಮ್ಮ ಮೇಲೊರಗಿಸಿ, ನೀವು ನಿಮ್ಮ ಅಂತಃಪುರಗಳಲ್ಲಿ ತಿಂದುಂಡು ಕುಡಿದು ಕುಣಿದು ಸುಖಲೋಲುಪ್ತಿಯಲ್ಲಿ ಮೈಮರೆತಿರಬೇಕೋ ? ಸಂಬಳದ ದಿನಗಳಲ್ಲಿ ಮಾತ್ರ ನಮ್ಮ ಬಗೆಗಿರುವ ನಿಮ್ಮ ಕರ್ತವ್ಯ ನೆನಪಾಗುತ್ತದೆಯಲ್ಲವೆ ! ಏನು ನಿನ್ನುತ್ತರ ಇದಕ್ಕೆ, ಬಖ್ತಿಯಾರ್ ? "

ಬಖ್ತಿಯಾರನ ಹೆಸರು ಕೇಳಿ ಉಳಿದವರು ತಮ್ಮ ತಲೆಯುಳಿಯಿತೆಂದು ಸಮಾಧಾನದ ಉಸಿರು ಬಿಟ್ಟರು. ಆರ್ಸ್ಲಾನ್-ಬೆಕ್‌ನ ತುಟಿಗಳ ಮೇಲೆ ಹೊಟ್ಟೆಕಿಚ್ಚಿನ ಮುಗುಳುನಗೆ ಮಿನುಗಿತು ; ಅವನಿಗೂ ಬಖ್ತಿಯಾರಿಗೂ ಬಹು ಕಾಲದಿಂದ ಜಗಳವಿತ್ತು. ಬಖ್ತಿಯಾರ್ ಹೊಟ್ಟೆಯ ಮೇಲೆ ಕೈಕಟ್ಟಿಕೊಂಡು ಅಮೀರನ ಮುಂದೆ ನೆಲ ಮುಟ್ಟುವಂತೆ ತಲೆ ಬಗ್ಗಿ ನಮಸ್ಕಾರ ಮಾಡಿದನು.

" ಅಲ್ಲಾ ನಮ್ಮ ಘನ ಅಮೀರರನ್ನು ರಕ್ಷಿಸಲಿ ! ಮಹಾ ವಿಪತ್ತುಗಳೂ ದುರದೃಷ್ಟಗಳೂ ಅವರಿಗೆ ತಟ್ಟದಂತೆ ಕಾಪಾಡಲಿ ! " ಎಂದು ಪ್ರಾರಂಭಿಸಿದನು. " ಈ ಅಲ್ಪ ಗುಲಾಮನ ನಿಷ್ಠೆಯೂ ಸೇವಾತತ್ಪರತೆಯೂ ಅಮೀರರ ಘನ ಸನ್ನಿಧಾನಕ್ಕೆ ಚೆನ್ನಾಗಿ ಗೊತ್ತೇ ಇದೆ. ಅಮೀರರ ಘನತೆಯ ಉಜ್ಜ್ವಲ ಪ್ರಭೆಯಲ್ಲಿ ತಮ್ಮ ಈ ಗುಲಾಮ ಕೇವಲ ಒಂದೇ ಒಂದು ಚುಕ್ಕೆಗೂ ಕಡೆ. ನನ್ನನ್ನು ಮುಖ್ಯ ವಜೀರನ ಪದವಿಗೆ ನೇಮಿಸುವ ಮೊದಲು ರಾಜ್ಯದ ಭಂಡಾರವು ಸದಾ ಬರಿದಾಗಿಯೇ ಇರುತ್ತಿತ್ತು. ಆದರೆ ನಾನು ಅನೇಕ ಹೊಸ ತೆರಿಗೆಗಳನ್ನು ವಿಧಿಸಿದೆ. ಯಾರಿಗಾದರೂ ಕೆಲಸ ಸಿಕ್ಕಿದರೆ ಆಗ ಅವರು ಉದ್ಯೋಗದ ತೆರಿಗೆ ಕೊಡಬೇಕೆಂದು ಗೊತ್ತುಮಾಡಿದೆ. ಯಾವಯಾವುದಕ್ಕೆ

ತೆರಿಗೆ ಹಾಕಬಹುದೋ ಅದಕ್ಕೆಲ್ಲಾ ತೆರಿಗೆ ಹಾಕಿದ್ದೇನೆ. ಎಷ್ಟು ಮಟ್ಟಿಗೆ ತೆರಿಗೆ ವಿಧಿಸಿದೆಯೆಂದರೆ, ಈಗ ಯಾರೊಬ್ಬರೂ ರಾಜಭಂಡಾರಕ್ಕೆ ತೆರಿಗೆ ಕೊಡದೆ ಸೀನುವುದಕ್ಕೂ ಅಪ್ಪಣೆಯಿಲ್ಲ.

"ಇದೂ ಅಲ್ಲದೆ, ಸರ್ಕಾರದ ಕೆಳ ಅಧಿಕಾರಿಗಳ ಮತ್ತು ಕಾವಲುದಳದ ವರ ಸಂಬಳವನ್ನು ಅರ್ಧಕ್ಕಿಳಿಸಿದ್ದೇನೆ. ಅವರ ಅನ್ನ ವಸತಿಗಳ ಹೊಣೆಯನ್ನು ಬುಖಾರ ಪಟ್ಟಣದ ನಿವಾಸಿಗಳ ಮೇಲೆ ಹೊರಿಸಿದ್ದೇನೆ ಹೀಗೆ, ಓ ಪ್ರಭೂ, ರಾಜಭಂಡಾರದ ಬಹು ಪಾಲಿನ ದ್ರವ್ಯವನ್ನು ಉಳಿಸಿದ್ದೇನೆ. ಆದರೆ ನಾನು ಸಲ್ಲಿಸಿರುವ ಎಲ್ಲ ಸೇವೆಗಳನ್ನೂ ಇನ್ನೂ ಹೇಳಿ ಮುಗಿಸಿಲ್ಲ: ನನ್ನ ಪ್ರಯತ್ನಗಳ ಫಲವಾಗಿ ಪರಮ ಪವಿತ್ರನಾದ ಬಹಾ ಎದ್-ದೀನನ ಗೋರಿಯಲ್ಲಿ ಪವಾಡಗಳು ಮತ್ತೆ ನಡೆಯತೊಡಗಿವೆ; ಈ ಪವಾಡಗಳು ಸಾವಿರಾರು ಯಾತ್ರಿಕರನ್ನು ಆಕರ್ಷಿಸುತ್ತಿವೆ. ಹೀಗೆ ನಮ್ಮ ಪ್ರಭುಗಳ—ಯಾರ ಮುಂದೆ ಈ ಪ್ರಪಂಚದ ಉಳಿದ ರಾಜರುಗಳು ಕೀಳು ಧೂಳ ಕಣಕ್ಕೆಣೆಯಾಗುವರೋ ಅಂಥ ನಮ್ಮ ಪರಮ ಪ್ರಭುಗಳ ಭಂಡಾರವು ವರ್ಷವರ್ಷವೂ ಕಾಣಿಕೆಯ ಹಣದಿಂದ ತುಂಬಿ ತುಳುಕುತ್ತಿದೆ; ರಾಜ್ಯದ ಆದಾಯ ಅನೇಕ ಮಡಿ ಹೆಚ್ಚಾಗಿದೆ...."

"ಎಲ್ಲಿದೆ, ಈ ಆದಾಯ?" ಎಂದು ಅಮೀರ ನಡುವೆ ಬಾಯಿಹಾಕಿದನು. "ಅದನ್ನೆಲ್ಲ ಆ ಖೋಜಾ ನಸ್ರೆದ್ದೀನ್ ನಮಗೆ ಸಿಕ್ಕದಂತೆ ಕಸಿದು ಕೊಂಡುಬಿಟ್ಟಿದ್ದಾನೆ. ನೀನು ಸಲ್ಲಿಸಿರುವ ಸೇವೆಗಳ ವಿಷಯವಾಗಿ ನಿನ್ನನ್ನು ನಾವು ಪ್ರಶ್ನಿಸುತ್ತಿಲ್ಲ; ಅವುಗಳನ್ನೆಲ್ಲಾ ಅನೇಕ ವೇಳೆ ಕೇಳಿದ್ದೇವೆ. ಈಗ ಖೋಜಾ ನಸ್ರೆದ್ದೀನನನ್ನು ಹಿಡಿಯುವುದು ಹೇಗೆಂಬುದನ್ನು ಹೇಳು."

ಬಖ್ತಿಯಾರ್ ಉತ್ತರ ಕೊಟ್ಟನು: "ಮಹಾಸ್ವಾಮಿ! ಮುಖ್ಯ ವಜೀರನ ಕರ್ತವ್ಯಗಳಲ್ಲಿ ಅಪರಾಧಿಗಳನ್ನು ಹಿಡಿಯುವುದು ಅಡಕವಾಗಿಲ್ಲ. ನಮ್ಮ ರಾಜ್ಯದಲ್ಲಿ ಇದು ಅರಮನೆಯ ರಕ್ಷಕ ದಳಕ್ಕೂ ಸೈನ್ಯಕ್ಕೂ ನಾಯಕನಾದ ಮಾನ್ಯ ಆರ್ಸ್‌ಲಾನ್-ಬೆಕ್‌ಗೆ ಸೇರಿದ್ದಾಗಿದೆ."

ಹೀಗೆ ಹೇಳಿ ಅವನು ಮತ್ತೊಮ್ಮೆ ಅಮೀರನೆದುರಿಗೆ ನೆಲಕ್ಕೆ ಬಗ್ಗಿ ನಮಸ್ಕಾರ ಮಾಡಿದನು. ನಮಸ್ಕಾರ ಮಾಡುವಾಗ, ಗೆಲುವಿನ ಮತ್ತು ದ್ವೇಷದ ಭಾವಗಳನ್ನು ಸೂಸುವ ದೃಷ್ಟಿಯನ್ನು ಆರ್ಸ್‌ಲಾನ್-ಬೆಕ್‌ನ ಮೇಲೆ ಹರಿಸಿದನು.

" ಹೇಳು ! " ಎಂದು ಅಪ್ಪಣೆ ಮಾಡಿದನು ಅಮೀರ.

ಆರ್ಸ್‌ಲಾನ್-ಬೆಕ್ ಬಖ್ತಿಯಾರನ ಮೇಲೆ ದ್ವೇಷಪೂರ್ಣವಾದ ಕ್ರೂರ ನೋಟವೊಂದನ್ನು ಬೀರಿ ಎದ್ದು ನಿಂತನು. ಅವನು ಬಲವಾಗಿ ಸಿಟ್ಟುಸಿರು ಬಿಟ್ಟನು. ಅವನ ಕಪ್ಪು ಗಡ್ಡ ಬೊಜ್ಜು ಹೊಟ್ಟೆಯ ಮೇಲೆ ಏರಿ ಇಳಿಯುತ್ತಿತ್ತು.

" ಮಹಾವಿಪತ್ತುಗಳೂ ದುರದೃಷ್ಟಗಳೂ ರೋಗಗಳೂ ದುಃಖವೂ ತಟ್ಟದಂತೆ ಸೂರ್ಯಸದೃಶನಾದ ನಮ್ಮ ಮಹಾಪ್ರಭುವನ್ನು ಅಲ್ಲಾ ಕಾಪಾಡಲಿ! ಅಮೀರರಿಗೆ ನನ್ನ ಸೇವೆ ಚೆನ್ನಾಗಿ ಅರಿವಾಗಿದೆ. ಖೀವದ ಖಾನನು ಬುಖಾರದ ಮೇಲೆ ಯುದ್ಧಕ್ಕೆ ಬಂದಾಗ, ಅಮೀರರು—ವಿಶ್ವದ ಕೇಂದ್ರವೂ ಭೂಮಿಯ ಮೇಲಿನ ಅಲ್ಲಾನ ನೆರಳೂ ಆದ ನಮ್ಮ ಅಮೀರರು—ಪರಮಾನುಗ್ರಹಮಾಡಿ ನಮ್ಮ ಬುಖಾರ ಸೈನ್ಯದ ಆಧಿಪತ್ಯವನ್ನು ನನಗೆ ದಯಪಾಲಿಸಿದರು. ರಕ್ತಪಾತವಿಲ್ಲದಂತೆ ಶತ್ರುವನ್ನೋಡಿಸಿ ನಾನು ಜಯಶಾಲಿಯಾದೆ; ಒಟ್ಟಿನಲ್ಲಿ ನಮಗೆ ಅನುಕೂಲವಾಯಿತು.

" ನಾನು ಮಾಡಿದ್ದೇನೆಂದರೆ: ಖೀವದ ಎಲ್ಲೆಯಿಂದ ನಮ್ಮ ದೇಶದ ಒಳಗಡೆ ಅನೇಕ ದಿನಗಳ ಪ್ರಯಾಣ ಹಿಡಿಯುವಷ್ಟು ದೂರದ ವರೆಗೂ ಎಲ್ಲ ಪಟ್ಟಣಗಳನ್ನೂ ಹಳ್ಳಿಗಳನ್ನೂ ನಾಶಮಾಡುವಂತೆ ಅಪ್ಪಣೆ ಮಾಡಿದೆನು; ಎಲ್ಲ ಪೈರುಗಳನ್ನೂ ತೋಟಗಳನ್ನೂ ಎಲ್ಲ ರಸ್ತೆ ಸೇತುವೆಗಳನ್ನೂ ಹಾಳು ಮಾಡುವಂತೆ ಆಜ್ಞೆಮಾಡಿದೆನು. ಖೀವದವರು ನಮ್ಮ ನಾಡಿಗೆ ನುಗ್ಗಿಬಂದಾಗ ತೋಟತುಡಿಕೆಗಳಿಲ್ಲದೆ ನಿರ್ಜೀವವಾದ ಬೀಳು ಭೂಮಿಯನ್ನು ಕಂಡು ತಮ್ಮ ತಮ್ಮಲ್ಲೇ ಹೀಗಂದುಕೊಂಡರು: ' ನಾವು ಬುಖಾರಕ್ಕೆ ಹೋಗುವುದೇ ಬೇಡ; ಏಕೆಂದರೆ ಅಲ್ಲಿ ಆಹಾರವಾಗಲಿ ಕೊಳ್ಳೆಯಾಗಲಿ ಸಿಕ್ಕುವುದೇ ಇಲ್ಲ.' ಹೀಗೆಂದು ಯೋಚಿಸಿ ಅವರು ಹಿಂದಿರುಗಿ ಹೊರಟುಹೋದರು; ವಂಚನೆಗೆ ಒಳಗಾಗಿ ಅಪಮಾನ ಹೊಂದಿ ಓಡಿಹೋದರು. ನಮ್ಮ ಸೈನ್ಯವೇ ನಮ್ಮ ನಾಡನ್ನು ಹಾಳುಗೆಡಹುವುದು ಎಷ್ಟು ವಿವೇಕವಾದ ಮತ್ತು ಉಪಯೋಗಕರವಾದ ಉಪಾಯವೆಂದು ನಮ್ಮ ಪರಮಪ್ರಭು ಅಮೀರರು ಅರಿತುಕೊಂಡರು; ಯಾವುದನ್ನೂ ಹಿಂದಿನ ಸ್ಥಿತಿಗೆ ತರಬಾರದೆಂದೂ, ಪಟ್ಟಣಗಳು, ಹಳ್ಳಿಗಳು, ಹೊಲಗದ್ದೆಗಳು, ರಸ್ತೆಗಳು ಎಲ್ಲವನ್ನೂ ಆ ಹಾಳು ಸ್ಥಿತಿಯಲ್ಲೆ ಬಿಟ್ಟರ

ಬೇಕೆಂದೂ, ಹಾಗೆ ಬಿಡುವುದರಿಂದ ಇನ್ನು ಮುಂದೆ ಅನ್ಯದೇಶದ ಜನರು ನಮ್ಮ ನೆಲದ ಮೇಲೆ ಕಾಲೂರಲು ಹೆದರುವರೆಂದೂ ಅಪ್ಪಣೆ ಕೊಡಿಸಿದರು. ಹೀಗೆ ನಾನು ಖೀವದವರನ್ನು ಸೋಲಿಸಿದೆ. ಇದರ ಜೊತೆಗೆ, ಬುಖಾರದಲ್ಲಿ ಅನೇಕ ಸಾವಿರ ಗೂಢಚಾರರನ್ನು ಸಿದ್ಧಪಡಿಸಿದೆ!—"

"ಬಿಗಿಹಿಡಿ, ನಾಲಗೆಯನ್ನು, ಹರಟೆಕೋರ! ಹಾಗಾದರೆ, ಅದೇಕೆ ನಿನ್ನ ಗೂಢಚಾರರು ಖೋಜಾ ನಸ್ರೆದ್ದೀನನನ್ನು ಹಿಡಿಯಲಿಲ್ಲ?" ಎಂದು ಕೇಳಿದನು ಅಮೀರ.

ಆರ್ಸ್‌ಲಾನ್-ಬೆಕ್ ಬಹಳ ಹೊತ್ತಿನ ವರೆಗೆ ತಬ್ಬಿಬ್ಬಿನಿಂದ ಮೌನ ವಹಿಸಿದ್ದನು. ಕೊನೆಗೆ ಅವನು ಒಪ್ಪಿಕೊಳ್ಳಬೇಕಾಯಿತು:

"ಓ, ಮಹಾಪ್ರಭೂ! ಎಲ್ಲಾ ಪ್ರಯತ್ನವನ್ನೂ ಮಾಡಿ ನೋಡಿದೆ. ಈ ಪಾಪಕರ್ಮಿ ನಾಸ್ತಿಕನ ವಿರುದ್ಧವಾಗಿ ಕಾರ್ಯ ನಡಸಲು ನನ್ನ ಬುದ್ಧಿ ಅಸಹಾಯವಾಗಿದೆ, ಮಹಾಸ್ವಾಮೀ. ಈ ವಿಷಯದಲ್ಲಿ ಜ್ಞಾನಿಗಳ ಸಲಹೆಯನ್ನು ಕೇಳಬೇಕೆಂದು ಭಾವಿಸುತ್ತೇನೆ, ನನ್ನೊಡೆಯಾ!"

ಅಮೀರನಿಗೆ ರೇಗಿಹೋಯಿತು; ಕೋಪದ ಕೆರಳಿನಲ್ಲಿ ನಾಳವಾಹಕನಿಗೆ ಬಲವಾಗಿ ಒಂದೇಟು ಬಿಗಿದನು; ಆ ದುರದೃಷ್ಟಶಾಲಿ ತಪ್ಪುಹೊತ್ತಿನಲ್ಲಿ ರಾಜ ಹಸ್ತದ ಬೀಸಿನೆಲ್ಲೆಯೊಳಗೆ ಬಂದಿದ್ದನು. ನಾಳವಾಹಕನಿಗೆ ಏಟು ಹೊಡೆದ ಅಮೀರನು ಜ್ಞಾನಿಗಳಲ್ಲೆಲ್ಲ ಹೆಚ್ಚು ವಯಸ್ಸಾದ ಹಿರಿಯ ಜ್ಞಾನಿಯ ಮುಖ ನೋಡಿದನು. ಆತ ಬಹು ಉದ್ದ ಗಡ್ಡಕ್ಕೆ ಪ್ರಸಿದ್ಧನಾಗಿದ್ದನು; ಅದನ್ನು ತನ್ನ ಸೊಂಟದ ಸುತ್ತ ಎರಡು ಸಲ ಸುತ್ತಿಕೊಳ್ಳುತ್ತಿದ್ದನಂತೆ. ಆ ಜ್ಞಾನಿಯನ್ನು ಕುರಿತು, "ಹೇಳು, ಹೇಳು" ಎಂದು ಕೇಳಿದನು.

ಜ್ಞಾನಿ ಎದ್ದು ನಿಂತು ಒಂದು ಪ್ರಾರ್ಥನೆ ಹೇಳಿದನು. ಆ ಮೇಲೆ ತನ್ನ ಪ್ರಸಿದ್ಧವಾದ ಗಡ್ಡವನ್ನು ಭಾಗಭಾಗವಾಗಿ ಸವರಿದನು; ಎಡಗೈ ಬೆರಳುಗಳ ನಡುವೆ ಹಿಡಿದುಕೊಂಡು ಬಲಗೈಯಲ್ಲಿ ಅದನ್ನು ಎಳೆದುಕೊಂಡು ತಿದ್ದಿ ತೀಡಿದನು.

"ಮಹಾರಾಜನ ಜಾಜ್ಜ್ವಲ್ಯಮಾನವಾದ ಆಯುರ್ದಿನಗಳನ್ನು ಪ್ರಜೆಗಳ ಸುಖಸಂತೋಷಗಳಿಗಾಗಿ ಅಲ್ಲಾ ಸುದೀರ್ಘವಾಗಿ ವರ್ಧಿಸಲಿ! ಮೇಲೆ ಹೇಳಿದ ದುಷ್ಟ ಅಪರಾಧಿ ದಂಗೆಕೋರ ಖೋಜಾ ನಸ್ರೆದ್ದೀನನು ಎಷ್ಟೇ ಆದರೂ

ಮಾನವನನೇ ಆದ್ದರಿಂದ, ಅವನ ಶರೀರವನ್ನು ಇತರ ಮಾನವಪ್ರಾಣಿಗಳ ಶರೀರ ದಂತೆಯೇ ನಿರ್ಮಿಸಲಾಗಿದೆಯೆಂದು ತೀರ್ಮಾನಿಸಬಹುದು ; ಎಂದರೆ, ಅದರಲ್ಲಿ ಇನ್ನೂರ ನಲವತ್ತು ಮೂಳೆಗಳೂ, ಮುನ್ನೂರ ಅರುವತ್ತು ಸ್ನಾಯುರಜ್ಜು ಗಳೂ ಇವೆಯೆಂದೂ, ಅವು ಶ್ವಾಸಕೋಶಗಳು, ಪಿತ್ತಕೋಶ, ಹೃದಯ, ಮೇದೋಜೀರಕ—ಇವನ್ನು ಅಧೀನದಲ್ಲಿಟ್ಟುಕೊಂಡು ಕಾರ್ಯಪ್ರವೃತ್ತ ಮಾಡುವುವೆಂದೂ ಆಯಿತು. ಆಧಾರಭೂತ ಸ್ನಾಯುರಜ್ಜು ಯಾವುದೆಂದರೆ, ಜ್ಞಾನಿಗಳು ತಿಳಿಸುವಂತೆ, ಹೃದಯದ ಬಂಧಕ ರಜ್ಜು ; ಅದರಿಂದ ಉಳಿ ದೆಲ್ಲವೂ ಹೊರಹರಿಯುತ್ತವೆ. ಇದು ಖಂಡಿಸಲಸಾಧ್ಯವಾದ ಪವಿತ್ರ ಸತ್ಯ ; ನಿರೀಶ್ವರವಾದಿಯಾದ ಅಬು-ಇಸ್ಹಕನ ಸಂಪ್ರದಾಯಬಾಹಿರ ಸಿದ್ಧಾಂತಕ್ಕೆ ಇದು ವಿರೋಧವಾದ್ದು ; ಆ ಅಬು-ಇಸ್ಹಕನು ಮಾನವನ ಜೀವದ ಮೂಲ ಶ್ವಾಸ ಕೋಶದ ಸ್ನಾಯುರಜ್ಜುವೆಂದು ಸುಳ್ಳುಸುಳ್ಳಾಗಿ ಪ್ರತಿಪಾದಿಸುತ್ತಾನೆ.

" ಅತ್ಯಂತ ಶ್ರೇಷ್ಠ ಜ್ಞಾನಿಯಾದ ಅವಿಸೆನ್ನ, ಗ್ರೀಕ್ ಪಂಡಿತ ಹಿಪ್ಪೊ ಕ್ರೆಟೀಸ್ ಮತ್ತು ಕಾರ್ಡೋಬದ ಅವೆರೋಸ್—ಇವರ ಗ್ರಂಥಗಳ ಪ್ರಕಾರ —ಈಗಲೂ ನಾವು ಇವರ ಆಲೋಚನೆಯ ಫಲವನ್ನವಲಂಬಿಸಿಯೇ ಬಾಳು ತ್ತಿದ್ದೇವೆ—ಮತ್ತು ಅಲ್-ಕಿಂಡಿ, ಅಲ್-ಫರಬಿ ಮತ್ತು ಫಕರ್ ಅರ್-ರಾಸಿ ಇವರ ಉಪದೇಶಗಳ ಪ್ರಕಾರ, ನಾನು ಹೇಳುವುದೇನೆಂದರೆ, ದೃಢನಿರ್ಧಾರ ದಿಂದ ಪ್ರತಿಪಾದಿಸುವುದೇನೆಂದರೆ—ಅಲ್ಲಾ ಆದಮನನ್ನು (ನೀರು, ಮಣ್ಣು, ಬೆಂಕಿ, ಗಾಳಿ) ಅಪ್ಪು, ಪೃಥ್ವಿ, ತೇಜಸ್ಸು, ವಾಯು—ಈ ನಾಲ್ಕು ಮೂಲ ಭೂತಗಳಿಂದ ಸೃಷ್ಟಿಸಿದನು ; ದೇಹದ್ರವ್ಯಗಳನ್ನು ಈ ರೀತಿ ವ್ಯವಸ್ಥೆಗೊಳಿಸಿ ದನು : ಹಳದಿಯ ಪಿತ್ತ ತೇಜಸ್ಸಿನ (ಬೆಂಕಿಯ) ಪ್ರಕೃತಿಯನ್ನು ಒಳ ಗೊಂಡಿದೆ ; ಇದನ್ನು ನಾವು ವಾಸ್ತವವಾಗಿ ಕಾಣಬಹುದು ; ಹೇಗೆಂದರೆ, ಇದು ಶಾಖವಾಗಿ ಶುಷ್ಕವಾಗಿದೆ. ಕಪ್ಪು ಪಿತ್ತ—ಪೃಥ್ವಿಯ (ಮಣ್ಣಿನ) ಪ್ರಕೃತಿ ಯನ್ನೊಳಕೊಂಡದ್ದು ; ಅದು ತಣ್ಣಗೆ ಶುಷ್ಕವಾಗಿದೆ. ಜೊಲ್ಲು—ಅಪ್ಪಿನ (ನೀರಿನ) ಪ್ರಕೃತಿಯುಳ್ಳದ್ದು, ಏಕೆಂದರೆ, ಅದು ತಣ್ಣಗೆ ಆರ್ದ್ರವಾಗಿದೆ. ಕಡೆಯದಾಗಿ ರಕ್ತ—ವಾಯುವಿನ (ಗಾಳಿಯ) ಪ್ರಕೃತಿಯನ್ನೊಳಗೊಂಡಿದೆ ; ಏಕೆಂದರೆ ಅದು ಶಾಖವಾಗಿ ಆರ್ದ್ರವಾಗಿದೆ. ಯಾವನಾದರೊಬ್ಬ ಮನುಷ್ಯನ ದೇಹದಿಂದ ಈ ದ್ರವಗಳನ್ನು ತೆಗೆದುಹಾಕಿದರೆ, ಅವನ ದೇಹದಲ್ಲಿ ಈ ದ್ರವ

ಗಳು ಇಲ್ಲದಂತೆ ಮಾಡಿದರೆ, ಆ ಮನುಷ್ಯನು ನಿಸ್ಸಂಶಯವಾಗಿ ಸಾಯುತ್ತಾನೆ. ಇದರಿಂದ ನಾನು ಗೊತ್ತುಮಾಡುವುದೇನೆಂದರೆ—ಓ, ಪ್ರಸಿದ್ಧನಾದ ಮಹಾ ಪ್ರಭುವೇ, ಅಧಾರ್ಮಿಕನಾದ ಈ ಶಾಂತಿಭಂಗಕಾರಿ ಖೋಜಾ ನಸ್ರೆದ್ದೀನನ ಮೈಯಲ್ಲಿ ರಕ್ತವಿಲ್ಲದಂತೆ ಮಾಡಿಬಿಡಬೇಕು. ಅದಕ್ಕೆ ಅವನ ತಲೆಯನ್ನು ದೇಹದಿಂದ ಪ್ರತ್ಯೇಕಿಸುವುದೇ ಪರಮೋತ್ತಮ ಮಾರ್ಗವೆಂದು ಹೇಳಬಹುದು; ಏಕೆಂದರೆ ಹೊರಕ್ಕೆ ಹರಿಯುವ ರಕ್ತದೊಡನೆಯೇ ಆ ಮನುಷ್ಯನ ಪ್ರಾಣವೂ ಆರಿಹೋಗಿಬಿಡುತ್ತದೆ; ಅದು ಮತ್ತೆ ಹಿಂದಿರುಗಿ ಬರುವುದಿಲ್ಲ. ಇದು ನನ್ನ ಸಲಹೆ, ಓ ಸುಪ್ರಸಿದ್ಧ ಪರಮಪ್ರಭೂ, ಲೋಕಾಶ್ರಯ ಮಹಾಸ್ವಾಮಿ!"

ಅಮೀರನು ಗಮನವಿಟ್ಟು ಅವನ ಹೇಳಿಕೆಯನ್ನಾಲಿಸಿದನು. ಅದರ ಮೇಲೆ ಅಮೀರನು ಏನೂ ವಿಮರ್ಶೆ ಮಾಡಲಿಲ್ಲ. ಕಂಡೂ ಕಾಣದಷ್ಟು ಸೂಕ್ಷ್ಮವಾಗಿ ಎರಡನೆಯ ಜ್ಞಾನಿಯ ಕಡೆ ಸನ್ನೆಮಾಡಿದನು. ಅವನ ಗಡ್ಡ ಮೊದಲನೆಯವನ ಗಡ್ಡಕ್ಕೆ ಎಂದಿಗೂ ಎಣೆಯಿಲ್ಲ; ಆದರೆ ಅವನ ರುಮಾಲು ಗಾತ್ರದಲ್ಲೂ ವೈಭವಾಡಂಬರದಲ್ಲೂ ಬಹಳ ದೊಡ್ಡದು. ರುಮಾಲಿನ ಭಾರ ಅನೇಕ ವರ್ಷಗಳ ಕಾಲಾನುಕ್ರಮದಲ್ಲಿ ಅವನ ಕುತ್ತಿಗೆಯನ್ನು ಪಕ್ಕಕ್ಕೆ ಓರೆಯಾಗಿ ಕೆಳಕ್ಕೆ ಬಗ್ಗಿಸಿಬಿಟ್ಟಿತ್ತು; ಇದರಿಂದ ಅವನು ಯಾವಾಗಲೂ ಸಣ್ಣದೊಂದು ಕಂಡಿಯೊಳಗಿನಿಂದ ಮೇಲ್ಮುಖವಾಗಿ ನೋಡುತ್ತಿರುವವನಂತೆ ಕಾಣುತ್ತಿದ್ದನು. ಅಮೀರನಿಗೆ ಬಗ್ಗಿ ನಮಸ್ಕಾರ ಮಾಡಿ ಅವನು ಹೀಗೆಂದನು:

"ತನ್ನ ಪ್ರಕಾಶದಿಂದ ಸೂರ್ಯನಿಗೆ ಸಮಾನನಾದ ಓ, ಮಹಾಪ್ರಭೂ! ಖೋಜಾ ನಸ್ರೆದ್ದೀನನನ್ನು ನಾಶಮಾಡಲು ಈ ಕ್ರಮವನ್ನನುಸರಿಸುವುದಕ್ಕೆ ನಾನೊಪ್ಪಲಾರೆ. ಏಕೆಂದರೆ, ಮನುಷ್ಯನ ಪ್ರಾಣಧಾರಣೆಗೆ ರಕ್ತ ಮಾತ್ರವೇ ಅಲ್ಲ. ಗಾಳಿ ಕೂಡ ಆವಶ್ಯಕವೆಂದು ಸರ್ವವಿದಿತವಾಗಿದೆ. ಮನುಷ್ಯನ ಕತ್ತನ್ನು ಹಗ್ಗದಿಂದ ಬಲವಾಗಿ ಒತ್ತಿ ಹಿಸುಕಿದರೆ, ಈ ಮೂಲಕ ಗಾಳಿ ಅವನ ಶ್ವಾಸಕೋಶಗಳಿಗೆ ಹೋಗದಂತೆ ಅಡ್ಡಿಪಡಿಸಿದರೆ, ಅವನು ಅನಿವಾರ್ಯವಾಗಿ ಸತ್ತೇ ಸಾಯುತ್ತಾನೆ, ಮತ್ತೆ ಚೇತನ ಹೊಂದುವುದಿಲ್ಲ—"

"ಹಾಗೋ!" ಎಂದನು ಅಮೀರ ಬಹು ಅಪಾಯಸೂಚಕವಾದ ಕೇವಲ ಸಣ್ಣ ದನಿಯಲ್ಲಿ. "ಜ್ಞಾನಿಗಳಲ್ಲೆಲ್ಲಾ ಪರಮಜ್ಞಾನಿಯೇ, ನೀನು ಹೇಳುವುದು ಪೂರ್ಣ ಸತ್ಯ. ನಿನ್ನ ಸಲಹೆ ನಮಗೆ ಬಹಳ ಅಮೂಲ್ಯವಾದದ್ದು

ಎಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ನೀನು ಇಂಥ ಅಮೂಲ್ಯವಾದ ಸಲಹೆ ಯನ್ನು ಕೊಡದೆ ಇದ್ದಿದ್ದರೆ, ಖೋಜಾ ನಸ್ರೆದ್ದೀನನನ್ನು ತೊಲಗಿಸಿಬಿಡುವು ದಕ್ಕೆ ನಮಗೆಲ್ಲಿ ಸಾಧ್ಯವಾಗುತ್ತಿತ್ತು ?"

ತನ್ನಲ್ಲಿ ತುಂಬಿಕೊಂಡಿದ್ದ ಕೋಪವನ್ನೂ ರೇಗನ್ನೂ ತಡೆದುಕೊಳ್ಳ ಲಾರದೆ ಅವನು ತಟ್ಟನೆ ಮಾತು ನಿಲ್ಲಿಸಿದನು. ಅವನ ಕೆನ್ನೆಗಳು ಕಂಪಿಸಿದವು, ಮೂಗಿನ ಹೊಳ್ಳೆಗಳು ಕೆಂಚಾದವು; ಕಣ್ಣುಗಳಲ್ಲಿ ಮಿಂಚುಗಳು ಥಳಥಳಿಸಿ ದವು. ಆದರೆ ಆಸ್ಥಾನದ ಹೊಗಳುಭಟ್ಟರು—ತಾತ್ತ್ವಿಕರು ಮತ್ತು ಕವಿಗಳು —ಅಮೀರನ ಬೆನ್ನ ಹಿಂದೆ ಅರ್ಧವರ್ತುಲಾಕಾರದಲ್ಲಿ ನೆಲಸಿದ್ದವರು ತಮ್ಮ ಪ್ರಭುವಿನ ಮುಖವನ್ನು ಕಾಣಲಾರದೆ ಹೋದರು; ಅದರಿಂದಲೇ ಅವನು ಜ್ಞಾನಿಗಳನ್ನು ಕುರಿತು ಆಡಿದ್ದ ಮಾತುಗಳಲ್ಲಿನ ವ್ಯಂಗ್ಯ ಕೋಪವನ್ನು ಅರಿಯಲು ಅಸಮರ್ಥರಾದರು. ಅಮೀರನ ಮಾತುಗಳಿಗೆ ಅವಕ್ಕೆ ಹೊರಗೆ ತೋರುವ ಅರ್ಥವನ್ನೇ ನಿಜವೆಂದು ಗ್ರಹಿಸಿ ಜ್ಞಾನಿಗಳು ತಮ್ಮ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದರೆಂದೂ ಅಮೀರನ ಅನುಗ್ರಹಕ್ಕೂ ಔದಾರ್ಯಕ್ಕೂ ಪಾತ್ರರಾದರೆಂದೂ ಅವರು ಭಾವಿಸಿದರು. ಹೀಗೆ ಭಾವಿಸಿ ತಾವು ಅವರ ಸದಭಿಪ್ರಾಯವನ್ನು ಸಂಪಾದಿಸುವುದಕ್ಕೆ ಇದೇ ಸುಸಂದರ್ಭವೆಂದು ನಿಶ್ಚಯಿಸಿ ದರು.

"ಓ, ಅತ್ಯಂತ ಜ್ಞಾನಿಗಳೇ! ನಮ್ಮ ಪ್ರಖ್ಯಾತ ಪರಮಪ್ರಭುವಿನ ಕಿರೀಟ ತಟದಲ್ಲಿ ರಂಜಿಸುತ್ತಿರುವ ಆಣಿಮುತ್ತುಗಳೇ! ಜ್ಞಾನದಲ್ಲಿ ಅಸದೃಶರಾದ ಜ್ಞಾನಿಗಳೇ! ಜ್ಞಾನವೇ ರೂಪುದಾಳಿದಂತಿರುವವರೇ! ಪರಮಜ್ಞಾನಿಗಳ ಜ್ಞಾನದಿಂದ ರಂಜಿಸುವ ಜ್ಞಾನಿಗಳೇ!"

ಮಾನ ನಯದಲ್ಲಿಯೂ ಉತ್ಸಾಹದಲ್ಲಿಯೂ ಒಬ್ಬರನ್ನೊಬ್ಬರು ಹುರುಡಿಸುತ್ತ ಅವರು ಹೀಗೆ ಪ್ರಶಂಸೆಯ ಮಳೆಗರೆಯುತ್ತಿದ್ದರು. ಅಮೀರನು ಹಿಂದಿರುಗಿ ರೇಗಿ ರೇಗಿಬೀಳುತ್ತ ತಮ್ಮ ಕಡೆ ನೋಡುತ್ತಿರುವನೆಂಬುದೂ ಅವರ ಅರಿವಿಗೆ ಬರಲಿಲ್ಲ. ಎಲ್ಲೆಡೆಯೂ ಭಯಂಕರ ಮೌನ ಆವರಿಸಿತ್ತು.

ಪರಮದೀನಭಾವದಿಂದ ಆನಂದಮಗ್ನರಾಗಿ ಕಣ್ಣು ಮುಚ್ಚಿಕೊಂಡು, "ಓ ವಿಜ್ಞಾನಜ್ಯೋತಿಗಳೇ! ಜ್ಞಾನಭಂಡಾರಗಳೇ!" ಎಂದು ಮುಂದುವರಿ ಸಿದರು.

ಇದ್ದಕ್ಕಿದ್ದಂತೆಯೇ ಕವಿರಾಜನಿಗೆ ಅಮೀರನ ಕಡೆಗಣ್ಣ ನೋಟ ಗೋಚರವಾಯಿತು. ಆ ನೋಟವನ್ನು ಕಂಡು, ತನ್ನ ಭಟ್ಟಂಗಿತನದ ನಾಲಗೆಯನ್ನೇ ಕಚ್ಚಿ ನುಂಗಿದವನಂತೆ ಬೆಚ್ಚಿಬಿದ್ದನು. ಅವನನ್ನು ಅನುಸರಿಸಿ ಉಳಿದವರೂ ತೆಪ್ಪಗಾದರು. ತಮ್ಮ ಉತ್ಸಾಹದಲ್ಲಿ ತಾವು ದೊಡ್ಡ ತಪ್ಪು ಮಾಡಿದ್ದದ್ದೂ ಅವರಿಗೆ ಅರಿವಾಯಿತು.

ಅಮೀರನು ರೇಗಿ ಅಬ್ಬರಿಸಿದನು : " ಅಯ್ಯೋ! ಠಕ್ಕರಾ! ಅಯ್ಯೋ ಗುಲಾಮರಾ! ಮನುಷ್ಯನೊಬ್ಬನ ತಲೆ ಕತ್ತರಿಸಿಹಾಕಿದರೆ, ಅಥವಾ ಅವನ ಕೊರಳಿಗೆ ಹಗ್ಗ ಹಾಕಿ ಬಿಗಿದು ಉಸಿರು ಕಟ್ಟಿಸಿದರೆ ಅವನು ಸತ್ತುಹೋಗುವನೆಂದೂ ಮತ್ತೆ ಬದುಕಿ ಬರಲಾರನೆಂದೂ ನಮಗೆ ಗೊತ್ತಿಲ್ಲವೆಂದು ತಿಳಿದಿರಾ? ಹೀಗೆ ಮಾಡಬೇಕಾದರೆ, ಮೊದಲು ಅವನನ್ನು ಹಿಡಿದು ತರಬೇಕಲ್ಲವೆ? ಅಯ್ಯೋ ಠಕ್ಕರಾ, ಸೋಮಾರಿಗಳಾ, ಕಳ್ಳರಾ, ಬೆಪ್ಪುತಕಡಿಗಳಾ, ಆ ವಿಚಾರವಾಗಿ, ಅವನನ್ನು ಹಿಡಿಯುವುದು ಹೇಗೆಂಬ ವಿಚಾರವಾಗಿ ನೀವು ಒಂದು ಮಾತೂ ಆಡಲಿಲ್ಲ! ಖೋಜಾ ನಸ್ರೆದ್ದೀನನನ್ನು ಕಂಡುಹಿಡಿಯುವ ವರೆಗೂ ಇಲ್ಲಿ ನೆರೆದಿರುವ ಎಲ್ಲ ವಜೀರರಿಗೂ ಅಧಿಕಾರಿಗಳಿಗೂ ಕವಿಗಳಿಗೂ ಸಂಬಳವನ್ನು ತಪ್ಪಿಸಲಾಗುತ್ತದೆ. ಅವನನ್ನು ಹಿಡಿಯುವವನಿಗೆ ಮೂರು ಸಾವಿರ ತಂಗಗಳ ಬಹುಮಾನ ಕೊಡಲಾಗುತ್ತದೆಯೆಂದು ಡಂಗೂರ ಹೊಡೆದು ಸಾರಿಸಿಬಿಡಿ! ಇಗೋ, ನಿಮಗೊಂದು ಎಚ್ಚರಿಕೆ ಕೊಡುತ್ತೇನೆ! ನಿಮ್ಮ ಸೋಮಾರಿತನ, ದಡ್ಡತನ, ಉದಾಸೀನತೆಗಳನ್ನು ಗಮನಕ್ಕೆ ತಂದುಕೊಂಡು ಬಾಗ್ದಾದಿನಿಂದ ಹೊಸ ಜ್ಞಾನಿಯೊಬ್ಬನನ್ನು ನಮ್ಮ ಆಸ್ಥಾನದ ಸೇವೆಗೆ ಕರಸಿಕೊಳ್ಳಲು ನಿರ್ಧರಿಸಿ ಕರೆಕಳಿಸಿದ್ದೇವೆ. ಅವನ ಹೆಸರು ಮೌಲಾನಾ ಹುಸೇನ್. ಅವನು ಇದುವರೆಗೂ ಬಾಗ್ದಾದಿನಲ್ಲಿ ಭಕ್ತನಾಯಕ ಕಲೀಫರ ಸೇವೆಯಲ್ಲಿದ್ದವನು. ಅವನು ಇಲ್ಲಿಗೆ ಪ್ರಯಾಣಹೊರಟಿದ್ದಾನೆ; ಬೇಗ ಬಂದು ತಲುಪುತ್ತಾನೆ. ಆಗ ನಿಮಗೆ ದುರ್ದಿನ, ಓ ದಿಂಬುಗಳನ್ನು ಹೊಗಳುವ ಭಟ್ಟಂಗಿಗಳಾ! ಕೂಳುದಂಡದ ಹೊಟ್ಟೆಬಾಕರಾ! ಅಡಿಯಿಲ್ಲದ ಜೋಬು ತುಂಬಿಕೊಳ್ಳುವ ಕಡುಲೋಭಿಗಳಾ!...." ಕೋಪ ಏರುತ್ತೇರುತ್ತಾ ಅವನು ಕಾವಲು ಸಿಪಾಯಿಗಳನ್ನು ಕೂಗಿ, " ಹೊರದೂಡಿ ಅವರನ್ನ! ಎಲ್ಲರನ್ನೂ ನೂಕಿ ಆಚೆಗೆ! ನೂಕಿ ಹೊರಕ್ಕೆ! " ಎಂದು ಅಬ್ಬರಿಸಿದನು.

ಬೆಕ್ಕಸಬೆರಗಾಗಿ ಮೂಕರಾದ ಆಸ್ಥಾನಿಕರ ಮೇಲೆ ಕಾವುದಳದ ಸಿಪಾಯಿಗಳು ನುಗ್ಗಿಬಂದರು. ಮುಖ ಮೋರೆ ನೋಡದೆ ಗೌರವಾಗೌರವಗಳನ್ನೆಣಿಸದೆ ಎಲ್ಲರನ್ನೂ ದರದರನೆ ಬಾಗಿಲ ಬಳಿಗೆ ಎಳೆದು ತಂದು ಹೊರಕ್ಕೆ ತಳ್ಳಿದರು; ಮೆಟ್ಟಿಲ ಮೇಲಿನಿಂದ ಉರುಳಿ ಬೀಳುವಂತೆ ನೂಕಿಬಿಟ್ಟರು. ಮೆಟ್ಟಿಲು ಸಾಲಿನ ಬುಡದಲ್ಲಿ ಬೇರೆ ಸಿಪಾಯಿಗಳು ಅವರನ್ನು ಹಿಡಿದುಕೊಂಡು ಹೊಡೆದು ಬಡಿದು, ಕಪಾಳಕ್ಕೆ ಬಿಗಿದು, ಗುದ್ದಿ, ಒದೆದು ದಾರಿಯತ್ತ ದಾಟಿಸಿದರು. ಆಸ್ಥಾನಿಕರು ಓಟಕಿತ್ತರು; ಒಬ್ಬರನ್ನೊಬ್ಬರು ಹಿಂಬಾಲಿಸಿ ದಾಟಿ ಮುಂದೆ ಸಾಗುವಂತೆ ಓಟಕಿತ್ತರು. ನರೆಗೂದಲಿನ ಜ್ಞಾನಿ ತನ್ನ ಗಡ್ಡದಲ್ಲೇ ತೊಡರಿಕೊಂಡು ಕೆಳಗೆ ಬಿದ್ದನು; ಎರಡನೆಯ ಜ್ಞಾನಿ ಮೊದಲನೆಯವನನ್ನು ಎಡವಿ ಅವನ ಮೇಲೆ ಬಿದ್ದನು; ಅವನ ತಲೆ ಒಂದು ಗುಲಾಬಿ ಪೊದೆಯಲ್ಲಿ ಸಿಕ್ಕಿಕೊಂಡಿತು. ಬಿದ್ದ ರಭಸಕ್ಕೆ ವೈಮರೆತು ಅವನು ಅಲ್ಲೇ ಮಲಗಿದನು; ಆಗಲೂ ಕೊಂಕುಕತ್ತಿನ ಮಹಿಮೆಯಿಂದ, ಅವನು ಕಿರಿಯುಗಲಗ ತೂತಿನೊಳಗಿನಿಂದ ಮೇಲ್ಮುಖವಾಗಿ ನೋಡುತ್ತಿರುವವನ ಹಾಗೆಯೇ ಕಾಣುತ್ತಿದ್ದನು.

೪

ಬಾದಶಹನು ಆ ದಿನವೆಲ್ಲ ಕೋಪದಿಂದ ಸಿಡುಕುತ್ತಲೇ ಇದ್ದನು; ಕಪ್ಪು ಮೋಡದಂತೆ ಗುಡುಗುತ್ತಲೇ ಇದ್ದನು. ಮರುದಿನ ಬೆಳಗ್ಗೆಯೂ ಅವನ ಮುಖದ ಮೇಲೆ ಕೋಪದ ಕರಿನೆರಳು ಆಡುತ್ತಲೇ ಇತ್ತು. ಇದನ್ನು ಕಂಡು ಆಸ್ಥಾನಿಕರೆಲ್ಲ ಭೀತಿಯಿಂದ ಗರಬಡಿದು ನಡುಗುತ್ತಿದ್ದರು.

ಅವನ ಮನಸ್ಸನ್ನು ಬೇರೆ ಕಡೆ ತಿರುಗಿಸುವುದಕ್ಕೂ ವಿನೋದಗೊಳಿಸುವುದಕ್ಕೂ ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾದವು. ನರ್ತಕಿಯರು ತಂಬೂರಿ ಬಾರಿಸಿಕೊಂಡು ಅವನೆದುರಿಗೆ ಪರಿಮಳ ಧೂಪದ ಮೋಡದ ನಡುವೆ ಅತ್ತಿತ್ತ ಬಾಗುತ್ತ ಬಳುಕುತ್ತ ಹಗುರಹೆಜ್ಜೆಯಿಂದ ನರ್ತಿಸಿದ್ದು, ನರ್ತಿಸುವಾಗ ತಮ್ಮ ಪೂರ್ಣ ನಿತಂಬಗಳನ್ನು ತೂಗಾಡಿಸಿ, ಮುತ್ತುಸಾಲಿನಂಥ ತಮ್ಮ ಹಲ್ಲುಗಳ ಬಿಳಿ ಬೆಳಕನ್ನು ಚೆಲ್ಲಿ, ಆಕಸ್ಮಾತ್ತಾಗಿಯೋ ಎಂಬಂತೆ ತಮ್ಮ ಕೆನೆಬಿಳುಪಿನ ದುಂಡುಮೊಲೆಗಳನ್ನು ತೆರೆದು ತೋರಿಸಿ, ರಸಿಕತನವನ್ನು ಪ್ರಚೋದಿಸಲು ಪಟ್ಟ ಸಾಹಸವೂ ನಿಷ್ಫಲವಾಯಿತು. ಅಮೀರ ಅವರ ಕಡೆ ಕಣ್ಣೆತ್ತಿ ನೋಡಲೂ

ಇಲ್ಲ; ಅವನ ಮುಖ ರೋಷದಿಂದ ವಿಕಾರವಾಗಿತ್ತು; ಆಸ್ಥಾನಿಕರ ಹೃದಯದಲ್ಲಿ ಭೀತಿಯನ್ನು ತುಂಬುತ್ತಿತ್ತು. ಆಸ್ಥಾನದ ವಿದೂಷಕರು, ದೊಂಬರಾಟದವರು, ಗಾರುಡಿಗರು, ಪುಂಗಿ ಊದಿ ಹಾವಾಡಿಸುವ ಇಂಡಿಯದ ಫಕೀರರು—ಇವರೆಲ್ಲರ ತಂತ್ರಗಳಿಂದಲೂ ಪ್ರಯೋಜನವಾಗಲಿಲ್ಲ.

ಆಸ್ಥಾನಿಕರು ತಮ್ಮತಮ್ಮಲ್ಲೆ ಪಿಸುಗುಟ್ಟಿಕೊಳ್ಳುತ್ತಿದ್ದರು :

"ಅಯ್ಯೋ ಪಾಪಿ ನಸ್ರೆದ್ದೀನ್! ಪಾಪದ ಮಗನೇ! ನಮಗೆಲ್ಲ ಎಂಥ ಅಪಾಯವನ್ನು ತಂದಿಟ್ಟುಬಿಟ್ಟೆ, ಭ್ರಷ್ಟಾ!" ಎಂದುಕೊಳ್ಳುತ್ತಿದ್ದರು.

ಅವರು ಆರ್ಸ್‌ಲಾನ್-ಬೆಕ್‌ನ ಕಡೆ ಆಶಾದೃಷ್ಟಿಯನ್ನು ತಿರುಗಿಸಿದರು.

ಅವನು ರಕ್ಷಕದಳದ ಕಚೇರಿಗೆ ಅತ್ಯಂತ ಸಮರ್ಥರೆಂದು ಹೆಸರಾಗಿದ್ದ ಗೂಢಚಾರರನ್ನೆಲ್ಲ ಕರಸಿಕೊಂಡನು. ಅವರಲ್ಲಿ ಖೋಜಾ ನಸ್ರೆದ್ದೀನ್ ಅಷ್ಟು ಅದ್ಭುತ ರೀತಿಯಿಂದ ಗುಣಪಡಿಸಿದ ಸಿಡುಬಿನ ಕಲೆಯವನೂ ಇದ್ದನು.

ಅವರಿಗೆ ಆರ್ಸ್‌ಲಾನ್-ಬೆಕ್ ಹೀಗೆ ಹೇಳಿದನು : "ಎಲ್ಲರೂ ತಿಳಿದಿರಿ : ನಮ್ಮ ಸುಪ್ರಸಿದ್ಧ ಅಮೀರರ ಅಪ್ಪಣೆಯ ಪ್ರಕಾರ ನಿಮ್ಮ ಸಂಬಳವನ್ನು ನಿಲ್ಲಿಸಲಾಗಿದೆ; ಆ ಪೋಕರಿ ಖೋಜಾ ನಸ್ರೆದ್ದೀನನನ್ನು ಹಿಡಿದುಹಾಕುವ ವರೆಗೆ ನಿಮಗೆ ಸಂಬಳವಿಲ್ಲ. ಅವನ ಸುಳಿವನ್ನು ಕಂಡುಹಿಡಿಯದಿದ್ದರೆ ನಿಮ್ಮ ಸಂಬಳವನ್ನು ಮಾತ್ರವೇ ಅಲ್ಲ, ನಿಮ್ಮ ತಲೆಗಳನ್ನೂ ಕಳೆದುಕೊಳ್ಳಬೇಕಾಗುತ್ತದೆ. ಅದನ್ನು ನಾನು ನೋಡಿಕೊಳ್ಳುತ್ತೇನೆ! ಅದಕ್ಕೆ ಬದಲಾಗಿ, ಯಾವನು ಅತ್ಯಂತ ಉತ್ಸಾಹ ತೋರಿ ಕೆಲಸ ಮಾಡಿ ಖೋಜಾ ನಸ್ರೆದ್ದೀನನನ್ನು ಸೆರೆ ಹಿಡಿಯುತ್ತಾನೋ ಅವನಿಗೆ ಮೂರು ಸಾವಿರ ಟಂಗ ಬಹುಮಾನದ ಜೊತೆಗೆ ಕೆಲಸದಲ್ಲಿ ಬಡತಿ ದೊರೆಯುತ್ತದೆ ಅವನನ್ನು ಪ್ರಧಾನ ಗೂಢಚಾರ ಪದವಿಗೆ ಏರಿಸಲಾಗುತ್ತದೆ!"

ಗೂಢಚಾರರೆಲ್ಲ ಕಾಲಕಳೆಯದೆ ಕಾರ್ಯಪ್ರವೃತ್ತರಾದರು. ದರವೇಶಿಗಳು, ಭಿಕ್ಷುಕರು, ನೀರು ಹೊರುವವರು, ವರ್ತಕರು ಮೊದಲಾದ ಬಗೆಬಗೆಯ ವೇಷದಿಂದ ಹೊರಟರು. ಅವರಲ್ಲೆಲ್ಲ ಅತ್ಯಂತ ಚತುರನಾದ ಸಿಡುಬಿನ ಕಲೆಯಾತನು ಒಂದು ಕಂಬಳಿ, ಅವರೆ ಬೀಜದಂಥ ಬೀಜಗಳು, ಒಂದು ಜಪಸರ, ಕೆಲವು ಪುರಾತನ ಪುಸ್ತಕಗಳು ಇಷ್ಟನ್ನೂ ಜೊತೆಮಾಡಿಕೊಂಡನು. ಅವನು ಮಾರ್ಕಟ್ಟೆಯಲ್ಲಿ ಆಭರಣಗಾರರ ಮತ್ತು ಸುಗಂಧಕಾರರ ಅಂಗಡಿ ಸಾಲುಗಳ

ಒಂದು ಮೂಲೆಯಲ್ಲಿ ಸ್ಥಳ ಮಾಡಿಕೊಂಡನು. ಇಲ್ಲಿ ಭವಿಷ್ಯ ಹೇಳುವವನ ವೇಷದಲ್ಲಿದ್ದುಕೊಂಡು ಹೆಂಗಸರಿಂದ ಸುದ್ದಿ ಹೊರಡಿಸಬೇಕೆಂದು ಯೋಚಿಸಿದನು.

ಒಂದು ಗಂಟೆ ಕಳೆದ ಮೇಲೆ ನೂರಾರು ಮಂದಿ ಘೋಷಕರು ಮಾರುಕಟ್ಟೆಯ ಬಳಿ ಬಂದರು; ತಮ್ಮ ಹೇಳಿಕೆಗೆ ಜನ ಕಿವಿಗೊಡಬೇಕೆಂದು ಕೋರಿದರು. ಅವರು ಅಮೀರನ ಆಜ್ಞೆಯನ್ನು ಸಾರುತ್ತಿದ್ದರು: ಖೋಜಾ ನಸ್ರೆದ್ದೀನನು ಅಮೀರನ ಶತ್ರುವೆಂದೂ ಧರ್ಮದೂಷಕನೆಂದೂ ಘೋಷಿಸಲಾಗಿತ್ತು. ಅವನೊಡನೆ ಯಾವ ವ್ಯವಹಾರವನ್ನೂ ಇಟ್ಟುಕೊಳ್ಳಲಾಗದೆಂದು—ಮುಖ್ಯವಾಗಿ ಅವನಿಗೆ ತಮ್ಮ ಮನೆಗಳಲ್ಲಿ ಆಶ್ರಯ ಕೊಡಲಾಗದೆಂದು—ನಿಷೇಧಿಸಲಾಗಿತ್ತು. ಅವನನ್ನು ಮನೆಯಲ್ಲಿಟ್ಟುಕೊಂಡ ಅಪರಾಧಕ್ಕೆ ಶಿಕ್ಷೆಯೇನೆಂದರೆ, ತಕ್ಷಣದ ಮರಣದಂಡನೆ. ಅದಕ್ಕೆ ಬದಲಾಗಿ, ಅವನನ್ನು ಯಾರಾದರೂ ಅಮೀರನ ರಕ್ಷಕದಳದವರಿಗೆ ಹಿಡಿದುಕೊಟ್ಟರೆ ಅವರಿಗೆ ಮೂರು ಸಾವಿರ ಟಂಗ ಬಹುಮಾನವೂ ಇನ್ನೂ ಇತರ ಸೌಲಭ್ಯಗಳೂ ದೊರೆಯುವುದಾಗಿ ಘೋಷಿಸಲಾಗಿತ್ತು.

ಟೀ ಅಂಗಡಿಯ ಮಾಲೀಕರು, ಕಂಚುಗಾರರು, ಕಮ್ಮಾರರು, ನೇಕಾರರು, ನೀರು ಹೊರುವವರು, ಬಂಡಿ ಹೊಡೆಯುವವರು ಮತ್ತು ಇತರ ವಾಹನ ಸಾರಥಿಗಳು—ಎಲ್ಲರೂ ತಮ್ಮತಮ್ಮಲ್ಲೇ ಪಿಸುಗುಟ್ಟಿಕೊಳ್ಳುತ್ತಿದ್ದರು:

"ಅಮೀರ ಬಹು ಕಾಲ ಕಾಯುತ್ತಲೇ ಇರಬೇಕಾಗುತ್ತದೆ!"

"ನಮ್ಮ ಖೋಜಾ ನಸ್ರೆದ್ದೀನ್ ಮೋಸಹೋಗಿ ಸಿಕ್ಕಿಹಾಕಿಕೊಳ್ಳುವವನಲ್ಲ."

"ಎಷ್ಟೇ ಹಣದ ಆಸೆ ತೋರಿಸಿದರೂ ಬುಖಾರದ ಜನ ಅದಕ್ಕೆ ಒಳಗಾಗಿ ತಮ್ಮ ಖೋಜಾ ನಸ್ರೆದ್ದೀನನನ್ನು ಬಿಟ್ಟುಕೊಡುವುದಿಲ್ಲ."

ಆದರೆ ತನ್ನ ದಿನದಿನದ ಪದ್ಧತಿಯ ಪ್ರಕಾರ ಸಾಲಗಾರರನ್ನು ಪೀಡಿಸಲೆಂದು ಮಾರ್ಕಟ್ಟೆಯ ಪ್ರದೇಶದಲ್ಲಿ ಸಂಚಾರ ಹೊರಟಿದ್ದ ದುಬಾರಿ ಬಡ್ಡಿಗಾರ ಜಾಫರ್ ಮಾತ್ರ ಬೇರೆ ರೀತಿ ಯೋಚಿಸಿದನು.

"ಅಯ್ಯೋ, ಮೂರು ಸಾವಿರ ಟಂಗಗಳು!" ಎಂದು ಅವನು ವ್ಯಥೆಪಟ್ಟು ಯೋಚಿಸತೊಡಗಿದನು. "ನಿನ್ನೆ ದಿನ ಈ ಹಣವನ್ನೂ ಇನ್ನೇನು, ನನ್ನ

ಜೇಬಿಗೆ ಬಿದ್ದಂತೆಯೇ ಆಗಿಬಿಟ್ಟಿತ್ತು; ಖೋಜಾ ನಸ್ರೆದ್ದೀನ್ ಆ ಹುಡುಗಿಯ ಮನೆಗೆ ಮತ್ತೆ ಹೋಗಿಯೇ ಹೋಗುತ್ತಾನೆ. ಆದರೆ, ನಾನೊಬ್ಬನೇ ಅವನನ್ನು ಹಿಡಿಯಲಾರೆ. ಇದೂ ಅಲ್ಲದೆ, ಈ ಸಂಗತಿಯನ್ನು ಬೇರೆ ಯಾವನಿಗಾದರೂ ತಿಳಿಸಿದರೆ, ಬಹುಮಾನ ನನಗೆ ಸಿಕ್ಕಿದಂತೆ ಮಾಡಿ ತಾನೇ ಕಿತ್ತುಕೊಂಡು ಬಿಡುತ್ತಾನೆ! ಕೂಡದು, ನಾನು ಹೀಗೆ ಮಾಡಕೂಡದು. ಬೇರೆ ದಾರಿ ಹುಡುಕಬೇಕು."

ಅವನು ಅರಮನೆಯ ಕಡೆ ಹೊರಟನು.

ಬಹಳ ಹೊತ್ತಿನ ವರೆಗೆ ಅವನು ಬಾಗಿಲು ಬಡಿದನು. ಬಾಗಿಲು ಹಾಕಿಯೇ ಇತ್ತು. ಕಾವಲುಸಿಪಾಯಿಗಳ ಸದ್ದೂ ಕೇಳಿಸಲಿಲ್ಲ. ಅವರು ಖೋಜಾ ನಸ್ರೆದ್ದೀನನನ್ನು ಹಿಡಿಯುವ ಹಂಚಿಕೆಗಳನ್ನು ಒಂದೊಂದಾಗಿ ಚರ್ಚಿಸುತ್ತಿದ್ದರು.

"ಓ, ಶೂರ ಸಿಪಾಯಿಗಳೇ! ನೀವೆಲ್ಲಾ ಒಳಗೆ ಮಲಗಿಬಿಟ್ಟಿದ್ದೀರಾ?" ಎಂದು ಕಿರಿಚಿದನು ದುಬಾರಿ ಬಡ್ಡಿಗಾರ ಹತಾಶನಾಗಿ. ಕಬ್ಬಿಣದ ಬಳೆಯನ್ನು ಬಡಿದು ಸದ್ದು ಮಾಡುತ್ತಲೇ ಇದ್ದನು. ಎಷ್ಟೋ ಹೊತ್ತಾದ ಮೇಲೆ ಹೆಜ್ಜೆಯ ಸದ್ದು ಕೇಳಿಸಿತು; ಅಗುಣಿಯೆಳೆದ ಖಣಿಖಣಿ ಕಿವಿಗೆ ಬಿತ್ತು. ದಿಡ್ಡಿಬಾಗಿಲು ತೆರೆಯಿತು.

ದುಬಾರಿ ಬಡ್ಡಿಗಾರನ ಹೇಳಿಕೆಯನ್ನು ಕೇಳಿ ಆರ್ಸ್‌ಲಾನ್-ಬೆಕ್ ತಲೆ ಅಳ್ಳಾಡಿಸಿದನು.

"ಮಾನ್ಯ ಜಾಫರ್, ಇವತ್ತು ನೀನು ಅಮೀರರನ್ನು ಹೋಗಿ ಕಾಣುವುದು ನನಗೆ ಸಮ್ಮತವಿಲ್ಲ. ಅವರಿಗೆ ಮುಖ ತೋರಿಸುವುದು ಬಹಳ ಅಪಾಯಕರ. ಅವರು ರೋಷಾವಿಷ್ಟರಾಗಿದ್ದಾರೆ, ಮಂಕಾಗಿದ್ದಾರೆ."

"ಆದರೆ ಅವರ ವಿಷಾದವನ್ನು ಪರಿಹರಿಸಲು ನನ್ನ ಹತ್ತಿರ ಒಂದು ಅದ್ಭುತ ಔಷಧವಿದೆ. ಓ, ಮಾನ್ಯ ಆರ್ಸ್‌ಲಾನ್-ಬೆಕ್, ಸಿಂಹಾಸನಕ್ಕೆ ಆಧಾರವಾದವನೇ! ಶತ್ರುವಿಧ್ವಂಸಕಾ! ನನ್ನ ಕೆಲಸ ತಡ ಮಾಡಿದರೆ ತಡೆಯುವಂಥದಲ್ಲ. ಅಮೀರರ ಹತ್ತಿರ ಹೋಗಿ ಹೇಳು; ಅವರ ವಿಷಾದವನ್ನು ಪರಿಹರಿಸುವುದಕ್ಕಾಗಿಯೇ ನಾನು ಬಂದಿರುವುದಾಗಿ ಅರಿಕೆಮಾಡು."

ಅಮೀರನು ಅನುಗ್ರಹಪೂರ್ವಕವಾಗಿಯೆ ಅವನಿಗೆ ದರ್ಶನ ಕೊಟ್ಟನು.

"ಹೇಳು, ಜಾಫರ್, ಹೇಳು. ಆದರೆ, ನೀನು ಹೇಳುವ ಸುದ್ದಿ ನನ್ನ ಮನಸ್ಸಿಗೆ ಉಲ್ಲಾಸವುಂಟುಮಾಡದೆ ಹೋದರೆ, ಆ ಕ್ಷಣ ನಿನಗೆ ಇನ್ನೂರು ಚಡಿ ಏಟು ಹೊಡಸಲಾಗುತ್ತದೆ!"

"ಓ, ಮಹಾ ಪರಾಕ್ರಮಶಾಲಿಯಾದ ಮಹಾಪ್ರಭೂ! ಹಿಂದಿನ ಇಂದಿನ ಮುಂದಿನ ಎಲ್ಲ ರಾಜರನ್ನೂ ತಮ್ಮ ಉಜ್ಜ್ವಲ ತೇಜಸ್ಸು ಮುಳುಗಿಸಿ ಮರೆ ಮಾಡಿಬಿಡುತ್ತದೆ, ಮಹಾಸ್ವಾಮಿ! ತಮ್ಮ ಈ ನಿಷ್ಪ್ರಯೋಜಕ ಗುಲಾಮನಾದ ನನಗೆ ಒಂದು ಸಂಗತಿ ತಿಳಿಯಬಂದಿದೆ; ನಮ್ಮ ಈ ಪಟ್ಟಣದಲ್ಲಿ ಒಬ್ಬ ಕನ್ಯೆ ಇದ್ದಾಳೆ, ಅವಳು ಸುಂದರಿಯರಲ್ಲೆಲ್ಲಾ ಪರಮ ಸುಂದರಿಯೆಂದು ಸತ್ಯಸಾಕ್ಷಿಯಾಗಿ ಹೇಳಬಲ್ಲೆ...."

ಅಮೀರನು ಸ್ವಲ್ಪ ಉತ್ಸಾಹ ತಂದುಕೊಂಡು ತಲೆಯೆತ್ತಿದನು

ಇದರಿಂದ ಧೈರ್ಯಗೊಂಡ ಬಡ್ಡಿಗಾರನು ಮತ್ತೆ ಮುಂದುವರಿಸಿದನು: "ಓ, ಮಹಾಸ್ವಾಮಿ! ಅವಳ ಸೌಂದರ್ಯವನ್ನು ಸರಿಯಾಗಿ ಪ್ರಶಂಸಿಸುವುದಕ್ಕೆ ನನಗೆ ಮಾತೇ ಹೊಳೆಯುವುದಿಲ್ಲ. ಅವಳು ಎತ್ತರವಾಗಿದ್ದಾಳೆ, ನುಣುದ್ದಾಗಿದ್ದಾಳೆ, ತೆಳ್ಳಗೆ ಬಳುಕುತ್ತಿದ್ದಾಳೆ. ಅಂಗಾಂಗಗಳೆಲ್ಲ ಚೆನ್ನಾಗಿ ಹೊಂದಿಕೊಂಡಿವೆ. ಫಳಫಳನೆ ಹೊಳೆಯುವ ಹುಬ್ಬುಗಳು, ಗುಲಾಬಿ ಬಣ್ಣದ ಕೆನ್ನೆಗಳು, ಅವಳ ಕಣ್ಣುಗಳು (ಗಸೆಲ್) ಜಿಂಕೆಯ ಕಣ್ಣುಗಳಂತಿವೆ; ಅವಳ ಹುಬ್ಬುಗಳು ಚಂದ್ರಬಿಂಬದಂತೆ ಮೆರೆಯುತ್ತಿವೆ! ಅವಳ ಕೆನ್ನೆಗಳು ಅನಿಮನಿ ಹೂವುಗಳಂತಿವೆ; ಅವಳ ಬಾಯಿ 'ಸಾಲೊಮನ್ ಮುದ್ರೆ'*ಯಂತಿದೆ; ಅವಳ ತುಟಿಗಳು ಹವಳದಂತಿವೆ; ಹಲ್ಲುಗಳು ಮುತ್ತಿನಂತಿವೆ; ಅವಳ ಮೊಲೆಗಳು ಎರಡು ಚೆರಿ ಹಣ್ಣುಗಳಿಂದ ಅಲಂಕರಿಸಿದ ಅಮೃತಶಿಲೆಗಳಂತಿವೆ; ಅವಳ ಭುಜಗಳು—"

ಅವನ ಆ ಮಾತಿನ ಪ್ರವಾಹವನ್ನು ಅಮೀರನು ಅಷ್ಟಕ್ಕೇ ತಡೆದನು:

"ಅವಳು ನಿಜವಾಗಿಯೂ ನೀನು ಹೇಳಿರುವ ಹಾಗೆಯೇ ಇರುವ ಪಕ್ಷದಲ್ಲಿ ಅವಳು ನಮ್ಮ ಅಂತಃಪುರವನ್ನು ಪ್ರವೇಶಿಸುವುದಕ್ಕೆ ತಕ್ಕವಳೇ ಸರಿ. ಯಾರು ಅವಳು?"

"ಅವಳು ಸಾಮಾನ್ಯರ ಮನೆಯಲ್ಲಿ ಹುಟ್ಟಿದವಳು, ಮಹಾಸ್ವಾಮಿ.

---

*ಇದು ಒಂದು ಬಗೆಯ ಸಸ್ಯ.

ಅವಳೊಬ್ಬ ಕುಂಬಾರನ ಮಗಳು; ಅವನ ಕೆಲಸಕ್ಕೆ ಬಾರದ ಹೆಸರನ್ನು ಹೇಳಲು ನನಗೆ ಧೈರ್ಯವಿಲ್ಲ; ಹೇಳಿದರೆ, ನಮ್ಮ ಪ್ರಭುವಿನ ಕಿವಿಗಳಿಗೆ ಅವಮಾನವಾದೀತು! ಅವಳು ಎಲ್ಲಿ ವಾಸಮಾಡುತ್ತಿದ್ದಾಳೆಂದು ತೋರಿಸಬಲ್ಲೆ. ಆದರೆ, ಅಮೀರರಲ್ಲಿ ಭಕ್ತಿಯಿಟ್ಟ ಈ ಸೇವಕನಿಗೆ ಏನಾದರೂ ಬಹುಮಾನ ವುಂಟೊ?"

ಅಮೀರನು ಬಖ್ತಿಯಾರನ ಕಡೆ ತಲೆ ಅಳ್ಳಾಡಿಸಿದನು. ದುಬಾರಿ ಬಡ್ಡಿಗಾರನ ಕಾಲ ಬಳಿ ಒಂದು ಹಣದ ಗಂಟು ಬಿತ್ತು. ಜಾಫರ್ ಅತ್ಯಂತ ಲೋಭದಿಂದ ವೇಗವಾಗಿ ಅದನ್ನು ಎತ್ತಿ ತೆಗೆದುಕೊಂಡನು.

"ನಿನ್ನ ಪ್ರಶಂಸೆ ವರ್ಣಿಸುವಂತೆ ಅವಳು ಸುಂದರಿಯಾಗಿರುವುದಾದರೆ, ಆಗ ನಿನಗೆ ಮತ್ತೆ ಇಷ್ಟೇ ಬಹುಮಾನ ದೊರೆಯುತ್ತದೆ" ಎಂದನು ಅಮೀರ.

"ನಮ್ಮ ಘನಹೊಂದಿದ ಮಹಾಸ್ವಾಮಿಗಳ ಔದಾರ್ಯಕ್ಕೆ ವಿಜಯ ವಾಗಲಿ! ಆದರೆ, ತಾವು ಜಾಗ್ರತೆ ಮಾಡಬೇಕು; ಏಕೆಂದರೆ ಈ ಕೋಮಲ ಹರಿಣಿಯು ಬೇಟೆಗಾರನ ಸಂಚಿಗೆ ಸಿಕ್ಕಿದೆ. ಅದು ನನಗೆ ಗೊತ್ತು" ಎಂದನು ಬಡ್ಡಿಗಾರ.

ಅಮೀರನ ಹುಬ್ಬು ಕೂಡಿದವು; ಅವನ ಮೂಗಿನ ಬುಡದಲ್ಲಿ ಒಂದು ಆಳವಾದ ಸೀಳುಗೆರೆ ಮೂಡಿತು.

"ಯಾರವನು, ಆ ಬೇಟೆಗಾರ?"

"ಖೋಜಾ ನಸ್ರೆದ್ದೀನ್."

"ಮತ್ತೆ ಅದೇ ಖೋಜಾ ನಸ್ರೆದ್ದೀನ್! ಇದರಲ್ಲಿಯೂ ಖೋಜಾ ನಸ್ರೆದ್ದೀನನೇ! ಎಲ್ಲೆಲ್ಲೂ ಅವನೇ ಇದ್ದಾನೆ. ಆದರೆ ನೀವೋ—" ಹೀಗೆಂದು ಅಮೀರನು ತಟಕ್ಕನೆ ತನ್ನ ವಜೀರರ ಕಡೆ ತಿರುಗಿದನು. ತಿರುಗಿದ ರಭಸಕ್ಕೆ ಸಿಂಹಾಸನ ಅಳ್ಳಾಡಿತು—"ನೀವೋ, ನಮ್ಮ ಹೆಸರಿಗೆ ಕಳಂಕ ಹಚ್ಚುವುದನ್ನು, ಅವಮಾನ ಮಾಡುವುದೊಂದನ್ನು ಬಿಟ್ಟು ಮತ್ತೇನೂ ಮಾಡದೆ ತೆಪ್ಪಗಿದ್ದೀರಿ. ಹೇಯ್, ಆರ್ಸಲಾನ್-ಬೆಕ್! ನೋಡಿಲ್ಲಿ. ಈ ಹುಡಗಿಯನ್ನು ತಕ್ಷಣವೇ ಅರಮನೆಗೆ ಕರೆತರಬೇಕು. ತಪ್ಪಿದರೆ, ನೀನು ಹಿಂದಿರುಗಿ ಬರುವಾಗ ಅರ್ಧ ದಾರಿಯಲ್ಲೆ ವಧಕಾರರು ನಿನ್ನನ್ನು ಎದುರುಗೊಳ್ಳುತ್ತಾರೆ, ಜೋಕೆ!" ಎಂದನು.

ಕೆಲವು ನಿಮಿಷಗಳು ಕಳೆಯುವುದರೊಳಗೇ ರಕ್ಷಕದಳದ ದೊಡ್ಡದೊಂದು ತುಕಡಿ ಅರಮನೆಯ ಹೆಬ್ಬಾಗಿಲಿನಿಂದ ಹೊರಹೊರಟಿತು. ಅವರ ಆಯುಧಗಳು ಖಣಿಖಣಿಗುಟ್ಟಿದವು ; ಅವರ ಗುರಾಣಿಗಳು ಬಿಸಿಲಿನಲ್ಲಿ ಥಳಥಳನೆ ಹೊಳೆಯು ತ್ತಿದ್ದವು. ಎಲ್ಲರ ಮುಂದೆ ಆರ್ಸ್‌ಲಾನ್-ಬೆಕ್ ನಡೆಯುತ್ತಿದ್ದನು. ಕಿಂಕಾಪಿನ ಅವನ ಖಲತ್ತಿನ ಮೇಲೆ ಅವನ ದೊಡ್ಡ ಅಧಿಕಾರದ ದರ್ಜೆಯನ್ನು ಸೂಚಿಸುವ ಒಂದು ಚಿನ್ನದ ಸಂಕೇತ ಮುದ್ರೆಯನ್ನು ಸೆಕ್ಕಿಸಿತ್ತು. ಕಾಪುದಳದ ಪಕ್ಕದಲ್ಲಿ ದುಬಾರಿ ಬಡ್ಡಿಗಾರನು ಅಸಹ್ಯವಾಗುವಂತೆ ಕುಂಟಿ ಕುಪ್ಪಳಿಸುತ್ತಾ ನಡೆದನು. ಆಗಾಗ ಅವನು ಹಿಂದೆ ಬೀಳುತ್ತಿದ್ದನು ; ಓಡೋಡಿ ಹೋಗಿ ಸಿಪಾಯಿಗಳ ಬಳಿ ಸೇರಿಕೊಳ್ಳಬೇಕಾಗುತ್ತಿತ್ತು. ಜನರು ಆ ಕಡೆ ಈ ಕಡೆ ಪಕ್ಕಕ್ಕೆ ಸರಿದು ದಾರಿ ಬಿಟ್ಟರು ; ದ್ವೇಷದೃಷ್ಟಿಯಿಂದ ನೋಡುತ್ತ ಆ ಮೆರವಣಿಗೆಯನ್ನು ಹಿಂಬಾಲಿಸಿದರು ; ಮತ್ತೆ ಯಾವ ದುಸ್ಕೃತ್ಯ ನಡಸಲು ಇವರು ಹೋಗುತ್ತಿರು ವರೊ ಎಂದು ಯೋಚಿಸುತ್ತಲೇ ಹಿಂಬಾಲಿಸಿದರು.

೫

ಖೋಜಾ ನಸ್ರೆದ್ದೀನ್ ಆಗಿನ್ನೂ ಒಂಬತ್ತನೆಯ ಗಡಿಗೆಯನ್ನು ಪೂರ್ತಿ ಮಾಡಿದ್ದನು. ಅದನ್ನು ಬಿಸಿಲಿನಲ್ಲಿ ಒಣಗಲಿಟ್ಟು, ಮುಂದಿನ ಹತ್ತನೆಯ ಮಡಕೆಗಾಗಿ ಜೇಡಿಮಣ್ಣನ್ನು ಎತ್ತಿಟ್ಟುಕೊಂಡನು.

ಇದ್ದಕ್ಕಿದ್ದಂತೆ ಮುಂಬಾಗಿಲಿನಲ್ಲಿ ಗಟ್ಟಿಯಾಗಿ ತಟ್ಟುವ ಸದ್ದು ಕೇಳಿಸಿತು ; ಅಧಿಕಾರದ ದರ್ಪದಿಂದ ಬಲವಾಗಿ ತಟ್ಟುತ್ತಿರುವಂತೆ ತೋರಿತು. ಒಂದು ನೀರುಳ್ಳಿ ಗೆಡ್ಡೆಯನ್ನೊ ಸ್ವಲ್ಪ ಉಪ್ಪನ್ನೊ ಸಾಲ ಕೇಳುವುದಕ್ಕೆಂದು ಆಗಾಗ ನಿಯಾಸನ ಮನೆಗೆ ಬರುತ್ತಿದ್ದ ನೆರೆಹೊರೆಯವರು ಹಾಗೆಂದೂ ತಟ್ಟುತ್ತಿರಲಿಲ್ಲ. ಬಲವಾಗಿ ಏಟು ಬಿದ್ದು ಬಾಗಿಲು ದಬದಬನೆ ಬಡಿದುಕೊಳ್ಳುತ್ತಿದ್ದದ್ದನ್ನು ಕಂಡು ಖೋಜಾ ನಸ್ರೆದ್ದೀನನೂ ನಿಯಾಸನೂ ಗಾಬರಿಯಿಂದಲೂ ಆತಂಕ ದಿಂದಲೂ ಒಬ್ಬರನ್ನೊಬ್ಬರು ನೋಡಿದರು. ಈ ಸಲ ಖೋಜಾ ನಸ್ರೆದ್ದೀನನ ಚುಳಗಿದ ಕಿವಿಗೆ ಲೋಹಗಳ ಖಣಿಲು ಕೇಳಿಸಿತು.

"ಸಿಪಾಯಿಗಳು !" ಎಂದು ನಿಯಾಸನ ಕಿವಿಯಲ್ಲಿ ಪಿಸುಗುಟ್ಟಿದನು.

"ಓಡು !" ಎಂದು ಒತ್ತಾಯ ಮಾಡಿದ ಮುದುಕ.

ಖೋಜಾ ನಸ್ರೆದ್ದೀನ್ ತೋಟದ ಗೋಡೆಯ ಮೇಲೆ ಹಾರಿ ಆಚೆ ಕಡೆಗೆ ನೆಗೆದನು. ಅವನು ತಕ್ಕಷ್ಟು ದೂರ ಹೋಗುವುದಕ್ಕೆ ಅವಕಾಶವಾಗಲೆಂದು ನಿಯಾಸ್ ಆದಷ್ಟೂ ನಿದಾನವಾಗಿಯೇ ಬಂದು ಬಾಗಿಲು ತೆಗೆದನು. ಮುದುಕ ಅಗುಣಿ ತೆಗೆದಾಗ ದ್ರಾಕ್ಷೆ ಅಂಗಳದಿಂದ ಕೆಲವು ತ್ರಸ್ತ್ ಹಕ್ಕಿಗಳು ಹಾರಿ ಎದ್ದು ದಿಕ್ಕಾಪಾಲಾಗಿ ಚೆದರಿ ಹೋದವು. ಆದರೆ ಮುದುಕ ನಿಯಾಸನಿಗೆ ರೆಕ್ಕೆಯಿರ ಲಿಲ್ಲ, ಅವನು ಹಾರಿಹೋಗಲಾಗಲಿಲ್ಲ. ಆರ್ಸ್‌ಲಾನ್-ಬೆಕ್ಕನ್ನು ಕಂಡು ಅವನ ಮುಖ ಬಿಳಿಚಿತು; ಗಡಗಡನೆ ನಡುಗುತ್ತ ನೆಲಕ್ಕೆ ಬಗ್ಗಿ ನಮಸ್ಕಾರ ಮಾಡಿದನು.

“ಒಂದು ಮಹಾ ಗೌರವ ಬಂದಿದೆ ನಿನ್ನ ಕುಲಕ್ಕೆ, ಕುಂಬಾರಾ” ಎಂದು ಆರ್ಸ್‌ಲಾನ್-ಬೆಕ್ ಮಾತಿಗೆ ಮೊದಲು ಮಾಡಿದನು. “ವಿಶ್ವದ ಕೇಂದ್ರ, ಭೂಮಂಡಲದ ಮೇಲಿರುವ ಅಲ್ಲಾನ ನೆರಳು, ನಮ್ಮೊಡೆಯ ಮಹಾ ಸ್ವಾಮಿಗಳು—ಅವರ ಸುಖದಿನಗಳು ಅನಂತವಾಗಿ ವರ್ಧಿಸಲಿ—ಆ ನಮ್ಮ ಘನ ಅಮೀರರು ತಾವೇ ಸ್ವತಃ ಅಲ್ಪನಾದ ನಿನ್ನ ಹೆಸರನ್ನು ನೆನೆದುಕೊಂಡು ನಿನಗೆ ಅಪಾರ ಅನುಗ್ರಹ ತೋರಿದ್ದಾರೆ. ನಿನ್ನ ತೋಟದಲ್ಲಿ ಒಂದು ಸುಂದರ ಗುಲಾಬಿ ಅರಳಿದೆಯೆಂದು ಅವರಿಗೆ ತಿಳಿಯಬಂದಿದೆ; ಮತ್ತು ಈ ಗುಲಾಬಿ ಯಿಂದ ತಮ್ಮ ಅರಮನೆಯನ್ನು ಅಲಂಕರಿಸಬೇಕೆಂದು ಅವರು ಅಪೇಕ್ಷಿಸು ತ್ತಾರೆ. ಎಲ್ಲಿದ್ದಾಳೆ, ನಿನ್ನ ಮಗಳು?”

ಕುಂಬಾರನ ನರೆತ ತಲೆ ನಡುಗಿತು; ಅವನಿಗೆ ಕಣ್ಣುಕತ್ತಲೆ ಹಿಡಿಯಿತು. ಸಿಪಾಯಿಗಳು ನುಗ್ಗಿ ಮನೆಯೊಳಗಿನಿಂದ ಅವಳನ್ನು ಎಳೆದುಕೊಂಡು ಅಂಗಳಕ್ಕೆ ತಂದಾಗ ಅವಳು ಕಿರಿಚಿದ ಸದ್ದು ಎಲ್ಲೋ ದೂರದಲ್ಲಿ ಆದ ಸದ್ದಿನಂತೆ ಬಹು ಮಂದವಾಗಿ ಅವನ ಕಿವಿಗೆ ಕೇಳಿಸಿತು. ಮುದುಕನ ತೊಡೆ ನಡುಗಿತು; ನೆಲದ ಮೇಲೆ ಕುಸಿದು ಬಿದ್ದನು; ಮುಖವಡಿಯಾಗಿ ಬಿದ್ದುಬಿಟ್ಟನು. ... ಅವನಿಗೆ ಏನೂ ಕಾಣಲೂ ಇಲ್ಲ, ಕೇಳಿಸಲೂ ಇಲ್ಲ. ... ಲಸಕ್ಕೆ ಮೊದ...

ಆರ್ಸ್‌ಲಾನ್-ಬೆಕ್ ತನ್ನ ಸಿಪಾಯಿಗಳನ್ನು ಕುರಿತು, ... ಆಧಿಕ್ಯ ದಿಂದ ಅವನಿಗೆ ಎಚ್ಚರ ತಪ್ಪಿದೆ. ಅವನನ್ನು ಹಾಗೆಯೇ ಬಿಟ್ಟುಬಿಡಿ. ಬುದ್ಧಿ ತಿಳಿದ ಮೇಲೆ ಅವನು ಅರಮನೆಗೆ ಬಂದು ತನ್ನ ಅನಂತ ಕೃತಜ್ಞತೆಗಳನ್ನು ಅಮೀರರಿಗೆ ಅರ್ಪಿಸಲಿ. ನಾವು ಹೋಗೋಣ, ನಡೆಯಿರಿ!” ಎಂದನು.

ಇಷ್ಟರಲ್ಲಿ ಖೋಜಾ ನಸ್ರೆದ್ದೀನ್ ಹಿಂದಿನ ಗಲ್ಲಿಗಳಲ್ಲೂ ಓಣಿಗಳಲ್ಲೂ ಸುತ್ತಿಕೊಂಡು ಮತ್ತೊಂದು ತುದಿಯಿಂದ ಮುಂದುಗಡೆಯ ಬೀದಿಗೆ ಬಂದು ಸೇರಿದ್ದನು. ಕೆಲವು ಪೊದೆಗಳ ಆಶ್ರಯದಲ್ಲಿ ಅಡಗಿ ನಿಯಾಸನ ಮನೆಯ ಮುಂಬಾಗಿಲನ್ನು ನೋಡಿದನು; ಅಲ್ಲಿ ಇಬ್ಬರು ಸಿಪಾಯಿಗಳನ್ನೂ ಮತ್ತೊಬ್ಬ ನನ್ನೂ ಕಂಡನು; ಆ ಮನುಷ್ಯ ದುಬಾರಿ ಬಡ್ಡಿಗಾರ ಜಾಫರ್ ಎಂದು ಅವನಿಗೆ ಗುರುತು ಹತ್ತಿತು.

“ಆಹಾ, ಕುಂಟನಾಯೀ! ಹೀಗೋ, ನನ್ನನ್ನು ಸೆರೆ ಹಿಡಿಯುವುದ ಕ್ಕೆಂದು ಸಿಪಾಯಿಗಳನ್ನು ಕರೆದುಕೊಂಡು ಬಂದವನು ನೀನೋ!” ಎಂದು ಖೋಜಾ ನಸ್ರೆದ್ದೀನ್ ಮನಸ್ಸಿನಲ್ಲೆ ಅಂದುಕೊಂಡನು. ನಿಜ ಸ್ಥಿತಿ ಅವನಿಗೆ ಹೇಗೆ ಗೊತ್ತಾಗಬೇಕು! “ಒಳ್ಳೆಯದು, ಚೆನ್ನಾಗಿ ಹುಡುಕಿ! ಆದರೆ, ನೀವು ಬರಿಗೈಯಲ್ಲೇ ಹಿಂದಿರುಗಬೇಕಾಗುತ್ತದೆ!” ಎಂದುಕೊಂಡನು.

ಆದರೆ ಅವರು ಬರಿಗೈಯಲ್ಲಿ ಹಿಂದಿರುಗಲಿಲ್ಲ! ಅವರು ತನ್ನ ಮೆಚ್ಚಿನ ಪ್ರೇಯಸಿಯನ್ನು ಬಾಗಿಲಿನಿಂದ ಹೊರಕ್ಕೆ ದೊತ್ತುಕೊಂಡು ಬಂದದ್ದನ್ನು ಕಂಡು [illegible]ಯದಿಂದ ಅವನು ಸ್ತಬ್ಧನಾದನು. ಅವಳು ಬಲವಾಗಿ ಹೆಣಗುತ್ತಿದ್ದಳು. ಹೃದಯ[illegible] ಕರಗುವಂತೆ ಅತ್ತುಕರೆಯುತ್ತಿದ್ದಳು! ಆದರೆ ಸಿಪಾಯಿಗಳು ಅವ ಳನ್ನು ಗಟ್ಟಿ[illegible]ಯಾಗಿ ಹಿಡಿದುಕೊಂಡಿದ್ದರು; ಅವಳ ಸುತ್ತ ಎರಡು ಸುತ್ತು ಗುರಾಣಿಗಳ[illegible] ಸುತ್ತುಗಟ್ಟಿದರು.

ಆಗ [illegible] ತಿಂಗಳ ನಡುಮಧ್ಯಾಹ್ನ; ಬಿರುಬಿಸಿಲು ಸುಡುತ್ತಿತ್ತು. ಆದರೂ ಖೋ[illegible]ಜಾ ನಸ್ರೆದ್ದೀನನ ಮೈಮೇಲೆ ಮಂಜಿನಂಥ ತಣ್ಣನೆಯ ಚಳುಕು ಹರಿದಾಡ[illegible]. ಸಿಪಾಯಿಗಳು ಹತ್ತಿರ ಹತ್ತಿರ ಬರುತ್ತಿದ್ದರು; ಅವರು ಹೋಗ ಬೇಕಾದ ದಾರಿ ಅವನು ಅಡಗಿಕೊಂಡಿದ್ದಲ್ಲಿಂದಲೇ ಹಾದು ಹೋಗುತ್ತಿತ್ತು. [illegible]ಡಿತು. ಒಂದು ಬಾಗಿದ ಕತ್ತಿಯನ್ನು ಅವನು ಒರೆಯಿಂದ “ಅದಿನ್ನೂ [illegible] ತಬ್ಬಿ ಕುಳಿತನು. ಅರ್ಸ್‌ಲಾನ್-ಬೆಕ್ ತನ್ನ ಹೊಳೆ [illegible]ಜಾ ನಸ್ರೆದ್ದಿ ಹೊಳೆಯ[illegible]ವ ಮುದ್ರೆಯಿಂದಲಂಕೃತನಾಗಿ ಗುಂಪಿಗೆ ನಾಯಕನಾಗಿ ಮುಂದೆ ಹೋಗುತ್ತಿದ್ದನು. ಅವನ ಕೊಬ್ಬಿದ ಕತ್ತಿನಲ್ಲಿ ಖೋಜಾ ನಸ್ರೆದ್ದೀನನ ಆ ಕತ್ತಿ ಆಳವಾಗಿ ನಾಟಿ ಬಿಡುವುದರಲ್ಲಿತ್ತು; ಆದರೆ ಅದಕ್ಕೆ ಅವಕಾಶವಾಗ ದಂತೆ ಅವನು ಕತ್ತಿಯೆತ್ತಲು ಮೇಲೇಳುವ ಮೊದಲೇ ಒಂದು ಭಾರವಾದ ಕೈ

ಅವನ ಹೆಗಲ ಮೇಲೆ ಬಿದ್ದು ನೆಲಕ್ಕದುಮಿ ಹಿಡಿದುಕೊಂಡಿತು. ಆ ಕೂಡಲೇ ನಸ್ರೆದ್ದೀನ್ ಬೆಚ್ಚಿಬಿದ್ದು ಕೊಸರಾಡಿ ಹೊರಳಿ ಹೊಡೆಯಲೆಂದು ಕೈಯೆತ್ತಿದನು; ಆದರೆ ತನಗೆ ಚಿರಪರಿಚಿತವಾದ ಕಮ್ಮಾರ ಯೂಸೂಫನ ಮಸಿ ಕಲೆಯ ಮುಖ ವನ್ನು ಗುರುತಿಸಿ, ತಕ್ಷಣ ಅದನ್ನು ಕೆಳಕ್ಕಿಳಿಸಿದನು.

"ಅಳ್ಳಾಡದೆ ಮಲಗಿರು!" ಎಂದು ತಗ್ಗುದನಿಯಲ್ಲಿ ವಿತ್ತಗೆ ನುಡಿ ದನು. "ಅಳ್ಳಾಡದೆ ಮಲಗು! ನೀನೊಬ್ಬ ಹುಚ್ಚ. ಅವರು ಇಪ್ಪತ್ತು ಜನ ಇದ್ದಾರೆ; ಸರ್ವಶಸ್ತ್ರಸಜ್ಜಿತರಾಗಿದ್ದಾರೆ. ನೀನೋ ಒಬ್ಬ, ಸರಿಯಾದ ಆಯುಧ ವಿಲ್ಲ. ಅವಳಿಗೆ ನೆರವಾಗುವ ಬದಲು ನೀನೇ ನಾಶವಾಗಿ ಹೋಗುತ್ತೀಯ. ಅಳ್ಳಾಡದೆ ಮಲಗು! ನಾನು ಹೇಳುತ್ತೇನೆ, ಸುಮ್ಮನೆ ಮಲಗು" ಎಂದು ಒತ್ತಾಯ ಮಾಡಿದನು.

ಬೀದಿಯ ತಿರುವಿನಲ್ಲಿ ಸಿಪಾಯಿಗಳ ಗುಂಪೆಲ್ಲಾ ಮರೆಯಾಗಿ ಹೋಗುವ ವರೆಗೂ ಕಮ್ಮಾರ ಅವನನ್ನು ನೆಲಕ್ಕೆ ಅದುಮಿಕೊಂಡೇ ಇದ್ದನು.

"ಅಯ್ಯೋ! ಅದೇಕೆ ನನ್ನನ್ನು ಹಿಂದಕ್ಕೆಳೆದೆಯೋ? ಈಗ ನಾನು ಇಲ್ಲಿ ಸತ್ತು ಬಿದ್ದಿದ್ದರೇ ಎಷ್ಟೋ ಚೆನ್ನಾಗಿರುತ್ತಿತ್ತು!" ಎಂದು ಖೋಜಾ ನಸ್ರೆದ್ದೀನ್ ನೊಂದು ನುಡಿದನು.

"ಸಿಂಹಕ್ಕೆದುರಾಗಿ ಬರಿಗೈಯೆತ್ತುವುದೂ ಕತ್ತಿಗೆದುರಾಗಿ ಮುಷ್ಟಿಯೊಡ್ಡು ವುದೂ ವಿವೇಕವಂತರು ಮಾಡುವ ಕೆಲಸವಲ್ಲ" ಎಂದು ಕಮ್ಮಾರ ಸ್ಪಷ್ಟವಾಗಿ ಮರುನುಡಿದನು. "ಮಾರುಕಟ್ಟೆಯ ಬಳಿಯಿಂದಲೂ ನಾನು ಸಿಪಾಯಿಗಳನ್ನು ಹಿಂಬಾಲಿಸಿ ಬಂದೆ. ನಿನ್ನ ಈ ಹುಚ್ಚು ಸಾಹಸವನ್ನು ತಪ್ಪಿಸುವುದಕ್ಕೆ ಸಮ ಯಕ್ಕೆ ಸರಿಯಾಗಿ ಇಲ್ಲಿ ಬಂದು ಸೇರಿದೆ. ನೀನು ಅವಳಿಗಾಗಿ ಸಾಯ ಬಾರದು; ಬದುಕಿದ್ದು ಸಾಹಸ ಮಾಡಿ ಅವಳನ್ನು ಬದುಕಿಸಬೇಕು. ಇದರಲ್ಲಿ ಹೆಚ್ಚು ಕಷ್ಟವಿರಬಹುದು; ಆದರೂ ಇದೇ ಹೆಚ್ಚು ಘನವಾದ ಕಾರ್ಯ. ದುಃಖ ದಿಂದ ಕೊರಗುತ್ತ ಕಾಲ ಕಳೆಯಬೇಡ. ಹೋಗು; ಕೆ [illegible] ಮಾಡು. ಅವರಿಗೆ ಕತ್ತಿ, ಗುರಾಣಿ ಮತ್ತು ಭಲ್ಲೆಯಗಳಿವೆ; ಆದರ ಅಲ್ಲಾ ನಿನಗೆ ಇನ್ನೂ ಬಲವಾದ ಆಯುಧಗಳನ್ನು—ಎಣೆಯಿಲ್ಲದ ಚುರುಕು ಬುದ್ಧಿ ಮತ್ತು ಚಾತುರ್ಯಗಳನ್ನು ಕೊಟ್ಟಿದ್ದಾನೆ."

ಹೀಗೆ ಅವನಾಡಿದನು. ಅವನ ಮಾತುಗಳು ಪೌರುಷಪೂರ್ಣವಾಗಿಯೂ

ತನ್ನ ಜೀವಮಾನವೆಲ್ಲಾ ತಾನು ಬಡಿದು ರೂಪಿಸುತ್ತಿದ್ದ ಕಬ್ಬಿಣದಷ್ಟೇ ಶಕ್ತಿಯುಕ್ತವಾಗಿಯೂ ಇದ್ದವು. ಆ ಮಾತುಗಳನ್ನು ಆಲಿಸಿದಂತೆಲ್ಲ ಖೋಜಾ ನಸ್ರೆದ್ದೀನನ ಹೃದಯ—ಹಿಂದೆ ಮುಂದೆ ನೋಡುತ್ತಿದ್ದ ಹೃದಯ—ಕಬ್ಬಿಣದಂತೆ ಕಠಿನವಾಯಿತು.

"ನಿನ್ನಿಂದ ಉಪಕಾರವಾಯಿತಯ್ಯಾ, ಕಮ್ಮಾರಾ! ಈ ಕೆಲವು ಕ್ಷಣಗಳಲ್ಲಿ ನಾನನುಭವಿಸಿದ ಇಂಥ ನಿರಾಸೆಯನ್ನೂ ದುಃಖವನ್ನೂ ಹಿಂದೆಂದೂ ಅನುಭವಿಸಿರಲಿಲ್ಲ. ಆದರೆ ಹತಾಶನಾಗಿ ಎದೆಗುಂದುವುದು ಯೋಗ್ಯವಲ್ಲ. ಇಗೋ, ನಾನು ಹೋಗುತ್ತೇನೆ; ಮತ್ತು ನನ್ನ ಆಯುಧಗಳನ್ನು ಸರಿಯಾಗಿ ಪ್ರಯೋಗಿಸುತ್ತೇನೆಂದು ಇಗೋ, ನಿನಗೆ ಮಾತು ಕೊಡುತ್ತೇನೆ" ಎಂದನು ಖೋಜಾ ನಸ್ರೆದ್ದೀನ್.

ಪೊದೆಗಳ ಮಧ್ಯದಿಂದ ಹೊರಬಂದು ಅವನು ರಸ್ತೆಗಿಳಿದನು. ಈ ಸಮಯಕ್ಕೆ ಸರಿಯಾಗಿ ದುಬಾರಿ ಬಡ್ಡಿಗಾರನು ಪಕ್ಕದ ಒಂದು ಮನೆಯಿಂದ ಹೊರಬಂದನು. ಇನ್ನೇನು ಕಾಲಾವಧಿ ಮುಗಿಯಲಿರುವ ಒಬ್ಬ ಕುಂಬಾರನ ಸಾಲದ ವಿಚಾರವನ್ನು ಜ್ಞಾಪಿಸುವುದಕ್ಕಾಗಿ ಅವನು ಹಿಂದೆ ನಿಂತಿದ್ದನು. ಅವನೂ ಖೋಜಾ ನಸ್ರೆದ್ದೀನನೂ ಎದುರೆದುರಾಗಿ ಸಂಧಿಸಿದರು. ದುಬಾರಿ ಬಡ್ಡಿಗಾರ ಭಯದಿಂದ ಬಿಳುಪೇರಿ ಹಿಂದಿರುಗಿ ಓಟಕಿತ್ತನು; ಮನೆಯೊಳಕ್ಕೆ ನುಗ್ಗಿ ದಬಾರನೆ ಬಾಗಿಲು ಮುಚ್ಚಿ ಅಗುಣಿ ಹಾಕಿಕೊಂಡುಬಿಟ್ಟನು.

"ಜೋಕೆ, ಜಾಫರ್! ಓ ಎಕಿಡ್ನದ* ಮಗನೇ, ಎಚ್ಚರ! ನಾನು ಕಂಡೆ, ಕೇಳಿದೆ, ಎಲ್ಲವನ್ನೂ ಬಲ್ಲೆ" ಎಂದನು ಖೋಜಾ ನಸ್ರೆದ್ದೀನ್.

ಕ್ಷಣ ಮೌನವಾಗಿದ್ದು ದುಬಾರಿ ಬಡ್ಡಿಗಾರ ಕೂಗಿ ಹೇಳಿದನು:

"ಚೆರಿ ಹಣ್ಣು ಸಿಕ್ಕಲಿಲ್ಲ ಡೇಗೆಗೂ ಅದು ಸಿಕ್ಕಲಿಲ್ಲ. ಚೆರಿ ಸಿಂಹದ ಬಾಯಿಗೆ ಬಿತ್ತು!"

"ಅದಿನ್ನೂ ಏನಾಗುತ್ತೋ ಮುಂದೆ ನೋಡಬೇಕಾಗಿದೆ" ಎಂದು ಖೋಜಾ ನಸ್ರೆದ್ದೀನ್ ಮಾತು ಮರಳಿಸಿ ಕೊಂಕಿದನು. "ನಾನು ಹೇಳುವುದನ್ನು ನೆನಪಿಟ್ಟಿರು, ಜಾಫರ್! ನಿನ್ನನ್ನು ನೀರಿನಿಂದ ಮೇಲಕ್ಕೆ ನಾನು ಎಳೆದು ಹಾಕಿದೆ. ಆದರೆ ಈಗ ಆಣೆಯಿಟ್ಟು ಹೇಳುತ್ತೇನೆ, ಕೇಳು: ಅದೇ

---

*ಎಕಿಡ್ನ: ಬಹು ಭಯಂಕರವಾದ ಒಂದು ಪೌರಾಣಿಕ ದುಷ್ಟ ಜಂತು.

ಕೊಳದಲ್ಲಿ ನಾನೇ ನಿನ್ನನ್ನು ಮುಳುಗಿಸಿ ಬಿಡುತ್ತೇನೆ. ಕೊಳೆತ ಕೆಸರು ನಿನ್ನ ಮೈಯನ್ನು ಮುಚ್ಚುತ್ತದೆ. ನೀರ ಕಳೆಗಳು ನಿನ್ನ ಉಸಿರು ಕಟ್ಟಿಸುತ್ತವೆ. ನೆನಪಿಟ್ಟುಕೋ!" ಎಂದನು.

ಉತ್ತರಕ್ಕೆ ಕಾಯದೆ ಖೋಜಾ ನಸ್ರೆದ್ದೀನ್ ಅಲ್ಲಿಂದ ನಡೆದುಬಿಟ್ಟನು. ಅವನು ನಿಯಾಜನ ಮನೆಯ ಹತ್ತಿರ ನಿಲ್ಲದೆ ಮುಂದೆ ಹೋದನು; ದುಬಾರಿ ಬಡ್ಡಿಗಾರ ಗುಟ್ಟಾಗಿ ನೋಡುತ್ತಿರಬಹುದೆಂದೂ, ಮುಂದೆ ಅವನು ಮುದುಕನ ಮೇಲೆ ದೂರು ಕೊಡಬಹುದೆಂದೂ ಹೆದರಿ ಅಲ್ಲಿ ನಿಲ್ಲದೆ ಮುಂದೆ ನಡೆದನು. ಬೀದಿಯ ಕೊನೆಯಲ್ಲಿ ನಿಂತು ನೋಡಿ ತನ್ನನ್ನು ಯಾರೂ ಹಿಂಬಾಲಿಸಿ ಬರುತ್ತಿಲ್ಲವೆಂದು ನಿರ್ಧಾರ ಮಾಡಿಕೊಂಡು, ಆ ಮೇಲೆ ಕಳೆ ಬೆಳೆದು ಬೀಳು ಬಿದ್ದಿದ್ದ ಒಂದು ಬಯಲಿನ ಮೂಲಕ ವೇಗವಾಗಿ ಓಡಿಹೋಗಿ ಒಂದು ಗೋಡೆಯನ್ನು ಹಾರಿ ನೆಗೆದು ಮತ್ತೆ ಮನೆಗೆ ಬಂದು ತಲುಪಿದನು.

ಮುದಕನಿನ್ನೂ ನೆಲದ ಮೇಲೆ ಮುಖವಡಿಯಾಗಿ ಬಿದ್ದೇ ಇದ್ದನು. ಅವನ ಬಳಿಯಲ್ಲಿ ಆರ್ಸ್‌ಲಾನ್-ಬೇಕ್ ಇಟ್ಟು ಹೋಗಿದ್ದ ಒಂದೆರಡು ಹಿಡಿ ಬೆಳ್ಳಿಯ ನಾಣ್ಯಗಳು ಮಸುಕಾಗಿ ಹೊಳೆಯುತ್ತಿದ್ದವು. ಮುದುಕ ನರಳ[illegible]ದನು; ಮುಖ ಕಣ್ಣೀರಿನಿಂದ ಕರೆಗಟ್ಟಿ ಧೂಳು ಹೆಪ್ಪುಗಟ್ಟಿತ್ತು. ಅವನ ತುಟಿ ಅಲುಗಿತು; ಆದರೆ ಯಾವ ಮಾತೂ ಹೊರಬರಲಿಲ್ಲ. ಆಗ ಮಗಳು ಅಲ್ಲಿ ಬೀಳಿಸಿದ್ದ ಒಂದು ಕೈವಸ್ತ್ರ ಕಣ್ಣಿಗೆ ಬೀಳಲು, ಅವನು ತನ್ನ ನರೆತ ತಲೆಯನ್ನು ಚಚ್ಚಿಕೊಂಡನು, ಗಡ್ಡವನ್ನು ಹರಿದುಕೊಂಡನು.

ಖೋಜಾ ನಸ್ರೆದ್ದೀನ್ ಅವನನ್ನು ಸ್ವಲ್ಪ ಮಟ್ಟಿಗೆ ಸಮಾಧಾನಗೊಳಿಸಬೇಕಾದರೆ ಬಹಳ ಹೊತ್ತು ಹಿಡಿಯಿತು. ಕಟ್ಟಕಡೆಗೆ ಕ[illegible] ಪಟ್ಟು ಅವನು ಎದ್ದು ನಿಲ್ಲುವಂತೆ ಮಾಡಿದನು. ಒಂ[illegible] ಅವನನ್ನು ಕೂರಿಸಿದನು. ಕೂರಿಸಿ ಹೀಗೆಂದನು: "ಮುದುಕಾ, ಕೇಳು. ನೀನೊಬ್ಬನೇ ಅಲ್ಲ ಈಗ ದುಃಖಪಡುತ್ತಿರುವವನು. ಬಹುಶಃ, ನಿನಗೂ ಗೊತ್ತಿರಬಹುದು; ನಾನು ಅವಳನ್ನು ಪ್ರೀತಿಸಿದೆ; ಅವಳೂ ನನ್ನನ್ನು ಪ್ರೀತಿಸಿದಳು. ನಾವು ಮದುವೆ ಮಾಡಿಕೊಳ್ಳಲು ಒಪ್ಪಿದ್ದೆವೆಂದು ನಿನಗೆ ಗೊತ್ತೆ? ನಿನಗೆ ಭಾರಿ ಬಳುವಳಿ ಕೊಡುವುದಕ್ಕೆ ತಕ್ಕಷ್ಟು ಹಣ ಕೂಡಿಸಲೆಂದು ಮಾತ್ರ ಕಾಯುತ್ತಿದ್ದೆ."

"ಬಳುವಳಿಗಳ ವಿಚಾರವನ್ನು ಕಟ್ಟಿಕೊಂಡು ನನಗೇನಾಗಬೇಕು?" ಎಂದು ಮುದುಕ ಬಿಕ್ಕಿಬಿಕ್ಕಿ ಅತ್ತನು. "ನನ್ನ ಪುಟ್ಟಿ ಪಾರಿವಾಳ ಏನು ಬಯಸಿದ್ದರೂ, ಅವಳ ಸಣ್ಣ ಪುಟ್ಟ ಬಯಕೆಗಾದರೂ, ನಾನು ಅಡ್ಡಿಬರುತ್ತಿದ್ದೆನೆ? ಅಯ್ಯೋ, ಈಗ ಅಂಥ ಮಾತುಗಳನ್ನಾಡುವುದಕ್ಕೆ ಕಾಲ ಮೀರಿ ಹೋಯಿತು ಅವಳು ನಮಗೆ ಇನ್ನಿಲ್ಲ. ಇಷ್ಟು ಹೊತ್ತಿಗಾಗಲೇ ಅವಳು ಅಂತಃಪುರದಲ್ಲಿ ಸೇರಿಬಿಟ್ಟಿರಬೇಕು....ಅಯ್ಯೋ! ಅಯ್ಯೋ! ಎಂಥ ಅಪಮಾನ!" ಎಂದು ಹಂಬಲಿಸಿದನು. ಸ್ವಲ್ಪ ತಡೆದು, "ನಾನು ಅರಮನೆಗೆ ಹೋಗಬೇಕು. ಹೌದು, ನಾನು ಅಮೀರನ ಕಾಲಿಗೆ ಬೀಳುತ್ತೇನೆ; ಬೇಡಿಕೊಳ್ಳುತ್ತೇನೆ, ಅಳುತ್ತೇನೆ, ನರಳಿ ಗೋಳಾಡುತ್ತೇನೆ; ಅವನೆದೆಯಲ್ಲಿ ಅಡಗಿರುವ ಹೃದಯ ಕಲ್ಲಿನದಲ್ಲವಾಗಿದ್ದರೆ...."

ಅವನು ಎದ್ದು ತತ್ತರಿಸುತ್ತ ಬಾಗಿಲ ಕಡೆಗೆ ನಡೆದನು.

"ನಿಲ್ಲು!" ಎಂದನು ಖೋಜಾ ನಸ್ರೆದ್ದೀನ್. "ಅಮೀರರು ಇತರ ಮನುಷ್ಯರಂತಲ್ಲ. ಅವರ ಹುಟ್ಟೇ ಬೇರೆ ಎಂಬುದನ್ನು ನೀನು ಮರೆತೇ ಬಿಟ್ಟೆಯಲ್ಲ! ಅವರಿಗೆ ಹೃದಯವಿಲ್ಲ. ಅವರನ್ನು ಬೇಡಿ ಅಂಗಲಾಚುವುದು ವ್ಯರ್ಥ. ಮಾಡಬಹುದಾಗಿರುವುದೇನೆಂದರೆ, ಅವರಿಂದ ಪದಾರ್ಥಗಳನ್ನು ಕಸಿದುಕೊಳ್ಳುವುದು. ಅದೊಂದೇ ಸಾಧ್ಯವಾದ ಕೆಲಸ. ನಾನು, ಖೋಜಾ ನಸ್ರೆದ್ದೀನ್, ಈ ಅಮೀ... ...ಂದ ಗುಲ್ಜಾನಳನ್ನು ಕಸಿದುಕೊಳ್ಳುತ್ತೇನೆ!"

"ಅವನು ಬಹು ಪ್ರಬಲನಾಗಿದ್ದಾನೆ. ಅವನ ಬಳಿ ಸಾವಿರಾರು ಮಂದಿ ಸಿಪಾಯಿಗಳಿ... ...ರೆ; ಸಾವಿರಾರು ಮಂದಿ ಅಂಗರಕ್ಷಕರಿದ್ದಾರೆ; ಸಾವಿರಾರು ...ಒಂದು... ...ದ್ದಾರೆ ಅವನಿಗೆ ವಿರೋಧವಾಗಿ ನೀನೇನು ಮಾಡಬಲ್ಲೆ?"

"ನನಗೆ ... ...ಮಾಡುತ್ತೇನೆಂದು ಇನ್ನೂ ನನಗೇ ಗೊತ್ತಿಲ್ಲ. ಆದರೆ ಇಷ್ಟು ಮಾತ್ರ ನನಗೆ ಚೆನ್ನಾಗಿ ಗೊತ್ತು: ಅವನು ಇವತ್ತಂತೂ ಅವಳನ್ನು ಪಡೆಯಲಾರ! ನಾಳೆಯೂ ಪಡೆಯಲಾರ! ನಾಡಿದ್ದು ಕೂಡ ಅವಳನ್ನು ವಶಪಡಿಸಿಕೊಳ್ಳಲಾರ! ಅವನು ಎಂದೆಂದೂ ಅವಳನ್ನು ಪಡೆಯಲಾರ, ವಶಪಡಿಸಿಕೊಳ್ಳಲಾರ! ಬುಖಾರದಿಂದ ಬಾಗ್ದಾದಿನವರೆಗೂ ನನ್ನ ಹೆಸರು ಖೋಜಾ ನಸ್ರೆದ್ದೀನ್ ಎಂದಿರುವುದು ಎಷ್ಟು ಸತ್ಯವೋ ಇದೂ ಅಷ್ಟೇ ಸತ್ಯ. ಆದ್ದರಿಂದ, ಮುದುಕಾ, ಕಣ್ಣೊರಸಿಕೊ. ನನ್ನ ಕಿವಿಗೆ ಬೀಳುವಂತೆ ಗೋಳಾಡಬೇಡ.

ನನ್ನ ಆಲೋಚನೆಯ ಧಾರೆಯನ್ನು ಅಡ್ಡಿಪಡಿಸಬೇಡ."

ಖೋಜಾ ನಸ್ರೆದ್ದೀನ್ ಸ್ವಲ್ಪವೇ ಹೊತ್ತು ಯೋಚಿಸಿದನು.

"ಮುದುಕಾ, ಹೇಳು, ನಿನ್ನ ಹೆಂಡತಿಯ ಉಡುಪನ್ನು ಎಲ್ಲಿಟ್ಟಿದ್ದೀ

"ಅಲ್ಲಿ, ಆ ಪೆಟ್ಟಿಗೆಯಲ್ಲಿ."

ಖೋಜಾ ನಸ್ರೆದ್ದೀನ್ ಬೀಗದ ಕೈ ತೆಗೆದು ಮನೆಯೊಳಕ್ಕೆ ಹೋ ಕೆಲವು ಕ್ಷಣಗಳಲ್ಲೇ ಹೆಂಗಸಿನ ವೇಷದಲ್ಲಿ ಹೊರಕ್ಕೆ ಬಂದನು. ಒತ್ತು ಗೆಯ ಕುದುರೆಜವಿಯ ಮುಖಪರದೆಯಲ್ಲಿ ಅವನ ಮುಖ ಮುಚ್ಚಿಹೋಗಿ

"ನಾನು ಬರುವ ವರೆಗೂ ಕಾದಿರು, ಮುದುಕಾ. ನೀನೊಬ್ಬನೇ ನಿನ್ನ ನೀನೇ ಏನನ್ನೂ ಮಾಡಲು ಪ್ರಯತ್ನಿಸಬೇಡ."

ಅವನು ತನ್ನ ಕತ್ತೆಯನ್ನು ಕಣಜದಿಂದ ಹೊರಕ್ಕೆ ತಂದು ಜೀನು ಅದರ ಮೇಲೆ ಹತ್ತಿ ನಿಯಾಸನ ಮನೆಯನ್ನು ಬಿಟ್ಟು ಹೊರಟನು.

೬

ಗುಲ್ಜಾನನ್ನು ಅರಮನೆಯ ಉದ್ಯಾನದೊಳಕ್ಕೆ ಕರೆತಂದು ಅ ಎದುರಿಗೆ ಹಾಜರುಮಾಡುವ ಮೊದಲು ಆರ್ಸ್‌ಲಾನ್-ಬೆಕ್ ಅಂ ಮುದುಕಿಯರಿಗೆ ಹೇಳಿಕಳಿಸಿದನು. ಗುಲ್ಜಾನಿಗೆ ಸರಿಯಾದ ಉ ಗಳನ್ನು ತೊಡಿಸಿ ಅಲಂಕಾರ ಮಾಡಬೇಕೆಂದು ಅವರಿಗೆ ಅಪ್ಪಣೆ ಹಾಗೆ ಅಲಂಕಾರ ಮಾಡಿದರೆ, ಅಮೀರನು ಅವಳ ಸೌಂದರ್ಯ ಯನ್ನು ಭಾವಿಸಿ ಭಾವಿಸಿ ಆನಂದಪಡುತ್ತಾನೆಂದು ಅವನೆಣಿ

ಮುದುಕಿಯರು ತಮಗೆ ನಿತ್ಯವೂ ರೂಢಿಯಾಗಿದ್ದ ಕಾ ತೊಡಗಿದರು: ಕಣ್ಣೀರಿನಿಂದ ಕೊಳೆಯಾದ ಗುಲ್ಜಾನಿನ ಮು ಬೆಚ್ಚನೆಯ ನೀರಿನಿಂದ ತೊಳೆದರು. ಪಾರದರ್ಶಕವಾದ ಉಡುಪು ತೊಡಿಸಿದರು; ಅವಳ ಹುಬ್ಬುಗಳ ಕಪ್ಪನ್ನು ಹೆ ರಂಗು ಹಚ್ಚಿದರು; ಕೂದಲಿಗೆ ಗುಲಾಬಿ ಅತ್ತರು ಹಾ ದರು; ಕೈಬೆರಳ ಬಣ್ಣ ಬಳಿದರು. ಆ ಮೇಲೆ ಅಂತಃಪುರದೊಳಗಿನಿಂದ ರ್ಷವರ

*ನಪುಂಸಕ

ಕರಸಿದರು. ಒಂದಾನೊಂದು ಕಾಲದಲ್ಲಿ ಈ ಮನುಷ್ಯನು ಬುಖಾರದಲ್ಲೆಲ್ಲ ಅತಿ ಲಂಪಟಪುರುಷನೆಂದು ಪ್ರಖ್ಯಾತನಾಗಿದ್ದನು. ಈ ವಿಷಯಗಳಲ್ಲಿ ಅವನಿಗಿದ್ದ ತಿಳಿವಳಿಕೆ ಮತ್ತು ಅನುಭವಗಳ ಫಲವಾಗಿಯೇ ಅವನಿಗೆ ಈ ಉಚ್ಚ ಪದವಿ ದೊರೆತಿದ್ದದ್ದು. ಆಸ್ಥಾನದ ಶಸ್ತ್ರವೈದ್ಯನು ತಕ್ಕ ರೀತಿಯಲ್ಲಿ ಅವನನ್ನು ಸಜ್ಜುಗೊಳಿಸಿದ ಮೇಲೆ ಆ ಮಹಾ ಮುಖ್ಯ ಪದವಿಯಲ್ಲಿ ಅವನನ್ನು ಪ್ರತಿಷ್ಠಿಸ ಲಾಯಿತು. ಅಮೀರನಿಗಿದ್ದ ನೂರ ಅರುವತ್ತು ಮಂದಿ ಉಪಪತ್ನಿಯರ ಯೋಗಕ್ಷೇಮವನ್ನು ಸದಾ ನೋಡಿಕೊಳ್ಳುತ್ತ ಅವರು ಅಮೀರನಲ್ಲಿ ಶೃಂಗಾರ ಭಾವವನ್ನು ಉದ್ದೀಪಿಸುವ ಸ್ಥಿತಿಯಲ್ಲಿರುವಂತೆ ಎಚ್ಚರಿಕೆ ವಹಿಸುವುದು ಅವನ ಕರ್ತವ್ಯವಾಗಿತ್ತು.

ವರ್ಷವರ್ಷವೂ ಅವನ ಕರ್ತವ್ಯ ಹೆಚ್ಚು ಗುರುತರವಾಗುತ್ತಿತ್ತು. ಏಕೆಂದರೆ, ಅಮೀರನಿಗೆ ದಿನದಿನಕ್ಕೆ ಇಂದ್ರಿಯಭೋಗದಲ್ಲಿ ಬೇಸರ ಹೆಚ್ಚು ತ್ತಿತ್ತು ಮತ್ತು ಶಕ್ತಿ ಕುಗ್ಗುತ್ತಿತ್ತು. ಅನೇಕ ಸಲ ಮುಖ್ಯ ವರ್ಷವರನಿಗೆ ಪ್ರಾತಃಕಾಲಗಳಲ್ಲಿ ದೊರೆಯುತ್ತಿದ್ದ ಬಹುಮಾನವೆಂದರೆ ಡಸನ್ ಗಟ್ಟಳೆ ಬಾರುಕೋಲೇಟು ಮಾತ್ರ. ಆದರೆ, ಇದು ಕೇವಲ ಅಲ್ಪ ಶಿಕ್ಷೆ, ಅವನಿಗೆ.
' ಬಹು ಹೆಚ್ಚಿನ ಶಿಕ್ಷೆಯೆಂದರೆ, ಚೆಲುವೆಯರಾದ ಆ ಉಪಪತ್ನಿಯರು
ಹೋಗುವ ಮೊದಲು ಅವರನ್ನು ಸಮಾಗಮಕ್ಕೆ ಸಿದ್ಧಗೊಳಿ
‾‾ವ್ಯವನ್ನು ನಿರ್ವಹಿಸುವಾಗ ಅವನಿಗೆ ಆಗುತ್ತಿದ್ದ ಸಂಕಟ,
` ; ಲಂಪಟನಾದ ವ್ಯಭಿಚಾರಿ ನರಕದಲ್ಲಿ ಅನುಭವಿ
'ಡಮೆಯಾಗಿರಲಿಲ್ಲ ವಿಷಯಲಂಪಟವ್ಯಭಿಚಾರಿಗೆ
ಸಿದ್ಧವಾಗಿದೆ: ನಗ್ನರಾದ ಹೌರಿಯರ* ನಡುವೆ
ಕೈಹಾಕಿಬಿಡುತ್ತಾರಂತೆ.

ಗುಲ್ಜಾನನ್ನು ಕಂಡಾಗ ಅವಳ ಅದ್ಭುತ
ತನಾದನು.

ಊ ಪರಮ ಸುಂದರಿ!" ಎಂದು ವಿಸ್ಮಯದಿಂದ
' ಕರೆದುಕೊಂಡು ಹೋಗಿ ಇವಳನ್ನು ಅಮೀರನ

*ದ ಅಪ್ಸರೆ.

ಬಳಿಗೆ. ಕರೆದುಕೊಂಡು ನಡೆಯಿರಿ! ನನ್ನ ಕಣ್ಣೆದುರಿನಿಂದ ಆಚೆ ನಡೆಯಿರಿ! ತೊಲಗಿ ಹೋಗಿ ಇಲ್ಲಿಂದ!" ಎಂದು ಕೀರಲು ದನಿಯಲ್ಲಿ ಕಿರಿಚಿದನು.

ಹೀಗೆಂದು ಅವನು ಅಲ್ಲಿ ನಿಲ್ಲದೆ ದುಡುದುಡನೆ ಹೊರಟು ಹೋದನು; ಗೋಡೆಗಳಿಗೆ ತಲೆ ಚಚ್ಚಿಕೊಳ್ಳುತ್ತಾ, ಹಲ್ಲು ಕಡಿಯುತ್ತಾ, ಆತುರಾತುರವಾಗಿ ಓಡಿದನು. "ಅಯ್ಯೋ, ಕಷ್ಟ, ಕಷ್ಟ! ಎಂಥ ಕಠಿನ ಸಂಕಟ! ಸಹಿಸಲಾರೆ!" ಎಂದು ಗೋಳಿಡುತ್ತಿದ್ದನು.

"ಇದು ಶುಭಲಕ್ಷಣ. ನಮ್ಮ ಪ್ರಭುವಿಗೆ ಸಂತೋಷವಾಗುತ್ತದೆಯೆಂದು ಇದರರ್ಥ" ಎಂದುಕೊಂಡರು ಮುದುಕಿಯರು

ಕಳೆಗುಂದಿ ಮೌನವಾಗಿದ್ದ ಗುಲ್ಜಾನನ್ನು ಅರಮನೆಯ ಉದ್ಯಾನದೊಳಕ್ಕೆ ಕರೆದುಕೊಂಡು ಹೋದರು.

ಅಮೀರನು ಎದ್ದು ಹತ್ತಿರ ಬಂದು ಅವಳ ಮುಖಾವರಣವನ್ನು ಮೇಲಕ್ಕೆತ್ತಿದನು.

ಅಲ್ಲಿ ನೆರೆದಿದ್ದ ವಜೀರರು, ಅಧಿಕಾರಿಗಳು, ಜ್ಞಾನಿಗಳು—ಎಲ್ಲರೂ ತಮ್ಮ ಖಿಲತ್ತಿನ ತೋಳುಗಳಿಂದ ಕಣ್ಣಿಗೆ ಮರೆಮಾಡಿಕೊಂಡರು.

ಬಹಳ ಹೊತ್ತಿನ ವರೆಗೂ ಆ ಮುದ್ದು ಮುಖದಿಂದ ತನ್ನ ದೃಷ್ಟಿ... ಹಿಂದಕ್ಕೆ ತೆಗೆದುಕೊಳ್ಳಲು ಅಮೀರನಿಗೆ ಸಾಧ್ಯವೇ ಆಗಲಿಲ್ಲ.

"ದ...ಬಾರಿ ಬಡ್ಡಿಗಾರನು ನಮ್ಮ ಬಳಿ ಸುಳ್ಳಾಡಲಿಲ್ಲ. ವಾ... ದ್ದಕ್ಕೆ ಮೂರರಷ್ಟು ಬಹುಮಾನ ಕೊಟ್ಟುಬಿಡಿ, ಅವನಿಗೇ!" ... ದನಿಯಲ್ಲಿ ನುಡಿದನು.

ಗುಲ್ಜಾನನ್ನು ಅಲ್ಲಿಂದ ಬೇರೆ ಕಡೆಗೆ ಕರೆದುಕೋ... ಅಮೀರನು ಎಲ್ಲರಿಗೂ ಸ್ಪಷ್ಟವಾಗಿ ಗೋಚರವಾಗುವಂತೆ...

ಆಸ್ಥಾನಿಕರು ಒಬ್ಬರೊಡನೊಬ್ಬರು ಪಿಸುಮಾತಿನಲ್ಲಿ ...ಗಿದರು: "ಅಮೀರರ ಮನಸ್ಸನ್ನು ಬೇರೆ ಕಡೆ ತಿರುಗಿಸು... ತಂತಾಯಿತು. ಈಗ ಹೆಚ್ಚು ಹರ್ಷಿತರಾಗಿದ್ದಾರೆ. ಅವ... ಮುಖಕಮಲದ ಕಡೆ ನೋಡುತ್ತಿದೆ. ನಾಳೆ ಬೆಳಗ್ಗೆ ಅವರು ... ಸ್ಥಿತಿಯಲ್ಲಿರುತ್ತಾರೆ. ಅಲ್ಲಾನ ದಯೆ! ಬಿರುಗಾಳಿ ಬಂದದ್ದು ಬ... ಹೊರಟು ಹೋಯಿತು; ಸಿಡಿಲು ಮಿಂಚುಗಳು ನಮ್ಮಲ್ಲಿ ಯಾರೊಬ್ಬ

ಹೊಡೆದು ಕೆಡವಿದೆ ಹಾಗೆಯೇ ಬಗೆಹರಿಯಿತು."

ಆಸ್ಥಾನದ ಕವಿಗಳು ಧೈರ್ಯಗೊಂಡು, ಮುಂದೆ ಬಂದು ತಮ್ಮ ತಮ್ಮ ಕವನಗಳಲ್ಲಿ ಅಮೀರನನ್ನು ಹಲವು ಬಗೆಯಲ್ಲಿ ಹೊಗಳಿದರು. ಅವನ ಮುಖವನ್ನು ಪೂರ್ಣಚಂದ್ರನಿಗೂ, ಅವನ ನಿಲುವನ್ನು ಸೈಪ್ರೆಸ್ ಮರಕ್ಕೂ, ಅವನ ರಾಜ್ಯಭಾರವನ್ನು ಎರಡು ಗ್ರಹಗಳ ಸಮಾಗಮಕ್ಕೂ ಹೋಲಿಸಿದರು.

ಕಟ್ಟಕಡೆಗೆ, ತಟಕ್ಕನೆ ಸ್ಫೂರ್ತಿ ಬಂದಂತೆ ತೋರಿಸಿಕೊಳ್ಳುತ್ತಾ ಕವಿರಾಜನು ಎದ್ದು ನಿಂತು, ಹಿಂದಿನ ದಿನ ಬೆಳಗಿನಿಂದಲೂ ತನ್ನ ನಾಲಗೆಯ ತುದಿಯಲ್ಲಿ ನರ್ತಿಸುತ್ತಿದ್ದ ಕವನವನ್ನು ಹೊಸದಾಗಿ ರಚಿಸಿದ್ದನೆಂಬಂತೆ ಹಾಡತೊಡಗಿದನು.

ಅಮೀರನು ಅವನ ಕಡೆಗೆ ಒಂದು ಹಿಡಿ ಚಿಲ್ಲರೆ ನಾಣ್ಯಗಳನ್ನೆಸೆದನು. ಕವಿರಾಜನು ರತ್ನಗಂಬಳಿಯ ಮೇಲೆ ಬಗ್ಗಿ ಹರಿದಾಡಿ ಅವನ್ನು ಆಯ್ದುಕೊಂಡನು. ಮತ್ತು ಅಮೀರನ ಸ್ಲಿಪ್ಪರ್(ಪಾದಕ್ಷೆ)ಗಳಿಗೆ ಮುತ್ತಿಡುವುದನ್ನವನು ಮರೆಯಲಿಲ್ಲ.

ಆಗ ಅಮೀರನು ಅನುಗ್ರಹಪೂರ್ವಕವಾಗಿ ನಗುತ್ತ ಹೀಗೆಂದನು:
"ಾವು ಕೂಡ ಒಂದು ಪದ್ಯವನ್ನು ರಚಿಸಿದ್ದೇವೆ:

'ಸಂಜೆ ನಾವು ಹೊರಗೆ ಹೊರಟು ತೋಟದೊಳಗೆ ನಡೆಯಲು
'ನ್ನ ಅಲ್ಪತನಕೆ ನಾಚಿ ಚಂದ್ರ ಮುಗಿಲಲಡಗಿತು.
ಕ್ಕಿಯೆಲ್ಲ ತೆಪ್ಪಗಾಯ್ತು, ಗಾಳಿ ಸ್ತಬ್ಧವಾಯಿತು,
ಕೆವಾವು ಮಹಾ ಮಹಿಮ, ಸುಪ್ರಸಿದ್ಧ, ಅಜಿಯ್ಯರು;
'ರ್ಗಸದೃಶರ್ ಸರ್ವಶಕ್ತರು!'

ಗಳೂ ಮಂಡಿಯೂರಿ ಕುಳಿತು, "ಓ, ಎಂಥ ಮಹಿಮೆ! ಮನ್ನೇ ಮೀರಿಸಿಬಿಟ್ಟರು!" ಎಂದು ಉದ್ಗಾರವೆತ್ತಿದರು. ಾ ಮೆಚ್ಚಿಕೆಯಲ್ಲಿ ವ್ಯಮರೆತವರಂತೆ ನೆಲದ ಮೇಲೆ ಮುಖ ಾ ಅಡ್ಡ ಬಿದ್ದರು.

ಅವರನ್ನು ಹಿಂಬಾಲಿಸಿ ವಿದೂಷಕರೂ, ಯಕ್ಷಿಣಿಗಾರರೂ, ತಮ್ಮ ಯುಕ್ತಿಚಾತುರ್ಯಗಳನ್ನು ಪ್ರದರ್ಶಿಸಿದರು. ಉದಾರವಾಗಿ ಬಹುಮಾನ ನೀಡಿದನು.

"ನನಗೆ ಒಂದೇ ಒಂದು ವಿಷಾದ : ಸೂರ್ಯನ ಮೇಲೆ ಅಧಿಕಾರ ಚಲಾಯಿಸಲಾರೆ! ಹಾಗಲ್ಲವಾಗಿದ್ದರೆ, ಇವತ್ತು ಸೂರ್ಯ ಬೇಗ ಮುಳುಗುವಂತೆ ಅಪ್ಪಣೆ ಮಾಡಿಬಿಡುತ್ತಿದ್ದೆ" ಎಂದು ಅವನು ಮತ್ತೆ ಮತ್ತೆ ಅಂದುಕೊಳ್ಳುತ್ತಲೇ ಇದ್ದನು.

ಆಸ್ಥಾನಿಕರು ಅತಿ ವಿಧೇಯತೆಯ ನಗು ನಕ್ಕು ಅನುಮೋದಿಸಿದರು.

೭

ಮಾರ್ಕಟ್ಟೆ ಪೇಟೆಗಳಲ್ಲಿ ಅಸಾಧ್ಯ ಕೋಲಾಹಲ. ವ್ಯಾಪಾರ ಬಹು ಬಿರುಸಿನಿಂದ ಸಾಗಿತ್ತು : ಮಾರುವುದು, ಕೊಳ್ಳುವುದು, ಪದಾರ್ಥಕ್ಕೆ ಪದಾರ್ಥವನ್ನು ಅದಲು ಬದಲು ಮಾಡಿಕೊಳ್ಳುವುದು— ಈ ಮೊದಲಾದ ಚಟುವಟಿಕೆಗಳೆಲ್ಲಾ ರಭಸದಿಂದ ನಡೆಯುತ್ತಿದ್ದವು. ಬಿಸಿಲೇರುತ್ತಿತ್ತು. ಬಿಸಿಲಿನ ಬೇಗೆ ಜನರನ್ನು ಮೇಲ್ಮರೆಯುಳ್ಳ ಅಂಗಡಿ ಸಾಲುಗಳ ಆಶ್ರಯಕ್ಕೆ ಕಳಿಸುತ್ತಿತ್ತು. ನಡು ಮಧ್ಯಾಹ್ನದ ಸೂರ್ಯರಶ್ಮಿಗಳು ಜೊಂಡಿನ ಚಾವಣಿಗಳಲ್ಲಿನ ದುಂಡು ಕಂಡಿಗಳಿಂದ ಕೆಳಕ್ಕಿಳಿದು ನೆಲ ಮುಟ್ಟಿ ಹೆ
ಕಾಣುತ್ತಿದ್ದವು. ಆ ಬಿಸಿಲು ಕೋಲುಗಳ
ಜರತಾರಿಗಳು ಮಿರುಮಿರನೆ ಮಿಂಚಿದವ
ಮಖಮಲ್ಲುಗಳೂ ಶಾಂತ ಕಾಂತಿಯಿಂದ
ಖಿಲತ್‌ಗಳು, ಬಣ್ಣ ಹಾಕಿದ ಗಡ್ಡಗಳು
ಮತ್ತ ಬಗೆಬಗೆಯ ಬಣ್ಣಗಳನ್ನು ಹರ
ತಾಮ್ರದ ಮೇಲೆ ಬಿಸಿಲು ಬಿದ್ದು ಕ
ಹಣ ಪರಿವರ್ತನೆಗಾರರ ಅಂಗಡಿಯಲ್ಲಿ
ಬಿದ್ದ ಚಿನ್ನದ ನಾಣ್ಯಗಳ ಪರಿಶುದ್ಧ ಕಾಂ
ಬಿಡುತ್ತಿತ್ತು.

ಖೋಜಾ ನಸ್ರೆದ್ದೀನ್ ಟೀ ಅಂ ......
ದನು. ಒಂದು ತಿಂಗಳ ಹಿಂದೆ ಅದೇ ಟೀ ಅಂಗಡಿ
ನಿಂತು, ಬಡ ಕುಂಬಾರ ನಿಯಾಸನನ್ನು ಅಮಿ
ಕಾಪಾಡುವಂತೆ ಬುಖಾರದ ಪಟ್ಟಣಿಗರಿಗೆ ಮನ

ಅಲ್ಪಾವಧಿಯಲ್ಲಿ ಖೋಜಾ ನಸ್ರೆದ್ದೀನನಿಗೂ ಆ ಅಂಗಡಿಯ ಯಜಮಾನ ಆಲಿಗೂ ಗಾಢವಾಗಿ ಸ್ನೇಹ ಬೆಳೆದಿತ್ತು. ಆಲಿ ಹಸನ್ಮುಖಿ, ಮುಚ್ಚುಮರೆಯಿಲ್ಲದವನು, ಸರಳ ಸ್ವಭಾವದವನು ಮತ್ತು ಪ್ರಾಮಾಣಿಕ. ಸಂಪೂರ್ಣವಾಗಿ ನಂಬಿಕೆಗೆ ಅರ್ಹನಾದವನು.

ಅನುಕೂಲ ಸಮಯಕ್ಕೆ ಕಾಯುತ್ತಿದ್ದ ಖೋಜಾ ನಸ್ರೆದ್ದೀನ್,

"ಆಲೀ!" ಎಂದು ಕರೆದನು.

ಯಜಮಾನ ತಿರುಗಿ ನೋಡಿದನು. ಅವನಿಗೆ ದಿಗ್ಭ್ರಮೆಯಾಯಿತು. ಗಂಡಸಿನ ದನಿ ಅವನನ್ನು ಹೆಸರು ಹಿಡಿದು ಕರೆಯುತ್ತಿತ್ತು; ಆದರೆ ಅವನಿಗೆ ಕಾಣಿಸಿದ್ದು ಒಬ್ಬ ಹೆಂಗಸು.

"ನಾನು, ನಾನು ಕಣಯ್ಯಾ, ಆಲಿ!" ಎಂದನು ಖೋಜಾ ನಸ್ರೆದ್ದೀನ್, ಮುಖಪರದೆಯನ್ನು ತೆಗೆಯದೆಯೇ. "ನನ್ನ ಗುರುತು ಹತ್ತಲಿಲ್ಲವೆ? ಅಲ್ಲಾನ ಆಣೆ! ಹಾಗೆ ದುರುಗುಟ್ಟಿ ನೋಡಬೇಡ. ಗೂಢಚಾರರನ್ನು ಮರೆತು ಬಿಟ್ಟೆಯೇನು?" ಎಂದನು.

ಸುತ್ತಮುತ್ತ ಎಚ್ಚರಿಕೆಯಿಂದ ಹೊಂಚಿ ನೋಡುತ್ತ ಆಲಿ ಅವನನ್ನು ಹಿಂಗುಗಡೆಯ ಒಂದು ಕೊಟಡಿಗೆ—ಸೌದೆ ಮತ್ತು ಹೆಚ್ಚಿನ ಕೆಟಲುಗಳನ್ನು ಪೇರಿಸಿಟ್ಟಿದ್ದ ಕೊಟಡಿಗೆ—ಕರೆದುಕೊಂಡು ಹೋದನು. ಇಲ್ಲಿ ನೆಲ ತೇವವಾಗಿ ತಣ್ಣಗಿತ್ತು; ಹೊರಗಿನ ಗದ್ದಲ ಎಲ್ಲೋ ಸ್ವಲ್ಪ ಸ್ವಲ್ಪ ಕೇಳಬರುತ್ತಿತ್ತು.

ಖೋಜಾ ನಸ್ರೆದ್ದೀನ್, "ಆಲಿ! ನನ್ನ ಕತ್ತೆಯನ್ನು ತೆಗೆದುಕೊ. ಅದಕ್ಕೆ ಮೇವು ಹಾಕಿ, ಸದಾ ಸಿದ್ಧವಾಗಿಟ್ಟಿರು. ಅದು ಯಾವಾಗೆಂದರಾವಾಗ ನನಗೆ ಬೇಕಾಗಬಹುದು. ನನ್ನ ವಿಚಾರವಾಗಿ ಯಾರೊಬ್ಬರಿಗೂ ಒಂದು ಮಾತನ್ನೂ ಹೇಳಬೇಡ" ಎಂದು ಹೇಳಿದನು.

"ಆದರೆ, ಖೋಜಾ ನಸ್ರೆದ್ದೀನ್, ಆದೇಕಯ್ಯಾ, ನೀನು ಹೆಂಗಸಿನ ಉಡುಪು ಹಾಕಿಕೊಂಡಿರುವುದು?" ಎಂದು ಕೇಳಿದನು. ಕೇಳುವ ಮೊದಲು ಜಾಗರೂಕತೆಯಿಂದ ಬಾಗಿಲು ಮುಚ್ಚಿಕೊಂಡನು.

"ನಾನು ಅರಮನೆಗೆ ಹೋಗುತ್ತಿದ್ದೇನೆ."

"ನಿನಗೆಲ್ಲೋ ಬುದ್ಧಿ ಕೆಟ್ಟುಹೋಗಿರಬೇಕು! ನೀನು ಹುಲಿಯ ಬಾಯಿಗೆ ತಲೆಯಿಡುತ್ತಿದ್ದೀಯ" ಎಂದನು ಟೀ ಅಂಗಡಿಯ ಯಜಮಾನ.

"ಹೀಗೆ ಮಾಡಲೇಬೇಕಾಗಿದೆ, ಅಲಿ! ಏಕೆಂದು ನಿನಗೆ ಬೇಗನೆ ತಿಳಿಯುತ್ತದೆ. ನಾವು ಈಗಲೇ ಒಬ್ಬರಿಗೊಬ್ಬರು ವಿದಾಯ ಹೇಳಿಬಿಡೋಣ, ಏನಾದರೂ ಆಗಿಬಿಟ್ಟರೆ.. ಅಪಾಯಕರವಾದ ಕೆಲಸದ ಮೇಲೆ ಹೋಗುತ್ತಿದ್ದೇನೆ."

ಬಹು ಪ್ರೀತಿಯಿಂದ ಒಬ್ಬರನ್ನೊಬ್ಬರು ತಬ್ಬಿಕೊಂಡರು. ಟೀ ಅಂಗಡಿಯ ಯಜಮಾನನ ಕಣ್ಣುಗಳಲ್ಲಿ ನೀರು ತುಂಬಿತು; ದೊಡ್ಡದೊಡ್ಡ ಹನಿಗಳು ಅವನ ದುಂಡನೆಯ ಕೆಂಪು ಕೆನ್ನೆಗಳ ಮೇಲೆ ಉರುಳಿದವು. ಅವನು ಖೋಜಾ ನಸ್ರೆದ್ದೀನನನ್ನು ಬೀಳ್ಕೊಟ್ಟನು. ಆ ಮೇಲೆ ಭಾರವಾದ ನಿಟ್ಟುಸಿರುಗಳನ್ನು ಹಾಗೂ ಹೀಗೂ ಅದುಮಿ ಸಮಾಧಾನ ಮಾಡಿಕೊಂಡು, ಕೊಟಡಿಯಿಂದ ಹೊರಟು ಗಿರಾಕಿಗಳ ಬಳಿ ಬಂದನು.

ಅವನ ಹೃದಯ ಭಾರವಾಗಿತ್ತು; ಆತಂಕದಿಂದ ಸಿಡಿದುಹೋಗುತ್ತಿತ್ತು. ದುಃಖಿತನಾಗಿ, ಅನ್ಯಮನಸ್ಕನಾಗಿದ್ದನು. ಗಿರಾಕಿಗಳು ಅವನ ಗಮನ ಸೆಳೆಯುವುದಕ್ಕೆ ಟೀ ಕುಡಿಕೆಗಳ ಮುಚ್ಚಳವನ್ನು ಎರಡು ಸಲ ಮೂರು ಸಲ ಬಡಿದು ಸದ್ದು ಮಾಡಬೇಕಾಗುತ್ತಿತ್ತು. ಮಾನಸಿಕವಾಗಿ ಅವನು ದುರ್ದೈವನಾದ ತನ್ನ ಸ್ನೇಹಿತನ ಜೊತೆಯಲ್ಲೆ ಅರಮನೆಯ ಬಳಿ ಇದ್ದನು.

ಕಾವು ದಳದವರು ಖೋಜಾ ನಸ್ರೆದ್ದೀನನನ್ನು ತಡೆದರು.

ಖೋಜಾ ನಸ್ರೆದ್ದೀನ್ ತನ್ನ ದನಿಯನ್ನು ಬಹು ಜಾಣ್ಮೆಯಿಂದ ಹೆಂಗಸಿನ ದನಿಯಂತೆ ಮಾರ್ಪಡಿಸಿಕೊಂಡು, "ಎಣೆಯಿಲ್ಲದ ಪನ್ನಂಬರ, ಕಸ್ತೂರಿ, ಗುಲಾಬಿ ಅತ್ತರುಗಳನ್ನು ತಂದಿದ್ದೇನೆ. ಓ, ಶೂರ ಸಿಪಾಯಿಗಳೇ! ನನ್ನನ್ನು ಅಂತಃಪುರದೊಳಕ್ಕೆ ಹೋಗಬಿಡಿ. ನನ್ನ ಸಾಮಾನುಗಳನ್ನು ಮಾರಿ ಬಂದ ಲಾಭದಲ್ಲಿ ನಿಮಗೆ ಪಾಲು ಕೊಡುತ್ತೇನೆ" ಎಂದನು. ಮೇಲಿನ ಮಾತುಗಳನ್ನು ಮತ್ತೆ ಮತ್ತೆ ಅನೇಕ ಸಲ ಹೇಳಿದನು.

ಕಾವಲುಗಾರರು ದರ್ಪದಿಂದ, "ತೊಲಗಾಚೆ, ಮುದುಕೀ! ಹೋಗಿ ಪೇಟೆಯಲ್ಲಿ ವ್ಯಾಪಾರ ಮಾಡು, ನಡೆ!" ಎಂದು ಅಟ್ಟಿಬಿಟ್ಟರು.

ಈ ಉದ್ದೇಶ ಸಫಲವಾಗದೆ ಹೋದದ್ದರಿಂದ ಖೋಜಾ ನಸ್ರೆದ್ದೀನ್ ಖಿನ್ನನಾದನು, ಆಲೋಚನಪರನಾದನು. ಅವನಿಗೆ ಇನ್ನು ಹೆಚ್ಚು ಹೊತ್ತಿರಲಿಲ್ಲ. ಸೂರ್ಯನಾಗಲೇ ಆಕಾಶದ ನೆತ್ತಿಯನ್ನು ದಾಟಿಬಿಟ್ಟಿದ್ದನು. ಅವನು

ಅರಮನೆಯ ಕೋಟೆಯನ್ನು ಸುತ್ತಿಬಂದನು. ಚೀನಾ ಗಾರೆ ಅದರ ಕಲ್ಲುಗಳನ್ನು ಬಲವಾಗಿ ಬಿಗಿದಿತ್ತು; ಒಂದೇ ಒಂದು ಬಿರುಕಾಗಲಿ ಒಂದೇ ಒಂದು ಕಂಡಿಯಾಗಲಿ ಕಾಣಿಸಲಿಲ್ಲ. ನೀರು ಹರಿಯುವ ಕಾಲುವೆಗಳ ಕಂಡಿಗಳನ್ನು ನೋಡಿದರೆ, ಅವಕ್ಕೆಲ್ಲ ಬಲವಾದ ಕಬ್ಬಿಣದ ಗಡಾರಿಗಳನ್ನು ಬಡಿದು ಭದ್ರಪಡಿಸಿದ್ದರು.

"ನಾನು ಅರಮನೆಯೊಳಕ್ಕೆ ಹೋಗಲೇಬೇಕು" ಎಂದುಕೊಂಡನು ಖೋಜಾ ನಸ್ರೆದ್ದೀನ್. "ಒಳಕ್ಕೆ ಹೋಗಬೇಕೆಂದು ನನ್ನಿಚ್ಛೆ; ಹೋಗಿಯೇ ತೀರುತ್ತೇನೆ. ನನ್ನ ನಿಶ್ಚಿತ ವಧುವನ್ನು ಅಮೀರನು ಕಿತ್ತುಕೊಳ್ಳಬೇಕೆಂಬ ವಿಧಿಯಿರುವುದೆಂದರೆ, ಅವಳನ್ನು ನಾನು ಮತ್ತೆ ಪಡೆಯುವುದಕ್ಕೂ ವಿಧಿಬಲವಿರಬಹುದು! ಅದೇಕಿರಬಾರದು? ಹಾಗೇ ಆಗುವುದೆಂದು ನನ್ನ ಹೃದಯದಲ್ಲಿ ಆಗಲೇ ಒಂದು ಭಾವನೆ ಮೂಡುತ್ತಿದೆ."

ಹೀಗೆಂದುಕೊಳ್ಳುತ್ತ ಅವನು ಪೇಟೆಗೆ ಹಿಂದಿರುಗಿ ಹೋದನು. ಯಾವನಾದರೊಬ್ಬನು ಸ್ಥಿರವಾಗಿ ಸಂಕಲ್ಪ ಮಾಡಿಕೊಂಡಿದ್ದು ಅವನಿಗೆ ಅಕ್ಷಯವಾದ ಧೈರ್ಯವಿರುವುದಾದರೆ ಅದೃಷ್ಟವೂ ಅವನ ಸಹಾಯಕ್ಕೆ ಬರುವುದೆಂದು ಖೋಜಾ ನಸ್ರೆದ್ದೀನ್ ನಂಬಿದ್ದನು. ಒಬ್ಬನಿಗೆ ಒದಗುವ ಸಾವಿರಾರು ಭೇಟಿಗಳಲ್ಲಿ, [illegible]ಣೆಗಳಲ್ಲಿ ಮತ್ತು ಹೋರಾಟಗಳಲ್ಲಿ ಅವನಿಗೆ ಅನುಕೂಲ ಸನ್ನಿವೇಶ ಪ[illegible]ವಮಾಡುವ ಯಾವುದೋ ಒಂದು ಸಂದರ್ಭ ಬಂದೇ ತೀರುತ್ತದೆ; ಅದನ್ನು ಜಾಣತನದಿಂದ ಉಪಯೋಗಿಸಿಕೊಂಡು ಕೆಲಸ ಮಾಡಿದರೆ, ಅವನ ಉದ್ದೇಶಸಾಧನೆಗಿರುವ ಅಡ್ಡಿಗಳೆಲ್ಲ ಪರಿಹಾರವಾಗುತ್ತವೆ. ಹೀಗೆ ಅವನ ಅದೃಷ್ಟಫಲ ಸಿದ್ಧಿಯಾಗುತ್ತದೆ. ಪೇಟೆಯಲ್ಲಿ ಎಲ್ಲೋ ಒಂದು ಕಡೆ ಅಂಥ ಅನುಕೂಲ ಸಂದರ್ಭ ಅವನಿಗಾಗಿ ಕಾಯುತ್ತಿತ್ತು. ಹೀಗೆಂದು ಅವನು ನಂಬಿದ್ದನು. ನಿಸ್ಸಂಶಯವಾಗಿ ಈ ನಂಬಿಕೆಯನ್ನಿಟ್ಟುಕೊಂಡು ಶುಭಸಂದರ್ಭವನ್ನು ಹುಡುಕಿಕೊಂಡು ಹೊರಟನು.

ಖೋಜಾ ನಸ್ರೆದ್ದೀನ್ ಯಾವುದೊಂದನ್ನೂ ಬಿಡದೆ ಗಮನಿಸುತ್ತಿದ್ದನು—ಅನೇಕ ಸಾವಿರ ಜನ ನೆರೆದ ಆ ಸಂತೆಯ ಗುಂಪಿನಲ್ಲಿ ಯಾವುದೊಂದು ಮಾತೂ ಯಾವುದೊಂದು ಮುಖವೂ ಅವನ ಗಮನದಿಂದ ತಪ್ಪಿಸಿಕೊಳ್ಳಲಿಲ್ಲ. ಅವನ ಮನಸ್ಸು, ಕಿವಿಗಳು ಮತ್ತು ದೃಷ್ಟಿ ಇವೆಲ್ಲ ಆಗ ಅವನಲ್ಲಿ ತೀವ್ರ ಸ್ಥಿತಿ

ಯನ್ನು ಮುಟ್ಟಿದ್ದವು; ಆ ಸ್ಥಿತಿಯಲ್ಲಿ ಪ್ರಕೃತಿಯಿಂದ ಮಾನವನ ಮೇಲೆ ಹೊರಿಸಿರುವ ಮಿತಿಗಳೆಲ್ಲ ಮುರಿದು ಹೋಗಿ ಅವನ ಶಕ್ತಿ ಅಪ್ರಾಕೃತವಾಗುತ್ತದೆ. ಅಂಥ ಸಂದರ್ಭದಲ್ಲಿ ಜಯ ಅವನದೆಂಬುದು ಖಂಡಿತ. ಏಕೆಂದರೆ, ಅವನ ವಿರೋಧಿಗಳು ಅದೇ ಸಮಯದಲ್ಲಿ ಮಾನವಸಹಜವಾದ ಮಿತಿಯೊಳಗೇ ವ್ಯವಹರಿಸುತ್ತಿರುತ್ತಾರೆ.

ಆಭರಣಕಾರರ ಮತ್ತು ಪರಿಮಳಗಾರರ ಸಾಲುಗಳು ಕೂಡುವ ಸ್ಥಳದಲ್ಲಿ ಖೋಜಾ ನಸ್ರೆದ್ದೀನನಿಗೆ ಒಂದು ದನಿ ಕೇಳಿಸಿತು; ಗುಂಪಿನ ಗುಜುಗುಜು ಸದ್ದಿನ ನಡುವೆ ಯಾರೋ ಹೀಗೆ ಹೇಳುತ್ತಿರುವಂತೆ ಕೇಳಿಸಿತು:

"ನಿನ್ನ ಗಂಡ ನಿನ್ನನ್ನು ಈಗ ಪ್ರೀತಿಸುತ್ತಿಲ್ಲ, ನಿನ್ನ ಬಳಿ ಮಲಗುತ್ತಿಲ್ಲ ಎಂದು ತಾನೆ ನೀನು ಹೇಳುವುದು? ನಿನ್ನ ಕಷ್ಟಕ್ಕೆ ಪರಿಹಾರವಿದೆ. ಆದರೆ, ಈ ವಿಷಯದಲ್ಲಿ ನಾನು ಖೋಜಾ ನಸ್ರೆದ್ದೀನನ ಸಂಗಡ ಆಲೋಚನೆ ಮಾಡಬೇಕು. ಅವನು ಈ ಪಟ್ಟಣದಲ್ಲಿದ್ದಾನೆಂದು ನೀನು ಕೇಳಿರಬಹುದು, ಅಲ್ಲವೆ? ಅವನೆಲ್ಲಿದ್ದಾನೆ ಗೊತ್ತುಮಾಡಿ ತಿಳಿಸು. ಆ ಮೇಲೆ ನಾವಿಬ್ಬರೂ ಸೇರಿ ನಿನ್ನ ಗಂಡ ನಿನ್ನ ಬಳಿಗೆ ಹಿಂದಿರುಗುವಂತೆ ಮಾಡುತ್ತೇವೆ."

ಖೋಜಾ ನಸ್ರೆದ್ದೀನ್ ಇನ್ನೂ ಹತ್ತಿರ ಹೋದನು. ಸಿಡುಬಿನ ಕ[illegible] ಗೂಢಚಾರ ಭವಿಷ್ಯ ಹೇಳುತ್ತಿರುವುದು ಕಾಣಿಸಿತು. ಒಂದು ಬೆಳ್ಳಿಯ ನ[illegible]ವನ್ನು ಹಿಡಿದುಕೊಂಡು ಹೆಂಗಸೊಬ್ಬಳು ಅವನ ಮುಂದೆ ನಿಂತಿದ್ದಳು. ಭವಿಷ್ಯವಾದಿ ಚಿತ್ರಗಳನ್ನು ಕಂಬಳಿಯ ಮೇಲೆ ಎರಚಿ ಯಾವುದೋ ಒಂದು ಪುರಾತನ ಗ್ರಂಥದ ಪುಟಗಳನ್ನು ತಿರುವಿ ಹಾಕುತ್ತಿದ್ದನು.

"ಆದರೆ ನೀನು ಖೋಜಾ ನಸ್ರೆದ್ದೀನನನ್ನು ಕಂಡುಹಿಡಿಯಲಾಗದಿದ್ದರೆ, ಓ, ಹೆಂಗಸೇ, ನಿನ್ನ ಗತಿ ದುಃಖಮಯವಾಗುತ್ತದೆ; ನಿನ್ನ ಗಂಡ ನಿನ್ನನ್ನು ಪೂರ್ತಿಯಾಗಿ ಬಿಟ್ಟೇಬಿಡುತ್ತಾನೆ!" ಎಂದನು ಆ ಭವಿಷ್ಯವಾದಿ.

ಭವಿಷ್ಯವಾದಿಗೊಂದು ಪಾಠ ಕಲಿಸಬೇಕೆಂದು ಖೋಜಾ ನಸ್ರೆದ್ದೀನ್ ನಿರ್ಧರಿಸಿದನು. ಕಂಬಳಿಯ ಮುಂದೆ ಹೋಗಿ ಕುಳಿತುಕೊಂಡನು.

ಭವಿಷ್ಯವಾದಿ ಚಿತ್ರಗಳನ್ನೆರಚಿದನು. "ಅಯ್ಯೋ, ಹೆಂಗಸೇ!" ಎಂದು ಅವನು ತಟ್ಟನೆ ಉದ್ಗಾರ ಮಾಡಿದನು; ಮಹಾ ಭಯದಿಂದ ತತ್ತರಿಸಿದವನಂತೆ ನುಡಿದನು. "ಅಯ್ಯೋ, ನಿನ್ನದು ಮಹಾ ದುರ್ಗತಿ! ಮೃತ್ಯುವಾಗಲೇ ತನ್ನ

ಉಗ್ರ ಹಸ್ತವನ್ನು ನಿನ್ನ ತಲೆಯ ಮೇಲೆ ಎತ್ತಿ ನಿಂತಿದೆ!" ಎಂದನು.

ಕುತೂಹಲಗೊಂಡ ಹಲವಾರು ಜನ ಅವರ ಸುತ್ತ ಬಂದು ಮುತ್ತಿದರು.

"ಮೃತ್ಯುವಿನ ಏಟನ್ನು ತಪ್ಪಿಸಿಕೊಳ್ಳುವುದಕ್ಕೆ ನಾನು ನಿನಗೆ ಸಹಾಯ ಮಾಡಲಾದೀತು" ಎಂದು ಭವಿಷ್ಯವಾದಿ ಮುಂದುವರಿಸಿದನು. "ಆದರೆ, ಒಂಟಿಯಾಗಿ ನಾನು ಆ ಕೆಲಸ ಮಾಡಲಾರೆ. ನಾನು ಖೋಜಾ ನಸ್ರೆದ್ದೀನನ ಸಂಗಡ ಆಲೋಚಿಸಬೇಕು. ಅವನನ್ನು ಗೊತ್ತುಮಾಡಿ, ಅವನು ಎಲ್ಲಿದ್ದಾನೆಂದು ನನಗೆ ತಿಳಿಸಿದರೆ, ಆಗ ನಿನ್ನ ಪ್ರಾಣವನ್ನು ಬದುಕಿಸುವುದು ಸಾಧ್ಯವಾಗುತ್ತದೆ."

"ಒಳ್ಳೆಯದು. ಖೋಜಾ ನಸ್ರೆದ್ದೀನನನ್ನು ನಿನ್ನ ಬಳಿಗೆ ಕರೆದುಕೊಂಡು ಬರುತ್ತೇನೆ."

"ಅವನನ್ನು ಕರೆದುಕೊಂಡು ಬರುತ್ತೀಯಾ?" ಎಂದು ಕೇಳಿದನು. ಭವಿಷ್ಯವಾದಿ ಸಂತೋಷದಿಂದ ಬೆರಗಾದನು. "ಯಾವಾಗ?"

"ಈ ಕ್ಷಣವೇ ಕರೆತರಬಲ್ಲೆ. ಅವನು ಇಲ್ಲೇ ಹತ್ತಿರ ಇದ್ದಾನೆ."

"ಎಲ್ಲಿದ್ದಾನೆ?"

"ಇಲ್ಲಿ; ಬಹಳ ಹತ್ತಿರದಲ್ಲೇ."

"ಎಲ್ಲಿದ್ದಾನೆ? ನನಗೆ ಕಾಣುವುದಿಲ್ಲವಲ್ಲ?"

"ನೀನು, ಭವಿಷ್ಯವಾದಿ! ಅಷ್ಟು ಊಹಿಸುವುದಕ್ಕಾಗುವುದಿಲ್ಲವೆ? ಇಗೋ, ಇಲ್ಲೇ ಇದ್ದಾನೆ ಅವನು!"

ಅವನೆದುರಿಗೆ ಕುಳಿತಿದ್ದ ಹೆಂಗಸು ರಭಸದಿಂದ ತನ್ನ ಮುಖಾವರಣವನ್ನು ಹಿಂದಕ್ಕೆ ಸರಿಸಿದಳು. ಖೋಜಾ ನಸ್ರೆದ್ದೀನನನ್ನು ಕಣ್ಣೆದುರಿಗೇ ಕಂಡು ಭವಿಷ್ಯವಾದಿ ಕಂಕುಮಂಕಾದನು; ಬೆಚ್ಚಿ ಬೆರಗಾದನು.

"ಇಗೋ, ಇಲ್ಲಿದ್ದಾನೆ!" ಎಂದು ಮತ್ತೆ ಒತ್ತಿ ನುಡಿದನು ಖೋಜಾ ನಸ್ರೆದ್ದೀನ್. "ಯಾವ ವಿಚಾರದಲ್ಲಿ ನನ್ನ ಸಲಹೆ ಕೇಳಬೇಕೆಂದಿದ್ದೆ? ನೀನು ಸುಳ್ಳು ಹೇಳುತ್ತಿದ್ದೀಯ. ನೀನು ಭವಿಷ್ಯವಾದಿಯಲ್ಲ. ಅಮೀರನ ಗೂಢಚಾರರಲ್ಲೊಬ್ಬ ನೀನು! ಓ, ಮುಸ್ಲಿಮರೇ, ಇವನನ್ನು ನಂಬಬೇಡಿ. ನಿಮ್ಮನ್ನು ವಂಚಿಸುತ್ತಿದ್ದಾನೆ ಇವನು! ಇವನು ಇಲ್ಲಿ ಕುಳಿತು ಕಣಿ ಹೇಳುತ್ತಿರುವುದು ಖೋಜಾ ನಸ್ರೆದ್ದೀನನನ್ನು ಹುಡುಕಿ ಹಿಡಿಯುವುದಕ್ಕಾಗಿ!"

ಗೂಢಚಾರನ ಕಣ್ಣು ಅತ್ತ ಇತ್ತ ಸುತ್ತಿ ಸುಳಿಯಿತು. ಆದರೆ ಒಬ್ಬ ಸಿಪಾಯಿಯೂ ಕಣ್ಣಿಗೆ ಬೀಳಲಿಲ್ಲ. ಖೋಜಾ ನಸ್ರೆದ್ದೀನ್ ಅಲ್ಲಿಂದ ಹೊರಟು ಹೋದನು. ಅದನ್ನು ಕಂಡು ಗೂಢಚಾರನಿಗೆ ಅಳು ಬರುವ ಹಾಗಾಯಿತು. ಅವನ ಸುತ್ತ ಗುಂಪು ಒತ್ತಾಗಿ ಸೇರಿ ಭಯ ಹುಟ್ಟಿಸುತ್ತಿತ್ತು.

“ ಅಮೀರನ ಗೂಢಚಾರ ! ಕೊಳಕು ನಾಯಿ ! ” ಎಂದು ಸುತ್ತಮುತ್ತ ಕೂಗೆದ್ದಿತು.

ಭವಿಷ್ಯವಾದಿ ಕಂಬಳಿ ಮುದುರಿಕೊಳ್ಳುವಾಗ ಅವನ ಕೈ ಗಡಗಡನೆ ನಡುಗುತ್ತಿತ್ತು. ಕಂಬಳಿ ಮುದುರಿಕೊಂಡು ಅವನು ಕಂಬಿಕಿತ್ತನು ; ನಾಗಾಲೋಟದಿಂದ ಓಡಿ ಹೋಗಿ ಅರಮನೆಯನ್ನು ಸೇರಿಕೊಂಡನು.

೬

ದೂಳು ತುಂಬಿ ವಾಸನೆತುಂಬಿ ಹೊಗೆ ತುಂಬಿ ಕೊಳಕಾದ ಕಾಪಿನ ಕೋಣೆಯಲ್ಲಿ ಕಾಪಿನಾಳುಗಳು ಚಿಗುಟಗಳಿಗೆ ಉತ್ಪತ್ತಿಸ್ಥಾನವಾದ ಹಳೆಯ ಹರುಕಲು ಫೆಲ್ಟಿನ ಮೇಲೆ ಕುಳಿತು ಮೈ ಕೆರೆದುಕೊಳ್ಳುತ್ತ ಖೋಜಾ ನಸ್ರೆದ್ದೀನನನ್ನು ಸೆರೆಹಿಡಿಯುವ ಸಾಧ್ಯಾಸಾಧ್ಯತೆಗಳ ವಿಷಯವಾಗಿ ಚರ್ಚಿಸುತ್ತಿದ್ದರು.

“ ಮೂರು ಸಾವಿರ ಟಂಗಗಳು ! ಅದನ್ನು ಯೋಚಿಸಿಕೊಳ್ಳಿ ! ಮೂರು ಸಾವಿರ ಟಂಗಗಳು, ಅದರ ಜೊತೆಗೆ ಮುಖ್ಯ ಗೂಢಚಾರನ ಪದವಿ ! ”

“ ಯಾರೋ ಒಬ್ಬ ಅದೃಷ್ಟಶಾಲಿಯಾಗಿರುವುದು ಖಂಡಿತ ! ”

“ ನಾನೇ ಆ ಅದೃಷ್ಟಶಾಲಿಯಾಗಿರಬಾರದೆ ? ”– ಎಂದುಕೊಂಡು ಒಬ್ಬ ಬೊಜ್ಜು ಹೊಟ್ಟೆಯ ಸೋಮಾರಿ ಸಿಪಾಯಿ ನಿಟ್ಟುಸಿರುಬಿಟ್ಟನು. ಅವನು ಕಾಪುದಳದವರಲ್ಲೆಲ್ಲ ಅತ್ಯಂತ ದಡ್ಡ ; ಹಸಿ ಮೊಟ್ಟೆಗಳನ್ನು ಒಡೆಯದೆ ಇಡಿಯಾಗಿಯೇ ನುಂಗಿಬಿಡುತ್ತಿದ್ದ ತನ್ನ ಅದೊಂದೇ ಯೋಗ್ಯತೆಯಿಂದ, ಅದೊಂದೇ ವಿದ್ಯೆಯ ಬಲದಿಂದ, ಅವನು ಕೆಲಸ ಕಳೆದುಕೊಳ್ಳದೆ ಇದ್ದನು. ಆಗೊಮ್ಮೆ ಈಗೊಮ್ಮೆ ಅಮೀರನ ಎದುರಿಗೆ ಈ ಚಾತುರ್ಯವನ್ನು ಪ್ರದರ್ಶನ ಮಾಡಿ ಸಣ್ಣಪುಟ್ಟ ಬಹುಮಾನಗಳನ್ನು ಪಡೆಯುತ್ತಿದ್ದನು. ಬಹುಮಾನ ಬಂದರೂ ಆ ಮೇಲೆ ಅವನು ತೀವ್ರವಾದ ಹೊಟ್ಟೆನೋವಿನಿಂದ ತುಂಬ ನರಳಬೇಕಾಗುತ್ತಿತ್ತು.

ಸಿಡುಬಿನ ಕಲೆಯ ಗೂಢಚಾರನು ಕಾಪಿನ ಕೋಣೆಗೆ ಸುಂಟರಗಾಳಿಯಂತೆ ನುಗ್ಗಿದನು.

“ ಅವನು ಇಲ್ಲಿದ್ದಾನೆ! ಖೋಜಾ ನಸ್ರೆದ್ದೀನನು ಪೇಟೆಯಲ್ಲಿದ್ದಾನೆ! ಹೆಂಗಸಿನ ಹಾಗೆ ಉಡುಪು ಹಾಕಿಕೊಂಡಿದ್ದಾನೆ! ”

ಕಾಪುಸಿಪಾಯಿಗಳು ಹೆಬ್ಬಾಗಿಲ ಕಡೆಗೆ ಓಡಿದರು; ಹೋಗುವಾಗ ದಾರಿಯಲ್ಲೆ ತಮ್ಮ ತಮ್ಮ ಆಯುಧಗಳನ್ನು ಎಳೆದು ತೆಗೆದುಕೊಳ್ಳುತ್ತಿದ್ದರು.

“ ಬಹುಮಾನ ನನ್ನದು! ಕೇಳಿಸಿತೋ? ನಾನು ಅವನನ್ನು ಮೊದಲು ನೋಡಿದವನು! ಬಹುಮಾನ ನನ್ನದು! ”

ಕಾಪುದಳದ ಸಿಪಾಯಿಗಳನ್ನು ಕಂಡ ಕೂಡಲೆ ಜನ ಆತುರಾತುರವಾಗಿ ಚೆದರಿದರು. ಅದರಿಂದಾದ ನೂಕುನುಗ್ಗಲಿನಲ್ಲಿ ಪೇಟೆಯೆಲ್ಲಾ ತೀವ್ರಭಯದ ನೆಲೆಯಾಗಿಬಿಟ್ಟಿತು. ಕಾಪುಸಿಪಾಯಿಗಳು ಗುಂಪಿನ ನಟ್ಟನಡುವಿಗೆ ನುಗ್ಗಿದರು. ಎಲ್ಲರಿಗಿಂತ ಮುಂದಾಗಿ ನುಗ್ಗಿದ್ದ ಅತ್ಯಂತ ಉತ್ಸಾಹವಂತನೊಬ್ಬನು ಯಾವಳೋ ಒಬ್ಬ ಹೆಂಗಸನ್ನು ಹಿಡಿದುಕೊಂಡು ಅವಳ ಮುಖಪರದೆಯನ್ನು ಹರಿದುಹಾಕಿ ಅವಳ ಮುಖ ಗುಂಪಿಗೆಲ್ಲಾ ಕಾಣುವಂತೆ ಮಾಡಿದನು.

ಆ ಹೆಂಗಸು ಕಿಟಾರನೆ ಕಿರಿಚಿಕೊಂಡಳು. ಬೇರೊಂದು ದಿಕ್ಕಿನಿಂದ ಮತ್ತೊಂದು ಕಿರಿಚು ಕೇಳಿಸಿತು. ಆ ಮೇಲೆ ಮೂರನೆಯವಳೊಬ್ಬಳು ಸಿಪಾಯಿಗಳ ಕೈಗೆ ಸಿಕ್ಕಿ ಕೊಸರಾಡುತ್ತ ಗಟ್ಟಿಯಾಗಿ ಕಿರಿಚಿದಳು. ಆ ಮೇಲೆ ನಾಲ್ಕನೆಯವಳು; ಐದನೆಯವಳು....ಪೇಟೆಯೆಲ್ಲ ಹೆಂಗಸರ ಕಿರಿಚಾಟ ಅರಚಾಟ ಗೋಳಾಟ ಅಳು ಗದ್ದಲಗಳಿಂದ ತುಂಬಿ ಹೋಯಿತು.

ಗುಂಪಿಗೆ ಗಾಬರಿಯಾಯಿತು; ಬೆರಗಾಯಿತು; ಅಲುಗಾಡದೆ ಸ್ತಬ್ಧವಾಗಿ ನಿಂತಿತು. ಅದಕ್ಕೆ ಮುಂಚೆ ಬುಖಾರದಲ್ಲಿ ಅಂಥ ಅತ್ಯಾಚಾರವನ್ನು ಎಂದೂ ಕಂಡಿರಲಿಲ್ಲ. ಕೆಲವರು ಬೆಳ್ಳಗೆ ಬಿಳಿಚಿಕೊಂಡರು; ಕೆಲವರು ಕೆಂಪಗೆ ರಕ್ತವಾದರು. ಪ್ರತಿಯೊಬ್ಬರ ಮನಸ್ಸೂ ಕಲಕಿಹೋಯಿತು. ಸಿಪಾಯಿಗಳು ತಮ್ಮ ಕೆಲಸವನ್ನು ಮಾಡುತ್ತಲೇ ಇದ್ದರು: ಹೆಂಗಸರನ್ನು ಹಿಡಿಯುವುದು, ನೂಕುವುದು, ತಳ್ಳುವುದು, ಚಚ್ಚುವುದು, ಬಡಿಯುವುದು, ಹೊಡೆಯುವುದು ಮತ್ತು ಅವರ ಬಟ್ಟೆಗಳನ್ನು ಹರಿಯುವುದು— ಇವು ನಿಲುಗಡೆಯಿಲ್ಲದೆ ನಡೆಯುತ್ತಲೇ ಇದ್ದವು.

"ಸಹಾಯ! ಸಹಾಯಕ್ಕೆ ಬನ್ನಿ!" ಎಂದು ಕಿರಿಚಿಕೊಳ್ಳುತ್ತಿದ್ದರು ಹೆಂಗಸರೆಲ್ಲ.

ಕಮ್ಮಾರ ಯೂಸುಫ್ ದನಿಯೇರಿಸಿ ಗುಂಪಿನ ಮೇಲೆ ತನ್ನ ಪ್ರಭಾವ ತಾನೇ ತಾನಾಗುವಂತೆ ಗಟ್ಟಿಯಾಗಿ ಕೂಗಿದನು: "ಮುಸ್ಲಿಮರೇ! ಅದೇಕೆ ಹಿಂದೆ ಮುಂದೆ ನೋಡುತ್ತೀರಿ? ಈ ಕಾಪುಸಿಪಾಯಿಗಳು ನಮ್ಮನ್ನು ಸೂರೆ ಮಾಡುವುದು ಸಾಲದೇನು? ನಮ್ಮ ಹೆಂಗಸರನ್ನೂ ಅವರು ಹಾಡೇ ಹಗಲಿನಲ್ಲೇ ಅಗೌರವ ಪಡಿಸಲು ನಾವು ಅವಕಾಶ ಕೊಡಬೇಕೆ?"

"ಸಹಾಯ! ಸಹಾಯ!" ಎಂದು ಹೆಂಗಸರು ಕಿರಿಚುತ್ತಲೇ ಇದ್ದರು.

ಗುಂಪು ಗುರುಗುಟ್ಟತೊಡಗಿತು. ನೀರು ಹೊರುವವನೊಬ್ಬನು ತನ್ನ ಹೆಂಡತಿಯ ದನಿಯನ್ನು ಗುರುತಿಸಿ, ಅವಳ ರಕ್ಷಣೆಗೆ ಓಡಿಬಂದನು. ಸಿಪಾಯಿಗಳು ಅವನನ್ನು ಅತ್ತ ನೂಕಿದರು. ಆದರೆ ಇಬ್ಬರು ನೇಗೆಯವರೂ ಮೂವರು ಕಂಚುಗಾರರೂ ಅವನ ನೆರವಿಗೆ ಬಂದರು. ಬಂದು ಸಿಪಾಯಿಗಳನ್ನು ಹಿಮ್ಮೆಟ್ಟಿಸಿದರು. ಹೊಡೆದಾಟ ಪ್ರಾರಂಭವಾಯಿತು.

ಕ್ರಮಕ್ರಮವಾಗಿ ಎಲ್ಲರೂ ಆ ಹೊಡೆದಾಟದಲ್ಲಿ ಸೇರಿಕೊಂಡರು. ಸಿಪಾಯಿಗಳು ತಮ್ಮ ಕತ್ತಿಗಳನ್ನು ಬೀಸಿದರು. ಎಲ್ಲ ಕಡೆಗಳಿಂದಲೂ ಅವರ ಮೇಲೆ ಗಡಿಗೆಗಳು, ತಟ್ಟೆಗಳು, ಹೂಜಿಗಳು, ಕೆಟಲುಗಳು, ಕುದುರೆ ಲಾಳಗಳು, ಮರದ ತುಂಡುಗಳು—ಇವನ್ನೆಲ್ಲ ಎಸೆಯುತ್ತಿದ್ದರು. ತಪ್ಪಿಸಿಕೊಳ್ಳುವುದಕ್ಕೆ ಅವರಿಗೆ ಸಮಯವಿರಲಿಲ್ಲ. ಹೊಡೆದಾಟ ಪೇಟೆಯಲ್ಲೆಲ್ಲ ಹರಡಿತು.

ಇದು ಹೀಗಿರುವಲ್ಲಿ ಇತ್ತ ಅರಮನೆಯಲ್ಲಿ ಅಮೀರನು ಸುಖನಿದ್ರೆ ತೂಕಡಿಸುತ್ತಿದ್ದನು. ತಟಕ್ಕನೆ ಅವನು ನೆಗೆದೆದ್ದನು ಕಿಟಕಿಯ ಬಳಿ ಹೋಗಿ ಅದರ ಬಾಗಿಲು ತೆರೆದನು, ಹೊರಗೆ ನೋಡಿ ಮಹಾ ಭಯ ಹುಟ್ಟಿ ಬಲವಾಗಿ ಸದ್ದಾಗುವಂತೆ ಕದವನ್ನು ಮುಚ್ಚಿದನು.

ಬಖ್ತಿಯಾರ್ ಓಡುತ್ತ ಬಂದನು; ಅವನ ಮುಖ ಬೆಳ್ಳಗಾಗಿ ತುಟಿ ನಡುಗುತ್ತಿತ್ತು.

"ಯಾರದು?" ಎಂದು ಅಮೀರ ತಗ್ಗುದನಿಯಲ್ಲಿ ಕೇಳಿದನು. "ಅಲ್ಲಿ ಏನಾಗುತ್ತಿದೆ? ಫಿರಂಗಿಗಳೆಲ್ಲಿ? ಅರ್ಸ್ಲಾನ್-ಬೆಕ್ ಎಲ್ಲಿ?" ಎಂದು ಪ್ರಶ್ನೆ ಮಾಡಿದನು.

ಆರ್ಸ್‌ಲಾನ್-ಬೆಕ್ ಓಡಿ ಬಂದು ಅಡ್ಡ ಬಿದ್ದನು.

“ ಮಹಾಸ್ವಾಮಿಯವರು ನನ್ನ ತಲೆಯನ್ನು ಕಡಿದುಹಾಕುವಂತೆ ಅಪ್ಪಣೆ ಮಾಡಬೇಕು ! ”

“ ಏನಿದು ? ಏನಾಯಿತು ? ”

ಮೇಲಕ್ಕೇಳದೆ ಆರ್ಸ್‌ಲಾನ್-ಬೆಕ್ ಅಡ್ಡ ಬಿದ್ದೇ ಉತ್ತರ ಕೊಟ್ಟನು :

“ ಓ ಮಹಾಸ್ವಾಮಿ ! ಸೂರ್ಯಸಮಾನರಾಗಿ....”

“ ನಿಲ್ಲಿಸು ! ” ಎಂದು ಅಮೀರನು ತಡೆಯಲಾರದ ರೋಷದಿಂದ ನುಡಿದನು. ಅದನ್ನೆಲ್ಲ ಆ ಮೇಲೆ ಹೇಳುವೆಯಂತೆ. ಅಲ್ಲಿ ಹೊರಗೆ ಏನಾಗುತ್ತಿದೆ ? ಹೇಳು ” ಎಂದನು.

“ ಖೋಜಾ ನಸ್ರೆದ್ದೀನ್ ! ಅವನು ಹೆಂಗಸಿನಂತೆ ವೇಷ ಹಾಕಿದ್ದನು. ಎಲ್ಲಾ ಅವನ ತಪ್ಪು ; ಇದೆಲ್ಲಾ ಆ ಖೋಜಾ ನಸ್ರೆದ್ದೀನನಿಂದಲೇ ಆಗಿರುವುದು ! ನನ್ನ ತಲೆಯನ್ನು ಕಡಿದುಬಿಡುವಂತೆ ಅಪ್ಪಣೆ ಮಾಡಬೇಕು.”

ಆದರೆ ಅಮೀರನಿಗೆ ಬೇರೆ ಚಿಂತೆಗಳಿದ್ದವು.

## ೯

ವಿಶೇಷವಾಗಿ ಈ ದಿನ, ಖೋಜಾ ನಸ್ರೆದ್ದೀನ್ ಒಂದೊಂದು ನಿಮಿಷವನ್ನೂ ಬಹಳ ಬೆಲೆಯುಳ್ಳದ್ದಾಗಿ ಭಾವಿಸಿದನು. ಆದ್ದರಿಂದ ಅವನು ಪೇಟೆಯಲ್ಲಿ ಸುತ್ತಾಡುತ್ತ ಕಾಲ ಕಳೆಯಲಿಲ್ಲ. ಆದರೆ ಒಬ್ಬ ಸಿಪಾಯಿಯ ದವಡೆ ಒಡೆದು, ಮತ್ತೊಬ್ಬನ ಹಲ್ಲು ಮುರಿದು, ಮೂರನೆಯವನ ಮೂಗನ್ನು ಜಜ್ಜಿಹಾಕಿ, ತನ್ನ ಗೆಳೆಯ ಅಲಿಯ ಟೀ ಅಂಗಡಿಗೆ ಸುಖವಾಗಿ ಬಂದು ಸೇರಿದನು. ಇಲ್ಲಿ ಹಿಂದುಗಡೆಯ ಕೋಣೆಯಲ್ಲಿ ಹೆಣ್ಣುಡುಪನ್ನು ತೆಗೆದುಹಾಕಿ ಬಣ್ಣಬಣ್ಣದ ಬದಕ್ಷಾನ್ ರುಮಾಲು ಸುತ್ತಿ ಕೃತಕ ಗಡ್ಡವನ್ನು ಕಟ್ಟಿಕೊಂಡನು. ಹೀಗೆ ವೇಷ ಮರಸಿಕೊಂಡು, ಹೋರಾಟದ ಕಳ ಚೆನ್ನಾಗಿ ಕಾಣುವಂತಿರುವ ಒಂದು ಪೀಠವನ್ನಾಯ್ದು ಅಲ್ಲಿ ಕುಳಿತುಕೊಂಡನು.

ಸುತ್ತ ನಾಲ್ಕು ಕಡೆಯಿಂದಲೂ ಗುಂಪು ಮುತ್ತಿ ಬರುತ್ತಿರಲು ಕಾವುದಳದವರು ಬಹು ರೋಷದಿಂದ ಪ್ರತಿಭಟಿಸುತ್ತಿದ್ದರು. ಟೀ ಅಂಗಡಿಯ ಬಳಿಯಲ್ಲೆ, ಖೋಜಾ ನಸ್ರೆದ್ದೀನನ ಹತ್ತಿರದಲ್ಲೇ ಒಂದು ಕದನ ಪ್ರಾರಂಭವಾಯಿತು.

ಕಾಪುಸಿಪಾಯಿಗಳ ಮೇಲೆ ಟೀ ಗಡಿಗೆಯನ್ನು ಬಗ್ಗಿಸಬೇಕೆಂಬ ಚಪಲವನ್ನು ಅವನಿಂದ ತಡೆಯಲಾಗಲಿಲ್ಲ ಆ ಕೆಲಸವನ್ನು ಅವನು ಬಹಳ ಜಾಣತನದಿಂದ ನಿರ್ವಹಿಸಿದನು. ಅವನು ಸುರಿದ ಕುದಿಯುವ ದ್ರವವು ಮೊಟ್ಟೆಗಳನ್ನು ಇಡಿಯಾಗಿ ನುಂಗುವ ಬೊಜ್ಜನ ಕುತ್ತಿಗೆಯ ಮೇಲಿಳಿಯಿತು. ಅವನು ಸಿಕ್ಕಾಬಟ್ಟೆ ಕಿರಿಚಿ ಹುಯ್ಯಲಿಟ್ಟನು; ಅಂಗತ್ತನಾಗಿ ಬಿದ್ದುಕೊಂಡು ಕೈಕಾಲು ಬಡಿಯತೊಡಗಿದನು. ಅವನ ಕಡೆ ನೋಡದೆಯೇ ಖೋಜಾ ನಸ್ರೆದ್ದೀನ್ ಮತ್ತೆ ತನ್ನ ಆಲೋಚನೆಗಳಲ್ಲಿ ಮಗ್ನನಾದನು. ಆಗ ಇದ್ದಕ್ಕಿದ್ದಂತೆ ಮುದಿಯ ಅದಿರು ದನಿಯೊಂದು ಕೇಳಿಸಿತು :

"ದಾರಿ ಬಿಡಿ; ದಾರಿ ಬಿಡಿ ನನಗೆ! ಅಲ್ಲಾ, ಅಲ್ಲಾ! ಇದೇನು ನಡೆಯುತ್ತಿದೆ, ಇಲ್ಲಿ!"

ಟೀ ಅಂಗಡಿಗೆ ಅನತಿ ದೂರದಲ್ಲಿ, ಜಗಳ ಜೋರಾಗಿದ್ದ ಬಳಿಯಲ್ಲಿ, ಒಬ್ಬ ಮುದುಕ—ಬಿಳಿಯ ಗಡ್ಡದ ಗರುಡ ಮೂಗಿನ ಮುದುಕನೊಬ್ಬನು—ಒಂಟೆಯ ಮೇಲೆ ಕಾಣಿಸಿಕೊಂಡನು. ಆಕಾರ ನೋಡಿ ಹೇಳಬಹುದಾಗಿ, ಅವನು ಅರಬನಂತೆ ಕಾಣುತ್ತಿದ್ದನು. ಅವನ ರುಮಾಲಿನ ತುದಿ ಮೇಲಕ್ಕೆತ್ತಿ ಕಟ್ಟಿತ್ತು; ಆದರಿಂದ ಅವನೊಬ್ಬ ವಿದ್ವಾಂಸನೆಂದು ಸ್ಪಷ್ಟವಾಗುತ್ತಿತ್ತು. ಸುತ್ತ ಮುತ್ತ ಕದನ ನಡೆಯುತ್ತಿರಲು ಅವನು ಪ್ರಾಣಭಯದಿಂದ ಒಂಟೆಯ ಡುಬ್ಬಕ್ಕೆ ಬಲವಾಗಿ ಅಂಟಿಕೊಂಡಿದ್ದನು. ಯಾವನೋ ಒಬ್ಬ ಅವನ ಕಾಲು ಹಿಡಿದು ಕೆಳಕ್ಕೆಳೆಯುತ್ತಿದ್ದನು; ಮುದುಕ ಪ್ರತಿಭಟಿಸಿ ಹತಾಶನಾಗಿ ಒದ್ದಾಡುತ್ತಿದ್ದನು. ಆ ಸುತ್ತಮುತ್ತಿನ ಅರಚಾಟ ಕಿರಿಚಾಟ ಗೋಳಾಟ ಕೂಗು ಗದ್ದಲಗಳು ಅಸಾಧ್ಯವಾಗಿ ಕಿವಿ ಕಿವುಡಾಗುತ್ತಿತ್ತು.

ಕ್ಷೇಮವಾದ ಸ್ಥಳವನ್ನು ಸೇರಲೆಂದು ಹುಚ್ಚಾಬಟ್ಟೆ ನುಗ್ಗಾಡುತ್ತಿದ್ದ ಮುದುಕ ಹಾಗೂ ಹೀಗೂ ಟೀ ಅಂಗಡಿಯ ಬಾಗಿಲಿಗೆ ಬಂದನು. ಕ್ಷಣ ಕ್ಷಣಕ್ಕೂ ಬೆಚ್ಚಿಬೀಳುತ್ತಾ ಅತ್ತಿತ್ತ ಇಣಿಕಿ ನೋಡುತ್ತ ತನ್ನ ಒಂಟೆಯನ್ನು ಖೋಜಾ ನಸ್ರೆದ್ದೀನನ ಕತ್ತೆಯ ಹತ್ತಿರವೇ ಕಟ್ಟಿಹಾಕಿದನು. ಆ ಮೇಲೆ ಮೆಟ್ಟಲು ಹತ್ತಿ ಮೊಗಸಾಲೆಗೆ ಕಾಲಿಟ್ಟನು.

"ಅಲ್ಲಾನ ಹೆಸರಿನಲ್ಲಿ ಹೇಳಿರಿ! ನಿಮ್ಮೂರಿನಲ್ಲಿ ಏನು ನಡೆಯುತ್ತಿದೆ?" ಎಂದು ಕೇಳಿದನು.

"ಸಂತೆ!" ಎಂದು ಅಡಕವಾಗಿ ಉತ್ತರಿಸಿದನು ಖೋಜಾ ನಸ್ರೆದ್ದೀನ್.

"ಬುಖಾರದಲ್ಲಿ ಸಂತೆಗಳು ಯಾವಾಗಲೂ ಹೀಗೆಯೇ ಆಗುತ್ತವೆಯೆ? ಈ ದೊಂಬಿಯ ನಡುವೆ ದಾರಿ ಮಾಡಿಕೊಂಡು ನಾನು ಅರಮನೆಗೆ ಹೋಗಿ ಸೇರುವುದಾದರೂ ಹೇಗೆ?"

ಖೋಜಾ ನಸ್ರೆದ್ದೀನನ ಕಿವಿ ನೆಟ್ಟಗಾಯಿತು. 'ಅರಮನೆ' ಎಂಬ ಮಾತು ಕಿವಿಗೆ ಬಿದ್ದ ಕೂಡಲೆ ತಾನು ಅದುವರೆಗೂ ಕಾಯುತ್ತಿದ್ದ ಅನುಕೂಲ ಸಂದರ್ಭ ಬಂತು ಎನ್ನಿಸಿತು ಅವನಿಗೆ; ಈ ಮುದುಕನನ್ನು ಸಂಧಿಸಿದ ಈ ಸಂದರ್ಭವು ತಾನು ಅರಮನೆಗೆ ಹೋಗಿ ಅಂತಃಪುರಕ್ಕೆ ಪ್ರವೇಶಿಸಿ ಗುಲ್ಜಾನನ್ನು ಬಿಡಿಸಿಕೊಂಡು ಬರಲು ಅವಕಾಶ ಮಾಡಿಕೊಡುವುದೆಂದು ಅವನಿಗೆ ಖಚಿತವಾಯಿತು.

ಆದರೆ, ಆತುರಪಡುವುದು, ಸೈತಾನನ ಕಾರ್ಯ. ಮಹಾ ಪ್ರಾಜ್ಞನಾದ ಷಿರಾಜಿನ ಷೇಕ್ ಸಾದಿ ಹೇಳಿಲ್ಲವೆ: "ಯಾವನು ತಾಳ್ಮೆಯುಳ್ಳವನೋ ಅವನು ಮಾತ್ರ ತಾನು ಕೈಕೊಂಡ ಕಾರ್ಯವನ್ನು ಪೂರ್ಣ ಮಾಡುತ್ತಾನೆ. ಆತುರಗಾರನು ವಿಫಲನಾಗುತ್ತಾನೆ" ಆದ್ದರಿಂದ ಖೋಜಾ ನಸ್ರೆದ್ದೀನನು ಆತುರಗಾರತನದ ಕಂಬಳಿಯನ್ನು ಸುತ್ತಿ ನಿರೀಕ್ಷಣೆಯ ಪೆಠಾರಿಯಲ್ಲೆಸೆದು ಮುಚ್ಚಿಟ್ಟನು.

ಮುದುಕ ನರಳಿ ನಿಟ್ಟುಸಿರು ಬಿಟ್ಟನು.

"ಓ, ಸರ್ವಶಕ್ತ ಅಲ್ಲಾ! ಓ, ಭಕ್ತಶರಣ್ಯಾ! ನಾನು ಅರಮನೆಗೆ ದಾರಿ ಮಾಡಿಕೊಂಡು ಹೋಗುವುದು ಹೇಗೆ?"

"ನಾಳೆಯ ವರೆಗೆ ಇಲ್ಲೇ ಕಾಯುತ್ತಿರಿ" ಎಂದು ಖೋಜಾ ನಸ್ರೆದ್ದೀನ್ ಉತ್ತರ ಕೊಟ್ಟನು.

"ಅದಾಗುವುದಿಲ್ಲ!" ಎಂದನು ಮುದುಕ. "ಈಗ ನನ್ನನ್ನು ಅರಮನೆಯಲ್ಲಿ ಎದುರು ನೋಡುತ್ತಿದ್ದಾರೆ."

ಖೋಜಾ ನಸ್ರೆದ್ದೀನ್ ಗಟ್ಟಿಯಾಗಿ ನಗತೊಡಗಿದನು.

"ಓ, ಮಾನ್ಯರಾದ ಪೂಜ್ಯ ಷೇಕ್ ಸಾಹೇಬರೇ! ನಿಮ್ಮ ಉದ್ಯೋಗವೇನೋ, ನಿಮಗಿಲ್ಲಿ ಕೆಲಸವೇನೋ ನನಗೆ ತಿಳಿಯದು; ಆದರೆ, ನಾಳೆಯ ವರಗೆ ಅರಮನೆಯಲ್ಲಿ ನೀವಿಲ್ಲದಿದ್ದರೆ ಅವರು ತಡೆಯಲಾರರೆಂದು ನಿಮಗೆ

ಅಷ್ಟು ಖಂಡಿತವಾಗಿದೆಯೆ? ಬುಖಾರದಲ್ಲಿನ ಎಷ್ಟೋ ಮಂದಿ ಮಹಾ ಘನ ವ್ಯಕ್ತಿಗಳು ಅರಮನೆಯೊಳಕ್ಕೆ ಪ್ರವೇಶ ದೊರೆಯಬೇಕಾದರೆ ವಾರಗಟ್ಟಳೆ ಕಾದಿರಬೇಕಾಗುತ್ತದೆ. ಹೀಗಿರುವಲ್ಲಿ ನಿನಗಾಗಿ ಅರಮನೆಯವರೇ ಕಾಯುತ್ತ ಇರುತ್ತಾರೆಂದು ಅದೇಕೆ ನೀನು ಭಾವಿಸುತ್ತೀಯೆ?"

ಖೋಜಾ ನಸ್ರೆದ್ದೀನನ ಮಾತು ಕೇಳಿ ಮುದುಕನಿಗೆ ಮನಸ್ಸು ಚುಚ್ಚಿದಂತಾಯಿತು; ದೊಡ್ಡತನದ ದರ್ಪದಿಂದ ಉತ್ತರ ಕೊಟ್ಟನು: "ಅಯ್ಯಾ ಕೇಳು, ನಾನೊಬ್ಬ ಸುಪ್ರಸಿದ್ಧ ಜ್ಞಾನಿ, ಭವಿಷ್ಯವಾದಿ (ಜ್ಯೋತಿಷಿ) ಮತ್ತು ವೈದ್ಯ. ನಾನು ಅಮೀರರ ಆಹ್ವಾನದ ಮೇಲೆ ಅವರ ಸೇವೆಗೆ ಸೇರುವುದಕ್ಕಾಗಿ ಬಾಗ್ದಾದಿನಿಂದ ಬಂದಿದ್ದೇನೆ; ತಮ್ಮ ರಾಜ್ಯದ ಆಡಳಿತ ನಡಸುವುದರಲ್ಲಿ ಸಹಾಯ ಮಾಡಬೇಕೆಂದು ಕೋರಿ ಅವರು ನನ್ನನ್ನು ಕರಸಿಕೊಂಡಿದ್ದಾರೆ."

"ಓ! ಹಾಗೋ!" ಎಂದನು ಖೋಜಾ ನಸ್ರೆದ್ದೀನ್ ನೆಲಕ್ಕೆ ಬಗ್ಗಿ ನಮಸ್ಕಾರ ಮಾಡಿ. "ಸ್ವಾಗತ, ಓ, ಪ್ರಾಜ್ಞರಾದ ಷೇಕ್ ಸಾಹೇಬರೇ, ನಿಮಗೆ ಸುಸ್ವಾಗತ! ನಾನು ಬಾಗ್ದಾದಿಗೆ ಕೆಲವು ಸಂದರ್ಭಗಳಲ್ಲಿ ಹೋಗಿ ಬಂದಿದ್ದೇನೆ. ಆ ಪಟ್ಟಣದ ಜ್ಞಾನಿಗಳನ್ನು ನಾನು ಬಲ್ಲೆ. ನಿಮ್ಮ ಹೆಸರೇನು, ಹೇಳಿ" ಎಂದು ಕೇಳಿದನು.

"ನೀನು ಬಾಗ್ದಾದಿಗೆ ಹೋಗಿ ಬಂದಿರುವುದಾದರೆ, ನಾನು ಕಲೀಫರಿಗೆ ಸಲ್ಲಿಸಿದ ಸೇವೆಯ ವಿಷಯವನ್ನು ನೀನು ಕೇಳಿರಬಹುದು. ಅವರ ಮೆಚ್ಚಿನ ಮಗನ ಪ್ರಾಣವನ್ನು ನಾನು ಕಾಪಾಡಿದೆ. ದೇಶದಲ್ಲೆಲ್ಲಾ ಆ ಸಂಗತಿಯನ್ನು ಸಾರಿಸಿದರು. ಮೌಲಾನಾ ಹುಸೇನ್ ಎಂದು ನನ್ನ ಹೆಸರು"

"ಮೌಲಾನಾ ಹುಸೇನರೇ! ನೀವೇಯೋ ಅವರು? ಪ್ರತ್ಯಕ್ಷ ಮೌಲಾನಾ ಹುಸೇನರು ನೀವೇಯೋ?" ಎಂದು ಬೆರಗಾದವನಂತೆ ಖೋಜಾ ನಸ್ರೆದ್ದೀನ್ ನುಡಿದನು.

ಮುದುಕನ ತುಟಿಯ ಮೇಲೆ ಸಂತೋಷದ ಮುಗುಳುನಗೆ ಮೂಡಿತು. ತನ್ನ ಸ್ವಂತ ಊರು ಬಾಗ್ದಾದಿನಿಂದ ಇಷ್ಟು ದೂರದ ಈ ಪ್ರದೇಶಕ್ಕೂ ತನ್ನ ಕೀರ್ತಿ ಹರಡಿದೆಯೆಂದರಿತು ಅವನಿಗೆ ಸ್ವಾಭಾವಿಕವಾಗಿಯೇ ಆನಂದವಾಯಿತು.

" ನಿನಗೇಕಿಷ್ಟು ಆಶ್ಚರ್ಯ ? ಹೌದು, ನಾನೇ ಆ ಮೌಲಾನಾ ಹುಸೇನ್, ಪ್ರತ್ಯಕ್ಷ ಮೌಲಾನಾ ಹುಸೇನ್. ಜ್ಞಾನದಲ್ಲಿಯೂ, ಜ್ಯೋತಿಷ್ಯದಲ್ಲಿಯೂ, ರೋಗ ವಾಸಿಮಾಡುವ ವೈದ್ಯವಿದ್ಯೆಯಲ್ಲಿಯೂ ಅಸಮಾನನಾದ ಮೌಲಾನಾ ಹುಸೇನ್ ನಾನೇ. ಆದರೆ ನನಗೆ ಗರ್ವವಾಗಲಿ, ದುರಹಂಕಾರವಾಗಲಿ ಸ್ವಲ್ಪವೂ ಇಲ್ಲ. ಏತಕ್ಕೂ ಬಾರದ ನಿನ್ನಂಥವನೊಡನೆ ಎಷ್ಟು ಸರಳ ರೀತಿ ಯಿಂದ ಮಾತಾಡುತ್ತಿದ್ದೇನೆ, ನೋಡು " ಎಂದನು.

ಮುದುಕ ಬಂದು ಮೆತ್ತಗೆ ಕೈ ನೀಡಿದನು. ಅದರ ಮೇಲೆ ಮೊಳಕೈ ಊರಿಕೊಂಡು ತನ್ನ ಅಪಾರ ಜ್ಞಾನವನ್ನು ಈ ಸಾಮಾನ್ಯನಿಗೆ ವಿವರಿಸಿ ಅನುಗ್ರಹ ತೋರಲು ಸಿದ್ಧಮಾಡಿಕೊಂಡನು. ಈ ಸಾಮಾನ್ಯ ಮನುಷ್ಯನು ತನ್ನ ದೊಡ್ಡ ಪ್ರಶ್ನವನ್ನು ಮರೆಸುವುದಕ್ಕೋಸ್ಕರ ತಾನು ಸುಪ್ರಸಿದ್ಧ ಜ್ಞಾನಿ ಮೌಲಾನಾ ಹುಸೇನನನ್ನು ಸಂಧಿಸಿದ ಸಂಗತಿಯನ್ನೂ, ಅವನ ಮಹಾ ಪ್ರಾಜ್ಞತೆಯನ್ನೂ ಸಿಕ್ಕಿಸಿಕ್ಕಿದವರಿಗೆಲ್ಲಾ ತಿಳಿಸುತ್ತ ಬರುವನೆಂದೂ, ಹಾಗೆ ಮಾಡುವಾಗ ಇರುವುದರ ಜೊತೆಗೆ ಇಲ್ಲದ್ದನ್ನೂ ಅಷ್ಟು ಸೇರಿಸಿ ಉತ್ಪ್ರೇಕ್ಷೆ ಮಾಡಿ ವರ್ಣಿಸುವನೆಂದೂ, [illegible] ಆ ಮೂಲಕ ಆ ಪಂಡಿತನ ಅಗಾಧ ಜ್ಞಾನದ ಬಗ್ಗೆ ಅತ್ಯಾಶ್ಚರ್ಯ ಹುಟ್ಟಿಸುವು [illegible] ಜೊತೆಗೆ ಅಂಥ ಪಂಡಿತನ ಭೇಟಿ ದೊರಕಿದ ತನ್ನ ಮಹಿಮೆಯನ್ನೂ ತಕ್ಷಣ [illegible] ಕೊಳ್ಳುವನೆಂದೂ ಮೌಲಾನಾ ಹುಸೇನ್ ಭಾವಿಸಿದನು. ದೊಡ್ಡವ ಹುಡು [illegible] ಯಾವುದಾದರೂ ಬಗೆಯ ಸಂಪರ್ಕ ದೊರೆತವರು ನಡೆದುಕೊಳ್ಳುವ ಶೋಚನೀಯ ರೀತಿಯೋ ಹೀಗೆ.

" ಈ ರೀತಿ ಇವನು ಸಾಮಾನ್ಯ ಜನರಲ್ಲಿ ನನ್ನ ಕೀರ್ತಿಯನ್ನು ಹರಡುತ್ತಾನೆ. ಇದನ್ನೇನು ಅಲ್ಪವೆಂದು ಅಲ್ಲಗಳೆಯಲಾಗದು. ಸಾಮಾನ್ಯ ಜನ ಆಡಿಕೊಳ್ಳುವ ವಿಷಯ ಗೂಢಚಾರರ ಮತ್ತು ಇತರರ ಮೂಲಕ ಅಮೀರರ ಕಿವಿಗೆ ತಲಪಿಯೇ ತೀರುತ್ತದೆ ; ಅದರಿಂದ ನನ್ನ ಪಾಂಡಿತ್ಯಕ್ಕೆ ಸಾಕ್ಷಿಯೊದಗಿದಂತಾಗುತ್ತದೆ. ಹೊರಗಡೆಯಿಂದ ಬರುವ ಸಮರ್ಥನೆಯೇ ಸರ್ವೋತ್ತಮವಾದ ಸಮರ್ಥನೆಯೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಹೀಗೆ ಇದು ಪರಿಣಾಮದಲ್ಲಿ ನನಗೇ ಲಾಭಕರವಾಗುತ್ತದೆ."

ತನ್ನ ಶ್ರೋತೃವಿನ ಮನಸ್ಸಿನಲ್ಲಿ ತನ್ನ ಪಾಂಡಿತ್ಯದ ಅಗಾಧತೆಯನ್ನು ಮೂಡಿಸಬೇಕೆಂಬ ಉದ್ದೇಶದಿಂದ ಮೌಲಾನಾ ಹುಸೇನ್, ನಕ್ಷತ್ರಪುಂಜಗಳು,

ಗ್ರಹಗಳು, ಅವುಗಳ ಪರಸ್ಪರ ಸಂಬಂಧಗಳು ಮೊದಲಾದವನ್ನೆಲ್ಲ ಅನೇಕ ಪುರಾತನ ಗ್ರಂಥಗಳಿಂದ ಆಧಾರವಾಕ್ಯಗಳನ್ನುದ್ಧರಿಸುತ್ತಾ ವಿವರಿಸಿದನು.

ಖೋಜಾ ನಸ್ರೆದ್ದೀನ್ ಸಂಪೂರ್ಣ ಗಮನವಿಟ್ಟು ಕೇಳುತ್ತಿದ್ದನು; ಪಂಡಿತನಾಡಿದ ಒಂದೊಂದು ನುಡಿಯನ್ನೂ ನೆನಪಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದನು.

ಹೇಳಿದ್ದನ್ನೆಲ್ಲಾ ಕೇಳಿ ಕಟ್ಟಕಡೆಗೆ ಖೋಜಾ ನಸ್ರೆದ್ದೀನ್, "ಇಲ್ಲ! ನನಗೆ ಈಗಲೂ ನಂಬಿಕೆಯಿಲ್ಲ! ನೀವು ನಿಜವಾಗಿಯೂ ಮೌಲಾನಾ ಹುಸೇನರೇ?" ಎಂದು ಪ್ರಶ್ನೆ ಮಾಡಿದನು.

"ನಿಸ್ಸಂಶಯವಾಗಿ! ನಾನೇ ಮೌಲಾನಾ ಹುಸೇನ್! ಏಕೆ? ಇದರಲ್ಲೇನು ಅಂಥ ಆಶ್ಚರ್ಯವಿರುವುದು?"

ಅಪಾಯಶಂಕೆಯಿಂದಲೋ ಎಂಬಂತೆ ಖೋಜಾ ನಸ್ರೆದ್ದೀನ್ ಹಿಂದಕ್ಕೆ ಸರಿದನು. ಆಮೇಲೆ ಭಯವೂ ಕರುಣೆಯೂ ತುಂಬಿದ ದನಿಯಲ್ಲಿ ಹೀಗೆಂದನು:

"ಅಯ್ಯೋ, ದುರದೃಷ್ಟನಾಲೀ! ನೀನು ಹಾಳಾದೆ!"

ಮುದುಕನಿಗೆ ಗಂಟಲು ಕಟ್ಟಿತು; ಟೀ ಬಟ್ಟಲು ಕೈಯಿಂದ ಕೆಳಕ್ಕೆ ಬಿತ್ತು.

"ಹೇಗೆ? ಏಕೆ? ಏನು ಸಮಾಚಾರ?" ಆತಂಕದಿಂದ ಅವ[illegible] ಮಾಡಿದನು.

ಖೋಜಾ ನಸ್ರೆದ್ದೀನ್ ಮಾರ್ಕಟ್ಟೆಯ ಪ್ರದೇಶದ ಕಡೆ ಕೈ ತೋ[illegible]ಧನು; ಅಲ್ಲಿ ಹೊಡೆದಾಟ ಇನ್ನೂ ನಿಂತಿರಲಿಲ್ಲ. ಆ ಕಡೆ ತೋರಿಸುತ್ತಾ ಹೇಳಿದನು: "ಈ ಗಲಾಟೆಯೆಲ್ಲಾ ನಿಮಗೋಸ್ಕರವಾಗಿಯೇ ಆಗುತ್ತಿರುವುದೆಂದು ಗೊತ್ತಿಲ್ಲವೆ? ನೀವು ಬಾಗ್ದಾದ್ ನಗರವನ್ನು ಬಿಟ್ಟು ಹೊರಡುವಾಗ ಅಂದಿರಂತೆ—ಅಮೀರರ ಅಂತಃಪುರಕ್ಕೆ ನೀವು ಪ್ರವೇಶಿಸುವುದಾಗಿಯೂ ಅಮೀರರ ಹೆಂಡಿರ ಶೀಲವನ್ನು ಭಂಗಪಡಿಸುವುದಾಗಿಯೂ ಹೇಳಿದಿರಂತೆ; ಬಹಿರಂಗವಾಗಿಯೇ ಹೇಳಿದಿರಂತೆ—ಹೀಗೆಂದು ನಮ್ಮ ಅಮೀರರ ಕಿವಿಗೆ ಬಿತ್ತು. ಅಯ್ಯೋ, ಮೌಲಾನಾ ಹುಸೇನ್!"

ಮುದುಕ ಬೆರಗಾಗಿ ಬಾಯಿಬಿಟ್ಟುಕೊಂಡನು; ಕಣ್ಣುಗತ್ತಲೆ ಹಿಡಿಯಿತು. ಭಯದಿಂದ ಬಿಕ್ಕಲು ಮೊದಲುಮಾಡಿದನು.

“ಆ!....ನಾನು....ಅಂತಃಪುರಕ್ಕೆ ?” ಎಂದು ಉಗ್ಗುತ್ತಾ ನುಡಿದನು.

“ಅಲ್ಲಾನ ಸಿಂಹಾಸನದ ಅಡಿ ಮೆಟ್ಟಿಲಾಣೆಗೂ ಹಾಗೆ ಮಾಡುವುದಾಗಿ ನೀವು ಪ್ರಮಾಣ ಮಾಡಿದಿರಿ. ಡಂಗೂರಗಾರರು ಇವತ್ತೆಲ್ಲ ಸಾರುತ್ತಿದ್ದದ್ದು ಇದೇ ಸುದ್ದಿ. ನೀವು ಈ ಪಟ್ಟಣದೊಳಗೆ ಕಾಲಿಟ್ಟ ಕೂಡಲೆ ನಿಮ್ಮನ್ನು ಸೆರೆ ಹಿಡಿಯಬೇಕೆಂದು ಅಮೀರರು ಅಪ್ಪಣೆ ಮಾಡಿದ್ದಾರೆ. ಆ ಸ್ಥಳದಲ್ಲಿಯೇ ನಿಮ್ಮ ತಲೆ ಕತ್ತರಿಸಿಬಿಡಬೇಕಂತೆ.”

ಜ್ಞಾನಿಯು ನಿರಾಶೆಯಿಂದ ನರಳಿದನು. ತನ್ನ ಶತ್ರುಗಳಲ್ಲಿ ಯಾವನು ಈ ರೀತಿ ತನ್ನ ನಾಶಕ್ಕೆ ಹಂಚಿಕೆ ಮಾಡಿರಬಹುದೆಂದು ಊಹಿಸಲಾರದೆ ಹೋದನು. ಈ ಕಥೆಯ ಸತ್ಯತೆಯ ವಿಷಯದಲ್ಲಿ ಅವನಿಗೆ ಯಾವ ಸಂಶಯವೂ ಇರಲಿಲ್ಲ. ಆಸ್ಥಾನದ ಪಿತೂರಿಗಳಲ್ಲಿ ತಾನೇ ಇದೇ ಹಂಚಿಕೆಯನ್ನು ಒಂದಕ್ಕಿಂತ ಹೆಚ್ಚು ಸಲ ಬಳಸಿದ್ದನು; ಆ ಮೇಲೆ ಆ ಶತ್ರುಗಳ ತಲೆಗಳನ್ನು ಶೂಲದ ಮೇಲೆ ಕಂಡು ತೃಪ್ತಿಪಟ್ಟಿದ್ದನು.

ಖೋಜಾ ನಸ್ರೆದ್ದೀನ್ ಮುಂದುವರಿಸಿದನು: “ನೀವು ಇಲ್ಲಿ ಬಂದಿರುವುದಾಗಿ ಇವತ್ತು ಗೂಢಚಾರರು ಅಮೀರರಿಗೆ ವರದಿ ಸಲ್ಲಿಸಿದರು. ನಿಮ್ಮನ್ನು ಹಿಡಿಯಬೇಕೆಂದು ಅವರು ಅಪ್ಪಣೆ ಮಾಡಿದರು. ಆದ್ದರಿಂದ ಕಾವುದಳದವರು ತಕ್ಷಣವೇ ಆತುರಾತುರವಾಗಿ ಮಾರ್ಕೆಟ್ಟಿಯ ಕಡೆ ಬಂದು ಎಲ್ಲೆಲ್ಲೂ ನಿಮಗಾಗಿ ಹುಡುಕತೊಡಗಿದರು. ಎಲ್ಲ ಸಾಲುಗಳಲ್ಲೂ ಹೋಗಿ ಅಂಗಡಿಗಳನ್ನೆಲ್ಲಾ ಶೋಧಿಸಿದರು. ವ್ಯಾಪಾರ ತಟಸ್ಥವಾಯಿತು; ಶಾಂತಿ ಭಂಗವಾಯಿತು. ನಿಮ್ಮಂತೆಯೇ ಕಾಣುವ ಮನುಷ್ಯನೊಬ್ಬನನ್ನು ಕಾವುಸಿಪಾಯಿಗಳು ತಪ್ಪಾಗಿ ಹಿಡಿದು ತಮ್ಮ ಆತುರದಲ್ಲಿ ಅವನ ತಲೆ ಕತ್ತರಿಸಿಬಿಟ್ಟರು. ಅವನೊಬ್ಬ ಮುಲ್ಲನೆಂದು ಆ ಮೇಲೆ ತಿಳಿಯಿತು; ಅವನು ಸದಾಚಾರಿಯೆಂದೂ ದೈವಭಕ್ತನೆಂದೂ ಬಹಳ ಪ್ರಸಿದ್ಧನಾಗಿದ್ದನು. ಅವನ ಕೊಲೆಯಿಂದ, ಅವನ ಮಸೀದಿಗೆ ಸೇರಿದ ಜನ ಕೆರಳಿದರು. ಇಲ್ಲಿ ಏನೇನಾಗುತ್ತಿದೆ, ನೀವೇ ನೋಡಿ! ಇದಕ್ಕೆಲ್ಲಾ ನೀವೇ ಕಾರಣ!”

“ಅಯ್ಯೋ! ಅಯ್ಯೋ!” ಎಂದು ಆ ಜ್ಞಾನಿ ಮಹಾ ಭಯದಿಂದಲೂ ಆಶಾಭಂಗದಿಂದಲೂ ಉದ್ಗರಿಸಿದನು ಅವನು ಕೂಗುವುದು, ನರಳುವುದು, ಹಂಬಲಿಸುವುದು—ಇದನ್ನು ನಿಲ್ಲಿಸಲೇ ಇಲ್ಲ. ಇದರಿಂದ ತನ್ನ ಉಪಾಯ

ಫಲಿಸಿತೆಂದು ಖೋಜಾ ನಸ್ರೆದ್ದೀನನಿಗೆ ಸಿದ್ಧವಾಯಿತು.

ಇಷ್ಟರಲ್ಲಿ ಹೊಡೆದಾಟ ಅರಮನೆಯ ಬಾಗಿಲ ಕಡೆಗೆ ಹರಿದಿತ್ತು; ಬಲವಾಗಿ ಹೊಡೆತ ತಿಂದು ಸೋತ ಕಾವು ಸಿಪಾಯಿಗಳು ಒಬ್ಬೊಬ್ಬರಾಗಿ ಅರಮನೆಯ ಬಾಗಿಲೊಳಹೊಕ್ಕು ಗುಂಪಿನಿಂದ ತಪ್ಪಿಸಿಕೊಳ್ಳುತ್ತಿದ್ದರು. ಅಷ್ಟು ಹೊತ್ತಿಗೆ ಅವರೆಲ್ಲ ತಮ್ಮ ಆಯುಧಗಳನ್ನು ಕಳೆದುಕೊಂಡಿದ್ದರು. ಪೇಟೆಯೆಲ್ಲಾ ಇನ್ನೂ ಮೊರೆಯುತ್ತಲೇ ಇತ್ತು; ಮುಲುಮುಲು ಒದ್ದಾಡುತ್ತಲೇ ಇತ್ತು. ಆದರೆ, ಕ್ರಮಕ್ರಮವಾಗಿ ಶಾಂತ ಸ್ಥಿತಿಗೆ ಬರುತ್ತಿತ್ತು.

"ನಾನು ಬಾಗ್ದಾದಿಗೆ ಹಿಂದಿರುಗಬೇಕು! ನಾನು ಬಾಗ್ದಾದಿಗೆ ಹಿಂದಿರುಗಬೇಕು!" ಜ್ಞಾನಿ ಗೋಳಾಡಿದನು.

"ನಗರದ ಬಾಗಿಲ ಬಳಿ ನಿನ್ನನ್ನು ಹಿಡಿದು ಬಿಡುತ್ತಾರೆ!" ಎಂದು ಎದುರುತ್ತರ ಕೊಟ್ಟನು ಖೋಜಾ ನಸ್ರೆದ್ದೀನ್.

"ಅಯ್ಯೋ! ಅಯ್ಯೋ, ಅಪಾಯವೇ? ನಾನು ನಿಷ್ಪಾಪನೆಂದು ಅಲ್ಲಾಗೆ ಗೊತ್ತು! ಅಂಥ ದುರಹಂಕಾರದ ಮತ್ತು ಧರ್ಮದ್ರೋಹಕರವಾದ ಪ್ರತಿಜ್ಞೆಯನ್ನು ನಾನಂತೂ ಖಂಡಿತ ಮಾಡಿಲ್ಲ. ನನ್ನ ಶತ್ರುಗಳು ಯಾರೋ ನನ್ನ ಹೆಸರಿಗೆ ಕಳಂಕ ಹಚ್ಚಲು ಅಮೀರರ ಹತ್ತಿರ ಹೋಗಿ ದೂರಿದ್ದಾರೆ! ಅಯ್ಯೋ, ನನಗೆ ಸಹಾಯ ಮಾಡಪ್ಪಾ! ಕರುಣಾಶಾಲಿ ಮುಸ್ಲಿಮನೇ, ಸಹಾಯ ಮಾಡಪ್ಪಾ ನನಗೆ!"

ಇದನ್ನೇ ಖೋಜಾ ನಸ್ರೆದ್ದೀನ್ ಕಾಯುತ್ತಿದ್ದದ್ದು. ತಾನಾಗಿಯೆ ಸಹಾಯ ಮಾಡುವುದಾಗಿ ಹೇಳಿ ಆತನ ಮನಸ್ಸಿನಲ್ಲಿ ಸಂಶಯ ಹುಟ್ಟಿಸಲು ಅವನಿಗೆ ಇಷ್ಟವಿರಲಿಲ್ಲ.

"ನಿಮಗೆ ಸಹಾಯ ಮಾಡುವುದೆ? ನಾನು ಹೇಗೆ ಸಹಾಯ ಮಾಡಲಿ? ನಮ್ಮೊಡೆಯರ ನಿಷ್ಠಾವಂತ ಸೇವಕನಾಗಿ, ಸ್ವಾಮಿಭಕ್ತ ಗುಲಾಮನಾಗಿ, ನಾನು ಈಗ ತಡ ಮಾಡದೆ ನಿಮ್ಮನ್ನು ಕಾವುದಳದವರಿಗೆ ಒಪ್ಪಿಸಿಬಿಡಬೇಕು. ಅದೇ ನನ್ನ ಕರ್ತವ್ಯ. ಹಾಗಲ್ಲದೆ ತಡ ಮಾಡಿದರೆ ಅಥವಾ ನಿಮ್ಮನ್ನು ಅವರ ಕೈಗೊಪ್ಪಿಸದೆ ಇದ್ದರೆ, ನಾನೂ ಸಂಚಿನಲ್ಲಿ ಸೇರಿದವನೆಂಬ ಆಪಾದನೆಗೆ ತಲೆ ಕೊಡಬೇಕಾಗುತ್ತದೆ."

"ಹೌದು, ನಿಜ!" ಎಂದನು ಮುದುಕ. "ಆದರೆ, ನನ್ನ ಉದ್ಧಾರಕ್ಕೆ

ದಾರಿ ಯಾವುದು ?"

"ಒಂದೇ ಒಂದು ದಾರಿಯಿದೆ" ಎಂದನು ಖೋಜಾ ನಸ್ರೆದ್ದೀನ್. ಅವನು ಮುದುಕನನ್ನು ಹಿಂಭಾಗದ ಕತ್ತಲೆ ಕೋಣೆಗೆ ಕರೆದುಕೊಂಡು ಹೋದನು. ಅಲ್ಲಿ ಹೆಂಗಸಿನ ಉಡುಪನ್ನಿಟ್ಟಿದ್ದ ಗಂಟನ್ನು ಅವನ ಕೈಗೆ ಕೊಟ್ಟನು. "ಇವತ್ತು ಇದನ್ನು ನನ್ನ ಹೆಂಡತಿಗೆಂದು ಕೊಂಡುಕೊಂಡೆ. ನಿಮಗಿಷ್ಟವಿದ್ದರೆ, ನಿಮ್ಮ ಮೇಲ್ಕವಚ ಮತ್ತು ರುಮಾಲುಗಳಿಗೆ ಬದಲಾಗಿ ಇದನ್ನು ನಿಮಗೆ ಕೊಡಲು ಸಿದ್ಧವಾಗಿದ್ದೇನೆ. ಹೆಂಗಸಿನ ಉಡುಪು ತೊಟ್ಟು ಹೊರಟರೆ, ಆ ಮುಖಾವರಣದ ಆಶ್ರಯದಲ್ಲಿ ಗೂಢಚಾರರ ಮತ್ತು ಸಿಪಾಯಿಗಳ ಕಾಟವಿಲ್ಲದೆ ನೀವು ಕ್ಷೇಮವಾಗಿರಬಹುದು" ಎಂದನು.

ಸಂತೋಷವನ್ನೂ ಕೃತಜ್ಞತೆಯನ್ನೂ ಅನೇಕ ಬಗೆಯಲ್ಲಿ ಸೂಚಿಸುತ್ತ ಮುದುಕನು ಆ ಬಟ್ಟೆಗಳನ್ನು ತೆಗೆದುಕೊಂಡು ತೊಟ್ಟುಕೊಂಡನು. ಖೋಜಾ ನಸ್ರೆದ್ದೀನನು ಪಂಡಿತನ ಬಿಳಿಯ ಮೇಲ್ಗವಚವನ್ನು ತೊಟ್ಟು ಮೇಲಕ್ಕೆ ಸೆಕ್ಕಿಸಿದ ತುದಿಯುಳ್ಳ ರುಮಾಲನ್ನು ತಲೆಗಟ್ಟಿಕೊಂಡು, ನಕ್ಷತ್ರಗಳ ಬಟ್ಟು ಹಾಕಿದ್ದ ಅವನ ನಡುಕಟ್ಟನ್ನು ಸೊಂಟಕ್ಕೆ ಬಿಗಿದುಕೊಂಡನು. ಆ ಮೇಲೆ ಮುದುಕನನ್ನು ಹೊರಕ್ಕೆ ಕರೆದುಕೊಂಡು ಹೋಗಿ ಕೈಕೊಟ್ಟು ಒಂಟೆಯ ಮೇಲೆ ಹತ್ತಿಸಿದನು.

"ಓ, ಜ್ಞಾನಿಯೇ! ಅಲ್ಲಾ ನಿಮ್ಮನ್ನು ಕಾಪಾಡಲಿ! ಹೆಂಗಸಿನಂತೆ ಎತ್ತರಿಸಿದ ದನಿಯಲ್ಲಿ ಮಾತಾಡುವುದನ್ನು ಮರೆಯಬೇಡಿ!"

ಮುದುಕನು ವಾಹನದ ಮೇಲೆ ಕುಳಿತು ಹಾರುಗಾಲಿನಿಂದ ಓಡಿಸಿದನು.

ಖೋಜಾ ನಸ್ರೆದ್ದೀನನ ಕಣ್ಣುಗಳು ಕಾಂತಿಯಿಂದ ಹೊಳೆಯುತ್ತಿದ್ದವು. ಅರಮನೆಯ ದಾರಿ ತೆರೆದಿತ್ತು.

## ೧೦

ಮಾರುಕಟ್ಟೆಯ ಬಳಿ ಹೊಡೆದಾಟ ಕಡಮೆಯಾಗುತ್ತಿದೆಯೆಂದು ಖಚಿತ ಪಡಿಸಿಕೊಂಡು ಮನಸ್ಸಮಾಧಾನ ಹೊಂದಿದ ಮೇಲೆ ಅಮೀರನು ಆಸ್ಥಾನ ಮಂಟಪಕ್ಕೆ ಹೋಗಿ ಆಸ್ಥಾನಿಕರಿಗೆ ದರ್ಶನ ಕೊಡಲು ನಿರ್ಧರಿಸಿದನು. ಶಾಂತವಾದ ಆದರೆ ಸ್ವಲ್ಪಮಟ್ಟಿಗೆ ನೊಂದ ಮುಖಭಾವವನ್ನು ತೋರಿಸಿಕೊಳ್ಳಲು

ಪ್ರಯತ್ನಪಟ್ಟನು. ಆಸ್ಥಾನಿಕರಲ್ಲಿ ಯಾರೊಬ್ಬರೂ ತಮ್ಮ ಪ್ರಭುವಿನ ಹೃದಯ ಭೀತಿಗೆ ಒಳಗಾಗಿತ್ತೆಂದು ಭಾವಿಸದಿರಲೆಂದು ಹಾಗೆ ನಿರ್ಧರಿಸಿದನು.

ಅವಿಾರನು ಆಸ್ಥಾನಕ್ಕೆ ಪ್ರವೇಶಿಸಿದೊಡನೆಯೆ ಸಭಿಕರೆಲ್ಲ ಸ್ತಬ್ಧರಾದರು. ತಮ್ಮ ನೋಟವಾಗಲಿ ಮುಖಭಾವವಾಗಲಿ, ತಮಗೆ ಅವಿಾರನ ನಿಜವಾದ ಮನಃಸ್ಥಿತಿ ಗೊತ್ತಾಗಿದೆಯೆಂದು ಸೂಚಿಸಿ ಎಲ್ಲಿ ಕಷ್ಟಕ್ಕೆ ಕಾರಣವಾಗುವುದೋ ಎಂದು ಅವರು ಹೆದರಿದರು.

ಅವಿಾರನು ಮೌನವಾಗಿದ್ದನು. ಆಸ್ಥಾನಿಕರೂ ಮೌನವಾಗಿದ್ದರು. ಭಯಭೀತಿ ಹುಟ್ಟಿಸುವ ಈ ಮೌನವನ್ನು ಕಡೆಗೆ ಅವಿಾರನೇ ಕೊನೆಗೊಳಿಸಿದನು :

" ಈಗ ನಮಗೇನು ಹೇಳುತ್ತೀರಿ ? ನಿಮ್ಮ ಸಲಹೆಯೇನು ? ನಾವು ನಿಮಗೆ ಇಂಥ ಪ್ರಶ್ನೆಗಳನ್ನು ಹಾಕುತ್ತಿರುವುದು ಇದೇ ಮೊದಲಲ್ಲ."

ಒಬ್ಬನೂ ತಲೆಯೆತ್ತಲಿಲ್ಲ; ಉತ್ತರವನ್ನೂ ಕೊಡಲಿಲ್ಲ ಅವಿಾರನ ಮುಖದಲ್ಲಿ ಮಿಂಚು ಕುಣಿಯತೊಡಗಿತು. ಆ ಸಮಯದಲ್ಲಿ ಎಷ್ಟು ತಲೆಗಳು ವಧಕಾರನ ಕತ್ತಿಯ ಮೊನೆಯ ಮೇಲುರುಳುತ್ತಿದ್ದವೋ! ಮುಖಸ್ತುತಿ ಮಾಡುವ ಎಷ್ಟು ನಾಲಗೆಗಳು ಶಾಶ್ವತ ಮೌನದಲ್ಲಿ ಅಡಗಿಹೋಗುತ್ತಿದ್ದವೋ! ಮರಣಸಂಕಟದಲ್ಲಿ ಹಲ್ಲುಗಳ ನಡುವೆ ಸಿಕ್ಕಿ ಕಚ್ಚಿ ತುಂಡಾಗಿಯೋ, ಅಥವಾ ರಕ್ತಹೀನವಾದ ತುಟಿಗಳ ನಡುವೆ ಹೊರಚಾಚಿಕೊಂಡೋ ಇದ್ದು, ಆ ತಲೆಗಳು ಬದುಕಿರುವ ಜನರಿಗೆ ತಮ್ಮ ಭಾಗ್ಯ ತೋರಿಕೆಯದೆಂದೂ ಮಹದಾಕಾಂಕ್ಷೆಗಳೂ ಹೋರಾಟಗಳೂ ವ್ಯರ್ಥವೆಂದೂ ಸಾರಿ ತೋರಬಹುದಾಗಿತ್ತು !

ಆದರೆ ತಲೆಗಳು ಕುತ್ತಿಗೆಯ ಮೇಲೆಯೇ ಉಳಿದವು; ನಾಲಗೆಗಳು ತಕ್ಷಣವೆ ಮತ್ತಷ್ಟು ಹೊಗಳಿಕೆಯನ್ನು ಹೊರ ಹರಿಸಲು ಸಿದ್ಧವಾಗಿ ಬಾಯಲ್ಲೇ ಉಳಿದವು; ಏಕೆಂದರೆ, ಆ ಕ್ಷಣದಲ್ಲಿಯೇ ಅರಮನೆಯ ಬಕ್ಷಿ ಅಲ್ಲಿ ಬಂದು ಹೀಗೆ ತಿಳಿಯಪಡಿಸಿದನು :

" ವಿಶ್ವಕೇಂದ್ರನಾದ ಪ್ರಭುವಿಗೆ ಜಯವಾಗಲಿ! ಒಬ್ಬ ಹೊಸಬ ಅಪರಿಚಿತನು ಅರಮನೆಯ ಬಾಗಿಲಿಗೆ ಬಂದಿದ್ದಾನೆ; ತಾನು ಬಾಗ್ದಾದಿನಿಂದ ಬಂದಿರುವ ಜ್ಞಾನಿ ಮೌಲಾನಾ ಹುಸೇನ್ ಎಂದು ಹೇಳಿಕೊಳ್ಳುತ್ತಿದ್ದಾನೆ. ತನಗೆ ಬಹು ಮುಖ್ಯವಾದ ಕೆಲಸವಿರುವುದಾಗಿಯೂ, ವಿಶ್ವಕ್ಕೇ ಶರಣಸ್ಥಾನವಾಗಿರುವ

ಮಹಾಸ್ವಾಮಿಯವರ ಪ್ರಭಾವಮಯ ದೃಷ್ಟಿಯೆದುರಿಗೆ ತಕ್ಷಣವೇ ತಾನು ಹಾಜರಾಗಬೇಕೆಂದೂ ಹೇಳುತ್ತಿದ್ದಾನೆ."

ಅಮೀರನು ಅತಿ ಕುತೂಹಲದಿಂದ, "ಮೌಲಾನಾ ಹುಸೇನ್! ಅವನು ಒಳಕ್ಕೆ ಬರಲಿ! ಅವನನ್ನು ಇಲ್ಲಿಗೆ ಕರೆದುಕೊಂಡು ಬಾ!" ಎಂದು ನುಡಿದನು.

ಆ ಜ್ಞಾನಿ ಒಳಕ್ಕೆ ನಡೆದು ಬರಲಿಲ್ಲ, ರಭಸದಿಂದ ನುಗ್ಗಿ ಬಂದನು; ಧೂಳು ತುಂಬಿದ ಸ್ಲಿಪ್ಪರ್‌ಗಳನ್ನು ಕಳಚುವುದನ್ನೂ ಮರೆತು ಓಡಿ ಬಂದನು. ಸಿಂಹಾಸನದೆದುರಿಗೆ ಅವನು ನೆಲದ ವರೆಗೂ ಬಗ್ಗಿ ನಮಸ್ಕಾರ ಮಾಡಿದನು.

"ಮಹಾಮಹಿಮರೂ ಪ್ರಖ್ಯಾತರೂ ಆದ ಅಮೀರರಿಗೆ ನಮ್ಮ ವಂದನೆಗಳು! ವಿಶ್ವದ ಸೂರ್ಯಚಂದ್ರರೂ, ಅದರ ಕ್ಷೇಮ ವಿನಾಶಗಳೂ ಆಗಿರುವ ಅಮೀರರಿಗೆ ವಂದನೆಗಳು! ಅಮೀರರಿಗೆ ಸಂಭವಿಸಲಿರುವ ಮಹಾ ಭಯಂಕರವಾದ ಒಂದು ಅಪಾಯದ ವಿಷಯದಲ್ಲಿ ಎಚ್ಚರಿಕೆ ಕೊಡುವುದಕ್ಕಾಗಿ ನಾನು ಹಗಲೂ ರಾತ್ರಿ ಪ್ರಯಾಣ ಮಾಡಿ ಬಂದಿದ್ದೇನೆ. ಅಮೀರರು ಅಪ್ಪಣೆ ಕೊಡಿಸೋಣವಾಗಲಿ, ಅವರು ಇವತ್ತು ಯಾವಳಾದರೂ ಸ್ತ್ರೀಯನ್ನು ಸಮಾಗಮಿಸಿದ್ದಾರೆಯೊ? ಅಮೀರರು, ನಮ್ಮ ಪ್ರಭುಗಳು, ತಮ್ಮ ಈ ಅಲ್ಪ ಗುಲಾಮನಿಗೆ ಉತ್ತರ ದಯಪಾಲಿಸೋಣವಾಗಲಿ........ನಾನು ಬೇಡಿಕೊಳ್ಳುತ್ತೇನೆ........"

"ಸ್ತ್ರೀಯನ್ನು!"

ಅಮೀರನಿಗೆ ಕಂಕುಮಂಕಾಯಿತು. "ಹೆಂಗಸನ್ನು!.... ಇವತ್ತು?.... ಇಲ್ಲ.... ಹೋಗಬೇಕೆಂಬ ಉದ್ದೇಶವಿತ್ತು, ಆದರೆ ಇನ್ನೂ ಹೋಗಿಲ್ಲ."

ಜ್ಞಾನಿ ನೆಗೆದೆದ್ದು ನಿಂತನು. ಅವನ ಮುಖ ನಿಸ್ತೇಜವಾಯಿತು. ಬಹು ಕಾತರದಿಂದ ಉತ್ತರವನ್ನು ನಿರೀಕ್ಷಿಸುತ್ತಿದ್ದನು. ಅಮೀರನ ಉತ್ತರವನ್ನು ಕೇಳಿ ದೀರ್ಘವಾದ ಆಳವಾದ ಉಸಿರು ಅವನ ಮುಖದಿಂದ ಹೊರಬಂತು. ನಿಧಾನವಾಗಿ ಅವನ ಕೆನ್ನೆಗಳಿಗೆ ಕಳೆ ತುಂಬಿತು.

"ಸರ್ವಶಕ್ತನಾದ ಅಲ್ಲಾಗೆ ಪ್ರಾರ್ಥನೆ ಸಲ್ಲಲಿ! ಅಲ್ಲಾ ದಯೆದೋರಿ ಜ್ಞಾನನಯನಗಳ ನಿಧಿಯನ್ನು ನಾಶವಾಗದಂತೆ ಕಾಪಾಡಿದ್ದಾನೆ! ಮಹಾಮಹಿಮರಾದ ಅಮೀರರಿಗೆ ಅರಿಕೆಯಾಗಲಿ: ನಿನ್ನೆ ರಾತ್ರಿ ನಕ್ಷತ್ರಗಳೂ ಗ್ರಹಗಳೂ ಇದ್ದ ಸ್ಥಿತಿಯನ್ನು ನೋಡಿದರೆ, ಅವರಿಗೆ ಅತ್ಯಂತ ಪ್ರತಿಕೂಲ ಪರಿಸ್ಥಿತಿ

ಗೋಚರವಾಯಿತು. ನಾನು ಕೇವಲ ಅಲ್ಪ ಮನುಷ್ಯ, ಅಮೀರರ ಹೆಜ್ಜೆಯಡಿಯ ಧೂಳನ್ನು ಮುಟ್ಟಿಡಲೂ ಅರ್ಹನಲ್ಲದವನು, ನಾನು ಪರೀಕ್ಷೆಮಾಡಿ ನೋಡಿ ಗ್ರಹಗಳ ಸ್ಥಿತಿಗತಿಗಳನ್ನು ಲೆಕ್ಕ ನಾಡಿದ್ದೇನೆ. ಅವು ಮತ್ತೆ ಅನುಕೂಲ ಸ್ಥಾನಕ್ಕೆ ಬರುವ ವರೆಗೂ ಅಮೀರರು ಸ್ತ್ರೀಯನ್ನು ಮುಟ್ಟಲಾಗದು ; ಇಲ್ಲದಿದ್ದರೆ, ಅವರ ನಾಶ ಅನಿವಾರ್ಯವಾಗುತ್ತದೆ. ನಾನು ಸಮಯಕ್ಕೆ ಸರಿಯಾಗಿ ಬಂದು ಅವರಿಗೆ ಎಚ್ಚರಿಕೆ ಕೊಡುವಂತಾಯಿತಲ್ಲಾ ! ಅದು ಅಲ್ಲಾನ ದಯ ; ಅಲ್ಲಾಗೆ ಜಯವಾಗಲಿ ! ”

ಅಮೀರನು ನಡುವೆ ಬಾಯಿ ಹಾಕಿನನು : “ ನಿಲ್ಲಿಸು, ಮೌಲಾನಾ ಹುಸೇನ್. ಅರ್ಥವಾಗದಂಥ ವಿಚಾರಗಳನ್ನು ಕುರಿತು ನೀನು ಮಾತಾಡುತ್ತಿದ್ದೀಯೆ ! ”

“ ನಾನು ಸಮಯಕ್ಕೆ ಸರಿಯಾಗಿ ಬಂದದ್ದಕ್ಕಾಗಿ ಅಲ್ಲಾಗೆ ವಂದನೆ ಸಲ್ಲಲಿ ! ” ಎಂದು ಜ್ಞಾನಿ ಮತ್ತೆ ಮತ್ತೆ ಹೇಳುತ್ತಲೇ ಇದ್ದನು. “ ಇವತ್ತು ಅಮೀರರು ಸ್ತ್ರೀಯನ್ನು ಸೋಂಕದಂತೆ ತಡೆದದ್ದಕ್ಕಾಗಿ ನಾನು ಬದುಕಿರುವ ವರೆಗೂ ಹೆಮ್ಮೆ ಪಡುತ್ತಿರುತ್ತೇನೆ. ಹೀಗೆ, ಈ ಮೂಲಕ ಪ್ರಪಂಚಕ್ಕೆ ಅಗಲಿಕೆಯ ದೊಡ್ಡ ದುಃಖವನ್ನು ತಪ್ಪಿಸಿದ್ದೇನೆ.”

ಅಷ್ಟೊಂದು ಹಿಗ್ಗಿನಿಂದಲೂ ಉತ್ಸಾಹದಿಂದಲೂ ಆ ಮಾತಾಡುತ್ತಿದ್ದದ್ದರಿಂದ ಅಮೀರನು ಅವನನ್ನು ನಂಬದಿರಲಾರದಾದನು.

“ ಕೇವಲ ಒಂದು ಸಣ್ಣ ಇರುವೆಗೆ ಸಮಾನನಾದ ನಾನು, ವಿಶ್ವಮಹಿಮನ ಅನುಗ್ರಹಕಿರಣಕ್ಕೆ ಭಾಗಿಯಾದಾಗ, ವಿಶ್ವದ ಮಹಿಮೆಯಾಗಿರುವ ಅಮೀರರು ಈ ಅಯೋಗ್ಯನ ಹೆಸರನ್ನು ನೆನಪಿಟ್ಟುಕೊಂಡು, ಬುಖಾರ ನಗರಕ್ಕೆ ಬಂದು ತಮ್ಮ ಸೇವೆಯಲ್ಲಿ ನಿಲ್ಲಬೇಕೆಂದು ಕಳಿಸಿದ ಆಜ್ಞೆ ಬಂದು ನನಗೆ ತಲುಪಿದಾಗ, ಅನಂತಸುಖಸಾಗರದಲ್ಲಿ ನನ್ನನ್ನು ಮುಳುಗಿಸಿದರೋ ಎಂಬಂತಾಯಿತು. ಆ ಆಜ್ಞೆಯನ್ನು ಶಿರಸಾ ವಹಿಸಿ ಆ ಕ್ಷಣವೇ ನಾನು ಪ್ರಯಾಣ ಹೊರಟುಬಿಟ್ಟೆನೆಂದು ಮತ್ತೆ ಹೇಳಬೇಕಾಗಿಯೇ ಇಲ್ಲ.

“ ಆದರೆ, ಮೊದಲು ಅಮೀರರ ಜಾತಕವನ್ನು ಸಿದ್ಧಪಡಿಸುವುದಕ್ಕೆ ಕೆಲವು ದಿನ ಕಳೆದೆ. ಹೀಗೆ ತಕ್ಷಣವೇ ನಾನು ಅವರ ಸೇವೆಯನ್ನು ಪ್ರಾರಂಭಿಸಿದೆನು. ಅವರ ಅದೃಷ್ಟದ ಮೇಲೆ ಪ್ರಭಾವ ಬೀರುವ ಗ್ರಹನಕ್ಷತ್ರಗಳ ಚಲನೆ

ಯನ್ನು ಪರೀಕ್ಷಿಸುತ್ತ ಬಂದೆ. ನಿನ್ನೆ ರಾತ್ರಿ, ಆಕಾಶದ ಕಡೆ ನೋಡಿದಾಗ, ಗ್ರಹಗಳೂ ನಕ್ಷತ್ರಗಳೂ ಎರಡೂ ಅಮೀರರಿಗೆ ಮಹಾ ಭಯಂಕರವಾದ ಅಪಾಯವನ್ನು ಸೂಚಿಸುತ್ತಿರುವುದು ತಿಳಿಯಬಂತು. ಅಷ್-ಷುಲ ನಕ್ಷತ್ರವು ಅಲ್-ಕಲ್ಬ್ ನಕ್ಷತ್ರಕ್ಕೆ ಅಶುಭ ದೃಷ್ಟಿಯನ್ನು ಬೀರುತ್ತಿತ್ತು. ಅಷ್-ಷುಲ ಕುಟುಕಿನ ಸಂಕೇತ; ಅಲ್-ಕಲ್ಬ್ ಹೃದಯಕ್ಕೆ ಸಂಕೇತ. ಇದೂ ಅಲ್ಲದೆ, ಸ್ತ್ರೀಯ ಮುಖಪರದೆಯನ್ನು ಸೂಚಿಸುವ ಅಲ್-ಘಫರ್ ನಕ್ಷತ್ರತ್ರಯವನ್ನೂ ಕಿರೀಟವನ್ನೂ ಸೂಚಿಸುವ ಅಲ್-ಇಕ್ಲಿಲ್ ನಕ್ಷತ್ರದ್ವಯವನ್ನೂ, ಕೊಂಬುಗಳನ್ನು ಸೂಚಿಸುವ ಅಷ್-ಷರತನ್ ನಕ್ಷತ್ರದ್ವಯವನ್ನೂ ನೋಡಿದೆನು.

"ಇವೆಲ್ಲ ಸಂಭವಿಸಿದ್ದು ಮಂಗಳವಾರದ ದಿನ—ಕುಜ ಗ್ರಹಕ್ಕೆ ವಿನಾಶಲಾದ ದಿನ—ಮತ್ತು ಈ ದಿನ, ಗುರುವಾರದಂತಲ್ಲದೆ, ಮಹಾ ಪುರುಷರ ಮರಣವನ್ನು ಸೂಚಿಸುತ್ತದೆ; ಆದ್ದರಿಂದ ಇದು ಅಮೀರರಿಗೆ ಅತ್ಯಂತ ಪ್ರತಿಕೂಲವಾಗಿದೆ. ಈ ಎಲ್ಲ ಸೂಚನೆಗಳನ್ನೂ ಪರೀಕ್ಷಿಸಿ ನೋಡಿ ನಾನು—ಕೇವಲ ಕೆಲಸಕ್ಕೆ ಬಾರದ ಅಲ್ಪ ಜ್ಯೋತಿಷಿಯೇ ಆದರೂ—ಮೃತ್ಯುವಿನ ಕುಟುಕು ಕೊಂಡಿಯು, ಕಿರೀಟಧಾರಿಯ ಹೃದಯವನ್ನು, ಅವನು ಸ್ತ್ರೀಯ ಮುಖಪರದೆಯನ್ನು ಮುಟ್ಟುವ ಪಕ್ಷದಲ್ಲಿ ಕುಟುಕಿಬಿಡುವುದೆಂದು ತೀರ್ಮಾನಿಸಿ ತಿಳಿದುಕೊಂಡೆನು. ಹೀಗೆ ನಾನು ಕಿರೀಟಧಾರಿಗೆ ಎಚ್ಚರಿಕೆ ಕೊಡುವುದಕ್ಕಾಗಿ ಇಷ್ಟು ಆತುರದಲ್ಲಿ ಬರಬೇಕಾಯಿತು. ರಾತ್ರಿ ಹಗಲೂ ಬೇಗ ಬೇಗ ಪ್ರಯಾಣ ಮಾಡಿ ಬಂದೆ. ನಿಲುಗಡೆಯಿಲ್ಲದೆ ಸವಾರಿ ಮಾಡಿ ಮಾಡಿ ಎರಡು ಒಂಟೆಗಳು ಸತ್ತುಹೋದವು; ಕೊನೆಗೆ ಕಾಲ್ನಡಿಗೆಯಲ್ಲಿ ಬುಖಾರವನ್ನು ಪ್ರವೇಶಿಸಿದೆ."

ಈ ಭಾಷಣ ಅಮೀರನ ಮೇಲೆ ಮಹತ್ತಾದ ಪರಿಣಾಮವನ್ನುಂಟುಮಾಡಿತು. "ಓ, ಸರ್ವಶಕ್ತನಾದ ಅಲ್ಲಾ! ನಮಗೆ ಇಷ್ಟು ದೊಡ್ಡದಾದ ಮಹಾ ಅಪಾಯವಿರುವುದು ಸಾಧ್ಯವೇ? ಮೌಲಾನಾ ಹುಸೇನ್, ನಿನ್ನ ಲೆಕ್ಕಾಚಾರ ಎಲ್ಲೂ ತಪ್ಪಾಗಿಲ್ಲವೆಂದು ನಿನಗೆ ಖಚಿತವಾಗಿದೆಯೆ?" ಎಂದನು.

"ತಪ್ಪಿರುವುದೆ? ನಾನು?" ಎಂದು ಜ್ಞಾನಿ ಆಶ್ಚರ್ಯೋದ್ಗಾರ ಎತ್ತಿದನು. "ಘನ ಹೊಂದಿದ ಅಮೀರರು ಅರಿತುಕೊಳ್ಳಲಿ! ಜ್ಞಾನದಲ್ಲಿಯೂ, ಗ್ರಹನಕ್ಷತ್ರಗಳ ಸ್ಥಿತಿಗತಿಗಳನ್ನು ಗುಣಿಸುವುದರಲ್ಲಿಯೂ, ರೋಗಗಳನ್ನು ವಾಸಿ ಮಾಡುವುದರಲ್ಲಿಯೂ ನನಗೆ ಸಮಾನರಾದವರು ಬಾಗ್ದಾದಿನಿಂದ ಬುಖಾರದ

ವರೆಗೆ ಒಬ್ಬನೂ ಇಲ್ಲ. ನಾನು ತಪ್ಪುಮಾಡಿರಲಾರೆ. ವಿಶ್ವಕ್ಕೆ ಸೂರ್ಯಪ್ರಾಯ ರಾಗಿರುವ ಪ್ರಭುಗಳು, ಮಹಾ ಅಮೀರರು ತಮ್ಮ ಆಸ್ಥಾನದ ಜ್ಞಾನಿಗಳನ್ನು ಬೇಕಾದರೆ ವಿಚಾರಿಸಿ ನೋಡಲಿ. ನಾನು ನಕ್ಷತ್ರಗಳನ್ನು ಸರಿಯಾಗಿ ಹೆಸರಿಸಿದ್ದೇನೋ ಇಲ್ಲವೋ, ಜಾತಕದಲ್ಲಿ ಅವುಗಳ ಸ್ಥಾನಗಳನ್ನು ಸರಿಯಾಗಿ ಅರ್ಥ ಮಾಡಿ ವಿವರಿಸಿದ್ದೇನೋ ಇಲ್ಲವೋ ಎಂದು ಕೇಳಿ ನೋಡಲಿ" ಎಂದನು.

ಅಮೀರನಿಂದ ಒಂದು ಸನ್ನೆ ಬಂದದ್ದನ್ನು ಕಂಡು ಸೊಟ್ಟಗತ್ತಿನ ಜ್ಞಾನಿ ಮುಂದೆ ಬಂದನು.

"ಜ್ಞಾನದಲ್ಲಿ ನನ್ನ ಸಹೋದ್ಯೋಗಿಯಾದ ಅಸದೃಶನಾದ ಮೌಲಾನಾ ಹುಸೇನನು ನಕ್ಷತ್ರಗಳನ್ನು ಸರಿಯಾಗಿ ಹೆಸರಿಸಿದ್ದಾನೆ ಇದು ಅವನು ಜ್ಞಾನಿಯೆಂಬುದನ್ನು ನಿರ್ವಿವಾದವಾಗಿ ಸ್ಥಾಪಿಸುತ್ತದೆ. ಆದರೆ"—ಈ ಮುಂದಿನ ಮಾತಾಡುವಾಗ ಅವನ ದನಿಯಲ್ಲಿ ಮಾತ್ಸರ್ಯದ ಸುಳಿವಿದ್ದಂತೆ ಖೋಜಾ ನಸ್ರೆದ್ದೀನನಿಗೆ ತೋರಿತು—"ಆದರೆ, ಅತ್ಯಂತ ಪ್ರಾಜ್ಞನಾದ ಮೌಲಾನಾ ಹುಸೇನನು ಚಂದ್ರನ ಹದಿನಾರನೆಯ ಸ್ಥಾನವನ್ನೂ ಅದು ಬರುವ ರಾಶಿಗಳನ್ನೂ ಘನ ಅಮೀರರಿಗೆ ಅದೇಕೆ ತಿಳಿಸಲಿಲ್ಲ? ಏಕೆಂದರೆ, ಈ ನಿರ್ದೇಶಗಳಿಲ್ಲದೆ ಕುಜ ಗ್ರಹದ ಸಂಕೇತವಾದ ದಿನಗಳವಾದವು ಮಹಾ ಪುರುಷರ ಮರಣವನ್ನು—ಕಿರೀಟಾಧಿಪತಿಗಳ ಮರಣವನ್ನು ಕೂಡ—ಸುಸ್ಪಷ್ಟವಾಗಿ ಸೂಚಿಸುವುದೆಂದು ಖಂಡಿತವಾಗಿ ಹೇಳಲಾಗುವುದಿಲ್ಲ; ಏಕೆಂದರೆ, ಕುಜ ಗ್ರಹಕ್ಕೆ ಲಗ್ನ ಒಂದು ರಾಶಿಯಲ್ಲಿ, ಅಧೋಬಿಂದು (ನೀಚ) ಮತ್ತೊಂದು ರಾಶಿಯಲ್ಲಿ, ಖಮಧ್ಯ (ಉಚ್ಚ) ಇನ್ನೊಂದರಲ್ಲಿ, ಅದರ 'ಕ್ಷೀಣ' ಮಗದೊಂದು ರಾಶಿಯಲ್ಲಿ. ಇವುಗಳಿಗೆ ಸಂಬಂಧಪಟ್ಟಂತೆ ಕುಜಗ್ರಹಕ್ಕೆ ನಾಲ್ಕು ಬಗೆಯ ಬೇರೆ ಬೇರೆ ಫಲನಿರ್ದೇಶ ಮಾಡಬೇಕಾಗುತ್ತದೆ. ಅತ್ಯಂತ ಘನವಂತನೂ ಅತ್ಯಂತ ಪ್ರಾಜ್ಞನೂ ಆದ ಮೌಲಾನಾ ಹುಸೇನ್ ನಮಗೆ ತಿಳಿಸಿದಂತೆ ಒಂದೇ ಒಂದು ಫಲವಲ್ಲ."

ಈ ಜ್ಞಾನಿಯು ಮೌನ ವಹಿಸಿದನು; ಕುಟಿಲತನದಿಂದ ಮುಗುಳ್ನಗೆ ನಗುತ್ತಿದ್ದನು. ಆಸ್ಥಾನಿಕರು ಈ ಹೇಳಿಕೆಯಿಂದ ಹೊಸಬನಿಗೆ ತಬ್ಬಿಬ್ಬಾಗಿದೆಯೆಂದು ಭಾವಿಸಿ ಒಬ್ಬರೊಡನೊಬ್ಬರು ಪಿಸುಮಾತಿನಲ್ಲಿ ತಮ್ಮ ಅಭಿಪ್ರಾಯವನ್ನು ತಿಳಿಸುತ್ತಿದ್ದರು; ತಮ್ಮ ಸಂಪಾದನೆಯ ಮತ್ತು ಉನ್ನತ ಸ್ಥಾನದ

ವಿಷಯದಲ್ಲಿ ಅವರು ತುಂಬ ಜಾಗರೂಕರಾಗಿ ಹೊಸಬರು ಯಾರೂ ಅಲ್ಲಿ ಬಂದು ಸೇರದಂತೆ ತಡೆಯಲು ನೋಡುತ್ತಿದ್ದರು; ಪ್ರತಿಯೊಬ್ಬ ಹೊಸಬನೂ ತಮಗೆ ಪ್ರಬಲ ಪ್ರತಿಸ್ಪರ್ಧಿಯೆಂದು ಭಾವಿಸುತ್ತಿದ್ದರು.

ಆದರೆ, ಖೋಜಾ ನಸ್ರೆದ್ದೀನನು ಏನನ್ನಾದರೂ ತೊಡಗಿದರೆ, ಅದನ್ನು ನಡುವೆ ಕೈಬಿಡುವುದು ಅವನ ಸ್ವಭಾವವಾಗಿರಲಿಲ್ಲ. ಇದೂ ಅಲ್ಲದೆ, ಅವನು ಈ ಜ್ಞಾನಿ, ಆಸ್ಥಾನಿಕರು, ಕಡೆಗೆ ಅಮೀರ—ಇವರೆಲ್ಲರ ಯೋಗ್ಯತೆಯೂ ಸಾಮರ್ಥ್ಯವೂ ಎಷ್ಟೆಂದು ತೂಕಹಾಕಿ ತಿಳಿದುಕೊಂಡಿದ್ದನು. ಸ್ವಲ್ಪವೂ ಎದೆ ಗೆಡದೆ, ಅಳುಕದೆ, ಎದುರುತ್ತರ ಕೊಟ್ಟನು. ತಾನು ಏನೋ ಅನುಗ್ರಹ ಮಾಡುತ್ತಿರುವನೆಂಬಂತೆ ಉತ್ತರ ಕೊಟ್ಟನು:

"ಪ್ರಾಜ್ಞನೂ ಮಾನ್ಯನೂ ಆದ ನನ್ನ ಸಹೋದ್ಯೋಗಿ ಬೇರೆ ಯಾವುದಾದರೂ ವಿದ್ಯೆಯಲ್ಲಿ ನನಗಿಂತ ಬಹಳ ಮೇಲಾಗಿರಬಹುದೇನೋ! ಆದರೆ, ಜ್ಯೋತಿಷ್ಯ ವಿಷಯದಲ್ಲಿ ಮಾತ್ರ, ಅವನ ಮಾತುಗಳು ಅವನ ಅಜ್ಞಾತೆಯನ್ನು ವ್ಯಕ್ತಮಾಡುತ್ತವೆ. ಅವನು ಜ್ಞಾನಿಗಳಲ್ಲಿ ಜ್ಞಾನಿಯಾದ ಇಬಿನ್ ಬಜ್ಜನ ಪ್ರತಿಪಾದನೆಗಳನ್ನು ಅರಿತಿಲ್ಲವೆಂದು ಸ್ಪಷ್ಟವಾಗುತ್ತದೆ. ಇಬಿನ್ ಬಜ್ಜ ಹೇಳುತ್ತಾನೆ: 'ಕುಜಗ್ರಹಕ್ಕೆ ನೆಲೆ....ಮೇಷ ಮತ್ತು ವೃಶ್ಚಿಕ ರಾಶಿಗಳಲ್ಲಿ; ಉಚ್ಚ (ಖಮಧ್ಯ) ಮಕರ ರಾಶಿಯಲ್ಲಿ, ನೀಚ (ಅಧೋಬಿಂದು) ಕರ್ಕಾಟಕ ರಾಶಿಯಲ್ಲಿ, ಅದರ ಕ್ಷೀಣ ತುಲಾ ರಾಶಿಯಲ್ಲಿ; ಆದರೂ ಇದು ಮಂಗಳವಾರಕ್ಕೇ ಸಹಜವಾಗಿ ಸೇರಿರತಕ್ಕದ್ದು; ಆ ದಿನ ಅದು ಕಿರೀಟಧಾರಿಗಳಿಗೆ ಅಪಾಯಕರ ಪ್ರಭಾವ ಬೀರುತ್ತದೆ."

ಈ ಉತ್ತರ ಹೇಳುವಾಗ ಖೋಜಾ ನಸ್ರೆದ್ದೀನನಿಗೆ ತನ್ನ ಮೇಲೆ ಅಜ್ಞಾತೆಯ ದೋಷ ಹೊರುವುದೆಂಬ ಹೆದರಿಕೆ ಸ್ವಲ್ಪವೂ ಇರಲಿಲ್ಲ. ಏಕೆಂದರೆ ಇಂಥ ವಾದಗಳಲ್ಲಿ ಚತುರವಾಗಿ ನಿರರ್ಗಳವಾಗಿ ಮಾತಾಡುವವನಿಗೆ ಜಯ ದೊರೆಯುವುದೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ನಿರರ್ಗಳ ಭಾಷಣದಲ್ಲಿ ಅವನನ್ನು ಸರಿಗಟ್ಟುವವರು ಬಹಳ ಮಂದಿಯಿರಲಿಲ್ಲ.

ಖೋಜಾ ನಸ್ರೆದ್ದೀನನು ಆ ಜ್ಞಾನಿ ಆಕ್ಷೇಪಣೆಯೆತ್ತುವುದನ್ನೇ ನಿರೀಕ್ಷಿಸಿಕೊಂಡು, ಅವಕ್ಕೆ ತಕ್ಕಂತೆ ಉತ್ತರ ಕೊಡಲು ಸಿದ್ಧನಾಗಿ ನಿಂತನು. ಆದರೆ ಅವನು ಪ್ರತಿಭಟಿಸದೆ ಮೌನವಹಿಸಿಬಿಟ್ಟನು. ವಾದವನ್ನು ಮುಂದುವರಿಸು

ವುದಕ್ಕೆ ಅವನಿಗೆ ಧೈರ್ಯವಿರಲಿಲ್ಲ. ಖೋಜಾ ನಸ್ರೆದ್ದೀನನಿಗೆ ಶಾಸ್ತ್ರಜ್ಞಾನವಿಲ್ಲವೆಂದೂ ಅವನು ವಂಚನೆ ಮಾಡುತ್ತಿರುವನೆಂದೂ ಅವನಿಗೆ ಸಂಶಯವಿದ್ದಿತಾದರೂ ಅದಕ್ಕಿಂತ ಹೆಚ್ಚಾಗಿ ತನಗೇ ತಕ್ಕಷ್ಟು ತಿಳಿವಳಿಕೆಯಿಲ್ಲವೆಂಬ ವಿಷಯ, ತನ್ನ ಅಜ್ಞಾನದ ಆಳ, ಅವನಿಗೆ ಚೆನ್ನಾಗಿ ತಿಳಿದಿತ್ತು. ಹೀಗೆ ಹೊಸಬನಿಗೆ ಮಂಕುಹಿಡಿಸಬೇಕೆಂದು ಮಾಡಿದ ಪ್ರಯತ್ನ ಸಾರ್ಥಕವಾಗದೆ ವಿರುದ್ಧ ಫಲವನ್ನು ಕೊಟ್ಟಿತು. ಆಸ್ಥಾನಿಕರು ಹುಶ್ಶೆಂದು ತಮ್ಮ ಅಸಮಾಧಾನ ತೋರಿಸಿದರು.

ಆ ಜ್ಞಾನಿಯು ಈಗ ಬಂದಿರುವ ಹೊಸಬ ಸಾಮಾನ್ಯನಲ್ಲವೆಂದೂ ಬಹಿರಂಗವಾಗಿ ಎದುರಿಸಿದರೆ ತಮಗೇ ಅಪಾಯವೆಂದೂ ತನ್ನ ಕಣ್ ನೋಟದಿಂದಲೇ ಅವರಿಗೆ ಸೂಚಿಸಿದನು.

ಈ ಸಂಚು ಸನ್ನೆಗಳು ಖೋಜಾ ನಸ್ರೆದ್ದೀನನಿಗೆ ಗೋಚರವಾಗದೆ ಇರಲಿಲ್ಲ.

" ಇರಲಿ ! ಸ್ವಲ್ಪ ತಡೆಯಿರಿ ! ತೋರಿಸುತ್ತೇನೆ, ನಿಮಗೆ ! " ಎಂದುಕೊಂಡನು.

ಅಮೀರನು ಆಳವಾದ ಆಲೋಚನೆಯಲ್ಲಿ ಮುಳುಗಿದನು. ಪ್ರತಿಯೊಬ್ಬರೂ ಅಲುಗದೆ ಸ್ತಬ್ಧರಾಗಿದ್ದರು. ಅಮೀರನ ಗಮನವೆಳೆಯಲು ಎಲ್ಲರಿಗೂ ಭಯ.

ಕಟ್ಟಕಡೆಗೆ ಅಮೀರನೇ ಪ್ರಾರಂಭಿಸಿದನು : " ಮೌಲಾನಾ ಹುಸೇನ್, ನೀನು ಎಲ್ಲ ನಕ್ಷತ್ರಗಳನ್ನೂ ಸರಿಯಾಗಿ ಹೆಸರಿಸಿ ನಿರ್ದೇಶಿಸಿರುವ ಪಕ್ಷದಲ್ಲಿ ನಿನ್ನ ಫಲನಿರೂಪಣೆಯೂ ಸರಿಯಾಗಿಯೇ ಇರಬೇಕು. ಆದರೂ ನಮಗೆ ಅರ್ಥವಾಗದೆ ಇರುವುದೇನೆಂದರೆ, ಕೊಂಬುಗಳನ್ನು ಸೂಚಿಸುವ ಆಷ್-ಷರತನ್ ನಕ್ಷತ್ರಗಳೆರಡೂ ನಮ್ಮ ಜಾತಕಕ್ಕೇಕೆ ಬಂದವು? ನಿಜವಾಗಿಯೂ ನೀನು ಸಕಾಲದಲ್ಲಿ ಬಂದಿದ್ದೀಯ, ಮೌಲಾನಾ ಹುಸೇನ್ ; ಈ ಬೆಳಗ್ಗೆಯಿನ್ನೂ ಒಬ್ಬ ಪ್ರಾಯದ ಹುಡುಗಿಯನ್ನು ನಮ್ಮ ಅಂತಃಪುರಕ್ಕೆ ತರಿಸಿದೆವು ; ಮತ್ತು ನಾವು...."

ಖೋಜಾ ನಸ್ರೆದ್ದೀನ್ ಮಹಾ ಭಯವನ್ನು ನಟಿಸುತ್ತ ಕೈ ಅಳ್ಳಾಡಿಸಿದನು.

"ಅವಳನ್ನು ನಿಮ್ಮ ಮನಸ್ಸಿನಿಂದ ಅತ್ತಿತ್ತ ಓಡಿಸಿಬಿಡಿ; ಓ ಪರಮ ಪ್ರಶಾಂತ ಅಮೀರರೇ, ಅವಳ ಯೋಚನೆಯನ್ನು ಬಿಟ್ಟುಬಿಡಿ!" ಎಂದು ನುಡಿದನು. ಅಮೀರನನ್ನು ಪ್ರಥಮಪುರುಷದಲ್ಲಲ್ಲದೆ ಬೇರೆ ರೀತಿ ಸಂಬೋಧಿಸ ಲಾಗದೆಂಬುದನ್ನು ಮರೆತುಬಿಟ್ಟನೋ ಎಂಬಂತೆ ನುಡಿದನು. ಹೀಗೆ ಮಾಡು ವುದರಲ್ಲಿ ಅವನೆಣಿಕೆಯಿದು: ಅಮೀರನ ಮೇಲಿನ ಭಕ್ತಿಯಿಂದ, ಅವನ ಪ್ರಾಣ ಕ್ಕೆಲ್ಲಿ ಅಪಾಯವಾದೀತೋ ಎಂಬ ಭಯದಿಂದ ಈ ಸಂಪ್ರದಾಯ ಮರ್ಯಾದೆ ಯನ್ನು ಮೀರಿದರೆ, ಅದು ಅಪರಾಧವೆಂದು ಪರಿಗಣಿಸದಿರುವುದು ಮಾತ್ರವಲ್ಲ, ಅದಕ್ಕೆ ಪ್ರತಿಯಾಗಿ ಆ ಭಕ್ತಿ ಭಾವನೆ ಸಹಜವಾದ್ದೆಂದೂ ಪ್ರಾಮಾಣಿಕ ವಾದ್ದೆಂದೂ ತಿಳಿದು ಅಮೀರನ ದೃಷ್ಟಿಯಲ್ಲಿ ತನ್ನ ಬೆಲೆ ಹೆಚ್ಚುವುದೆಂದು ಊಹಿಸಿದ್ದನು.

ಆ ಹುಡುಗಿಯನ್ನು ಅಮೀರನು ಮುಟ್ಟಬಾರದೆಂದು ಬಹು ದೈನ್ಯದಿಂದ ಬಹು ಭಾವಾವೇಶದಿಂದ ಪ್ರಾರ್ಥಿಸಿದನು; ಅಂಗಲಾಚಿ ಬೇಡಿದನು; ಹಾಗೆ ನಡೆಯದಿದ್ದರೆ, ತಾನು ಎಂದರೆ, ಮೌಲಾನಾ ಹುಸೇನ್, ಅನಂತಕಾಲದ ವರೆಗೂ ಕಣ್ಣೀರ ಪ್ರವಾಹವನ್ನು ಕರೆಯುತ್ತಿರಬೇಕಾಗುವುದೆಂದೂ ದುಃಖದ ಕರಿಯುಡುಪು ಧರಿಸಿರಬೇಕಾಗುವುದೆಂದೂ ಮನ ಕರಗುವಂತೆ ಬಣ್ಣಿಸಿದನು. ಆ ಪ್ರಾರ್ಥನೆ ಅಮೀರನ ಮನಸ್ಸಿಗೆ ತಟ್ಟಿತು.

"ಶಾಂತನಾಗು, ಶಾಂತನಾಗು, ಮೌಲಾನಾ ಹುಸೇನ್, ಶಾಂತನಾಗು. ನಾವು ನಮ್ಮ ಪ್ರಜೆಗಳ ಶತ್ರುವಲ್ಲ, ಅವರನ್ನು ಅಗಲಿಕೆಯ ದುಃಖದಲ್ಲಿ ಮುಳುಗಿಸಿಬಿಡುವುದಕ್ಕೆ. ನಿನಗೆ ಮಾತುಕೊಡುತ್ತೇನೆ, ಪ್ರತಿಜ್ಞೆಮಾಡಿ ಹೇಳು ತ್ತೇನೆ: ನಕ್ಷತ್ರಗಳು ಅನುಕೂಲ ಪರಿಸ್ಥಿತಿಗೆ ಬರುವ ವರೆಗೂ ಈ ಹುಡುಗಿ ಯನ್ನು ಸಮೀಪಿಸಿ ನಮ್ಮ ಅಮೌಲ್ಯವಾದ ಪ್ರಾಣವನ್ನು ಗಂಡಾಂತರಕ್ಕೆ ಗುರಿ ಮಾಡುವುದಿಲ್ಲ. ಅಷ್ಟೇ ಅಲ್ಲ, ಗ್ರಹಗತಿ ಸರಿಹೋಯಿತೆಂದು ನೀನು ನಮಗೆ ತಿಳಿಸುವ ವರೆಗೂ ನಾವು ಅಂತಃಪುರವನ್ನು ಪ್ರವೇಶಿಸುವುದೇ ಇಲ್ಲ. ಬಾ ಇಲ್ಲಿ" ಎಂದು ಸಮಾಧಾನಪಡಿಸಿದನು.

ಹೀಗೆ ನುಡಿದು ಅಮೀರನು ತನ್ನ ನಾಳವಾಹಕನಿಗೆ ಸನ್ನೆಮಾಡಿದನು. ಆಳವಾಗಿ ಒಂದು 'ದಂ' ಎಳೆದು ಆ ಮೇಲೆ ಅದರ ಚಿನ್ನದ ಮೂತಿಯನ್ನು ಸ್ವಹಸ್ತದಿಂದಲೇ ಹೊಸದಾಗಿ ಬಂದ ಜ್ಞಾನಿಗೆ ಕೊಟ್ಟನು—ಇದೊಂದು ಘನ

ಮರ್ಯಾದೆ, ಮಹದನುಗ್ರಹ. ನೆಲದ ಮೇಲೆ ಮಂಡಿಯೂರಿ ಕಣ್ಣು ತಗ್ಗಿಸಿ ಜ್ಞಾನಿಯು ಅಮೀರನ ಕೈಯಿಂದ ಆ ಅನುಗ್ರಹವನ್ನು ಸ್ವೀಕರಿಸಿದನು; ಆಗ ಅವನ ಮೈ ಕಂಪಿಸಿತು. ಆಸ್ಥಾನಿಕರು ಅದನ್ನು ಕಂಡು ಆನಂದೋದ್ರೇಕದಿಂದ ಹಾಗೆ ಕಂಪಿಸಿದನೆಂದುಕೊಂಡರು. ಅವರಿಗೆ ಹೊಸಬನ ವಿಷಯದಲ್ಲಿ ಬಹಳ ಹೊಟ್ಟೆಕಿಚ್ಚು ಹುಟ್ಟಿತು.

"ಮಹಾ ಪ್ರಾಜ್ಞನಾದ ಮೌಲಾನಾ ಹುಸೇನನ ವಿಷಯದಲ್ಲಿ ನಮ್ಮ ಸದ್ಭಾವವನ್ನೂ ಅನುಗ್ರಹವನ್ನೂ ವ್ಯಕ್ತಪಡಿಸುತ್ತೇವೆ. ಇವನನ್ನು ನಮ್ಮ ರಾಜ್ಯದ ಪ್ರಧಾನ ಜ್ಞಾನಿಯಾಗಿ ನಿಯಮಿಸಿದ್ದೇವೆ. ಅವನ ಜ್ಞಾನವೂ ವಿದ್ಯಾ ಪ್ರೌಢಿಮೆಗಳೂ ಮತ್ತು ನಮ್ಮ ವ್ಯಕ್ತಿವಿಷಯವಾಗಿ ಅವನಿಗಿರುವ ಶ್ರದ್ಧಾಭಕ್ತಿಗಳೂ ಎಲ್ಲರಿಗೂ ಆದರ್ಶವಾಗಿವೆ" ಎಂದು ಅಮೀರನು ಅಪ್ಪಣೆ ಕೊಡಿಸಿದನು.

ಆಸ್ಥಾನದ ಕರಣಿಕನು ಕರಕರನೆ ಬರೆಯತೊಡಗಿದನು. ಅಮೀರನ ಪ್ರತಿಯೊಂದು ನುಡಿಯನ್ನೂ ನಡೆಯನ್ನೂ ಮುಂದಿನ ಕಾಲದವರಿಗೆ ಅಮೀರನ ಮಹಿಮೆ ಗೊತ್ತಾಗದೆ ಹೋಗಲವಕಾಶವಿಲ್ಲದಂತೆ—ಈ ವಿಷಯದಲ್ಲಿ ಅಮೀರನಿಗೆ ಬಹಳ ಆತಂಕವಿತ್ತು—ಪ್ರಶಂಸಾತ್ಮಕವಾದ ಕಾವ್ಯಶೈಲಿಯಲ್ಲಿ ಬರೆದಿಡುವುದು ಅವನ ಕರ್ತವ್ಯವಾಗಿತ್ತು.

ಅಮೀರನು ಆಸ್ಥಾನಿಕರ ಕಡೆ ತಿರುಗಿ ಹೀಗೆ ಹೇಳಿದನು: "ನಿಮ್ಮ ವಿಷಯದಲ್ಲಾದರೋ, ನಮ್ಮ ಭಾವ ತೀರ ವಿರುದ್ಧವಾಗಿದೆ. ನಿಮ್ಮ ಮೇಲೆ ನಮಗೆ ಸಂಪೂರ್ಣ ಅಸಮಾಧಾನವುಂಟಾಗಿದೆಯೆಂದು ಹೇಳಲೇಬೇಕಾಗಿದೆ. ಏಕೆಂದರೆ, ಖೋಜಾ ನಸ್ರೆದ್ದೀನನಿಂದಾದ ಚಿಂತೆಗಳು ಮಾತ್ರವೇ ಅಲ್ಲ; ಅದರ ಜೊತೆಗೆ ನಿಮ್ಮ ಪ್ರಭುವಿನ ಮೇಲೆ ಮೃತ್ಯುವೇ ಎರಗಿಬರುವುದರಲ್ಲಿತ್ತು. ಆದರೂ ನಿಮ್ಮಲ್ಲಿ ಯಾರೊಬ್ಬರೂ ಸಹಾಯಕ್ಕಾಗಿ ನಿಮ್ಮ ಕಿರುಬೆರಳನ್ನೂ ಎತ್ತಲಿಲ್ಲ! ಅವರನ್ನು ನೋಡು, ಮೌಲಾನಾ ಹುಸೇನ್! ದಡ್ಡ ಮುಖದ ಈ ಬೆಪ್ಪುತಕಡಿಗಳನ್ನು ನೋಡು. ಅವರು ಯಥಾವತ್ತಾಗಿ ಕತ್ತೆಗಳನ್ನು ಹೋಲುತ್ತಿಲ್ಲವೆ? ನಿಜವಾಗಿಯೂ, ಯಾವ ರಾಜನಿಗೂ ಇಂಥ ಉದಾಸೀನ ಸ್ವಭಾವದ ದಡ್ಡ ವಜೀರರಿರಲಿಲ್ಲ; ಎಂದೆಂದೂ ಇಂಥವರಿರಲಿಲ್ಲ!"

"ನಿಜ, ನಿಜ; ಪರಮ ಪ್ರಶಾಂತರಾದ ಅಮೀರರು ಹೇಳುವುದು

ಸಂಪೂರ್ಣ ಸತ್ಯ" ಎಂದು ಸಮ್ಮತಿ ನುಡಿದನು ಖೋಜಾ ನಸ್ರೆದ್ದೀನ್. ಮೌನವಾಗಿದ್ದ ಆಸ್ಥಾನಿಕರ ಕಡೆ ನೋಡುತ್ತ—ಮೊದಲನೆಯ ಏಟು ಹೊಡೆಯುವುದಕ್ಕೆ ಗುರಿನೋಡುತ್ತಿರುವನೋ ಎಂಬಂತೆ ಅವರ ಕಡೆ ನೋಡುತ್ತ—"ನನಗೆ ಗೋಚರಿಸುವಂತೆ ಈ ಜನರ ಮುಖಗಳಲ್ಲಿ ಜ್ಞಾನದ ಮುದ್ರೆ, ತಿಳಿವಳಿಕೆಯ ಲಕ್ಷಣ, ಕಾಣಿಸುತ್ತಿಲ್ಲ" ಎಂದನು.

ಅಮೀರನಿಗೆ ಆ ಮಾತು ಕೇಳಿ ಬಹಳ ಸಂತೋಷವಾಯಿತು. "ನಿಜ, ನಿಜ, ನೀನು ಹೇಳಿದ್ದು ನಿಜ" ಎಂದು ಒಪ್ಪಿಗೆ ಸೂಚಿಸಿದನು. "ನಿಜ—ಅವರಲ್ಲಿ ತಿಳಿವಳಿಕೆಯ ಲಕ್ಷಣ ಕಾಣುವುದಿಲ್ಲ. ಕೇಳಿದಿರಾ, ದಡ್ಡ ಮಡ್ಡಿಗಳೇ?" ಎಂದು ಕೂಗಿದನು.

ಖೋಜಾ ನಸ್ರೆದ್ದೀನ್ ಮುಂದುವರಿಸಿದನು: "ನಾನು ಇನ್ನೂ ಒಂದು ಮಾತು ಸೇರಿಸಬೇಕಾಗಿದೆ. ಸದಾಚಾರ ಮತ್ತು ಪ್ರಾಮಾಣಿಕತೆಗಳಿಂದ ಕೂಡಿದ ಮುಖವೊಂದಾದರೂ ನನಗೆ ಕಾಣಿಸುತ್ತಿಲ್ಲ."

"ಕಳ್ಳರು!" ಎಂದನು ಅಮೀರ. ಆ ಮಾತಿನಲ್ಲಿ ಪೂರ್ಣ ನಂಬಿಕೆಯೇ ಬಂದುಬಿಟ್ಟಿತ್ತು ಅವನಿಗೆ. "ಅವರೆಲ್ಲರೂ ಶುದ್ಧ ಕಳ್ಳರು! ಹಗಲೂ ರಾತ್ರಿ ನಮ್ಮನ್ನವರು ಸುಲಿಯುತ್ತಾರೆ, ದೋಚುತ್ತಾರೆ! ಅರಮನೆಯಲ್ಲಿ ಪ್ರತಿಯೊಂದು ಪದಾರ್ಥವನ್ನೂ ನಾವು ಕಾವಲಿಟ್ಟು ಕಾಪಾಡಿಕೊಳ್ಳಬೇಕಾಗಿದೆ. ಸಾಮಾನುಗಳನ್ನು ಲೆಕ್ಕ ಮಾಡಿದಾಗಲೆಲ್ಲ, ಒಂದೊಂದು ಸಲವೂ, ಏನಾದರೂ ಒಂದು ಕೈಗೆ ಸಿಕ್ಕದೆ ಕಳೆದು ಹೋಗಿರುತ್ತದೆ. ಇವತ್ತು ಬೆಳಗ್ಗೆಯಿನ್ನೂ ನಮ್ಮ ರೇಷ್ಮೆಯ ನಡುಪಟ್ಟಿಯನ್ನು ಉದ್ಯಾನದಲ್ಲಿ ಬಿಟ್ಟಿದ್ದೆವು. ಅರ್ಧ ಗಂಟೆಯ ಮೇಲೆ ನೋಡಿದರೆ, ಅದಿಲ್ಲವೇ ಇಲ್ಲ! ಅವರಲ್ಲಿ ಯಾರಿಗೆ ಅವಕಾಶವಿತ್ತು.... ತಿಳಿಯಿತೋ ನಿನಗೆ, ಮೌಲಾನಾ ಹುಸೇನ್?" ಎಂದು ಪ್ರಶ್ನೆಮಾಡಿದನು.

ಅಮೀರನು ಈ ವಿಷಯವಾಗಿ ಮಾತಾಡುತ್ತಿದ್ದಾಗ ಸೊಟ್ಟಗತ್ತಿನ ಜ್ಞಾನಿಯು ಅಷಾಢಭೂತಿತನದಿಂದ ದೃಷ್ಟಿ ತಗ್ಗಿಸಿದನು. ಬೇರೆ ಯಾವ ಸಮಯದಲ್ಲಾದರೂ ಆಗಿದ್ದರೆ ಈ ಒಂದು ಸೂಕ್ಷ್ಮ ಚಲನೆ ಯಾರ ಕಣ್ಣಿಗೂ ಬೀಳುತ್ತಿರಲಿಲ್ಲ. ಆದರೆ ಈಗ ಖೋಜಾ ನಸ್ರೆದ್ದೀನನ ಇಂದ್ರಿಯಗಳೆಲ್ಲ ಬಹು ಜಾಗರೂಕವಾಗಿದ್ದವು. ವಿಷಯ ಏನೆಂದು ಅವನಿಗೆ ತಕ್ಷಣ ಹೊಳೆದುಬಿಟ್ಟಿತು.

ಅವನು ದೃಢ ನಂಬಿಕೆಯಿಂದ ವಕ್ರಕಂಠದ ಜ್ಞಾನಿಯ ಬಳಿ ಹೋದನು.

ಹೋಗಿ ಅವನ ಖಲತ್ತಿನ ಎದೆಯ ಭಾಗದೊಳಕ್ಕೆ ಕೈಹಾಕಿ ಅಮೂಲ್ಯವಾದ ಕಸೂತಿ ಕೆಲಸ ಮಾಡಿದ್ದ ನಡುಪಟ್ಟಿಯೊಂದನ್ನು ಹೊರಕ್ಕೆಳೆದನು.

"ಘನ ಅಮೀರರು ಈ ನಡುಪಟ್ಟಿ ಕಳೆದುಹೋಯಿತೆಂದು ವ್ಯಥೆಪಡುತ್ತಿದ್ದರೇ?"

ಅತ್ಯಾಶ್ಚರ್ಯದಿಂದಲೂ ಘೋರ ಭೀತಿಯಿಂದಲೂ ಆಸ್ಥಾನಿಕರೆಲ್ಲ ಸ್ತಬ್ಧರಾದರು. ಹೊಸ ಜ್ಞಾನಿಯು ನಿಜವಾಗಿಯೂ ಬಹು ಅಪಾಯಕಾರಿಯಾದ ಎದುರಾಳಿಯೆಂದು ಸ್ಪಷ್ಟವಾಯಿತು. ಅವನನ್ನು ಮೊಟ್ಟಮೊದಲು ಎದುರಿಸುವ ಸಾಹಸಮಾಡಿದಾತನು ಈಗ ತಾನೇ ಅಪರಾಧಿಯಾಗಿ ನಿಲ್ಲಬೇಕಾಯಿತು; ತನ್ನ ಅಪರಾಧ ಬಹಿರಂಗವಾಗಿ, ತಾನು ಸೋತು ಅಡಗಬೇಕಾಯಿತು. ಅನೇಕ ಮಂದಿ ಜ್ಞಾನಿಗಳು, ಕವಿಗಳು, ಅಧಿಕಾರಿಗಳು ಮತ್ತು ವಜೀರರು—ಇವರೆಲ್ಲರ ಹೃದಯಗಳಲ್ಲಿ ಭಯ ತುಂಬಿಕೊಂಡಿತು.

"ಹಾ, ಅಲ್ಲಾ! ಇದು ನನ್ನ ನಡುಪಟ್ಟಿ. ನಿಜವಾಗಿಯೂ, ಮೌಲಾನಾ ಹುಸೇನ್, ನಿನ್ನ ಜ್ಞಾನಕ್ಕೆ ಎಣೆಯಿಲ್ಲ! ಆಹಾ!" ಹೀಗೆಂದು ಅಮೀರನು ಆಸ್ಥಾನಿಕರ ಕಡೆ ತಿರುಗಿದನು. ಅವನ ಮುಖದಲ್ಲಿ ಸಂಪೂರ್ಣ ತೃಪ್ತಿ ನಲಿದಾಡುತ್ತಿತ್ತು. "ಆಹಾ! ಕಟ್ಟಕಡೆಗೆ, ಕದಿಯುವಾಗಲೇ, ಸಿಕ್ಕಿಬಿದ್ದೆ! ಈಗ, ನಮ್ಮ ಒಂದೇ ಒಂದು ನೂಲೆಳೆಯನ್ನು ನೀನು ಕದಿಯುವ ಸಾಹಸ ಮಾಡಲಾರೆ! ನಿನ್ನ ಈ ಕೊಳ್ಳೆಯಿಂದ ನಾವು ಬಹಳ ಮಟ್ಟಿಗೆ ನೊಂದಿದ್ದೇವೆ. ಇಷ್ಟು ಮಟ್ಟಿನ ಸೊಕ್ಕಿನಿಂದ ನಮ್ಮ ನಡುಕಟ್ಟನ್ನು ಕದ್ದ ಈ ನೀಚ ಕಳ್ಳನಿಗೆ ಶಿಕ್ಷೆಯೇನೆಂದರೆ—ಅವನ ತಲೆ, ಗಡ್ಡ ಮತ್ತು ಮೈಗಳಲ್ಲಿರುವ ಕೂದಲುಗಳನ್ನೆಲ್ಲಾ ಒಂದೊಂದಾಗಿ ಕಿತ್ತೆಸೆಯಲಿ. ಅವನ ಹಿಮ್ಮಡಿಯ ಮೇಲೆ ನೂರು ಚಡಿಯೇಟು ಬಿಗಿಯಿರಿ. ಅವನನ್ನು ಬೆತ್ತಲೆ ಮಾಡಿ ಕತ್ತೆಯ ಮೇಲೆ ಹಿಂದು ಮುಂದಾಗಿ ಕೂರಿಸಿ; ಅವನ ಕಳ್ಳತನವನ್ನು ಬಹಿರಂಗವಾಗಿ ಘೋಷಿಸುತ್ತಾ ಊರಿನಲ್ಲೆಲ್ಲಾ ಮೆರವಣಿಗೆ ಮಾಡಿ ಅಟ್ಟಬಿಡಿ!" ಎಂದು ಅಬ್ಬರಿಸಿದನು.

ಆರ್ಸ್‌ಲಾನ್-ಬೆಕ್ ಸನ್ನೆಮಾಡಿದ ಕೂಡಲೆ ವಧಕಾರರು ಜ್ಞಾನಿಯನ್ನು ಹಿಡಿದುಕೊಂಡು ಹೊರಕ್ಕೆ ಎಳೆದುಕೊಂಡು ಹೋದರು. ಆ ಮೇಲೆ ತಕ್ಷಣವೇ ಅವನ ಮೇಲೆ ಬಿದ್ದರು. ಸ್ವಲ್ಪ ಕಾಲ ಕಳೆದ ಮೇಲೆ ಅವನನ್ನು ಮತ್ತೆ ಸಭೆಗೆ ಎಳೆತಂದರು: ಅವನು ಬರಿ ಬೆತ್ತಲೆ, ಒಂದಾದರೂ ಕೂದಲಿಲ್ಲ, ನಂಬಲಾರ

ದಷ್ಟು ಅಮಂಗಳ ಅಶ್ಲೀಲ ರೂಪ. ಅವನ ಗಡ್ಡವೂ ಆ ದೊಡ್ಡ ರುಮಾಲೂ ಅವನ ಅಜ್ಞಾನವನ್ನೂ ಅವನ ಅಂಗಾಂಗಗಳಲ್ಲೆಲ್ಲಾ ಎದ್ದು ಕಾಣುತ್ತಿದ್ದ ಭ್ರಷ್ಟತನವನ್ನೂ ಅದುವರೆಗೂ ಮರೆಮಾಡಿ ಮುಚ್ಚಿದ್ದವೆಂದು ಆಗ ಸ್ಪಷ್ಟವಾಗಿ ಎಲ್ಲರಿಗೂ ಕಂಡು ಬಂತು. ಅಂಥ ಕಳ್ಳ ನೋಟದಿಂದ ಕೂಡಿದವನು ಶುದ್ಧ ಠಕ್ಕ, ಕಳ್ಳನೇ ಹೊರತು ಬೇರೆ ಏನೂ ಆಗಲಾರನೆಂದು ವೇದ್ಯವಾಯಿತು.

ಅಮೀರನು ಜುಗುಪ್ಸೆಯಿಂದ ಮುಖ ಸಿಂಡರಿಸಿಕೊಂಡು, "ತೊಲಗಿಸಿ ಆಚೆಗೆ!" ಎಂದು ಅಪ್ಪಣೆ ಮಾಡಿದನು.

ವಧಕಾರರು ಅವನನ್ನು ಹೊರಕ್ಕೆ ಎಳೆದುಕೊಂಡು ನಡೆದರು. ಒಂದು ನಿಮಿಷ ಕಳೆಯುವುದರಲ್ಲಿ ಕಿಟಕಿಯಾಚೆಯಿಂದ ಕಿರಿಚಾಟವೂ ನಡುನಡುವೆ ಚಡಿಯೇಟುಗಳ ಸದ್ದೂ ಕೇಳಬಂತು. ಕಡೆಗೆ ಅವನನ್ನು ಬೆತ್ತಲೆಯಾಗಿಯೇ ಕತ್ತೆಯ ಮೇಲೆ, ಅದರ ಬಾಲದ ಕಡೆಗೆ ಅವನ ಮುಖವಿರುವಂತೆ ಕೂರಿಸಿದರು; ತುತ್ತೂರಿಗಳನ್ನೂದುತ್ತ ನಗಾರಿಗಳನ್ನು ಬಾರಿಸುತ್ತ ಅವನನ್ನು ಮಾರ್ಕಟ್ಟೆಯ ಪ್ರದೇಶಕ್ಕೆ ಮೆರವಣಿಗೆಯಲ್ಲಿ ಕರೆದುಕೊಂಡು ಹೋದರು.

ಅಮೀರನು ಹೊಸ ಜ್ಞಾನಿಯೊಡನೆ ಬಹಳ ಹೊತ್ತು ಮಾತುಕತೆ ನಡಸುತ್ತಿದ್ದನು. ಆಸ್ಥಾನಿಕರು ಸುತ್ತಲೂ ಅಲುಗಾಡದೆ ನಿಂತಿದ್ದರು; ಇದು ಅವರಿಗೊಂದು ಚಿತ್ರಹಿಂಸೆ. ಸೆಕೆಯೇರುತ್ತಿತ್ತು; ಖಿಲತ್ತಿನ ಕೆಳಗೆ ಅವರ ಬೆನ್ನು ತಡೆಯಲಾರದಷ್ಟು ಮಟ್ಟಿಗೆ ಕಡಿಯುತ್ತಿತ್ತು.

ಅಲ್ಲಿ ನೆರೆದಿದ್ದವರೆಲ್ಲರಿಗಿಂತಲೂ ಮುಖ್ಯ ವಜೀರ ಬಖ್ತಿಯಾರನಿಗೆ ಹೊಸ ಜ್ಞಾನಿಯ ವಿಷಯದಲ್ಲಿ ಭಯ ಹೆಚ್ಚಾಯಿತು. ಈ ತನ್ನ ಪ್ರತಿಸ್ಪರ್ಧಿಯನ್ನು ನಾಶ ಮಾಡುವುದಕ್ಕೆ ಯಾವುದಾದರೂ ಮಾರ್ಗ ಹುಡುಕುವುದಕ್ಕೆ ಇತರ ಆಸ್ಥಾನಿಕರ ಸಹಾಯವನ್ನು ದೊರಕಿಸಿಕೊಳ್ಳಬೇಕೆಂದು ಅವನು ಯೋಚಿಸಿದನು. ಆಸ್ಥಾನಿಕರು ಪರಿಸ್ಥಿತಿಯನ್ನರಿತುಕೊಂಡರು. ಇವರಿಬ್ಬರ ಹೋರಾಟದ ಪರಿಣಾಮ ಏನಾಗಬಹುದೆಂದು ಅನೇಕ ಲಕ್ಷಣಗಳಿಂದ ಊಹಿಸಿಕೊಂಡರು. ಸರಿಯಾದ ಸಮಯ ಬಂದಾಗ ತಮಗೆ ಹೆಚ್ಚು ಅನುಕೂಲವಾಗುವ ರೀತಿಯಲ್ಲಿ ಬಖ್ತಿಯಾರನನ್ನು ಕೈಬಿಟ್ಟು, ಅವನನ್ನು ಸಿಕ್ಕಿಸಿಬಿಟ್ಟು, ಹೊಸ ಜ್ಞಾನಿಯ ನಂಬಿಕೆಯನ್ನೂ ಸದಭಿಪ್ರಾಯವನ್ನೂ ಹೇಗೆ ಸಂಪಾದಿಸುವುದೆಂದು ತಮ್ಮ ಮನಸ್ಸಿನಲ್ಲೇ ತೂಗಿ ನೋಡುತ್ತಿದ್ದರು.

ಕಲೀಫನ ಆರೋಗ್ಯ, ಬಾಗ್ದಾದಿನ ಸುದ್ದಿ ಸಮಾಚಾರಗಳು, ಪ್ರಯಾಣ ಕಾಲದ ಘಟನೆಗಳು— ಇವನ್ನೆಲ್ಲ ಕುರಿತು ಅಮೀರನು ಖೋಜಾ ನಸ್ರೆದ್ದೀನನಿಗೆ ಅನೇಕ ಪ್ರಶ್ನೆ ಹಾಕಿದನು; ಅವಕ್ಕೆಲ್ಲ ಖೋಜಾ ನಸ್ರೆದ್ದೀನ್ ಸಾಧ್ಯವಾದ ಮಟ್ಟಿಗೂ ಬುದ್ಧಿ ಉಪಯೋಗಿಸಿ ಸರಿದೋರುವಂತೆ ಉತ್ತರ ಕೊಡಬೇಕಾಗಿತ್ತು. ಎಲ್ಲ ತೃಪ್ತಿಕರವಾಗಿ ನಡೆಯಿತು. ಸಂಭಾಷಣೆಯಿಂದ ಬಳಲಿದ್ದ ಅಮೀರನು ವಿಶ್ರಾಂತಿ ತೆಗೆದುಕೊಳ್ಳಬಯಸಿ, ಹಾಸಿಗೆಯನ್ನು ಸಿದ್ಧಪಡಿಸತಕ್ಕದ್ದೆಂದು ಅಪ್ಪಣೆ ಮಾಡಿದನು. ಆಗ ಇದ್ದಕ್ಕಿದ್ದಂತೆ ಹೊರಗೆ ಗದ್ದಲವೂ ಕಿರಿಚಾಟವೂ ಕೇಳಿಸಿತು. ಅರಮನೆಯ ಬಕ್ಷಿ ಸಭೆಗೆ ಓಡಿ ಬಂದನು. ಅವನ ಮುಖ ಕಳೆ ದುಂಬಿತ್ತು. ಅವನು ಹೀಗೆ ಅರಿಕೆ ಮಾಡಿದನು :

" ಮಹಾ ಪ್ರಭುಗಳಿಗೆ ಅರಿಕೆ : ದೈವನಿಂದಕನೂ ಶಾಂತಿಭಂಗಕಾರಿಯೂ ಆದ ಆ ಖೋಜಾ ನಸ್ರೆದ್ದೀನನನ್ನು ಸೆರೆ ಹಿಡಿದಿದ್ದಾರೆ; ಅರಮನೆಗೆ ತಂದಿದ್ದಾರೆ! "

ಹೀಗೆ ಅರಿಕೆಮಾಡಿದನೋ ಇಲ್ಲವೋ, ಕೆತ್ತನೆ ಕೆಲಸ ಮಾಡಿದ್ದ ವಾಲ್ನಟ್ ಕದಗಳು ಅಗಲವಾಗಿ ತೆರೆದುಕೊಂಡವು. ವಿಜಯೋತ್ಸಾಹ ಸೂಚಕವಾಗಿ ಆಯುಧಗಳು ಖಣಖಣಿಸಿದವು; ಕಾವುದಳದ ಸಿಪಾಯಿಗಳು ಗರುಡಮೂಗಿನ ಬಿಳಿಯ ಗಡ್ಡದ ಹೆಣ್ಣುಡುಪು ತೊಟ್ಟಿದ್ದ ಮುದುಕನೊಬ್ಬನನ್ನು ಎಳತಂದರು. ಸಿಂಹಾಸನದ ಬುಡದಲ್ಲಿ ರತ್ನಗಂಬಳಿಯ ಮೇಲೆ ಅವನನ್ನು ಕೆಡವಿದರು.

ಖೋಜಾ ನಸ್ರೆದ್ದೀನನ ಮೈ ತಣ್ಣಗಾಯಿತು. ಅವನ ಕಣ್ಣ ಮುಂದೆ ಸಭೆಯ ಗೋಡೆಗಳು ಮುರಿದುರುಳುತ್ತಿರುವಂತೆ ಕಾಣಿಸಿತು; ಆಸ್ಥಾನಿಕರ ಮುಖಗಳು ಹಸಿರು ಛಾಯೆಯ ಮಂಜಿನಲ್ಲಿ ಮುಚ್ಚಿದಂತಾಯಿತು....

## ೧೧

ಬಾಗ್ದಾದಿನ ಜ್ಞಾನಿ, ನಿಜವಾದ ಮೌಲಾನಾ ಹುಸೇನನನ್ನು ಕೋಟೆಯ ಬಾಗಿಲಿನಲ್ಲಿ ಹಿಡಿದುಬಿಟ್ಟರು. ಬಾಗಿಲ ಆಚೆ ಸುತ್ತ ನಾಲ್ಕು ಕಡೆಗೂ ಹೋಗುತ್ತಿದ್ದ ರಸ್ತೆಗಳು ಮುಖಾವರಣದ ಮೂಲಕ ಅವನಿಗೆ ಕಾಣುತ್ತಿದ್ದವು. ಮಹಾ ಭಯಂಕರವಾದ ದುರ್ಗತಿಯಿಂದ ತಪ್ಪಿಸಿಕೊಳ್ಳಲು ಆ ಒಂದೊಂದು ರಸ್ತೆಯೂ ದಾರಿ ತೋರಿಸುತ್ತಿತ್ತು.

ಆದರೆ ಕೋಟೆಬಾಗಿಲಿನಲ್ಲಿ ಕಾವಲಿದ್ದ ಸಿಪಾಯಿ ತಡೆದು ಕೇಳಿದನು :

" ಹೆಂಗಸೇ, ಎಲ್ಲಿಗೆ ಹೋಗುತ್ತಿದ್ದೀಯ ? "

ಗಂಟಲೊಡೆದ ಎಳೆಯ ಹುಂಜದ ಕೂಗಿನಂಥ ದನಿಯಿಂದ ಜ್ಞಾನಿ ಉತ್ತರ ಕೊಟ್ಟನು :

" ನಾನು ಮನೆಗೆ ಹೋಗುತ್ತಿದ್ದೇನೆ. ದಾರಿ ಬಿಡಿ, ವೀರ ಸಿಪಾಯಿಗಳೇ ! "

ದನಿ ಕೇಳಿ ಕಾವಲಾಳುಗಳಿಗೆ ಸಂಶಯ ಬಂತು ; ಒಬ್ಬರೊಬ್ಬರಿಗೆ ಕಣ್ಣು ಮಿಟುಕಿಸಿದರು. ಅವರಲ್ಲೊಬ್ಬನು ಮುಂದೆ ಬಂದು ಒಂಟೆಯ ಕಡಿವಾಣವನ್ನು ಹಿಡಿದುಕೊಂಡನು.

" ನೀನೆಲ್ಲಿ ವಾಸಮಾಡುತ್ತೀಯ ? "

" ಇಲ್ಲೆ, ಬಹಳ ಹತ್ತಿರ " ಎಂದು ಇನ್ನೂ ಹೆಚ್ಚು ಕೀರಲು ಗಂಟಲಿನಿಂದ ನುಡಿದನು ಜ್ಞಾನಿ. ಕೀರಲು ಗಂಟಲಿನಿಂದ ಮಾತಾಡಲು ಮಾಡಿದ ಪ್ರಯತ್ನದಿಂದ ಅವನಿಗೆ ಕೆಮ್ಮು ಬಂತು, ಸೀನು ಬಂತು. ಸಿಪಾಯಿಗಳು ಮುಖಪರದೆಯನ್ನು ಹರಿದೆಸೆದರು. ಅವರ ಜಯಕ್ಕೆ ಪಾರವಿರಲಿಲ್ಲ.

" ಇದು ಅವನು ! " ಎಂದು ಅವರು ಕೂಗು ಹಾಕಿದರು. " ಅವನು ! ಅವನು ! ಹಿಡಿದುಕೋ ಅವನ್ನ ! ಕಟ್ಟಿಹಾಕಿ ! ಹಿಡಿದುಕೊಳ್ಳಿ ! " ಎಂದು ಅಬ್ಬರಿಸಿದರು.

ಆ ಮೇಲೆ ಮುದುಕನನ್ನು ಅರಮನೆಗೆ ಎಳೆದುಕೊಂಡು ಹೋದರು. ದಾರಿಯಲ್ಲಿ ಅವನನ್ನು ಮರಣದಂಡನೆಗೆ ಒಳಪಡಿಸುವ ರೀತಿ, ತಮಗೆ ದೊರೆಯುವ ಮೂರು ಸಾವಿರ ಟಂಗಗಳ ಬಹುಮಾನ—ಈ ವಿಷಯಗಳನ್ನು ಚರ್ಚಿಸುತ್ತಿದ್ದರು. ಅವರು ಆಡುತ್ತಿದ್ದ ಒಂದೊಂದು ಮಾತೂ ಅವನ ಹೃದಯಕ್ಕೆ ಒಂದೊಂದು ಕೆಂಡದುಂಡೆಯಂತೆ ತೋರುತ್ತಿತ್ತು.

ಬಹು ದೈನ್ಯದಿಂದ ಗೋಳಾಡುತ್ತ ಕರುಣೆದೋರಬೇಕೆಂದು ಅಂಗಲಾಚುತ್ತ ಅವನು ಸಿಂಹಾಸನದ ಬುಡದಲ್ಲಿ ಉರುಳಾಡಿದನು.

" ಎಬ್ಬಿಸು, ಅವನನ್ನು " ಎಂದು ಅಮೀರನು ಅಪ್ಪಣೆ ಮಾಡಿದನು.

ಕಾಪುಸಿಪಾಯಿಗಳು ಅವನನ್ನು ಎಬ್ಬಿಸಿ ನಿಲ್ಲಿಸಿದರು. ಆರ್ಸ್‌ಲಾನ್-ಬೆಕ್ ಆಸ್ಥಾನಿಕರ ಗುಂಪಿನೊಳಗಿನಿಂದ ಹೊರಬಂದನು.

" ಅಮೀರರು ತಮ್ಮ ಭಕ್ತನಾದ ಈ ಸೇವಕನ ನುಡಿಗಳನ್ನಾಲಿಸೋಣ ವಾಗಲಿ. ಈ ಮನುಷ್ಯ ಖೋಜಾ ನಸ್ರೆದ್ದೀನನಲ್ಲ. ಖೋಜಾ ನಸ್ರೆದ್ದೀನ್ ತರುಣ. ಅವನಿಗೆ ಮೂವತ್ತು ವರ್ಷ ತುಂಬಿರಬಹುದು, ಅಷ್ಟೆ. ಈ ಮನುಷ್ಯ ಬಹಳ ಮುದುಕ " ಎಂದು ವಿಜ್ಞಾಪಿಸಿಕೊಂಡನು.

ಸಿಪಾಯಿಗಳಿಗೆ ನಿರುತ್ಸಾಹವಾಯಿತು, ಗಾಬರಿಯಾಯಿತು. ಬಹುಮಾನ ಅವರ ಕೈಯಿಂದ ನುಣುಚಿಕೊಂಡು ಹೋಗುವುದರಲ್ಲಿತ್ತು. ಎಲ್ಲರೂ ದಿಗ್ಭ್ರಾಂತ ರಾಗಿ ಮೌನ ವಹಿಸಿದರು.

ಅಮೀರನು ಭಯ ಹುಟ್ಟಿಸುವ ದನಿಯಿಂದ, " ಅದೇಕೆ ನೀನು ಹೆಂಗಸಿನ ವೇಷ ಹಾಕಿಕೊಂಡೆ ? " ಎಂದು ಪ್ರಶ್ನೆ ಮಾಡಿದನು.

ಅದುರು ದನಿಯಿಂದ ಮುದುಕ ಉತ್ತರ ಕೊಟ್ಟನು : " ಪರಮ ಕೃಪಾಳುಗಳಾದ ಘನ ಅಮೀರರ ಅರಮನೆಗೆಂದು ಬರುತ್ತಿದ್ದೆ. ದಾರಿಯಲ್ಲಿ ನನಗೊಬ್ಬ ಮನುಷ್ಯ ಸಿಕ್ಕಿದ, ತೀರ ಅಪರಿಚಿತನಾದವನು. ಅವನು ಹೇಳಿದ, ನಾನು ಬುಖಾರಕ್ಕೆ ಬಂದು ಸೇರುವ ಮೊದಲೇ ಅಮೀರರು ನನ್ನ ತಲೆತೆಗೆಸ ಬೇಕೆಂದು ಆಜ್ಞೆ ಹೊರಡಿಸಿರುವುದಾಗಿ ತಿಳಿಸಿದ. ಭಯ ಆವರಿಸಿ, ನಾನು ಈ ವೇಷದಿಂದ ತಪ್ಪಿಸಿಕೊಂಡು ಹೋಗಬೇಕೆಂದು ನಿರ್ಧರಿಸಿದೆ."

ಅಮೀರ ನಕ್ಕುಬಿಟ್ಟನು.

" ನಿನಗೊಬ್ಬ ಸಿಕ್ಕಿದ.... ಅವನು ತೀರಾ ಅಪರಿಚಿತ.... ಆದರೂ ಆ ಕ್ಷಣ ನೀನು ಅವನನ್ನು ನಂಬಿಬಿಟ್ಟೆ, ಅಲ್ಲವೆ ? ಅಸಾಧಾರಣವಾದ ಕಥೆ ! ನಾವು ಏಕೆ ನಿನ್ನ ತಲೆ ತೆಗೆಸುತ್ತಿದ್ದೆವಂತೆ ? "

" ಏಕೆಂದರೆ, ಅಮೀರರ ಅಂತಃಪುರಕ್ಕೆ ಪ್ರವೇಶಿಸುವುದಾಗಿ ನಾನು ಬಹಿರಂಗವಾಗಿ ಘೋಷಿಸಿದ್ದೆನೆಂದು ತಿಳಿಯಬಂದಿತ್ತಂತೆ........ ಆದರೆ ಅಲ್ಲಾನೇ ಸಾಕ್ಷಿ, ಅಂಥ ಯೋಚನೆ ನನ್ನ ಕನಸುಮನಸಿನಲ್ಲಿಯೂ ಇಲ್ಲ! ನಾನು ಮುದುಕ, ಅಶಕ್ತ ; ನನ್ನ ಅಂತಃಪುರವನ್ನೇ ತ್ಯಜಿಸಿ ಎಷ್ಟೋ ಕಾಲವಾಯಿತು."

" ನಮ್ಮ ಅಂತಃಪುರಕ್ಕೆ ಪ್ರವೇಶಿಸುವುದು ! " ಎಂದನು ಅಮೀರ ತುಟಿ ಗಂಟು ಹಾಕಿಕೊಂಡು. ಅವನ ಮುಖಲಕ್ಷಣವನ್ನು ನೋಡಿದರೆ ಮುದುಕನ ವಿಷಯದಲ್ಲಿ ಅವನ ಮನಸ್ಸಿನಲ್ಲಿ ಸಂಶಯ ಹೆಚ್ಚುತ್ತಿದ್ದಂತೆ ತೋರಿತು. " ಯಾರು ನೀನು ? ಎಲ್ಲಿಂದ ಬಂದೆ ? " ಎಂದು ಕೇಳಿದನು.

" ನಾನು ಮೌಲಾನಾ ಹುಸೇನ್, ಜ್ಞಾನಿ, ಜ್ಯೋತಿಷಿ ಮತ್ತು ವೈದ್ಯ; ಬಾಗ್ದಾದಿನಿಂದ ಬಂದಿದ್ದೇನೆ. ಘನ ಅಮೀರರ ಅಪ್ಪಣೆಯ ಪ್ರಕಾರ ಮತ್ತು ಇಷ್ಟ ಪ್ರಕಾರ ಬುಖಾರಕ್ಕೆ ಬಂದಿದ್ದೇನೆ."

" ಮೌಲಾನಾ ಹುಸೇನನೋ?" ಎಂದು ಕೇಳಿದನು ಅಮೀರ. ಮತ್ತೆ ಮತ್ತೆ ಅದೇ ಪ್ರಶ್ನೆ ಕೇಳಿದನು. " ನೀನು ಮೌಲಾನಾ ಹುಸೇನ! ನಿನ್ನ ಹೆಸರು ಮೌಲಾನಾ ಹುಸೇನ! ನಾಚಿಕೆ ಹೇಚಿಕೆಯಿಲ್ಲದ ಶುದ್ಧ ಸುಳ್ಳು ಮಾತು, ಇದು! ಅಯ್ಯೋ, ಧೂರ್ತ ಮುದುಕಾ!" ಎಂದು ಗಟ್ಟಿಯಾಗಿ ಅಬ್ಬರಿಸಿದನು. " ನೀನು ಸುಳ್ಳುಗಾರ. ಇಗೋ, ಇಲ್ಲಿದ್ದಾನೆ, ಮೌಲಾನಾ ಹುಸೇನ್!" ಎಂದು ಖೋಜಾ ನಸ್ರೆದ್ದೀನನ ಕಡೆ ತೋರಿಸಿದನು.

ಅಮೀರನ ಸನ್ನೆಯ ಪ್ರಕಾರ ಖೋಜಾ ನಸ್ರೆದ್ದೀನನು ಧೈರ್ಯವಾಗಿ ಮುಂದೆ ಬಂದನು. ಬಹಿರಂಗವಾಗಿ, ನಿರ್ಭಯವಾಗಿ ಮುಖಕ್ಕೆ ಮುಖ ಕೊಟ್ಟು ಮುದುಕನ ಎದುರಿಗೆ ನಿಂತನು.

ಮುದುಕನು ಬೆರಗಾಗಿ ಭ್ರಾಂತನಾಗಿ ಹಿಂಪಡಿಯಿಟ್ಟನು. ಉತ್ತರ ಕ್ಷಣದಲ್ಲಿ ಸಮಾಧಾನ ಮಾಡಿಕೊಂಡು ಪ್ರಕೃತಿಸ್ಥನಾಗಿ ಗಟ್ಟಿಯಾಗಿ ಕೂಗಿದನು:

" ಆಹಾ! ಅವನೇ ಇವನು. ಪೇಟೆಯಲ್ಲಿ ನನಗೆ ಸಿಕ್ಕಿ, ಅಮೀರರು ನನ್ನ ತಲೆ ಹುಯ್ಯಿಸಬೇಕೆಂದಿರುವರೆಂದು ಹೇಳಿದ ಆಸಾಮಿಯೇ ಇವನು!"

ಅಮೀರನಿಗೆ ಏನೊಂದೂ ತೋರದೆ ಕಂಕುಮಂಕಾಯಿತು. " ಇವನು ಹೇಳುತ್ತಿರುವುದೇನು, ಮೌಲಾನಾ ಹುಸೇನ್?" ಎಂದು ಕೇಳಿದನು.

" ಅವನು ಮೌಲಾನಾ ಹುಸೇನನಲ್ಲ!" ಎಂದು ಮುದುಕ ಕಿರಿಚಿದನು. " ನಾನು ಮೌಲಾನಾ ಹುಸೇನ್. ಅವನು ವೇಷಧಾರಿ; ಅವನು ನನ್ನ ಹೆಸರನ್ನು ಆಕ್ರಮಿಸಿಕೊಂಡುಬಿಟ್ಟಿದ್ದಾನೆ!"

ಖೋಜಾ ನಸ್ರೆದ್ದೀನ್ ಅಮೀರನ ಮುಂದೆ ನೆಲಕ್ಕೆ ಬಗ್ಗಿ ನಮಸ್ಕಾರ ಮಾಡಿದನು.

" ನನ್ನ ಈ ಸಾಹಸದ ಮಾತಿಗಾಗಿ ಘನ ಅಮೀರರ ಕ್ಷಮೆ ಬೇಡುತ್ತೇನೆ. ಈ ಮುದುಕನ ನಾಚಿಕೆಗೇಡಿತನಕ್ಕೆ ಮಿತಿಯೇ ಇಲ್ಲ! ನಾನು ಅವನ ಹೆಸರನ್ನು ಆಕ್ರಮಿಸಿಕೊಂಡೆನಂತೆ! ಬಹುಶಃ ಅವನ ಮೇಲ್ಗವಚವನ್ನೂ ಆಕ್ರಮಿಸಿ

ಕೊಂಡಿದ್ದೇನೆಂದು ಹೇಳುತ್ತಾನೋ ಏನೊ ?"

"ಹೌದು, ಹೌದು! ಇದು ನನ್ನ ಮೇಲುಡುಪೇ ಹೌದು!" ಎಂದನು ಮುದುಕ.

ಖೋಜಾ ನಸ್ರೆದ್ದೀನನು ವ್ಯಂಗ್ಯ ಧ್ವನಿಯಿಂದ, "ಈ ರುಮಾಲು ಕೂಡ ನಿನ್ನದೇ ಆಗಿರಬೇಕಲ್ಲವೆ ?" ಎಂದು ಕೇಳಿದನು.

"ಏಕೆ, ಹೌದು! ಈ ರುಮಾಲು ನನ್ನದೇ! ಹೆಂಗಸಿನ ಉಡುಪಿಗೆ ಬದಲಾಗಿ ನನ್ನ ಮೇಲುಡುಪನ್ನೂ ರುಮಾಲನ್ನೂ ನೀನು ತೆಗೆದುಕೊಂಡೆ ಯಲ್ಲ."

"ಹಾಗೋ!" ಎಂದನು ಖೋಜಾ ನಸ್ರೆದ್ದೀನ್ ಇನ್ನೂ ಹೆಚ್ಚು ವ್ಯಂಗ್ಯವನ್ನು ತುಂಬಿ. "ಈ ನಡುಪಟ್ಟಿ ಕೂಡ ನಿನ್ನದೇ ಆಗಿರಬೇಕು! ಅಲ್ಲವೆ ?"

"ನನ್ನದೇ ಅದು!" ಎಂದು ಮುದುಕ ಕೋಪದಿಂದ ಕೂಗಿದನು.

ಖೋಜಾ ನಸ್ರೆದ್ದೀನ್ ಸಿಂಹಾಸನದ ಕಡೆ ತಿರುಗಿದನು.

"ಈ ಆಸಾಮಿ ಎಂಥ ಮನುಷ್ಯನೆಂಬುದನ್ನು ಪರಮಪ್ರಶಾಂತ ಮಹಾ ಪ್ರಭು ಅಮೀರರೇ ಸ್ವತಃ ನೋಡಿ ತಿಳಿದದ್ದಾಗಿದೆ. ಈ ನೀಚ ಸುಳ್ಳುಗಾರ ಮುದುಕ ಇವತ್ತು ನಾನು ಇವನ ಹೆಸರನ್ನು ಆಕ್ರಮಿಸಿಕೊಂಡಿದ್ದೇನೆಂದೂ, ಈ ಮೇಲುಡುಪು ತನ್ನದೆಂದೂ, ಈ ರುಮಾಲು ತನ್ನದೆಂದೂ, ಈ ನಡುಕಟ್ಟು ತನ್ನದೆಂದೂ ಹೇಳುತ್ತಾನೆ. ನಾಳೆ ದಿನ ಈ ಅರಮನೆ ತನ್ನದೆಂದೂ ಈ ರಾಜ್ಯ ವೆಲ್ಲಾ ತನ್ನದೇ ಎಂದೂ ಹೇಳುತ್ತಾನೆ; ಬುಖಾರದ ನಿಜವಾದ ಅಮೀರರು ಈಗ ನಮ್ಮೆದುರಿಗೆ ಸಿಂಹಾಸನದ ಮೇಲೆ ಮಂಡಿಸಿರುವ ಸೂರ್ಯಸದೃಶರಾದ ಘನಪ್ರಭುಗಳಲ್ಲವೇ ಅಲ್ಲವೆಂದೂ, ತಾನೇ ನಿಜವಾದ ಅಮೀರನೆಂದೂ ಹೇಳು ತ್ತಾನೆ, ಈ ಭ್ರಷ್ಟ ಸುಳ್ಳುಕೋರ! ಇವನು ಏನೇನು ಬೇಕಾದರೂ ಮಾಡಿಬಿಡ ಬಹುದು! ಇವನು ಬುಖಾರಕ್ಕೇಕೆ ಬಂದಿದ್ದಾನೆ? ತನ್ನದೇ ಆಗಿದ್ದರೆ ಹೇಗೋ ಹಾಗೆ ಅಮೀರರ ಅಂತಃಪುರಕ್ಕೆ ಪ್ರವೇಶ ಮಾಡುವುದಕ್ಕೋಸ್ಕರ ಅಲ್ಲವೆ ?"

ಈ ಭಾಷಣವನ್ನಾಲಿಸಿ, ಅಮೀರನು, "ನೀನು ಹೇಳುವುದು ಸರಿ, ಮೌಲಾನಾ ಹುಸೇನ್. ಹೌದು, ನಮಗೆ ಖಂಡಿತವಾಯಿತು. ಈ ಮುದುಕ ಸಂಶಯಾಸ್ಪದನಾದ ಅಪಾಯಕರ ವ್ಯಕ್ತಿ; ಅಂತರಂಗದಲ್ಲಿ ದುಷ್ಟ ಅಭಿಲಾಷೆ

ಗಳನ್ನಿಟ್ಟುಕೊಂಡಿದ್ದಾನೆ. ಇವನ ತಲೆಯನ್ನು ಈ ಕ್ಷಣವೇ ಮೈಯಿಂದ ಬೇರ್ಪಡಿಸಿಬಿಡಬೇಕೆಂದು ನಮ್ಮ ಅಭಿಪ್ರಾಯ” ಎಂದನು.

ಮುದುಕನು ನರಳುತ್ತಾ ಮೊಣಕಾಲೂರಿ ಕುಳಿತು ಕೈಯಿಂದ ಮುಖ ಮುಚ್ಚಿಕೊಂಡನು.

ಆದರೆ ನಿರಪರಾಧಿಯೊಬ್ಬನನ್ನು ಮರಣದಂಡನೆಗೆ ಗುರಿಪಡಿಸುವುದು ಖೋಜಾ ನಸ್ರೆದ್ದೀನನಿಗೆ ಹಿಡಿಸಲಿಲ್ಲ. ಇದೇ ವಂಚನೆಯಿಂದ ಎಷ್ಟೋ ಜನರಿಗೆ ವಿನಾಶವನ್ನುಂಟುಮಾಡಿದ್ದ ಆಸ್ಥಾನ ಪಂಡಿತನಿವನಾಗಿದ್ದರೂ, ಅವನನ್ನು ಕೊಲ್ಲಿಸುವುದು ಅವನಿಗೆ ಒಪ್ಪಾಗಲಿಲ್ಲ. ಆದ್ದರಿಂದ ಅವನು ಅಮೀರನಿಗೆ ಬಗ್ಗಿ ನಮಸ್ಕರಿಸಿದನು.

“ ಘನ ಅಮೀರರು ನಾನು ಹೇಳುವುದನ್ನು ಆಲಿಸುವ ಅನುಗ್ರಹ ಮಾಡಬೇಕು. ಇವನ ನಿಜವಾದ ಹೆಸರೇನು; ಬುಖಾರಕ್ಕೆ ಬರುವುದರಲ್ಲಿ ಇವನ ನಿಜವಾದ ಉದ್ದೇಶವೇನು ಎಂಬ ವಿಷಯವನ್ನು ತಿಳಿದುಕೊಳ್ಳುವುದು ಮೇಲಲ್ಲವೆ? ಹೀಗೆ ಮಾಡುವುದರಿಂದ ಇವನಿಗೆ ಇನ್ನೂ ಯಾರಾದರೂ ಸಹಾಯಕರಿದ್ದಾರೆಯೋ ಏನೋ ನಾವು ಅರಿತುಕೊಳ್ಳಬಹುದು. ಇವನೊಬ್ಬ ದುಷ್ಟ ಮಂತ್ರವಾದಿಯಾಗಿದ್ದರೂ ಇರಬಹುದು; ಗ್ರಹಗತಿ ಕೆಟ್ಟದಾಗಿರುವ ಈ ಸಂದರ್ಭವನ್ನು ದುರುಪಯೋಗ ಪಡಿಸಿಕೊಳ್ಳಲು ಇಲ್ಲಿ ಬಂದಿರಬಹುದು. ಹಾಗಿರುವ ಪಕ್ಷದಲ್ಲಿ ಘನ ಅಮೀರರ ಅಡಿಯ ಕೆಳಗಿನ ಧೂಳನ್ನು ತೆಗೆದುಕೊಂಡು, ಬಾವಲಿಯ ಮಿದುಳಿನೊಡನೆ ಬೆರಸಿ, ಆ ಮಿಶ್ರಣವನ್ನು ಅಮೀರರ ಗುಡುಗುಡಿಗೆ ಸೇರಿಸಲೆಂದಿರಬಹುದು; ಆ ಮೂಲಕ ಅಮೀರರಿಗೆ ಅನಾರೋಗ್ಯವುಂಟುಮಾಡಬಹುದು. ಸದ್ಯದಲ್ಲಿ ಮಹಾ ಪ್ರಭುಗಳು ಇವನ ಪ್ರಾಣವನ್ನು ಕಾಪಾಡಲಿ; ಇವನನ್ನು ನನ್ನ ವಶಕ್ಕೆ ಒಪ್ಪಿಸಲಿ! ತನ್ನ ಮಂತ್ರಬಲದಿಂದ ಇವನು ಸಾಧಾರಣ ಸಿಪಾಯಿಗಳನ್ನು ಅಡಗಿಸಿ ತಪ್ಪಿಸಿಕೊಂಡು ಹೋಗಬಲ್ಲ. ಆದರೆ ನನ್ನ ಮೇಲೆ ಇವನ ಮಂತ್ರದ ಆಟ ಸಾಗುವುದಿಲ್ಲ. ಏಕೆಂದರೆ, ನನ್ನ ಅಪಾರ ಜ್ಞಾನದಲ್ಲಿ, ಮಂತ್ರವಾದಿಗಳ ಎಲ್ಲ ಬಗೆಯ ಉಪಾಯಗಳನ್ನೂ ಅವನ್ನೆಲ್ಲಾ ನಾಶಮಾಡುವ ಕ್ರಮಗಳನ್ನೂ ನಾನು ಬಲ್ಲೆ. ಇವನನ್ನು ಕೋಣೆಯಲ್ಲಿ ಕೂಡಿ ಬೀಗ ಹಾಕುತ್ತೇನೆ; ಆ ಬೀಗಕ್ಕೆ, ನನಗೊಬ್ಬನಿಗೆ ಮಾತ್ರವೇ ಗೊತ್ತಿರುವ ಪ್ರಬಲವಾದ ಮಂತ್ರದಿಂದ ಅಭಿಮಂತ್ರಿಸು

ತ್ತೇನೆ. ತನ್ನ ಮಂತ್ರಬಲವೊಂದರಿಂದಲೇ ಆ ಬೀಗವನ್ನು ಮುರಿಯಲು ಇವನು ಅಸಮರ್ಥನಾಗುತ್ತಾನೆ. ಆ ಮೇಲೆ ನಿಧಾನವಾಗಿ ಚಿತ್ರಹಿಂಸೆಗಳ ಮೂಲಕ ಇವನು ತನ್ನ ನಿಜವಾದ ಉದ್ದೇಶವನ್ನು ಹೇಳಿಬಿಡುವಂತೆ ಮಾಡು ತ್ತೇನೆ" ಎಂದು ಬಿನ್ನವಿಸಿದನು.

"ಆಗಲಿ!" ಎಂದು ಸಮ್ಮತಿಸಿದನು ಅಮೀರ. "ಮೌಲಾನಾ ಹುಸೇನ್, ನೀನು ಹೇಳುವುದು ನ್ಯಾಯವಾಗಿದೆ. ಇವನನ್ನು ಕರೆದುಕೊಂಡು ಹೋಗಿ ನಿನ್ನ ಇಷ್ಟ ಬಂದಂತೆ ಮಾಡಿಕೋ. ಆದರೆ, ಇವನೆಲ್ಲಾದರೂ ತಪ್ಪಿಸಿ ಕೊಂಡಾನು, ಎಚ್ಚರ!"

"ಇದಕ್ಕೆ ನಾನು ಹೊಣೆ. ಇವನು ತಪ್ಪಿಸಿಕೊಂಡರೆ, ನನ್ನ ತಲೆ ಕೊಡುತ್ತೇನೆ."

ಅರ್ಧ ಗಂಟೆ ಕಳೆದ ಮೇಲೆ ಖೋಜಾ ನಸ್ರೆದ್ದೀನ್—ಈಗ ಅವನು ಅಮೀರನ ಆಸ್ಥಾನದ ಪ್ರಧಾನ ಜ್ಞಾನಿ ಮತ್ತು ಜ್ಯೋತಿಷಿ—ತನ್ನ ಹೊಸ ಬಿಡಾರಕ್ಕೆ ಹೊರಟನು. ಅರಮನೆಯ ಕೋಟೆಯ ಗೋಪುರವೊಂದರಲ್ಲಿ ಅವನಿಗೆ ಬಿಡಾರವನ್ನೇರ್ಪಡಿಸಲಾಗಿತ್ತು. ಅವನ ಬೆನ್ನ ಹಿಂದೆ, ಬಲವಾದ ಕಾವಲಿನಲ್ಲಿ ತಲೆತಗ್ಗಿಸಿಕೊಂಡು ಅಪರಾಧಿಯೆಂದು ಹೆಸರು ಹೊತ್ತ ನಿಜವಾದ ಮೌಲಾನಾ ಹುಸೇನ್ ನಡೆದು ಬರುತ್ತಿದ್ದನು.

ಖೋಜಾ ನಸ್ರೆದ್ದೀನನ ಬಿಡಾರದಲ್ಲಿ ಒಂದು ನೆಲಕೋಣೆಯಿತ್ತು; ಅದೊಂದು ಸಣ್ಣ ದುಂಡು ಕೋಣೆ; ಕಿಟಕಿಗಳಿಗೆ ಕಂಬಿ ಹಾಕಿ ಭದ್ರಪಡಿಸಿತ್ತು. ಖೋಜಾ ನಸ್ರೆದ್ದೀನನು ಆ ಕೋಣೆಗೆ ಹಾಕಿದ್ದ ಹಿತ್ತಾಳೆಯ ಬೀಗವನ್ನು ದೊಡ್ಡದೊಂದು ಕೈಯಿಂದ ತೆಗೆದು ಕಬ್ಬಿಣದ ಬಾಗಿಲನ್ನು ತೆರೆದನು. ಸಿಪಾಯಿ ಗಳು ಮುದುಕನನ್ನು ಒಳಕ್ಕೆ ನೂಕಿದರು; ಅವನಿಗೆ ಒಂದು ಕಂತೆ ಹುಲ್ಲನ್ನು ಕೂಡ ಕೊಡದೆ ಹಿಂದಿರುಗಿ ನಡೆದುಬಿಟ್ಟರು. ಖೋಜಾ ನಸ್ರೆದ್ದೀನ್ ಬಾಗಿಲಿಗೆ ಬೀಗ ಹಾಕಿ ಆ ಹಿತ್ತಾಳೆ ಬೀಗದ ಮೇಲೆ ಬಗ್ಗಿ ಬಹಳ ಹೊತ್ತಿನ ವರೆಗೂ ಬೇಗ ಬೇಗ ಮತ್ತು ಬಹು ಅಸ್ಪಷ್ಟವಾಗಿ ಏನೇನೋ ಗೊಣಗುತ್ತಿದ್ದನು; ಆಗಾಗ ಅಲ್ಲಾನ ಹೆಸರು ಹೇಳುತ್ತಿದ್ದುದು ಮಾತ್ರ ಸಿಪಾಯಿಗಳಿಗೆ ಅರ್ಥ ವಾಯಿತು.

ತನ್ನ ಬಿಡಾರವನ್ನು ಕಂಡು ಖೋಜಾ ನಸ್ರೆದ್ದೀನನಿಗೆ ಪೂರ್ಣ ತೃಪ್ತಿ

ಯಾಯಿತು. ಹನ್ನೆರಡು ಮೆತ್ತೆಗಳು, ಎಂಟು ದಿಂಬುಗಳು, ಅನೇಕ ಬಗೆಯ ತಟ್ಟೆ ಬಟ್ಟಲುಗಳು, ಒಂದು ಕುಕ್ಕೆ ಬಿಳಿಯ ಬ್ರೆಡ್, ಕೇಕುಗಳು, ಒಂದು ಹೂಜಿ ಜೇನುತುಪ್ಪ ಮತ್ತು ಇನ್ನೂ ಅನೇಕ ಬಗೆಯ ಭಕ್ಷ್ಯಭೋಜ್ಯಗಳು—ಇವನ್ನೆಲ್ಲ ಅಮೀರನು ಅವನಿಗೆ ಕಳಿಸಿಕೊಟ್ಟನು. ಖೋಜಾ ನಸ್ರೆದ್ದೀನ್ ತುಂಬ ದಣಿದಿದ್ದನು, ಬಹಳ ಹಸಿದಿದ್ದನು. ಆದರೆ ತಾನು ಆಹಾರ ತೆಗೆದು ಕೊಳ್ಳುವ ಮೊದಲು ಆರು ಮೆತ್ತೆಗಳನ್ನೂ ನಾಲ್ಕು ದಿಂಬುಗಳನ್ನೂ ತೆಗೆದು ಕೊಂಡು ಮೇಲಿನ ಕೋಣೆಯಲ್ಲಿರುವ ತನ್ನ ಸೆರೆಯಾಳಿನ ಬಳಿ ಹೋದನು.

ಮುದುಕನು ಒಂದು ಮೂಲೆಯಲ್ಲಿ ಮುದುರಿಕೊಂಡು ಕುಳಿತಿದ್ದನು. ಕೋಪಗೊಂಡ ಬೆಕ್ಕಿನ ಕಣ್ಣಿನ ಹಾಗೆ ಅವನ ಕಣ್ಣು ಕಿಡಿ ಕಾರುತ್ತಿತ್ತು.

ಖೋಜಾ ನಸ್ರೆದ್ದೀನ್ ವಿನಯದಿಂದ ಹೀಗೆಂದನು : " ಒಳ್ಳೆಯದು, ಮೌಲಾನಾ ಹುಸೇನ್! ಈ ಗೋಪುರದಲ್ಲಿ ನಾವು ಬಹು ಸುಖವಾಗಿಯೇ ಇರಬಹುದು : ನಾನು ಕೆಳಗೆ, ನೀನು ಮೇಲೆ—ಇದು ನಿನ್ನ ವಯಸ್ಸು ಮತ್ತು ಪಾಂಡಿತ್ಯಗಳಿಗೆ ಯೋಗ್ಯವೇ ಆಗಿದೆ. ಅಯ್ಯೋ ಇಲ್ಲೆಲ್ಲಾ ಎಷ್ಟೊಂದು ಧೂಳು ತುಂಬಿದೆ! ಇವನ್ನೆಲ್ಲಾ ಗುಡಿಸಿ ಸ್ವಲ್ಪ ಚೊಕ್ಕಟ ಮಾಡುತ್ತೇನೆ" ಎಂದನು.

ಕೆಳಗಿನಿಂದ ಒಂದು ಹೂಜಿ ನೀರನ್ನೂ ಒಂದು ಪೊರಕೆಯನ್ನೂ ತಂದನು. ಆ ಮೇಲೆ ಕಲ್ಲು ಹಾಸಿದ ನೆಲವನ್ನು ಎಚ್ಚರಿಕೆಯಿಂದ ತೊಳೆದು ಶುಚಿಮಾಡಿದನು. ಮೆತ್ತೆಗಳನ್ನು ಹಾಸಿ ದಿಂಬುಗಳನ್ನು ಓರಣವಾಗಿ ಅಣಿ ಗೊಳಿಸಿದನು. ಕಡೆಗೆ ಮತ್ತೊಂದು ಸಲ ಕೆಳಕ್ಕೆ ಹೋಗಿ ಬ್ರೆಡ್ಡು, ಕೇಕುಗಳು, ಜೇನುತುಪ್ಪ, ಹಲ್ವ, ಪಿಸ್ತಾ ಬೀಜಗಳು ಮೊದಲಾದ ಆಹಾರಪದಾರ್ಥಗಳನ್ನು ತಂದನು. ಅವನ್ನೆಲ್ಲಾ ಪ್ರಾಮಾಣಿಕತೆಯಿಂದ ಸೆರೆಯಾಳಿನ ಕಣ್ಣೆದುರಿಗೇ ಎರಡು ಭಾಗವಾಗಿ ಹಂಚಿದನು.

" ನೀನು ಉಪವಾಸ ಸಾಯಬೇಕಾಗಿಲ್ಲ, ಮೌಲಾನಾ ಹುಸೇನ್. ತಕ್ಕಷ್ಟು ಆಹಾರ ತರಿಸಿಕೊಳ್ಳುವುದಕ್ಕೆ ದಾರಿ ಹುಡುಕೋಣ. ಇಗೊ, ಗುಡು ಗುಡಿಯ ನಾಳ ; ಇಗೋ, ಇಲ್ಲಿ ಹೊಗೆಸೊಪ್ಪು."

ಆ ಚಿಕ್ಕ ಕೋಣೆಯಲ್ಲಿ ಎಲ್ಲವನ್ನೂ ಅಂದವಾಗಿ ಅಣಿಮಾಡಿದನು. ಅದು ತನ್ನ ಸ್ವಂತ ಕೋಣೆಗಿಂತಲೂ ಹೆಚ್ಚು ಸೊಗಸಾಗಿ ಕಾಣುವಂತಾಯಿತು. ಆ ಮೇಲೆ ಬಾಗಿಲಿಗೆ ಬೀಗ ಹಾಕಿಕೊಂಡು ಖೋಜಾ ನಸ್ರೆದ್ದೀನ್ ಕೆಳಕ್ಕಿಳಿದು ಬಂದನು.

ಮುದುಕ ಒಂಟಿಯಾಗಿ ಕುಳಿತನು. ಅವನಿಗೆ ಬೆರಗಾಗಿ ಪೂರ್ತಿ ದಿಗ್ಭ್ರಮೆ ಹಿಡಿದಿತ್ತು. ಎಷ್ಟೋ ಹೊತ್ತು ಯೋಚಿಸಿದನು; ತನಗೆ ಏನಾಗುತ್ತಿದೆಯೆಂದು ಅವನಿಗೆ ತಿಳಿಯುವಂತೆಯೇ ಇರಲಿಲ್ಲ. ಮೆತ್ತೆಗಳು ಮೃದುವಾಗಿದ್ದವು; ದಿಂಬುಗಳು ಸುಖಕರವಾಗಿದ್ದವು. ಬ್ರೆಡ್ಡು, ಕೇಕು, ಜೇನುತುಪ್ಪ, ಹೊಗೆಸೊಪ್ಪು—ಯಾವುದರಲ್ಲೂ ವಿಷ ಬೆರೆತಿರಲಿಲ್ಲ.... ಆ ದಿನ ತನಗಾಗಿದ್ದ ವಿಚಿತ್ರ ಅನುಭವದಿಂದ ಭ್ರಾಂತನಾಗಿ, ತನ್ನ ರಕ್ಷಣೆಯ ಭಾರವನ್ನು ಅಲ್ಲಾನ ಮೇಲೆ ಹಾಕಿ, ಮಲಗಿ ನಿದ್ದೆಹೋದನು.

ಅವನ ಎಲ್ಲ ಕಷ್ಟಸಂಕಟಗಳಿಗೂ ಕಾರಣನಾದಾತನು—ಖೋಜಾ ನಸ್ರೆದ್ದೀನ್—ಕೆಳಗಿನ ಕೋಣೆಯಲ್ಲಿ ಕಿಟಕಿಯ ಬಳಿ ಕುಳಿತು ನೋಡುತ್ತಿದ್ದನು. ಸಂಧ್ಯಾ ಜ್ಯೋತಿಯು ಮೆಲ್ಲಮೆಲ್ಲನೆ ರಾತ್ರಿಯಲ್ಲಿ ಸೇರಿ ಕರಗಿಹೋಗುವುದನ್ನು ನೋಡುತ್ತ, ತನ್ನ ಗಡಿಬಿಡಿಯ ಜೀವನ ಮತ್ತು ತನ್ನ ಪ್ರೇಯಸಿ—ಅತಿ ಸಮೀಪದಲ್ಲೇ ಇದ್ದರೂ ಆ ಸಂಗತಿಯನ್ನರಿಯದೆ ತಪಿಸುತ್ತಿರುವ ಆ ಪ್ರೇಯಸಿ—ಈ ವಿಷಯವಾಗಿ ಆಳವಾಗಿ ಆಲೋಚಿಸುತ್ತ ಕುಳಿತಿದ್ದನು. ಕಿಟಕಿಯ ಮೂಲಕ ತಂಗಾಳಿ ಸುಳಿದು ಬರುತ್ತಿತ್ತು. ಮುಯೆಸಿನ್ನರ ಕರುಣಾಜನಕವಾದ ಅನುರಣಿಸುವ ಘೋಷಣೆಯ ದನಿಗಳು ಬೆಳ್ಳಿಯ ತಂತುಗಳಂತೆ ಪಟ್ಟಣದ ಮೇಲೆಲ್ಲ ಹರಡಿ ಹರಿಯುತ್ತಿದ್ದವು. ಕಪ್ಪನೆಯ ಗಗನತಳದಲ್ಲಿ ನಕ್ಷತ್ರಗಳು ಹೊಳೆಯುತ್ತಿದ್ದವು. ತಣ್ಣಗಿರುವ ಪರಿಶುದ್ಧವಾದ ಬಹು ದೂರದ ಜ್ಯೋತಿಯಿಂದ ಅವು ಥಳಥಳಿಸುತ್ತ, ಉರಿಯುತ್ತ, ಮಿಣುಗುಟ್ಟುತ್ತ ಗೋಚರಿಸುತ್ತಿದ್ದವು. ಹೃದಯಕ್ಕೆ ಸಂಕೇತವಾದ ಅಲ್-ಕಲ್ಬ್ ನಕ್ಷತ್ರವೂ, ಕನ್ಯೆಯ ಮುಖಪರದೆಗೆ ಸಂಕೇತವಾದ ಆಲ್-ಫಘರ್ ನಕ್ಷತ್ರತ್ರಯವೂ, ಕೊಂಬುಗಳಿಗೆ ಸಂಕೇತವಾದ ಅಷ್-ಷರತನ್ ನಕ್ಷತ್ರದ್ವಯವೂ ಆಕಾಶದಲ್ಲಿ ಕಾಣಿಸುತ್ತಿದ್ದವು. ಮೃತ್ಯುವಿನ ಕುಟುಕಿಗೆ ಸಂಕೇತವಾದ ಅಷ್-ಷುಲ ನಕ್ಷತ್ರವೊಂದು ಮಾತ್ರ ನೀಲಗಗನದಲ್ಲಿ ಎಲ್ಲಿಯೂ ಕಾಣಬರಲಿಲ್ಲ.

---

# ಮೂರನೆಯ ಭಾಗ

"ಬದುಕಿ ಸಾಯದೆ ಇರುವವನಿಗೆ ಅಪಾರ ಮಹಿಮೆ!"

ಅರೇಬಿಯನ್ ನೈಟ್ಸ್.

೧

ಖೋಜಾ ನಸ್ರೆದ್ದೀನನು ಅಮೀರನ ವಿಶ್ವಾಸವನ್ನೂ ಅನುಗ್ರಹವನ್ನೂ ಸಂಪಾದಿಸಿಕೊಂಡು, ಎಲ್ಲ ವಿಷಯಗಳಲ್ಲಿಯೂ ಅವನಿಗೆ ಅತ್ಯಂತ ಆಪ್ತನಾದ ಸಲಹೆಗಾರನಾದನು. ಖೋಜಾ ನಸ್ರೆದ್ದೀನ್ ತೀರ್ಮಾನಗಳನ್ನು ಮಾಡುತ್ತಿದ್ದನು; ಅವಕ್ಕೆ ಅಮೀರನು ರುಜು ಹಾಕುತ್ತಿದ್ದನು; ಪ್ರಧಾನ ವಜೀರ ಬಖ್ತಿಯಾರನ ಕೆಲಸ ಆ ತೀರ್ಮಾನಗಳಿಗೆ ರಾಜಮುದ್ರೆಯಿಂದ ಮುದ್ರೆಯೊತ್ತುವುದು ಮಾತ್ರವಾಯಿತು.

"ಅಯ್ಯೋ, ದಯಾಸಾಗರ ಅಲ್ಲಾ! ನಮ್ಮ ರಾಜ್ಯದ ಸ್ಥಿತಿ ತೀರಾ ಬಿಕ್ಕಟ್ಟಿಗೆ ಬಂತಲ್ಲ!" ಎಂದು ಬಖ್ತಿಯಾರ್ ಆತಂಕದಿಂದ ಉದ್ಗಾರಮಾಡಿದನು. ತೆರಿಗೆಗಳನ್ನು ರದ್ದುಮಾಡುವ, ರಸ್ತೆಗಳು ಮತ್ತು ಸೇತುವೆಗಳನ್ನು ಸುಂಕ ಕೊಡದೆ ಉಪಯೋಗಿಸಲು ಅವಕಾಶಕೊಡುವ, ಪೇಟೆಯ (ವ್ಯಾಪಾರದ) ತೆರಿಗೆಯನ್ನು ತಗ್ಗಿಸುವ ಆಜ್ಞೆಗಳನ್ನು ಓದುತ್ತೋದುತ್ತ ಬಖ್ತಿಯಾರನ ಆತಂಕ ಅಧಿಕವಾಯಿತು. "ಸ್ವಲ್ಪ ದಿನಗಳಲ್ಲೇ ಭಂಡಾರ ಬರಿದಾಗುತ್ತದೆ! ಈ ಹೊಸ ಜ್ಞಾನಿ— ಇವನ ಕರುಳು ಕೊಳೆತುಹೋಗ!— ಒಂದೇ ಒಂದು ವಾರದಲ್ಲಿ ನಾನು ಹತ್ತು ವರ್ಷದಿಂದ ಕಷ್ಟಪಟ್ಟು ಕಟ್ಟಿದ್ದನ್ನೆಲ್ಲಾ ಕೆಡವಿ ಧ್ವಂಸಮಾಡಿಬಿಟ್ಟನಲ್ಲ!" ಎಂದುಕೊಂಡನು.

ಒಂದು ದಿನ ಅವನು ತನ್ನ ಸಂದೇಹಗಳನ್ನು ಅಮೀರನ ಮುಂದೆ ಇಡುವ ಸಾಹಸಮಾಡಿದನು. ಅದಕ್ಕೆ ಅಮೀರನು ಹೀಗೆ ಉತ್ತರ ಕೊಟ್ಟನು:

"ನಿನಗೇನು ಗೊತ್ತು, ಓ ಕೇಳಕ್ಕೆ ಬಾರದ ಮುಟ್ಠಾಳಾ. ನಿನಗೇನು ಗೊತ್ತು? ನಮ್ಮ ಭಂಡಾರವನ್ನು ಬರಿದು ಮಾಡುವ ಈ ಆಜ್ಞೆಗಳಿಂದ ನಮಗಾಗಿರುವ ದುಃಖ ನಿನ್ನದಕ್ಕಿಂತ ಏನೂ ಕಡಮೆಯಲ್ಲ. ಆದರೆ ಮಾಡುವುದೇನು? ಗ್ರಹಗತಿಗಳು ಹೀಗೇ ಮಾಡಬೇಕೆಂದು ನಿರ್ಬಂಧಿಸುತ್ತಿರುವಾಗ ನಾವೇನು ತಾನೆ ಮಾಡುವುದಕ್ಕಾದೀತು? ಬಖ್ತಿಯಾರ್, ಸಮಾಧಾನ

ಮಾಡಿಕೊ; ಇದೆಲ್ಲ ಸ್ವಲ್ಪ ದಿನಗಳ ವರೆಗೆ ಮಾತ್ರ; ಗ್ರಹನಕ್ಷತ್ರಗಳ ಗತಿ ಅನುಕೂಲಪರಿಸ್ಥಿತಿಗೆ ಬರುವ ವರೆಗೆ ಮಾತ್ರ. ಇದನ್ನಿವನಿಗೆ ವಿವರಿಸಿ ಹೇಳು, ಮೌಲಾನಾ ಹುಸೇನ್."

ಖೋಜಾ ನಸ್ರೆದ್ದೀನ್ ಮುಖ್ಯ ವಜೀರನನ್ನು ಪ್ರತ್ಯೇಕವಾಗಿ ಒಂದು ಕಡೆಗೆ ಕರೆದುಕೊಂಡುಹೋದನು. ಅವನನ್ನು ದಿಂಬುಗಳ ಮೇಲೆ ಕೂರಿಸಿ, ಕಮ್ಮಾರರು, ತಾಮ್ರಗೆಲಸದವರು, ಆಯುಧ ನಿರ್ಮಾಪಕರು—ಇವರ ಮೇಲೆ ವಿಧಿಸಿದ್ದ ಹೆಚ್ಚಿನ ತೆರಿಗೆಯನ್ನು ತಕ್ಷಣವೇ ಏಕೆ ತೆಗೆದುಹಾಕಬೇಕಾಗಿದೆಯೆಂಬ ಸಂಗತಿಯನ್ನು ವಿಸ್ತಾರವಾಗಿ ವಿವರಿಸಿ ಹೇಳಿದನು.

"ಕನ್ಯಾ ರಾಶಿಯಲ್ಲಿನ ಅಲ್-ಅವ್ವ ನಕ್ಷತ್ರ, ಧನೂ ರಾಶಿಯಲ್ಲಿನ ಅಲ್-ಬಲ್ದ ನಕ್ಷತ್ರ ಇವುಗಳು ಕುಂಭರಾಶಿಯಲ್ಲಿನ ಸಾ ಅದ್-ಬುಲಾ ನಕ್ಷತ್ರಕ್ಕೆ ಪ್ರತಿಯೋಗದಲ್ಲಿವೆ. ತಿಳಿಯಿತೋ, ಮಹಾ ಘನವಂತ ವಜೀರರೇ, ಅವು ಪರಸ್ಪರ ಪ್ರತಿಯೋಗಸ್ಥಾನದಲ್ಲಿವೆ. ಸಂಯೋಗಸ್ಥಾನಕ್ಕೆ ಬಹು ದೂರದಲ್ಲಿವೆ. ಎಂದು ಮನವರಿಕೆಯಾಯಿತೊ ನಿಮಗೆ?" ಎಂದನು ಖೋಜಾ ನಸ್ರೆದ್ದೀನ್.

"ಸರಿ, ಅದರಿಂದೇನು? ಅವು ಪ್ರತಿಯೋಗದಲ್ಲಿದ್ದರೆ ಆಗುವುದೇನು? ಅವು ಹಿಂದೆಯೂ ಪ್ರತಿಯೋಗಸ್ಥಾನದಲ್ಲಿದ್ದವು; ಆಗ ನಾವು ಕ್ರಮವಾಗಿ ತೆರಿಗೆ ವಸೂಲುಮಾಡುವುದಕ್ಕೆ ಅದರಿಂದ ನಮಗೇನೂ ಅಡ್ಡಿಯಾಗಿರಲಿಲ್ಲವಲ್ಲ" ಎಂದು ಬಖ್ತಿಯಾರ್ ಪ್ರತಿವಾದಿಸಿದನು.

"ಆದರೆ ಮೇಷ ರಾಶಿಯಲ್ಲಿ ಅಲ್-ಡಬರಾನ್ ನಕ್ಷತ್ರವನ್ನು ಮರೆತು ಬಿಟ್ಟೆಯಲ್ಲ. ಓ ವಜೀರಾ! ಆಕಾಶದ ಕಡೆ ನೋಡು; ನಿನಗೇ ಗೊತ್ತಾಗುತ್ತದೆ" ಎಂದು ನುಡಿದನು ಖೋಜಾ ನಸ್ರೆದ್ದೀನ್.

"ನಾನೇಕೆ ಆಕಾಶವನ್ನು ನೋಡಬೇಕು? ಭಂಡಾರದ ರಕ್ಷಣೆ ಮತ್ತು ಅದು ಧನಸಮೃದ್ಧವಾಗಿರುವಂತೆ ನೋಡಿಕೊಳ್ಳುವುದು—ಇದೇ ನನ್ನ ಕರ್ತವ್ಯ. ನೀನು ಬಂದಾಗಿನಿಂದ ಭಂಡಾರದಲ್ಲಿದ್ದ ಹಣ ದಿನ ದಿನಕ್ಕೆ ಕರಗುತ್ತಿದೆ; ಭಂಡಾರಕ್ಕೆ ಬರುವ ತೆರಿಗೆಯ ಆದಾಯ ಕಡಮೆಯಾಗುತ್ತಿದೆ. ಪಟ್ಟಣದ ಕಾರೇಗಾರರಿಂದ ತೆರಿಗೆ ವಸೂಲು ಮಾಡುವುದಕ್ಕೆ ಈಗ ಸಕಾಲವಾಗಿದೆ. ನಾವೇಕೆ ಆ ತೆರಿಗೆಗಳನ್ನು ವಸೂಲು ಮಾಡಬಾರದು? ತಿಳಿಯಹೇಳು, ನನಗೆ!"

“ ಏಕೆಂದು ಹೇಳಬೇಕೇ ? ಕಳೆದ ಒಂದು ಗಂಟೆಯಿಂದಲೂ ನಿನಗೆ ವಿವರಿಸಿ ಹೇಳುತ್ತಲೇ ಇದ್ದೇನಲ್ಲ! ರಾಶಿ ಚಕ್ರದ ಪ್ರತಿಯೊಂದು ರಾಶಿಗೂ ಚಂದ್ರನ ಸಂಬಂಧದಲ್ಲಿ ಎರಡು ಸ್ಥಾನಗಳಿರುವುವೆಂದು ನಿನಗೆ ಇನ್ನೂ ಮಂದಟ್ಟಾಗಲಿಲ್ಲವೆ ? ಮೂರನೆಯ........”

ವಜೀರ ಮತ್ತೆ ನಡುವೆ ಬಾಯಿ ಹಾಕಿದನು : “ ಆದರೆ ನಾನು ತೆರಿಗೆ ವಸೂಲು ಮಾಡಬೇಕು, ತೆರಿಗೆಯನ್ನು ; ಗೊತ್ತಾಯಿತೇನಯ್ಯ ! ” ಎಂದನು.

“ ತಾಳು ! ” ಎಂದು ಖೋಜಾ ನಸ್ರೆದ್ದೀನ್ ಅವನನ್ನು ಅಷ್ಟಕ್ಕೇ ತಡೆದನು. “ ತಾಳು, ತಾಳು. ಸಮಾಧಾನ ತಂದುಕೊ. ನಾನಿನ್ನೂ ಪೂರ್ತಿಯಾಗಿ ವಿವರಿಸಿಲ್ಲ. ಅತ್-ಥುರಯ್ಯ ನಕ್ಷತ್ರಪುಂಜ ಮತ್ತು ಅನ್-ನಾಅಯಿವ್ ನಕ್ಷತ್ರಾಷ್ಟಕ....”

ಇಲ್ಲಿ ಖೋಜಾ ನಸ್ರೆದ್ದೀನ್ ಗೊಂದಲ ಹಿಡಿಸುವಂತೆ ಮತ್ತು ತಲೆಚಿಟ್ಟು ಹಿಡಿಸುವಂತೆ ಬಹು ದೀರ್ಘಕಾಲ ನಿರರ್ಗಳವಾಗಿ ಭಾಷಣ ಮಾಡಿ ವಿವರಿಸಿದನು. ಮುಖ್ಯ ವಜೀರನ ಕಿವಿಯಲ್ಲಿ ಧಿಮ್ಮೆನ್ನತೊಡಗಿತು ; ದೃಷ್ಟಿ ಮಂಕಾಯಿತು. ಅವನು ಮೇಲೆದ್ದು ಮೆಲ್ಲನೆ ತತ್ತರಿಸುತ್ತ ಹೊರಕ್ಕೆ ನಡೆದುಬಿಟ್ಟನು. ಖೋಜಾ ನಸ್ರೆದ್ದೀನ್ ಅಮೀರನ ಕಡೆಗೆ ತಿರುಗಿದನು.

“ ಓ ಪ್ರಭುವೇ, ವಯಸ್ಸು ಇವನ ತಲೆಯನ್ನು ಬೆಳ್ಳಿಯಿಂದ ಆವರಿಸಿದೆ. ಆದರೂ ಅದರ ಹೊರಭಾಗವನ್ನು ಮಾತ್ರ ಸಿರಿಗೊಳಿಸಿದೆಯೇ ಹೊರತು, ಒಳಗಿರುವುದನ್ನು ಬಂಗಾರವಾಗಿ ಮಾರ್ಪಡಿಸಲಿಲ್ಲ ನನ್ನ ಪಾಂಡಿತ್ಯವನ್ನು ಗ್ರಹಿಸುವುದಕ್ಕೆ ಅವನು ಸಮರ್ಥನಾಗಲಿಲ್ಲ. ಅವನಿಗೆ ಏನೇನೂ ತಿಳಿಯಲಿಲ್ಲ, ಮಹಾಪ್ರಭೂ ! ಅಮೀರರ ಬುದ್ಧಿಶಕ್ತಿಯಲ್ಲಿ—ಅವರ ಬುದ್ಧಿಶಕ್ತಿ ಸ್ವತಃ ಲಾಕ್ಮನ್ನನ್ನೇ ಮೀರಿಸುವಂಥದು—ಆ ಬುದ್ಧಿಶಕ್ತಿಯಲ್ಲಿ ಸಾವಿರದಲ್ಲಿ ಒಂದು ಪಾಲು ಇವನಿಗಿದ್ದಿದ್ದರೆ ! ”

ಅಮೀರನು ಬಹು ಅನುಗ್ರಹಪೂರ್ವಕವಾಗಿ ತೃಪ್ತಿಭಾವದಿಂದ ಮುಗುಳುನಕ್ಕನು. ತನ್ನ ಜ್ಞಾನ, ಪಾಂಡಿತ್ಯ ಅಗಾಧವಾದದ್ದೆಂದೂ ಎಣೆಯಿಲ್ಲದ್ದೆಂದೂ ಅಮೀರನಿಗೆ ಮಂದಟ್ಟುಮಾಡಿಕೊಡಬೇಕೆಂದು ಖೋಜಾ ನಸ್ರೆದ್ದೀನ್ ದಿನಗಟ್ಟಳೆ ಹೆಣಗಿದ್ದನು. ಈ ಪ್ರಯತ್ನ ಸಫಲವೂ ಆಗಿತ್ತು. ಆದ್ದರಿಂದ ಈಗ ಅವನು ಏನನ್ನಾದರೂ ಕಾರಣ ಕೊಟ್ಟು ಸಮರ್ಥಿಸಹೊರಟರೆ, ಅಮೀರನು

ಸಾವಧಾನವಾಗಿ ಆಲಿಸುತ್ತಿದ್ದನು. ಸ್ವಲ್ಪವೂ ಪ್ರತಿವಾದ ಮಾಡುತ್ತಿರಲಿಲ್ಲ. ಪ್ರತಿವಾದಿಸಿದರೆ ತನ್ನ ಪಾಂಡಿತ್ಯದ ಆಳ ಎಲ್ಲಿ ಗೊತ್ತಾಗಿಹೋಗುವುದೋ ಎಂದು ಹೆದರಿಕೆ, ಅವನಿಗೆ!

ಮಾರನೆಯ ದಿನ ಬಖ್ತಿಯಾರ್ ಆಸ್ಥಾನಿಕರ ಗುಂಪೊಂದಕ್ಕೆ ತನ್ನ ಮನಸ್ಸಿನಲ್ಲಿ ಕುದಿಯುತ್ತಿದ್ದದ್ದನ್ನು ಹೇಳಿಕೊಂಡನು :

" ಈ ಹೊಸ ಜ್ಞಾನಿ, ಮೌಲಾನಾ ಹುಸೇನ್, ನಮ್ಮನ್ನೆಲ್ಲಾ ಮುಳುಗಿಸಿಬಿಡುತ್ತಾನೆ! ತೆರಿಗೆಯನ್ನು ವಸೂಲು ಮಾಡುವ ದಿನವೆಂದರೆ, ನಮ್ಮ ಸಂಪತ್ತನ್ನು ಹೆಚ್ಚಿಸಿಕೊಳ್ಳುವ ದಿನ. ಅಮೀರರ ರಾಜಭಂಡಾರಕ್ಕೆ ಹರಿದು ಬರುತ್ತಿರುವ ಸಮೃದ್ಧವಾದ ಆ ಮಹಾ ಪ್ರವಾಹದಲ್ಲಿ ಕೈ ಅದ್ದಿ ನಮ್ಮ ಸ್ವಂತ ಸಂಪತ್ತನ್ನೂ ಹೆಚ್ಚಿಸಿಕೊಳ್ಳಲು ಅದೊಂದು ಸದವಕಾಶ. ಆದರೆ, ಈಗ, ಸಂಪತ್ಪ್ರವಾಹದಲ್ಲಿ ಕೈ ಅದ್ದುವ ಕಾಲ ಬಂದಿರುವಾಗ, ಈ ಮೌಲಾನಾ ಹುಸೇನ್ ನಮ್ಮ ಕೈ ತಡೆಯುತ್ತಿದ್ದಾನೆ; ನಮ್ಮ ಅವಕಾಶವನ್ನು ಹಾಳು ಮಾಡುತ್ತಿದ್ದಾನೆ. ನಕ್ಷತ್ರಗಳ ಸ್ಥಾನವನ್ನು ಎಲ್ಲಕ್ಕೂ ಕಾರಣವಾಗಿ ಹೇಳುತ್ತಾನೆ. ನಕ್ಷತ್ರಗಳ ಗತಿ ಅಲ್ಲಾನ ಅಪ್ಪಣೆಯಂತೆ ನಡೆಯುತ್ತದೆ. ಅವು ಉನ್ನತ ಸ್ಥಾನದಲ್ಲಿರುವ ಮಹಾ ಪುರುಷರಿಗೆ ಮತ್ತು ಶ್ರೀಮಂತರಿಗೆ ಪ್ರತಿಕೂಲವಾಗಿರುವುವೆಂದೂ, ಅದೇ ಸಮಯದಲ್ಲಿ ಕೆಲಸಕ್ಕೆ ಬಾರದ ಅಪ್ರಸಿದ್ಧರಾದ ಕೇವಲ ಕಾರೇಗಾರರಿಗೆ ಅನುಕೂಲವಾಗಿರುವುವೆಂದೂ ಯಾರು ತಾನೆ ನಂಬಲಾಗುತ್ತದೆ? ಇದೇ ಸಮಯದಲ್ಲಿ ಆ ಅಲ್ಪರಾದ ಕೆಲಸಗಾರರು ತಮ್ಮ ಸಂಪಾದನೆಯನ್ನು ನಾಚಿಕೆಯಿಲ್ಲದೆ ನುಂಗುತ್ತಿದ್ದಾರೆ; ಆ ಸಂಪಾದನೆಯನ್ನು ನಮ್ಮ ಕೈಗೆ ಕೊಡುವುದಕ್ಕೆ ಬದಲಾಗಿ ತಾವೇ ತಿನ್ನುತ್ತಿದ್ದಾರಲ್ಲ! ಇದೆಂಥ ಅನ್ಯಾಯ? ನಕ್ಷತ್ರಗಳ ಗತಿಯಿಂದ ಹೀಗಾಗುವುದೆಂದು ಯಾರು ತಾನೆ ಕೇಳಿದ್ದಾರೆ? ಯಾವ ಗ್ರಂಥದಲ್ಲಿಯೂ ಹಾಗೆ ಬರೆದಿರಲಾರದು; ಏಕೆಂದರೆ, ಅಂಥ ಪುಸ್ತಕವೇನಾದರೂ ಇದ್ದಿದ್ದರೆ, ಅದನ್ನು ಸುಟ್ಟುಹಾಕಿ, ಅದನ್ನು ಬರೆದವನನ್ನು ಅತ್ಯಂತ ನೀಚ ನಾಸ್ತಿಕನೆಂದೂ ಧರ್ಮದ್ರೋಹಿಯೆಂದೂ, ಮಹಾ ಅಪರಾಧಿಯೆಂದೂ ಕರೆದು ಅವನಿಗೆ ಮರಣದಂಡನೆ ವಿಧಿಸಿಬಿಡುತ್ತಿತ್ತು."

ಆಸ್ಥಾನಿಕರು ಏನೂ ಹೇಳಲಿಲ್ಲ. ಯಾರ ಕಡೆ ಸೇರಿದರೆ—ಬಖ್ತಿಯಾರನ ಕಡೆಗೆ ಅಥವಾ ಹೊಸ ಜ್ಞಾನಿಯ ಕಡೆಗೆ, ಇವರಲ್ಲಿ ಯಾರ ಕಡೆಗೆ ಸೇರಿದರೆ

—ತಮಗೆ ಅನುಕೂಲವಾದೀತೆಂದು ಅವರು ಯೋಚಿಸುತ್ತಿದ್ದರು.

ಬಖ್ತಿಯಾರ್ ಮುಂದುವರಿಸಿದನು : “ ತೆರಿಗೆ ಬರುವುದು ದಿನದಿನಕ್ಕೆ ಕಡಮೆಯಾಗುತ್ತಿದೆ. ಇನ್ನು ಮುಂದೇನಾಗುತ್ತದೆ ? ಈ ಮೌಲಾನಾ ಹುಸೇನ್ ಅಮೀರರಿಗೆ ತೆರಿಗೆಗಳನ್ನು ಸದ್ಯಕ್ಕೆ ಸ್ವಲ್ಪ ಕಾಲದ ವರೆಗೆ ಮಾತ್ರ ರದ್ದುಗೊಳಿಸಲಾಗಿದೆಯೆಂದೂ ಮುಂದೆ ಬಹು ಸ್ವಲ್ಪಕಾಲದಲ್ಲಿಯೇ ಅವನ್ನೆಲ್ಲಾ ಮತ್ತೆ ವಿಧಿಸಲಾಗುವುದೆಂದೂ ಹೆಚ್ಚಿಸಲಾಗುವುದೆಂದೂ ಹೇಳಿ ಅವರ ಕಣ್ಣಿಗೆ ಮಣ್ಣೆರಚಿದ್ದಾನೆ. ಅಮೀರರು ಅದನ್ನು ನಂಬಿದ್ದಾರೆ. ಆದರ ನಮಗೆ ಗೊತ್ತು ಅದರ ನಿಜಸ್ಥಿತಿ. ತೆರಿಗೆಯನ್ನು ತೆಗೆದುಹಾಕುವುದು ಸುಲಭ ; ಹೊಸ ತೆರಿಗೆಯೊಂದನ್ನು ವಿಧಿಸುವುದು ಬಹಳ ಕಷ್ಟ. ತನ್ನಲ್ಲಿರುವ ಹಣ ಬೇರೆ ಯಾರಿಗೋ ಸೇರಿದ್ದೆಂಬ ಭಾವನೆಯಿರುವಾಗ ಅದನ್ನು ಕೊಟ್ಟುಬಿಡುವುದು ಮನುಷ್ಯನಿಗೆ ಸುಲಭವಾಗುತ್ತದೆ. ಆದರೆ ಒಂದು ಸಲ ಅವನು ಅದನ್ನು ಸ್ವಂತಕ್ಕೆ ಬಳಸಿಕೊಂಡನೆಂದರೆ ತೀರಿತು, ಎರಡನೆಯ ಸಲವೂ ಮೂರನೆಯ ಸಲವೂ ಅದನ್ನು ಸ್ವಂತಕ್ಕೆ ಬಳಸಬೇಕೆಂದು ಅವನು ಆಸೆಪಡುತ್ತಾನೆ.

“ ರಾಜಭಂಡಾರ ಕ್ಷೀಣಿಸುತ್ತ ಬರುತ್ತದೆ ಅದರಿಂದ ನಾವು, ಅಮೀರರ ಆಸ್ಥಾನಿಕರು ಹಾಳಾಗುತ್ತೇವೆ. ಜರತಾರಿ ಉಡುಪು ತೊಡುವುದಕ್ಕೆ ಬದಲಾಗಿ ತೀರ ಸರಳವಾದ ಸಾಧಾರಣ ಒರಟು ಬಟ್ಟೆಗಳನ್ನು ಹಾಕಿಕೊಳ್ಳಬೇಕಾಗುತ್ತದೆ. ನಾಲ್ಕು ಮಂದಿ ಹೆಂಡಿರಿಗೆ ಬದಲಾಗಿ ಇಬ್ಬರಲ್ಲೇ ನಾವು ತೃಪ್ತಿಪಟ್ಟುಕೊಳ್ಳಬೇಕಾಗುತ್ತದೆ. ಬೆಳ್ಳಿಯ ಪಾತ್ರೆಗಳಿಗೆ ಬದಲಾಗಿ ಮಣ್ಣಿನ ಪಾತ್ರೆಗಳಲ್ಲಿ ನಾವು ಊಟ ಮಾಡಬೇಕಾಗುತ್ತದೆ. ಮೃದುವಾದ ಕುರಿಮರಿಯ ಮಾಂಸಕ್ಕೆ ಬದಲಾಗಿ, ನಾಯಿಗಳಿಗೂ ಕೆಲಸಗಾರರಿಗೂ ಮಾತ್ರವೇ ಯೋಗ್ಯವಾದ ಒರಟು ಗೋಮಾಂಸವನ್ನು ತಿನ್ನಬೇಕಾಗುತ್ತದೆ. ಇದೇ ಈ ಹೊಸ ಜ್ಞಾನಿ ಮೌಲಾನಾ ಹುಸೇನ್ ನಮಗೆ ಸಿದ್ಧಮಾಡಿಟ್ಟಿರುವುದು. ಯಾವನು ಇದನ್ನು ಅರಿತುಕೊಳ್ಳಲಾರನೋ ಅವನು ಕಣ್ಣಿದ್ದೂ ಕುರುಡ ; ಅವನ ಗತಿ ದೇವರಿಗೇ ಪ್ರೀತಿ ! ”

ಆಸ್ಥಾನಿಕರನ್ನು ಹೊಸ ಜ್ಞಾನಿಗೆ ವಿರುದ್ಧವಾಗಿ ಎತ್ತಿಕಟ್ಟಬೇಕೆಂಬ ಉದ್ದೇಶದಿಂದ ಬಖ್ತಿಯಾರ್ ಹೀಗೆ ಭಾಷಣ ಮಾಡಿದನು.

ಅವನ ಪ್ರಯತ್ನ ವ್ಯರ್ಥವಾಯಿತು. ಮೌಲಾನಾ ಹುಸೇನನು ತನ್ನ ಹೊಸ ಗೌರವಸ್ಥಾನದಲ್ಲಿ ಜಯದ ಮೇಲೆ ಜಯವನ್ನು ಸಂಪಾದಿಸುತ್ತಾ

ಬಂದನು.

'ಪ್ರಶಂಸೆಯ ದಿನ'ದಲ್ಲಂತೂ ಅವನು ಅಸದೃಶಖ್ಯಾತಿ ಸಂಪಾದಿಸಿದನು. ಪುರಾತನ ಕಾಲದಿಂದಲೂ ಬಂದ ಒಂದು ಸಂಪ್ರದಾಯಕ್ಕನುಸಾರವಾಗಿ ಪ್ರತಿ ತಿಂಗಳೂ ಒಂದು ದಿನ ಎಲ್ಲಾ ವಜೀರರೂ ಅಧಿಕಾರಿಗಳೂ ಜ್ಞಾನಿಗಳೂ ಕವಿಗಳೂ ಅಮೀರನ ಮುಂದೆ ಅವನನ್ನು ಹೊಗಳುವುದರಲ್ಲಿ ತಮಗಿರುವ ಸಾಮರ್ಥ್ಯವನ್ನು ಹುರುಡಿನಿಂದ ಪ್ರದರ್ಶಿಸಬೇಕಾಗಿತ್ತು. ಈ ಮೇಲಾಟದಲ್ಲಿ ಗೆದ್ದವನಿಗೆ ಒಂದು ಬಹುಮಾನ ದೊರೆಯುತ್ತಿತ್ತು.

ಪ್ರತಿಯೊಬ್ಬರೂ ತಮ್ಮ ತಮ್ಮ ಸ್ತುತಿಯನ್ನು ಹೇಳಿ ಆಗಿತ್ತು. ಆದರೂ ಅಮೀರನಿಗೆ ಇನ್ನೂ ಅತೃಪ್ತಿಯೇ!

"ಹೋದ ಸಲವೂ ನೀವು ಇದನ್ನೇ ಹೇಳಿದಿರಿ. ಸ್ತೋತ್ರ ಪಾಠದಲ್ಲಿ ನಿಮಗೆ ಸಂಪೂರ್ಣ ಸಾಮರ್ಥ್ಯವಿಲ್ಲವೆಂದು ನಮಗನ್ನಿಸುತ್ತಿದೆ. ನಿಮ್ಮ ಬುದ್ಧಿ ಉಪಯೋಗಿಸುವುದಕ್ಕೆ ನಿಮಗೆ ಇಚ್ಛೆಯಿಲ್ಲ ಆದರೆ ಇವತ್ತು ನೀವು ಕೆಲಸ ಮಾಡುವಂತೆ ನಾವು ಮಾಡುತ್ತೇವೆ. ನಾವು ನಿಮಗೆ ಪ್ರಶ್ನೆ ಹಾಕುತ್ತೇವೆ. ನೀವು ಅದಕ್ಕೆ ಉತ್ತರ ಕೊಡಬೇಕು. ಆ ಉತ್ತರದಲ್ಲಿ ಪ್ರಶಂಸೆಯನ್ನು ಸತ್ಯದ ಛಾಯೆಯೊಡನೆ ಹೊಂದಿಸಿ ಹೇಳಬೇಕು. ಎಚ್ಚರಿಕೆಯಿಂದ ಕೇಳಿ—ಇಗೋ, ಇದು ನಮ್ಮ ಮೊದಲನೆಯ ಪ್ರಶ್ನೆ: ನಾವು, ಬುಖಾರದ ಮಹಾ ಅಮೀರರು, ನೀವು ಹೇಳುವಂತೆ ಮಹಾ ಪರಾಕ್ರಮಶಾಲಿಗಳೂ ಅಜೇಯರೂ ಆಗಿರುವ ಪಕ್ಷದಲ್ಲಿ, ಸುತ್ತಮುತ್ತಣ ಮುಸ್ಲಿಮ್ ರಾಜ್ಯಗಳ ಅರಸರು ಅದೇಕೆ ತಮ್ಮ ರಾಯಭಾರಿಗಳನ್ನು ಇನ್ನೂ ನಮ್ಮ ಆಸ್ಥಾನಕ್ಕೆ ಕಳಿಸಿಲ್ಲ? ಅಮೂಲ್ಯವಾದ ಅನರ್ಘ ಕಾಣಿಕೆಗಳನ್ನು ಕಳಿಸಿ, ನಮ್ಮ ಸಾರ್ವಭೌಮಾಧಿಕಾರಕ್ಕೆ ಸಂಪೂರ್ಣವಾಗಿ ತಗ್ಗಿ ಅಧೀನರಾಗಿರುವುದಾಗಿ ಅದೇಕೆ ಹೇಳಿಸಿಲ್ಲ? ನಿಮ್ಮ ಉತ್ತರಗಳನ್ನು ನಿರೀಕ್ಷಿಸುತ್ತಿದ್ದೇವೆ" ಎಂದನು.

ಆಸ್ಥಾನಿಕರಿಗೆ ಏನೂ ತೋರದಾಯಿತು. ನೇರ ಉತ್ತರವನ್ನು ಹೇಳದೆ ತಪ್ಪಿಸಿಕೊಳ್ಳಲೆಂದು ಪ್ರಯತ್ನಿಸಿ ಏನೇನೋ ಗುಜುಗುಜುಗುಟ್ಟಿದರು. ಖೋಜಾ ನಸ್ರುದ್ದೀನ್ ಒಬ್ಬ ಮಾತ್ರ ಸಂಪೂರ್ಣ ಶಾಂತಿಯಿಂದಿದ್ದನು. ಅವನ ಸರದಿ ಬಂದಾಗ ಹೀಗೆ ಹೇಳಿದನು:

"ನನ್ನ ಈ ಬಡ ಮಾತುಗಳು ಮಹಾಮಹಿಮರಾದ ಅಮೀರರ ಕೇಳಿಕೆ

ಯಲ್ಲಿ ಅನುಗ್ರಹವನ್ನು ಸಂಪಾದಿಸುವಂತಾಗಲಿ. ನಮ್ಮ ಪರವು ಪ್ರಭುಗಳ ಪ್ರಶ್ನೆಗೆ ಉತ್ತರ ಬಹುಸುಲಭವಾಗಿದೆ. ಸುತ್ತಮುತ್ತಲ ರಾಜ್ಯಗಳ ರಾಜರೆಲ್ಲರೂ ನಮ್ಮ ಮಹಾಪ್ರಭುಗಳ ಸರ್ವಶಕ್ತತ್ವದ ಎದುರಿನಲ್ಲಿ ಭಯದಿಂದ ಸದಾ ತಲ್ಲಣಿ ಸುತ್ತಿದ್ದಾರೆ. ಅವರು ಆಲೋಚಿಸುವುದು ಹೀಗೆ : 'ನಾವು ಮಹಾಮಹಿಮನಾದ ಪ್ರಭಾವಶಾಲಿಯಾದ ಪ್ರಬಲ ಪರಾಕ್ರಮಿಯಾದ ಬುಖಾರದ ಅಮೀರನಿಗೆ ಅನರ್ಘವಾದ ಕಾಣಿಕೆಗಳನ್ನು ಕಳಿಸಿದೆವಾದರೆ, ನಮ್ಮ ನಾಡು ಐಶ್ವರ್ಯವಂತ ವಾಗಿದೆಯೆಂದು ಅವರು ಭಾವಿಸಬಹುದು. ಹಾಗೆ ಭಾವಿಸಿದರೆ, ಅದು ಅಮೀರರು ದೊಡ್ಡ ದಂಡಿನೊಡನೆ ಬಂದು ನಮ್ಮ ರಾಜ್ಯವನ್ನು ಗೆದ್ದು ತಮ್ಮ ದಾಗಿ ಮಾಡಿಕೊಂಡುಬಿಡುವಂತೆ ಅವರನ್ನು ಪ್ರೇರಿಸುತ್ತದೆ. ಅದಕ್ಕೆ ಬದಲಾಗಿ ಅಲ್ಪ ಬೆಲೆಯ ಕಾಣಿಕೆಗಳನ್ನು ಕಳಿಸಿದರೆ ಅವರು ತಮಗೆ ಅವಮಾನವಾಯಿ ತೆಂದು ಕೋಪಿಸಿ ನಮ್ಮ ಮೇಲೆ ದಂಡು ಕಳಿಸುತ್ತಾರೆ. ಬುಖಾರದ ಅಮೀರರು ದೊಡ್ಡವರು ; ಮಹಾ ಘನವಂತರು, ಮತ್ತು ಅಪ್ರತಿಮ ಪರಾಕ್ರಮಶಾಲಿಗಳು. ನಾವಿರುವ ವಿಷಯವೇ ಅವರಿಗೆ ತಿಳಿಯದ ಹಾಗೆ ನಾವು ಸುಮ್ಮನಿರುವುದೇ ಲೇಸು.'

"ಬೇರೆ ರಾಜ್ಯಾಧಿಪತಿಗಳ ಮನಸ್ಸಿನಲ್ಲಿರುವ ಯೋಚನೆಗಳಿವು. ಅವರು ಅಮೂಲ್ಯವಾದ ಕಾಣಿಕೆಗಳೊಡನೆ ತಮ್ಮ ರಾಯಭಾರಿಗಳನ್ನು ಬುಖಾರಕ್ಕೆ ಏಕೆ ಕಳಿಸುವುದಿಲ್ಲವೆಂಬುದಕ್ಕೆ ಇದೇ ಕಾರಣ. ನಮ್ಮ ಮಹಾಪ್ರಭುಗಳ ಸರ್ವಶಕ್ತತ್ವದ ಎದುರು ಅವರು ಸರ್ವದಾ ಭಯಭೀತರಾಗಿದ್ದಾರೆ!"

ಖೋಜಾ ನಸ್ರೆದ್ದೀನನ ಉತ್ತರಕ್ಕೆ ಅಮೀರನು ಮಾರುಹೋದನು. ಆನಂದಪರವಶನಾಗಿ ತನ್ನ ಮೆಚ್ಚಿಕೆಯನ್ನು ಹೊರಸೂಸಿದನು. "ಹಾ! ಎಷ್ಟು ಸೊಗಸಾಗಿದೆ! ಅಮೀರನ ಪ್ರಶ್ನೆಗಳಿಗೆ ಉತ್ತರ ಹೇಳಬೇಕಾದ್ದೇ ಹೀಗೆ! ಕೇಳಿದಿರಾ? ಇವನನ್ನು ನೋಡಿ ಕಲಿತುಕೊಳ್ಳಿ, ಓ, ಬೆಪ್ಪುತಕಡಿಗಳಾ, ಮೊದ್ದುಗಳಾ! ನಿಜವಾಗಿಯೂ ಮೌಲಾನಾ ಹುಸೇನನು ನಮ್ಮೆಲ್ಲರಿಗಿಂತಲೂ ಹತ್ತು ಪಟ್ಟು ಹೆಚ್ಚು ಜ್ಞಾನಪಾಂಡಿತ್ಯಗಳಲ್ಲಿ! ನಮ್ಮ ರಾಜವಂದನೆಗಳನ್ನು ನಾವವನಿಗೆ ಸಲ್ಲಿಸುತ್ತೇವೆ" ಎಂದನು.

ತಕ್ಷಣವೆ ಆಸ್ಥಾನದ ಅಡಿಗೆಯವನು ಖೋಜಾ ನಸ್ರೆದ್ದೀನನ ಬಳಿಗೆ ಧಾವಿಸಿ ಹಲ್ವ ಮತ್ತು ಇತರ ಸೀ ಭಕ್ಷ್ಯಗಳನ್ನು ಅವನ ಬಾಯಿಗೆ ತುಂಬಿದನು.

ಖೋಜಾನಸ್ರೆದ್ದೀನನ ಕೆನ್ನೆಗಳು ಉಬ್ಬಿದವು; ಅವನಿಗೆ ಉಸಿರು ಕಟ್ಟುವಂತಾಯಿತು; ಜೊಲ್ಲು ಗಲ್ಲದ ಮೇಲಿಳಿಯಿತು.

ಅಮೀರನು ಇನ್ನೂ ಅನೇಕ ವಿಚಿತ್ರ ಪ್ರಶ್ನೆಗಳನ್ನು ಕೇಳಿದನು. ಪ್ರತಿ ಸಲವೂ ಖೋಜಾ ನಸ್ರೆದ್ದೀನನ ಉತ್ತರವೇ ಎಲ್ಲಕ್ಕಿಂತಲೂ ಮೇಲಾಗಿರುತ್ತಿತ್ತು.

"ಆಸ್ಥಾನಿಕನ ಮೊದಲನೆಯ ಕರ್ತವ್ಯವೇನು?" ಎಂಬುದು ಇಂಥ ಒಂದು ಪ್ರಶ್ನೆ. ಇದಕ್ಕೆ ಖೋಜಾ ನಸ್ರೆದ್ದೀನ್ ಹೀಗೆ ಉತ್ತರ ಕೊಟ್ಟನು:

"ಮಹಾ ಘನತೆಯುಳ್ಳ ಪ್ರಸಿದ್ಧಿ ಪಡೆದ ಮಹಾಪ್ರಭೂ! ಆಸ್ಥಾನಿಕನ ಮೊದಲನೆಯ ಕರ್ತವ್ಯವೇನೆಂದರೆ, ತನ್ನ ಬೆನ್ನುಮೂಳೆ ಹೇಗೆಂದರೆ ಹಾಗೆ ಬಗ್ಗುವಂತೆ ಮೃದುವಾಗುವ ಹಾಗೆ ತಕ್ಕಷ್ಟು ಪಟ್ಟಿಗೆ ಸಾಧನೆಮಾಡುವುದು; ಅದಕ್ಕೆ ತಕ್ಕಷ್ಟು ನಮ್ಯತೆಯಿಲ್ಲದಿದ್ದರೆ ಪ್ರಭುವಿನ ಬಗ್ಗೆ ತನಗಿರುವ ಶ್ರದ್ಧಾ ಭಕ್ತಿಗಳನ್ನೂ ಗೌರವವನ್ನೂ ಸರಿಯಾಗಿ ವ್ಯಕ್ತಪಡಿಸುವುದು ಸಾಧ್ಯವಾಗುವುದಿಲ್ಲ. ಆಸ್ಥಾನಿಕನ ಬೆನ್ನುಮೂಳೆಗೆ ಕೇವಲ ಬಗ್ಗುವುದೇ ಅಲ್ಲ, ಹೇಗೆಂದರೆ ಹಾಗೆ ಎಲ್ಲ ಕಡೆಗೂ ತಿರುಚಿಕೊಳ್ಳುವ ಶಕ್ತಿಯೂ ಇರಬೇಕು. ಸಾಧಾರಣ ಮನುಷ್ಯನ ಬೆನ್ನುಮೂಳೆಯಂತೆ ಗಟ್ಟಿಯಾಗಿ ಬಿಗಿತುಕೊಂಡಿರಬಾರದು. ಸರಿಯಾಗಿ ತಲೆ ಬಾಗಿಸಿ ನೆಟ್ಟಗೆ ನಮಸ್ಕಾರ ಮಾಡುವುದಕ್ಕೂ ಬರುವುದಿಲ್ಲ ಸಾಮಾನ್ಯ ಮನುಷ್ಯನಿಗೆ!"

"ದಿಟ, ದಿಟ! ಪ್ರತಿನಿತ್ಯವೂ ಬೆನ್ನುಮೂಳೆಗೆ ಸಾಧನೆ! ಚೆನ್ನಾಗಿದೆ! ಎರಡನೆಯ ನಮ್ಮ ರಾಜವಂದನೆಗಳನ್ನರ್ಪಿಸುತ್ತೇವೆ, ಜ್ಞಾನಿ ಮೌಲಾನಾ ಹುಸೇನನಿಗೆ" ಎಂದನು ಅಮೀರ ಸಂತೃಪ್ತನಾಗಿ.

ಮತ್ತೊಮ್ಮೆ ಖೋಜಾ ನಸ್ರೆದ್ದೀನನ ಬಾಯಿತುಂಬ ಹಲ್ವ, ಸೀ ಭಕ್ಷ್ಯಗಳನ್ನು ತುಂಬಲಾಯಿತು.

ಆ ದಿನ ಅನೇಕ ಮಂದಿ ಆಸ್ಥಾನಿಕರು ತಮ್ಮ ಭಕ್ತಿವಿಶ್ವಾಸಗಳನ್ನು ಬಖ್ತಿಯಾರನಿಂದ ಹಿಂತೆಗೆದುಕೊಂಡು ಖೋಜಾ ನಸ್ರೆದ್ದೀನನಲ್ಲಿಟ್ಟರು.

ಆ ಸಂಜೆ ಬಖ್ತಿಯಾರನು ಆರ್ಸ್‌ಲಾನ್-ಬೆಕ್ಕನ್ನು ತನ್ನ ಮನೆಗೆ ಕರಸಿಕೊಂಡನು. ಹೊಸ ಜ್ಞಾನಿಯು ಇಬ್ಬರಿಗೂ ಒಂದೇ ರೀತಿ ಭಯಂಕರನಾಗಿದ್ದನು. ಅವನನ್ನು ನಾಶಮಾಡುವ ಅಭಿಲಾಷೆಯಲ್ಲಿ ತಮ್ಮ ಪೂರ್ವ

ದ್ವೇಷವನ್ನು ತಾತ್ಕಾಲಿಕವಾಗಿ ಮರೆತಿದ್ದರು.

"ಅವನ ಪಲಾವಿನಲ್ಲಿ ಏನಾದರೂ ಸೇರಿಸಿಬಿಡುವುದು ಒಳ್ಳೆಯ ಉಪಾಯ" ಎಂದನು ಆರ್ಸ್‌ಲಾನ್-ಬೆಕ್. ಅವನು ಇಂಥ ಕೆಲಸದಲ್ಲಿ ಬಹು ನಿಪುಣ, ಅನುಭವಶಾಲಿ.

"ಆ ಮೇಲೆ ಅಮೀರರು ನಮ್ಮ ತಲೆ ಕತ್ತರಿಸಿಬಿಡುತ್ತಾರೆ!" ಎಂದು ಬಖ್ತಿಯಾರ್ ಪ್ರತಿವಾದಿಸಿದನು. "ಆಗದು, ಮಾನ್ಯ ಆರ್ಸ್‌ಲಾನ್-ಬೆಕ್, ಹೀಗೆ ಮಾಡಲಾಗದು ನಾವು ಬೇರೆ ರೀತಿ ಕಾರ್ಯ ಮಾಡಬೇಕು. ನಾವು ಸಾಧ್ಯವಾದ ಸಂದರ್ಭಗಳಲ್ಲೆಲ್ಲಾ ಮೌಲಾನಾ ಹುಸೇನನ ಜ್ಞಾನಪಾಂಡಿತ್ಯಗಳನ್ನು ವಿಪರೀತವಾಗಿ ಪ್ರಶಂಸಿಸುತ್ತ ಬರಬೇಕು. ಅದರಿಂದ ಅಮೀರರ ಮನಸ್ಸಿನಲ್ಲಿ ಸಂಶಯ ಹುಟ್ಟಬೇಕು. ಆಸ್ಥಾನಿಕರು ಮೌಲಾನಾ ಹುಸೇನನ ಪಾಂಡಿತ್ಯ ತಮ್ಮ ಪಾಂಡಿತ್ಯಕ್ಕಿಂತಲೂ ಹೆಚ್ಚೆಂದು ಭಾವಿಸಿರುವರೋ ಏನೋ ಎಂಬ ಸಂಶಯ ಮೂಡಬೇಕು. ನಾವು ದಿನವೂ ಮೌಲಾನಾ ಹುಸೇನನನ್ನು ಎಡೆಬಿಡದೆ ಹೊಗಳುತ್ತ ಬರೋಣ. ಅಮೀರರು ಅವನ ವಿಷಯದಲ್ಲಿ ಹೊಟ್ಟೆಕಿಚ್ಚು ಪಡುವಂಥ ದಿನ ಬಂದೇ ಬರುತ್ತದೆ. ಆ ದಿನವೇ ಮೌಲಾನಾ ಹುಸೇನನ ಉಚ್ಛ್ರಾಯದ ಕಡೆಯ ದಿನ; ಅವನ ಅವನತಿಯ ಪ್ರಥಮ ದಿನ" ಎಂದು ವಾದಿಸಿದನು.

ಆದರೆ, ಅದೃಷ್ಟ ಖೋಜಾ ನಸ್ರೆದ್ದೀನನ ಮೇಲೆ ಕರುಣಾಕಟಾಕ್ಷ ಬೀರಿತ್ತು. ಅವನ ಹೆಡ್ಡತನದ ತಪ್ಪುಗಳು ಕೂಡ ಅವನಿಗೆ ಅನುಕೂಲವಾಗಿಯೆ ಪರಿಣಮಿಸಿದವು.

ಬಖ್ತಿಯಾರ್, ಆರ್ಸ್‌ಲಾನ್-ಬೆಕ್ ಇಬ್ಬರೂ ತಮ್ಮ ಹಂಚಿಕೆಯಂತೆ ನಿರಂತರವಾಗಿ ಮೌಲಾನಾ ಹುಸೇನನನ್ನು ಅತಿಯಾಗಿ ಪ್ರಶಂಸಿಸುತ್ತ ಬಂದರು. ಅವರ ಉದ್ದೇಶ ಸಾರ್ಥಕವಾಗುವ ಸಮಯ ಸನ್ನಿಹಿತವಾಗುತ್ತಿತ್ತು. ಅಮೀರನಿಗಾಗಲೆ ಅಸಮಾಧಾನ ಮೂಡಿತ್ತು. ಹೊಟ್ಟೆಕಿಚ್ಚಿನ ಪ್ರಥಮ ಪ್ರಭಾವ ಕಾಣಿಸಿಕೊಳ್ಳತೊಡಗಿತ್ತು. ಆದರೆ ಅದಿನ್ನೂ ಬಹಿರಂಗವಾಗಿರಲಿಲ್ಲ; ಅಂತರಂಗದಲ್ಲೇ ಅಡಗಿತ್ತು. ಈ ಸಮಯದಲ್ಲಿ ಖೋಜಾ ನಸ್ರೆದ್ದೀನ್ ಒಂದು ದೊಡ್ಡ ಪ್ರಮಾದ ಮಾಡಿದನು.

ಅವನು ಅಮೀರನೊಡನೆ ಪುಷ್ಪಗಳ ಪರಿಮಳವನ್ನು ಆಘ್ರಾಣಿಸುತ್ತಲೂ

ಪಕ್ಷಿಗಳ ಗಾನವನ್ನಾಲಿಸುತ್ತಲೂ ಉದ್ಯಾನದಲ್ಲಿ ಸಂಚರಿಸುತ್ತಿದ್ದನು. ಅಮೀರನು ಮೌನವಾಗಿದ್ದನು. ಈ ಮೌನದಲ್ಲಿ ಏನೋ ಒಂದು ಬಗೆಯ ವಿರೋಧ ಭಾವ ಅಡಗಿದೆಯೆಂದು ಖೋಜಾ ನಸ್ರೆದ್ದೀನನಿಗೆ ಅರಿವಾಯಿತು. ಆದರೆ ಅದಕ್ಕೆ ಕಾರಣವೇನೆಂದು ಗೊತ್ತಾಗಲಿಲ್ಲ.

“ಹೇಗಿದ್ದಾನೆ, ನಿನ್ನ ಸೆರೆಯಾಳು? ಅವನ ನಿಜವಾದ ಹೆಸರೇನು, ಅವನು ಬುಖಾರಕ್ಕೆ ಬಂದ ಕಾರಣವೇನು, ಗೊತ್ತುಮಾಡಿದೆಯಾ?” ಎಂದು ಕೇಳಿದನು ಅಮೀರ.

ಆಗ ಖೋಜಾ ನಸ್ರೆದ್ದೀನ್ ಮನಸ್ಸಿನಲ್ಲಿ ಗುಲ್ಜಾನನ್ನೇ ಯೋಚಿಸುತ್ತಿದ್ದನು. ಮನಸ್ಸು ಅವಳ ನೆನಪಿನಲ್ಲಿ ಮುಳುಗಿದ್ದದ್ದರಿಂದ ಅನ್ಯಮನಸ್ಕನಾಗಿ ಹೀಗೆ ಹೇಳಿದನು:

“ಮಹಾಪ್ರಭುಗಳು ಈ ನಮ್ರ ಸೇವಕನನ್ನು ದಯಮಾಡಿ ಕ್ಷಮಿಸಬೇಕು. ಇಲ್ಲಿಯವರೆಗೂ ಮುದುಕನಿಂದ ಒಂದು ಮಾತನ್ನೂ ಹೊರಡಿಸಲಾಗಲಿಲ್ಲ. ಅವನು ಮೂಕನಂತೆ ಬಾಯಿ ಮುಚ್ಚಿಕೊಂಡಿದ್ದಾನೆ!” ಎಂದನು.

“ಅವನಿಗೆ ಚಿತ್ರಹಿಂಸೆ ಮಾಡುವುದಕ್ಕೆ ಪ್ರಯತ್ನಿಸಿದೆಯೊ?”

“ದಯಾಮಯ ಪ್ರಭುವೇ, ಮೊನ್ನೆಯ ದಿನ ಅವನ ಮೈಕೈ ಕೀಲುಗಳನ್ನು ಎಳೆದು ತಿರಿಚಿದೆ. ನಿನ್ನೆ ದಿನ ಕಾದ ಚಿಮುಟಗಳಿಂದ ಅವನ ಹಲ್ಲುಗಳನ್ನೆಲ್ಲ ಕೀಳುವುದರಲ್ಲೇ ಇಡೀ ದಿನವೆಲ್ಲಾ ಕಳೆದೆ.”

“ಹಲ್ಲು ಕೀಳುವುದು ನಿಜವಾಗಿಯೂ ದೊಡ್ಡ ಯಾತನೆಯೇ ಸರಿ” ಎಂದು ಅಮೀರ ಒಪ್ಪಿಕೊಂಡನು. “ಆದರೂ ಅವನು ಸದ್ದು ಮಾಡದೆ ತೆಪ್ಪಗಿರುವುದು ಆಶ್ಚರ್ಯ! ನಿನ್ನ ಸಹಾಯಕ್ಕೆ ಪಳಗಿದ ಅನುಭವಶಾಲಿಯಾದ ವಧಕಾರನೊಬ್ಬನನ್ನು ಕಳಿಸಿಕೊಡೋಣವೇನು?” ಎಂದು ಕೇಳಿದನು.

“ಬೇಡ, ಬೇಡ. ಮಹಾಪ್ರಭುಗಳು ಅಷ್ಟೊಂದು ಚಿಂತೆ ಹಚ್ಚಿಕೊಳ್ಳುವ ಕಾರಣವಿಲ್ಲ. ನಾಳೆ ನಾನೊಂದು ಹೊಸ ಯಾತನೆಯನ್ನು ಹುಡುಕುತ್ತೇನೆ: ಮುದುಕನ ನಾಲಿಗೆ ಒಸಡುಗಳಿಗೆ, ಕೆಂಪಗೆ ಕಾಸಿದ ದಬ್ಬಳ ಚುಚ್ಚುತ್ತೇನೆ.”

“ನಿಲ್ಲು! ನಿಲ್ಲು!” ಎಂದು ಕೂಗಿದನು ಅಮೀರ; ತಟಕ್ಕನೆ ಬಹು ಸಂತೋಷದಿಂದ ಅವನ ಮುಖ ಕಳೆದುಂಬಿತು. “ಕೆಂಪಗೆ ಕಾದ ದಬ್ಬಳವನ್ನು ನಾಲಿಗೆಗೆ ಚುಚ್ಚಿದರೆ ಅವನು ತನ್ನ ಹೆಸರು ಹೇಳುವುದು ಹೇಗೆ? ನೀನು ಆ

ವಿಚಾರವನ್ನು ಯೋಚಿಸಲೇ ಇಲ್ಲ; ಅಲ್ಲವೇ, ಮೌಲಾನಾ ಹುಸೇನ್ ? ಈಗ ನಾವು, ಘನ ಅಮೀರರು, ತಕ್ಷಣವೇ ಆ ವಿಚಾರವನ್ನು ಯೋಚಿಸಿದ್ದೇವೆ; ಯೋಚಿಸಿ, ನೀನು ಬಹು ದೊಡ್ಡ ತಪ್ಪು ಮಾಡಿಬಿಡದಂತೆ ತಡೆದಿದ್ದೇವೆ. ಇದರಿಂದ, ನೀನು ಅಸಮಾನ ಜ್ಞಾನಿಯೆಂಬುದು ನಿಜವಾದರೂ, ಈಗ ತಾನೇ ನೀನೇ ಕಂಡಿರುವಂತೆ, ನಮ್ಮ ಜ್ಞಾನವು ನಿನ್ನ ಜ್ಞಾನಕ್ಕಿಂತ ಬಹಳ ಹೆಚ್ಚಾದ್ದೆಂದು ಸಿದ್ಧವಾಗುತ್ತದೆ" ಎಂದು ನುಡಿದನು.

ಮುಖದಲ್ಲಿ ಆನಂದದ ಕಳೆ ಸೂಸುತ್ತಿರಲು ಅಮೀರನು ಹಿಗ್ಗುತ್ತ ಆ ಕ್ಷಣವೇ ಬರಬೇಕೆಂದು ಆಸ್ಥಾನಿಕರಿಗೆ ಕರೆಕಳಿಸಿದನು. ಅವರೆಲ್ಲ ಬಂದು ನೆರೆದ ಮೇಲೆ, ತಾನು ಆ ದಿನ ಮೌಲಾನಾ ಹುಸೇನನಿಗಿಂತ ಜ್ಞಾನದಲ್ಲಿ ಹೆಚ್ಚಿನವನಾದದ್ದನ್ನು ಬಹಿರಂಗವಾಗಿ ತಿಳಿಸಿದನು, ಆ ಪ್ರಸಿದ್ಧ ಜ್ಞಾನಿ ಮಾಡಿಬಿಡುತ್ತಿದ್ದ ದೊಡ್ಡ ತಪ್ಪೊಂದನ್ನು ತಾನು ತಪ್ಪಿಸಿದುದಾಗಿ ವಿವರಿಸಿದನು.

ಆಸ್ಥಾನದ ಚರಿತ್ರಕಾರನು ಅಮೀರನಾಡಿದ ಒಂದೊಂದು ಮಾತನ್ನೂ ಮುಂದಿನವರ ಹಿತಕ್ಕಾಗಿ ಶ್ರಮವಹಿಸಿ ಬರೆದಿಟ್ಟನು.

ಅವತ್ತಿನಿಂದ ಅಮೀರನ ಹೃದಯದಲ್ಲಿ ಯಾವ ಬಗೆಯ ಹೊಟ್ಟೆಕಿಚ್ಚೂ ಉಳಿಯಲಿಲ್ಲ.

ಹೀಗೆ ಅವನ ಶತ್ರುಗಳು ಬಹು ಚಾತುರ್ಯದಿಂದ ಹೂಡಿದ್ದ ತಂತ್ರವನ್ನು ಖೋಜಾ ನಸ್ರೆದ್ದೀನ್ ಅಕಸ್ಮಾತ್ತಾಗಿ ಮಾಡಿದ ಒಂದು ತಪ್ಪು ಮುರಿದು ಹಾಕಿಬಿಟ್ಟಿತು.

ಆದರೂ ಅವನಿಗೆ ಚಿಂತೆ ಹೆಚ್ಚುತ್ತಲೇ ಇತ್ತು. ಯಾವ ನಿಶ್ಚಯವೂ ಇಲ್ಲದೆ ಆತಂಕದಿಂದ ಕಳೆಯಬೇಕಾದ ಗಂಟೆ ಗಂಟೆಯೂ ಅವನ ಪಾಲಿಗೆ ಅಪಾರ ಯಾತನೆಯನ್ನು ತರುತ್ತಿತ್ತು. ಬುಖಾರ ಪಟ್ಟಣದ ಮೇಲೆ ಪೂರ್ಣ ಚಂದ್ರಬಿಂಬ ನೆತ್ತಿಯ ಮೇಲೆ ಹೊಳೆಯುತ್ತಿತ್ತು. ಅಸಂಖ್ಯಾತ ಮಿನರೆಟ್‌ಗಳಿಗೆ ಹೊದಿಸಿದ್ದ ಹೊಳಪು ಹೆಂಚು ಮೃದುವಾಗಿ ಮಿರುಗುತ್ತಿತ್ತು. ಕಟ್ಟಡದ ಬಲವಾದ ಕಲ್ಲು ತಳಪಾಯಗಳು ನೀಲವರ್ಣದ ಮುಸುಕಿನಲ್ಲಿ ಮರೆಯಾಗಿತ್ತು. ಚಾವಣಿಗಳ ಮೇಲುಗಡೆ ತಂಪಾದ ಸುಳಿಗಾಳಿ ಬೀಸುತ್ತಿತ್ತು. ಆದರೆ ಕೆಳಭಾಗದಲ್ಲಿ ಬಿಸಿಲಿನಿಂದ ಬೆಂದ ನೆಲ ಮತ್ತು ಗೋಡೆಗಳು ರಾತ್ರಿಯ ಗಾಳಿಯಲ್ಲಿ ಆರಲು ತಕ್ಕಷ್ಟು ಕಾಲವಿಲ್ಲದೆ ಶಾಖದಿಂದ ಉಸಿರುಕಟ್ಟಿಸುವಂತಿತ್ತು. ಎಲ್ಲವೂ

—ಅರಮನೆ, ಮಸೀತಿಗಳು ಮತ್ತು ಬಡವರ ಗೂಡುಗಳು, ಎಲ್ಲವೂ—ನಿದ್ದೆಯಲ್ಲಿ ಮುಳುಗಿತ್ತು. ಗೂಗೆಯೊಂದು ಮಾತ್ರ ಕೀರಲು ದನಿಯಿಂದ ಆ ಪವಿತ್ರ ನಗರದ ಶಾಂತಿಯನ್ನು ಆಗಾಗ ಕಲಕುತ್ತಿತ್ತು.

ಖೋಜಾ ನಸ್ರೆದ್ದೀನ್ ತೆರೆದ ಕಿಟಕಿಯ ಬಳಿ ಕುಳಿತಿದ್ದನು. ಗುಲ್ಜಾನ್ ಕೂಡ ಆ ಸಮಯದಲ್ಲಿ ಮಲಗಿ ನಿದ್ರಿಸುತ್ತಿಲ್ಲವೆಂದೂ ತನ್ನನ್ನೇ ಕುರಿತು ಚಿಂತಿಸುತ್ತಿರುವಳೆಂದೂ ಅವನ ಅಂತರಂಗಕ್ಕೆ ಚೆನ್ನಾಗಿ ಗೊತ್ತಿತ್ತು. ಬಹುಶಃ ಅದೇ ಕ್ಷಣದಲ್ಲಿ ಒಬ್ಬರನ್ನೊಬ್ಬರು ಕಾಣದ ಒಂದೇ ಗೋಪುರದ ಕಡೆ ನೋಡುತ್ತಿರಬಹುದು. ಅವರಿಬ್ಬರ ನಡುವೆ ಎಷ್ಟು ಅಡ್ಡಿಗಳು—ಕೋಟೆಗಳು, ಗೋಡೆಗಳು, ಕಬ್ಬಿಣದ ಸಲಾಕಿಗಳು, ನಪುಂಸಕರು, ಕಾಪಿನಾಳುಗಳು, ಮತ್ತು ಮುದುಕಿಯರು! ಖೋಜಾ ನಸ್ರೆದ್ದೀನ್ ಅರಮನೆಗೆ ಪ್ರವೇಶ ಪಡೆದಿದ್ದನು. ಆದರೆ ಅಂತಃಪುರ ಇನ್ನೂ ದುಷ್ಪ್ರವೇಶ್ಯವಾಗಿಯೇ ಇತ್ತು. ಅದೃಷ್ಟವಶದಿಂದ ಒಂದು ಒಳ್ಳೆಯ ಅವಕಾಶ ದೊರೆತರೆ ಮಾತ್ರ ಒಳಗೆ ಕಾಲಿಡಬಹುದು. ಅಂಥ ಅವಕಾಶ ಸಿಕ್ಕಲೆಂದು ಅವನು ಯಾವ ಕಷ್ಟವನ್ನೂ ಗಣಿಸದೆ ಪ್ರಯತ್ನಿಸುತ್ತಿದ್ದನು; ಆದರೆ ಎಲ್ಲ ವ್ಯರ್ಥ! ಗುಲ್ಜಾನಿಗೆ ಒಂದು ಸುದ್ದಿ ಕಳಿಸುವುದು ಕೂಡ ಅವನಿಗೆ ಅಸಾಧ್ಯವಾಯಿತು. ಅವನು ಕಿಟಕಿಯ ಬಳಿ ಕುಳಿತು ಗಾಳಿಗೆ ಮುತ್ತಿಟ್ಟು, ಅದಕ್ಕೆ ಹೀಗೆ ಹೇಳಿದನು:

"ನಿನಗೆ ಇದು ಬಹು ಸುಲಭ! ಒಂದೇ ಒಂದು ಕ್ಷಣ ಮಾತ್ರವಾದರೂ ಅವಳ ಕಿಟಕಿಯ ಮೂಲಕ ನುಸುಳಿ ಹೋಗು! ಹೋಗಿ ಅವಳ ತುಟಿಗಳನ್ನೂ ಕಿವಿಗಳನ್ನೂ ಸ್ಪರ್ಶಮಾಡು. ಗುಲ್ಜಾನಿಗೆ ನನ್ನ ಮುತ್ತನ್ನೂ ಸಂದೇಶವನ್ನೂ ತಲುಪಿಸು. ನಾನು ಅವಳನ್ನು ಮರೆತಿಲ್ಲವೆಂದು ಅವಳಿಗೆ ಹೇಳು. ನಾನು ಬರುತ್ತೇನೆಂದೂ, ಬಂದು ಅವಳನ್ನು ಬಿಡಿಸಿಕೊಂಡು ಹೋಗುತ್ತೇನೆಂದೂ ಅವಳಿಗೆ ತಿಳಿಸು."

ಸುಳಿಗಾಳಿ ಮುಂದೆ ಹೋಯಿತು; ಖೋಜಾ ನಸ್ರೆದ್ದೀನನನ್ನು ಅವನ ದುಃಖದಲ್ಲಿ ಒಂಟಿಯಾಗಿ ಬಿಟ್ಟು ತನ್ನ ದಾರಿ ಹಿಡಿದು ಹೊರಟು ಹೋಯಿತು.

ಮತ್ತೊಂದು ದಿನ—ದುಡಿತ ದುಃಖಗಳನ್ನೊಳಗೊಂಡ ಮತ್ತೊಂದು ದಿನ—ಪ್ರಾರಂಭವಾಗುವುದರಲ್ಲಿತ್ತು. ಮತ್ತೊಮ್ಮೆ ಅವನು ಆಸ್ಥಾನಮಂದಿರಕ್ಕೆ ಹೋಗಬೇಕು. ಅಲ್ಲಿ ಅಮೀರನ ಬರವಿಗಾಗಿ ಕಾಯುತ್ತಿರಬೇಕು. ಆಸ್ಥಾನಿಕರ

ಮುಖಸ್ತುತಿಗಳನ್ನು ಆಲಿಸಬೇಕು, ಬಖ್ತಿಯಾರನ ಚಾತುರ್ಯದ ಹಂಚಿಕೆಗಳನ್ನು ಭೇದಿಸಬೇಕು, ಗೂಢ ವಿಷಪೂರ್ಣವಾದ ಅವನ ಕಡೆಗಣ್ ನೋಟಗಳನ್ನು ಕಂಡರಿಯಬೇಕು! ಆ ಮೇಲೆ, ಅವನು ತಾನೇ ಅಮೀರನೆದುರಿಗೆ ಅಡ್ಡಬಿದ್ದು ನಮಸ್ಕಾರ ಮಾಡಿ, ಅವನ ಸ್ತೋತ್ರಗಳನ್ನು ಹಾಡಿ ಹೊಗಳಬೇಕಾಗಿತ್ತು; ಅದಾದ ಮೇಲೆ, ಅಮೀರನೊಡನೆ ದೀರ್ಘಕಾಲದ ವರೆಗೆ ಏಕಾಂತ ಸ್ಥಳದಲ್ಲಿ ಮಾತುಕತೆ: ಅತಿಭೋಗದಿಂದ ಕಳೆಗುಂದಿ ಊದಿಕೊಂಡ ಅವನ ಅಸಹ್ಯಕರ ವಾದ ಮುಖವನ್ನು ನೋಡುತ್ತಿರಬೇಕು; ಜುಗುಪ್ಸೆಯಾದರೂ ಅದನ್ನು ತೋರಿಸಿಕೊಳ್ಳದೆ ಅಡಗಿಸಿಕೊಳ್ಳಬೇಕು; ಅವನ ಅವಿವೇಕದ ಹರಟೆ ಮಾತು ಗಳನ್ನು ಕಿವಿಗೊಟ್ಟು ಕೇಳುತ್ತಿರಬೇಕು; ಗ್ರಹನಕ್ಷತ್ರಗಳ ಸ್ಥಾನಗತಿಗಳನ್ನು ಅವನಿಗೆ ವಿವರಿಸಿ ತಿಳಿಯಹೇಳಬೇಕು. ಇದರಿಂದೆಲ್ಲಾ ಖೋಜಾ ನಸ್ರೆದ್ದೀನನಿಗೆ ಎಷ್ಟು ಮಟ್ಟಿಗೆ ಬೇಸರ ಬಂದಿತ್ತೆಂದರೆ, ಹೊಸ ಹೊಸ ರೀತಿಯಲ್ಲಿ ವಿವರಿಸುವು ದನ್ನು ಅವನು ಪೂರ್ತಿಯಾಗಿ ನಿಲ್ಲಿಸಿಬಿಟ್ಟಿದ್ದನು; ಎಲ್ಲವನ್ನೂ—ಅಮೀರನ ತಲೆನೋವು, ಹೊಲಗದ್ದೆಗಳಲ್ಲಿನ ಬರ, ಧಾನ್ಯದ ಬೆಲೆಯ ಏರಿಕೆ, ಎಲ್ಲವನ್ನೂ —ಅದೇ ಮಾತುಗಳಲ್ಲಿ ಅದೇ ನಕ್ಷತ್ರಗಳ ಗತಿಪರಿಣಾಮವೆಂದು ವಿವರಿಸುತ್ತ ಬಂದನು.

"ಸಾಅದ್–ಧಬೀಹ್ ನಕ್ಷತ್ರಗಳು ಕುಂಭರಾಶಿಗೆ ಪ್ರತಿಯೋಗದಲ್ಲಿವೆ. ಬುಧಗ್ರಹ ವೃಶ್ಚಿಕ ರಾಶಿಯ ಎಡಭಾಗದಲ್ಲಿದೆ. ನಿನ್ನೆ ರಾತ್ರಿ ಅಮೀರರಿಗೆ ನಿದ್ದೆಯಿಲ್ಲದ್ದಕ್ಕೆ ಇದೇ ಕಾರಣ" ಎನ್ನುತ್ತಿದ್ದನು.

"ಸಾಅದ್–ಧಬೀಹ್ ನಕ್ಷತ್ರಗಳು ಬುಧಗ್ರಹಕ್ಕೆ ಪ್ರತಿಯೋಗದಲ್ಲಿವೆ ........ಇದನ್ನು ನಾನು ನೆನಪಿಟ್ಟುಕೊಳ್ಳಬೇಕು........ಇನ್ನೊಂದು ಸಲ ಹೇಳು, ಮೌಲಾನಾ ಹುಸೇನ್."

ಘನ ಅಮೀರನಿಗೆ ಜ್ಞಾಪಕಶಕ್ತಿಯೆಂಬುದೇ ಇರಲಿಲ್ಲ.

ಮರುದಿವಸ ಅದೇ ಸಂಭಾಷಣೆ ಮತ್ತೆ ಮೊದಲಿನಿಂದ ಪ್ರಾರಂಭವಾಗು ತ್ತಿತ್ತು.

"ಮಲೆನಾಡಿನಲ್ಲಿ ದನಕರುಗಳು ಸತ್ತವಲ್ಲ ಅದು, ಓ, ಘನ ಅಮೀರರೇ, ಸಾಅದ್–ಧಬೀಹ್ ನಕ್ಷತ್ರಗಳು ಕುಂಭ ರಾಶಿಯ ಸಮಾಗಮದಲ್ಲಿರುವುದರ ಮತ್ತು ಬುಧಗ್ರಹವು ವೃಶ್ಚಿಕ ರಾಶಿಗೆ ಪ್ರತಿಯೋಗದಲ್ಲಿರುವುದರ ಫಲ."

" ಹಾಗಾದರೆ, ಸಾಅದ್–ಥಬೀಹ್ ನಕ್ಷತ್ರಗಳು.... ನಾನಿದನ್ನು ಜ್ಞಾಪಕ ಇಟ್ಟುಕೊಳ್ಳಬೇಕು " ಎನ್ನುತ್ತಿದ್ದನು ಅಮೀರ.

ಖೋಜಾ ನಸ್ರೆದ್ದೀನ್ ಮನಸ್ಸಿನಲ್ಲೇ ಅಂದುಕೊಳ್ಳುತ್ತಿದ್ದನು :

" ಸರ್ವಶಕ್ತ ಅಲ್ಲಾ ! ಇವನೆಂಥ ಬೆಪ್ಪುತಕಡಿ! ನನ್ನ ಹಿಂದಿನ ಯಜಮಾನನಿಗಿಂತಲೂ ಇವನು ಇನ್ನೂ ದೊಡ್ಡ ಬೆಪ್ಪುತಕಡಿ! ನನಗೆ ಸಾಕಾಗಿ ಹೋಗಿದೆ, ಇವನ ಸಹವಾಸ! ಯಾವಾಗ, ಅಯ್ಯೋ, ಯಾವಾಗ ಹೊರಟು ಹೋದೇನೋ ಈ ಅರಮನೆಯಿಂದ ! "

ಇಷ್ಟರಲ್ಲಿ ಅಮೀರನು ಮತ್ತೊಂದು ವಿಷಯವನ್ನು ಎತ್ತಿಕೊಳ್ಳುತ್ತಿದ್ದನು:

" ಮೌಲಾನಾ ಹುಸೇನ್, ನಮ್ಮ ರಾಜ್ಯದಲ್ಲಿ ಶಾಂತಿ ತೃಪ್ತಿಗಳು ತಾಂಡವವಾಡುತ್ತಿವೆ. ಆ ಪೋಕರಿ ಖೋಜಾ ನಸ್ರೆದ್ದೀನನ ವಿಚಾರವಾಗಿ ನಮಗೆ ಏನೂ ಕೇಳಬರುತ್ತಿಲ್ಲ. ಅವನೆಲ್ಲಿ ಹೋಗಿದ್ದಾನು ? ಅವನೇಕೆ ಮೌನವಾಗಿದ್ದಾನೆ ? ಇದನ್ನು ವಿವರಿಸು, ನಮಗೆ."

" ಓ ಮಹಾ ಪರಾಕ್ರಮಿಗಳಾದ ಪ್ರಭುಗಳೇ ! ವಿಶ್ವಕೇಂದ್ರಸ್ವರೂಪರೇ ! ಸಾಅದ್–ಥಬೀಹ್ ನಕ್ಷತ್ರಗಳು—" ಎಂದು ಏನೇನೋ ವಿಷಯಗಳನ್ನು, ಹಿಂದೆ ಹಲವು ವೇಳೆ ಹೇಳಿದ್ದವನ್ನೇ ಮತ್ತೊಮ್ಮೆ ರಾಗವೆಳೆದು ಹೇಳಿದನು. ಎಷ್ಟೋ ಸಲ ಪುನರುಕ್ತಿಯಾಗಿ ಹೇಳಿ, " ಇನ್ನೂ ಒಂದು ಸಂಗತಿಯೆಂದರೆ, ಓ ಮಹಾಮಹಿಮ ಅಮೀರರೇ, ಈ ಪಟಿಂಗ ಖೋಜಾ ನಸ್ರೆದ್ದೀನ್ ಬಾಗ್ದಾದಿಗೆ ಬಂದಿದ್ದಾನೆ ; ಮತ್ತು ನನ್ನ ಜ್ಞಾನವೆಷ್ಟೆಂಬುದನ್ನು ಕೇಳಿಯೇ ಇದ್ದಾನೆ. ಇದು ಸ್ಪಷ್ಟವಾಗಿಯೇ ಇದೆ. ನಾನು ಬುಖಾರಕ್ಕೆ ಬಂದಿರುವ ಸಂಗತಿಯನ್ನು ಕೇಳಿದಾಗ ತಾನು ತಲೆಮರಸಿಕೊಂಡು ಅಡಗಿಬಿಟ್ಟಿದ್ದಾನೆ! ನಾನು ಎಷ್ಟು ಸುಲಭವಾಗಿ ಅವನನ್ನು ಹಿಡಿದುಹಾಕಬಲ್ಲೆನೆಂದು ಅವನಿಗೆ ಚೆನ್ನಾಗಿ ಗೊತ್ತಿರುವುದರಿಂದ, ಹೆದರಿ ನಡುಗಿ ಭೀತಿಗೊಂಡು ಅಡಗಿಬಿಟ್ಟಿದ್ದಾನೆ! " ಎಂದು ವಿವರಿಸಿದನು.

" ಹಿಡಿದುಬಿಡು ! ಹಿಡಿದುಬಿಡು ಅವನನ್ನ. ಅದು ಬಹಳ ಒಳ್ಳೆಯ ಕೆಲಸ ! ಆದರೆ ಆ ಕೆಲಸವನ್ನು ಹೇಗೆ ಮಾಡಬೇಕೆಂದಿದ್ದೀಯ, ನೀನು ? "

" ಅದಕ್ಕೆ ಸಾಅದ್–ಥಬೀಹ್ ನಕ್ಷತ್ರಗಳು ಗುರುವಿನೊಡನೆ ಸಂಗಮವಾಗುವುದನ್ನೇ ಕಾಯುತ್ತಿದ್ದೇನೆ "

"ಗುರು ಗ್ರಹದೊಡನೆ...." ಎಂದು ತಾನೂ ನುಡಿದನು ಅಮೀರ. "ಇದನ್ನು ನಾನು ನೆನಪಿಟ್ಟುಕೊಳ್ಳಬೇಕು. ನಿನ್ನೆ ರಾತ್ರಿ ನಮಗೊಂದು ಒಳ್ಳೆಯ ಯೋಚನೆ ಹೊಳೆಯಿತು, ಗೊತ್ತೇ ನಿನಗೆ, ಮೌಲಾನಾ ಹುಸೇನ್ ? ಬಖ್ತಿಯಾರನನ್ನು ಕೆಲಸದಿಂದ ತೆಗೆದು ಹಾಕಿ, ಅವನ ಸ್ಥಾನದಲ್ಲಿ ನಿನ್ನನ್ನು ಪ್ರಧಾನ ವಜೀರನನ್ನಾಗಿ ನಿಯಾಮಕ ಮಾಡಬೇಕೆಂದು ಯೋಚನೆ ಬಂತು."

ಈ ಮಾತು ಕೇಳಿ ಅವನು ಅಮೀರನ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಬೇಕಾಯಿತು. ನಮಸ್ಕಾರ ಮಾಡಿ ಬಗೆಬಗೆಯಾಗಿ ಹೊಗಳಿ, ಸಾಅದ್-ಥಬೀಹ್ ನಕ್ಷತ್ರಗಳು ಸದ್ಯದಲ್ಲಿ ವಜೀರರನ್ನು ಬದಲಾಯಿಸುವುದಕ್ಕೆ ಅನುಕೂಲವಾಗಿಲ್ಲವೆಂದು ವಿವರಿಸಿ ಹೇಳಬೇಕಾಯಿತು.

"ಬೇಗ, ಬಹು ಬೇಗ, ಇಲ್ಲಿಂದ ಹೊರಟುಬಿಡಬೇಕು!" ಎಂದು ಖೋಜಾ ನಸ್ರೆದ್ದೀನ್ ತನ್ನಲ್ಲೇ ಅಂದುಕೊಂಡನು.

ಅನುಕೂಲ ಸಮಯ ಬಂದೀತೇ ಎಂದು ನಿರೀಕ್ಷಿಸುತ್ತಾ, ಸ್ವಲ್ಪವೂ ಸುಖವಿಲ್ಲದೆ ಬಹು ಬೇಸರದಿಂದ ಅವನು ಕಾಲ ನೂಕುತ್ತಿದ್ದನು.

ಮಾರ್ಕಟ್ಟೆ, ಪೇಟೆ, ಅಲ್ಲಿನ ಗುಂಪುಗಳು, ಟೀ ಅಂಗಡಿಗಳು, ಹೊಗೆ ತುಂಬಿದ ಪಡಖಾನೆಗಳು—ಇವುಗಳಿಗಾಗಿ ಅವನು ಹಂಬಲಿಸುತ್ತಿದ್ದನು. ಮಾರ್ಕಟ್ಟೆಯ ಊಟದಂಗಡಿಗಳಲ್ಲಿ ದೊರೆಯುವ ಅಗ್ಗದ ಆಹಾರಕ್ಕೆ—ನೀರುಳ್ಳಿ ಮೆಣಸು ಹಾಕಿದ ಕುರಿಕಾಲಿನ ಸಾರು, ಅಥವಾ ಒರಟಾದ ಕುರಿ ಮಾಂಸದ ತುಂಡು ಸೇರಿದ ಪಲಾವು, ಇವಕ್ಕೆ—ಅಮೀರನ ಖಾಸಾ ಊಟದ ಭಕ್ಷ್ಯಭೋಜ್ಯಗಳನ್ನು ಬಿಟ್ಟುಕೊಡಲು ಅವನು ಸಿದ್ಧವಾಗಿದ್ದನು. ಇಲ್ಲಿನ ಮುಖಸ್ತುತಿ ಅತಿರೇಕ ಪ್ರಶಂಸೆಗಳನ್ನು ಕೇಳುತ್ತಿರಬೇಕಾದ ನಿರ್ಬಂಧಕ್ಕೆ ಬದಲಾಗಿ ಸಾಮಾನ್ಯ ಮಾತುಕತೆ ಮತ್ತು ಸ್ವಾಭಾವಿಕವಾದ ಮನಃಪೂರ್ವಕವಾದ ನಗುಗಳನ್ನು ಕೇಳುವುದಕ್ಕಾಗಿ ತನ್ನ ಜರತಾರಿ ಬಟ್ಟೆಗಳನ್ನೆಲ್ಲ ಬಿಚ್ಚಿ ಎಸೆದು, ಹಳೆಯ ಚಿಂದಿಗಳನ್ನು ಉಡುವುದಕ್ಕೆ ಅವನು ಸಿದ್ಧನಾಗಿದ್ದನು.

ಆದರೆ ಅದೃಷ್ಟ ಖೋಜಾ ನಸ್ರೆದ್ದೀನನನ್ನು ಮತ್ತೂ ಮತ್ತೂ ಪರೀಕ್ಷೆಗೆ ಗುರಿಮಾಡುತ್ತಲೇ ಇತ್ತು. ಬಹು ಕಾಲದಿಂದ ನಿರೀಕ್ಷಿಸುತ್ತಿದ್ದ ಅನುಕೂಲ ಸಮಯ ಅವನಿಗಿನ್ನೂ ಬಂದಿರಲಿಲ್ಲ. ಈ ನಡುವೆ ಅಮೀರನು ತನ್ನ ಹೊಸ ಉಪಪತ್ನಿಯ ಮುಖಪರದೆಯನ್ನೆತ್ತುವುದಕ್ಕೆ ಅವಕಾಶವಾಗುವಂತೆ ನಕ್ಷತ್ರಗಳು ಎಂದಿಗೆ ಅನುಕೂಲವಾದಾವೆಂದು ಸದಾ ಕೇಳುತ್ತಲೇ ಇದ್ದನು.

೨

ಒಂದು ದಿನ ಅಮೀರನು ಹೊತ್ತಲ್ಲದ ಹೊತ್ತಿನಲ್ಲಿ ಖೋಜಾ ನಸ್ರೆದ್ದೀನ ನಿಗೆ ಹೇಳಿ ಕಳಿಸಿದನು. ಬೆಳಗ್ಗೆ ಬಹಳ ಮುಂಚೆ; ಅರಮನೆಯೆಲ್ಲ ನಿದ್ದೆಯಲ್ಲಿ ಮುಳುಗಿತ್ತು; ಚಿಲುಮೆಗಳು ಚಿಮ್ಮುತ್ತಿದ್ದವು; ಪಾರಿವಾಳಗಳು ಗುಬ್ಬಳಿಸುತ್ತ ರೆಕ್ಕೆ ಬಡಿಯುತ್ತಿದ್ದವು.

"ನನ್ನನ್ನು ಏತಕ್ಕಾಗಿ ಕರಸಿರಬಹುದು ?" ಎಂದು ಖೋಜಾನಸ್ರೆದ್ದೀನ್ ಆಶ್ಚರ್ಯದಿಂದ ಯೋಚಿಸುತ್ತಲೇ ಅಮೀರನ ಕೋಣೆಗೆ ಹೋಗುವ ಜಾಸ್ಪರ್ ಶಿಲೆಯ ಮೆಟ್ಟಲುಗಳನ್ನು ಹತ್ತಿದನು. ಖೋಜಾ ನಸ್ರೆದ್ದೀನ್ ದಾರಿಯಲ್ಲಿ ಬಖ್ತಿಯಾರನ್ನು ಕಂಡನು. ಬಖ್ತಿಯಾರ್ ಸದ್ದಿಲ್ಲದೆ ನೆರಳಿನಂತೆ ಶಯ್ಯಾಗೃಹ ದಿಂದ ನುಸುಳಿ ಮರೆಯಾಗಿ ಹೋದನು. ಅವರಿಬ್ಬರೂ ನಿಲ್ಲದೆಯೇ ಒಬ್ಬರಿ ಗೊಬ್ಬರು ವಂದನೆ ಸಲ್ಲಿಸಿದರು. ಏನೋ ಒಂದು ತಂತ್ರ ಹೂಡಿರುವಂತೆ ಕಾಣುತ್ತದೆಯೆಂದುಕೊಂಡು ಅನುಮಾನಿಸುತ್ತಲೇ ಒಳಗೆ ಕಾಲಿಟ್ಟನು.

ಶಯ್ಯಾಗೃಹದಲ್ಲಿ ಮುಖ್ಯ ವರ್ಜವರನಿದ್ದದ್ದೂ ಖೋಜಾ ನಸ್ರೆದ್ದೀನ ನಿಗೆ ಕಾಣಿಸಿತು. ಆ ಬ್ರಹ್ಮಚರ್ಯಮೂರ್ತಿಯು ರಾಜಶಯ್ಯೆಯ ಬಳಿ ಕರುಣಾಜನಕವಾಗಿ ನರಳುತ್ತ ಬಿದ್ದಿದ್ದನು. ಅವನ ಪಕ್ಕದಲ್ಲಿ ರತ್ನಗಂಬಳಿಯ ಮೇಲೆ ಚಿನ್ನದ ಕಟ್ಟು ಹಾಕಿದ ತಾಳಮರದ ಕೋಲು ಮುರಿದು ತುಂಡು ತುಂಡಾಗಿ ಬಿದ್ದಿತ್ತು.

ಭಾರವಾದ ಮಖಮಲ್ಲಿನ ತೆರೆಗಳು ಇಳಿಯಬಿದ್ದು ಶಯ್ಯಾಗೃಹಕ್ಕೆ ಬೆಳಗಿನ ತಂಗಾಳಿಯೂ ಸೂರ್ಯಕಿರಣವೂ ಹಕ್ಕಿಗಳ ಚಿಲಿಪಿಲಿಯೂ ಪ್ರವೇಶಿಸ ದಂತೆ ತಡೆಯುತ್ತಿದ್ದವು. ಒಂದು ಲೋಹದ ದೀಪ ಅಲ್ಲಿ ಮಬ್ಬುಬೆಳಕು ಚೆಲ್ಲುತ್ತಿತ್ತು; ಅದು ಎಲ್ಲಾ ಸಾಮಾನ್ಯ ಮಣ್ಣು ದೀಪಗಳಂತೆಯೇ ಹೊಗೆ ಯುಗುಳುತ್ತ ವಾಸನೆ ಬಿಡುತ್ತಿತ್ತು.

ಒಂದು ಮೂಲೆಯಲ್ಲಿ ನಕಾಸೆ ಕೆಲಸ ಮಾಡಿದ ಧೂಪಪಾತ್ರೆಯೊಂದ ರಿಂದ ಪರಿಮಳ ಹರಡಿ ಅಲ್ಲೆಲ್ಲಾ ವ್ಯಾಪಿಸಿತ್ತು. ಆದರೆ, ದೀಪದಲ್ಲಿನ ಕುರಿ ಕೊಬ್ಬಿನ ವಾಸನೆಯನ್ನು ತಗ್ಗಿಸಲು ಅದು ಸಾಕಾಗಿರಲಿಲ್ಲ. ಅಲ್ಲಿನ ಗಾಳಿ ಭಾರವಾಗಿ ಉಸಿರು ಕಟ್ಟಿಸುವಂತಿತ್ತು.

ರೇಷ್ಮೆ ಮೆತ್ತೆಯ ಕೆಳಗಿನಿಂದ ಕೂದಲು ತುಂಬಿದ ಕಾಲುಗಳನ್ನು ಹೊರ

ಚಾಚಿ ಅಮೀರನು ಕುಳಿತಿದ್ದನು. ಅಮೀರನ ಹುಬ್ಬುಗಳು ಹಳದಿ ಬಣ್ಣ ವಾಗಿ—ಅವನ್ನು ಧೂಪಪಾತ್ರೆಯ ಮೇಲೆ ಆಗಾಗ ಹಿಡಿದು ಕಾಸುತ್ತಿದ್ದಿರ ಬಹುದೇನೋ ಎಂದು ಸೂಚಿಸುವಂತೆ ಹಳದಿ ಬಣ್ಣವಾಗಿ—ಕಂಡು ಬಂದವು.

"ಮೌಲಾನಾ ಹುಸೇನ್, ನಮಗೆ ಅತ್ಯಂತ ದುಃಖವುಂಟಾಗಿದೆ. ಇದ ಕ್ಕೆಲ್ಲಾ, ಇಗೋ, ಇಲ್ಲಿ ಕಾಣುತ್ತಿರುವ ಈ ನಮ್ಮ ಪ್ರಧಾನ ವರ್ಜವರನೇ ಕಾರಣ" ಎಂದನು ಅಮೀರ.

ಖೋಜಾ ನಸ್ರೆದ್ದೀನನಿಗೆ ಮನಸ್ಸಿನಲ್ಲಿ ನಿರುತ್ಸಾಹವಾಯಿತು. "ಮಹಾ ಪ್ರಭುಗಳೇ! ಅವನು ಅಂಥ ಸಾಹಸ ಮಾಡಿದನೆ?" ಎಂದು ಕೇಳಿದನು.

"ಇಲ್ಲ, ಇಲ್ಲ; ಅಂಥದೇನೂ ಇಲ್ಲ" ಎಂದು ಅಮೀರನು ಹಲ್ಲು ಕಿರಿದು ಕೈಯಾಡಿಸಿದನು. "ಅದು ಹೇಗೆ ಅವಿನಯ ನಡಸಿಯಾನು? ನಮ್ಮ ಸ್ವಾಭಾ ವಿಕ ಪರಿಜ್ಞಾನದಿಂದ ಮೊದಲೇ ನಾವು ಎಲ್ಲ ಸಂದರ್ಭಗಳನ್ನೂ ಊಹಿಸಿ, ಎಲ್ಲಕ್ಕೂ ತಕ್ಕ ಪರಿಹಾರ ಕ್ರಮಗಳನ್ನು ಗೊತ್ತುಮಾಡಿದ ಮೇಲೆಯೇ ಪ್ರಧಾನ ವರ್ಜವರನ ಅಧಿಕಾರಕ್ಕೆ ನೇಮಿಸಿರುವಾಗ ಇವನೇನು ತಾನೆ ಮಾಡಿಯಾನು? ಇಲ್ಲ, ಇಲ್ಲ; ಆ ರೀತಿಯೇನೂ ಇಲ್ಲ. ಇವತ್ತು ಬೆಳಗ್ಗೆ ನಮಗೆ ಗೊತ್ತಾ ಯಿತು; ಈ ನೀಚ, ನಮ್ಮ ಈ ಮುಖ್ಯ ವರ್ಜವರ, ನಮ್ಮ ರಾಜ್ಯದ ಅತ್ಯಂತ ಉನ್ನತ ಪದವಿಗಳಲ್ಲೊಂದಕ್ಕೆ ಇವನನ್ನು ನೇಮಿಸುವ ಮೂಲಕ ನಾವು ಮಹ ದನುಗ್ರಹ ತೋರಿರುವುದನ್ನು ಮರೆತು, ತನ್ನ ಕರ್ತವ್ಯದಲ್ಲಿ ಉದಾಸೀನನಾಗಿ ಮಹಾಪರಾಧ ಮಾಡಿದ್ದಾನೆ.

"ನಾವು ಇತ್ತೀಚೆಗೆ ಉಪಪತ್ನಿಯರಲ್ಲಿಗೆ ಹೋಗುತ್ತಿಲ್ಲವೆಂಬ ಸತ್ಯ ಸಂಗತಿಯನ್ನು ದುರುಪಯೋಗಪಡಿಸಿಕೊಂಡು ಈ ಧೂರ್ತ ಮೂರು ದಿನಗಳ ವರೆಗೆ ಅಂತಃಪುರವನ್ನು ಬಿಟ್ಟು ಹೋಗಿ ಹಷೀಷ್ ಸೇದುವ ದುರ್ವ್ಯಸನದಲ್ಲಿ ಮೈಮರೆತಿದ್ದಾನೆ! ನಮ್ಮ ಉಪಪತ್ನಿಯರು ಯಾವ ಅಂಕೆಯೂ ಇಲ್ಲವಾದ್ದ ರಿಂದ ಒಬ್ಬರೊಡನೊಬ್ಬರು ಜಗಳವಾಡಿ, ಹೊಡೆದಾಡಿ, ಒಬ್ಬರ ಮುಖವ ನ್ನೊಬ್ಬರು ಪರಚಿ, ಒಬ್ಬರ ಕೂದಲನ್ನೊಬ್ಬರು ಎಳೆದು ಕಿತ್ತು ಅವಾಂತರವೆಬ್ಬಿಸಿ ದ್ದಾರೆ. ನಮಗೆ ಇದರಿಂದ ಬಹಳ ನಷ್ಟವಾಗಿದೆ. ಏಕೆಂದರೆ, ನಮ್ಮ ದೃಷ್ಟಿ ಯಲ್ಲಿ ಪರಚಿದ ಮುಖದ ಕಿತ್ತ ಕೂದಲಿನ ಹೆಂಗಸು ಚೆಲುವೆಯೆನ್ನಲಾಗುವು ದಿಲ್ಲ. ಇದೂ ಅಲ್ಲದೆ, ಇನ್ನೊಂದು ವಿಷಯ ನಮ್ಮನ್ನು ದುಃಖದಲ್ಲಿ ಮುಳುಗಿ

ಸಿದೆ: ನಮ್ಮ ಹೊಸ ಉಪಪತ್ನಿ ಕಾಯಿಲೆ ಬಿದ್ದಿದ್ದಾಳೆ; ಕಳೆದ ಮೂರು ದಿನಗಳಿಂದ ಆಹಾರವನ್ನೇ ತೆಗೆದುಕೊಂಡಿಲ್ಲ."

ಖೋಜಾ ನಸ್ರೆದ್ದೀನ್ ಬೆಚ್ಚಿದನು. ಅಮೀರನು ಸನ್ನೆಮಾಡಿ ಅವನನ್ನು ಸುಮ್ಮನಿರಿಸಿದನು.

" ತಡೆ, ನಾವಿನ್ನೂ ಹೇಳಿ ಮುಗಿಸಿಲ್ಲ. ಅವಳು ಕಾಯಿಲೆ ಬಿದ್ದಿದ್ದಾಳೆ; ಪ್ರಾಣ ಬಿಟ್ಟರೂ ಬಿಡಬಹುದು. ನಾವು ಒಂದೇ ಒಂದು ಸಾರಿಯಾದರೂ ಅವಳ ಬಳಿ ಹೋಗಿದ್ದಿದ್ದರೆ, ಈ ಕಾಯಿಲೆ, ಕಡೆಗೆ ಅವಳ ಸಾವು, ಯಾವುದೂ ನಮ್ಮನ್ನು ಇಷ್ಟೊಂದು ದುಃಖಕ್ಕೆ ಗುರಿಮಾಡುತ್ತಿರಲಿಲ್ಲ. ಆದರೆ ನೀನು ಅರಿಯಬಲ್ಲೆ, ಮೌಲಾನಾ ಹುಸೇನ್, ಈ ಸಂದರ್ಭದಲ್ಲಿ ನಮಗೆ ಎಷ್ಟು ಅಸಮಾಧಾನವಾಗಿರಬಹುದೆಂದು ನಿನಗೆ ಚೆನ್ನಾಗಿ ತಿಳಿಯುತ್ತದೆ. ಆದ್ದರಿಂದ ನಾವು ಹೀಗೆ ನಿರ್ಧರಿಸಿದ್ದೇವೆ:" ಇಲ್ಲಿ ಅಮೀರನು ದನಿಯೇರಿಸಿದನು. " ಮುಂದೆ ಒದಗಬಹುದಾದ ತೊಂದರೆಗಳನ್ನೂ ಚಿಂತೆಗಳನ್ನೂ ನಿವಾರಿಸಿಕೊಳ್ಳುವುದಕ್ಕೋಸ್ಕರ, ಈ ದುಷ್ಟ ಭಂಗೀಖೋರ ಠಕ್ಕನನ್ನು ಕೆಲಸದಿಂದ ತೆಗೆದುಹಾಕಬೇಕೆಂದೂ, ನಮ್ಮ ಅನುಗ್ರಹವನ್ನು ಹಿಂದೆಗೆದುಕೊಂಡು ಇವನಿಗೆ ಬಾರುಕೋಲಿನಿಂದ ಇನ್ನೂರು ಏಟುಗಳನ್ನು ಹೊಡೆಸಬೇಕೆಂದೂ ತೀರ್ಮಾನಿಸಿದ್ದೇವೆ. ನಿನ್ನ ವಿಷಯದಲ್ಲಾದರೋ, ಓ, ಮೌಲಾನಾ ಹುಸೇನ್, ನಿನಗೆ ನಮ್ಮ ಅಪಾರ ಅನುಗ್ರಹವನ್ನು ತೋರಬೇಕೆಂದು ನಿರ್ಧರಿಸಿದ್ದೇವೆ; ಇವನು ಹೋಗುವುದರಿಂದ ಖಾಲಿಯಾಗುವ ನಮ್ಮ ಅಂತಃಪುರದ ಮುಖ್ಯ ವರ್ಷವರನ ಅಧಿಕಾರಕ್ಕೆ ನಿನ್ನನ್ನು ನೇಮಿಸಬೇಕೆಂದು ತೀರ್ಮಾನಿಸಿದ್ದೇವೆ."

ಖೋಜಾ ನಸ್ರೆದ್ದೀನನ ಕಾಲು ನಡುಗಿತು; ಉಸಿರು ಗಂಟಲಲ್ಲೆ ಕಟ್ಟಿಕೊಂಡಿತು; ಕರುಳೆಲ್ಲಾ ತಣ್ಣಗಾಯಿತು.

ಅಮೀರನು ಹುಬ್ಬು ಗಂಟಿಕ್ಕಿಕೊಂಡು ಅಪಾಯಸೂಚಕವಾದ ದನಿಯಲ್ಲಿ ನುಡಿದನು:

" ನೀನು ನಮ್ಮೊಡನೆ ವಾದಿಸಲು ಸಿದ್ಧನಾಗಿರುವಂತೆ ಕಾಣುತ್ತದೆ, ಮೌಲಾನಾ ಹುಸೇನ್. ವ್ಯರ್ಥವಾದ ಕ್ಷಣಿಕವಾದ ಸುಖಗಳನ್ನು ಮೆಚ್ಚಿ ನಮ್ಮನ್ನು—ಮಹಾಪ್ರಭುಗಳನ್ನು—ಸೇವಿಸುವ ಮಹಾ ಸುಖಕ್ಕಿಂತ ಅವೇ ಹೆಚ್ಚೆಂದು ಭಾವಿಸುತ್ತಿದ್ದೀಯಲ್ಲವೆ?" ಎಂದು ಪ್ರಶ್ನೆ ಮಾಡಿದನು.

ಖೋಜಾ ನಸ್ರೆದ್ದೀನನು ತನ್ನ ಮನಸ್ಸನ್ನು ಸಮಾಧಾನ ಸ್ಥಿತಿಗೆ ತಂದುಕೊಂಡನು. ಬಹು ಕೆಳಕ್ಕೆ ಬಗ್ಗಿ ವಂದನೆ ಮಾಡಿ ಹೀಗೆಂದನು :

"ನಮ್ಮ ದಯಾಮಯ ಮಹಾಪ್ರಭುವನ್ನು ಅಲ್ಲಾ ಕಾಪಾಡಲಿ! ನನ್ನಂಥ ಅನರ್ಹನ ವಿಷಯದಲ್ಲಿ ಅಮೀರರು ತೋರುತ್ತಿರುವ ಅನುಗ್ರಹ ಅಪಾರವಾದ್ದು. ತಮ್ಮ ಪ್ರಜೆಗಳ ಮನಸ್ಸಿನಾಳದಲ್ಲಿ ಅಡಗಿರುವ ರಹಸ್ಯವಾದ ಅಭಿಲಾಷೆಗಳನ್ನು ಅರಿಯುವ ಶಕ್ತಿ ಮಹಾಪ್ರಭುಗಳಿಗೆ ಸ್ವಾಭಾವಿಕವಾಗಿದೆ. ಅವರು ತಮ್ಮ ನಿರಂತರವಾದ ಅನುಗ್ರಹಪರಂಪರೆಯಿಂದ ಅವರನ್ನು ಮುಗ್ಧರನ್ನಾಗಿ ಮಾಡಲು ಇದರಿಂದ ಅವಕಾಶವಾಗುತ್ತದೆ ಎಷ್ಟೋ ವೇಳೆ ಈ ಅಲ್ಪನಾದ ನಾನು ಆಸೆಪಟ್ಟಿದ್ದೇನೆ, ಈ ಸೋಮಾರಿ ದಡ್ಡನನ್ನು ತಳ್ಳಿಹಾಕಿ ಅವನ ಸ್ಥಾನಕ್ಕೆ ಬರಬೇಕೆಂದು. ತಾನಾಗಿಯೇ ತಂದುಕೊಂಡಿರುವ ನ್ಯಾಯವಾದ ಶಿಕ್ಷೆಯನ್ನನುಭವಿಸಿ ಗೋಳಾಡುತ್ತ ರತ್ನಗಂಬಳಿಯ ಮೇಲೆ ಹೊರಳುತ್ತಿರುವ ಇವನ ಸ್ಥಾನವನ್ನು ನಾನೆಷ್ಟೋ ವೇಳೆ ಬಯಸಿದ್ದುಂಟು. ಅಮೀರರಿಗೆ ಈ ವಿಷಯವನ್ನು ಅರಿಕೆ ಮಾಡಲು ಅಂಜಿ ಸುಮ್ಮನಿರುತ್ತಿದ್ದೆ. ಆದರೆ ಈಗ, ಘನಹೊಂದಿದ ಅಮೀರರೇ ಸ್ವತಃ ಹೇಳುತ್ತಿರುವಾಗ—"

"ಹಾಗಾದರೆ, ತಡವೇಕೆ?" ಎಂದು ಅಮೀರನು ನಡುವೆ ಬಾಯಿಹಾಕಿದನು. ಅವನಿಗೆ ಸಂತೋಷವಾಗಿತ್ತೆಂದು ವ್ಯಕ್ತವಾಯಿತು. "ನಾವು ವೈದ್ಯನನ್ನು ಕರೆಸುತ್ತೇವೆ. ಅವನು ತನ್ನ ಶಸ್ತ್ರಗಳನ್ನು ತರುತ್ತಾನೆ. ನೀನು ಅವನೊಡನೆ ಏಕಾಂತ ಸ್ಥಳಕ್ಕೆ ಹೋಗುವೆಯಂತೆ. ಇಷ್ಟರಲ್ಲಿ ಬಖ್ತಿಯಾರನ ಕೈಯಲ್ಲಿ ನಿನ್ನನ್ನು ನಮ್ಮ ಮುಖ್ಯ ವರ್ಷವರನ ಪದವಿಗೆ ನಿಯಮಿಸಿದ್ದಕ್ಕೆ ರಾಜಾಜ್ಞೆಯನ್ನು ಬರೆಸುತ್ತೇವೆ" ಎಂದನು. ಚಪ್ಪಾಳೆ ತಟ್ಟಿ, "ಹೇಯ್!" ಎಂದು ಕೂಗಿದನು.

ಖೋಜಾ ನಸ್ರೆದ್ದೀನ್ ಆತಂಕದಿಂದ ಬಾಗಿಲ ಕಡೆ ನೋಡುತ್ತ ಆತುರಾತುರವಾಗಿ ಹೀಗೆ ಅರಿಕೆ ಮಾಡಿದನು : "ನನ್ನ ಅಲ್ಪ ವಾಕ್ಯಗಳಿಗೆ ಮಹಾಸ್ವಾಮಿಯವರು ಕಿವಿಗೊಡಬೇಕು. ತಕ್ಷಣವೇ ಬಹು ಸಂತೋಷದಿಂದ ನಾನು ವೈದ್ಯನ ಸಂಗಡ ಏಕಾಂತ ಸ್ಥಳಕ್ಕೆ ಹೋಗಿಬಿಡುತ್ತಿದ್ದೆ. ಆದರೆ, ನಮ್ಮ ಮಹಾಸ್ವಾಮಿಯವರ ಕ್ಷೇಮಸಂಬಂಧವ ಆತಂಕವೊಂದು ಅದಕ್ಕೆ ಅಡ್ಡಿಯಾಗಿ ಬರುತ್ತಿದೆ. ಈ ಕಾರ್ಯವಾದ ಮೇಲೆ ನಾನು ಬಹು ಕಾಲ ಹಾಸಿಗೆಯಲ್ಲೇ

ಮಲಗಿ ಕಾಲ ಕಳೆಯಬೇಕಾಗುತ್ತದೆ. ಅಷ್ಟರೊಳಗೆ ಈ ಹೊಸ ಉಪಪತ್ನಿ ಸಾಯಬಹುದು ; ಅವಳ ಸಾವಿನಿಂದ ಅಮೀರರ ಹೃದಯ ದುಃಖದ ಕರಾಳ ವಾದ ಮಬ್ಬಿನಲ್ಲಿ ಮುಸುಕಿ ಕುಗ್ಗಿಹೋಗಬಹುದು. ಈ ಯೋಚನೆಯೇ ಸಹಿಸಲಸದಳವಾಗಿದೆ, ಈ ನಮ್ರ ಸೇವಕನಿಗೆ. ಆದ್ದರಿಂದ ನನ್ನದೊಂದು ಸಲಹೆ: ಮೊದಲು ಈ ಉಪಪತ್ನಿಯ ಕಾಯಿಲೆ ವಾಸಿಯಾಗಿ ಅವಳಿಗೆ ಆರೋಗ್ಯ ಬರಲಿ. ಆ ಮೇಲೆ ನಾನು ನನ್ನನ್ನು ವೈದ್ಯನ ವಶಕ್ಕೆ ಒಪ್ಪಿಸಿ ಕೊಳ್ಳುತ್ತೇನೆ. ಆ ಮೂಲಕ ಮುಖ್ಯ ವರ್ಷವರನ ಮಹಾ ಪದವಿಗೆ ಸಿದ್ಧ ನಾಗುತ್ತೇನೆ ”

ಅಮೀರನು ಅಪನಂಬಿಕೆಯಿಂದ ಖೋಜಾ ನಸ್ರೆದ್ದೀನನ ಕಡೆ ನೋಡುತ್ತ, “ ಹುಮ್ ! ” ಎಂದು ಗೊಣಗಿದನು.

“ ಮಹಾಪ್ರಭೂ ! ಅವಳು ಮೂರು ದಿನಗಳಿಂದಲೂ ಆಹಾರ ತೆಗೆದು ಕೊಂಡಿಲ್ಲ.”

“ ಹುಮ್ ! ” ಎಂದನು ಮತ್ತೆ ಅಮೀರ. ಆ ಮೇಲೆ ಅವನು ನೆಲದ ಮೇಲೆ ಹೊರಳಾಡುತ್ತಿದ್ದ ನಪುಂಸಕನ ಕಡೆಗೆ ತಿರುಗಿದನು : “ ಓ ನೀಚಾ ! ಹಾಳು ಜೇಡನ ಮರಿಯೇ ! ಉತ್ತರ ಕೊಡು : ನಮ್ಮ ಹೊಸ ಉಪಪತ್ನಿಗೆ ಬಹಳ ಕಾಯಿಲೆಯೆ ? ಅವಳ ಪ್ರಾಣಕ್ಕೆ ಭಯವೇನಾದರೂ ಉಂಟೆ ? ಹೇಳು ” ಎಂದನು.

ಉತ್ತರವನ್ನು ನಿರೀಕ್ಷಿಸುತ್ತಿದ್ದ ಖೋಜಾ ನಸ್ರೆದ್ದೀನನ ಬೆನ್ನ ಮೇಲೆ ಬೆವರ ಹನಿ ಜಾರಿತು.

ನಪುಂಸಕ ಹೇಳಿದನು :

“ ಓ ಪರಮ ಕರುಣಾಮೂರ್ತಿ ಮಹಾಪ್ರಭೂ ! ಪಾಡ್ಯದ ಚಂದ್ರನಂತೆ ಅವಳು ತೆಳ್ಳಗಾಗಿ ಕಳೆಗುಂದಿ ಹೋಗಿದ್ದಾಳೆ. ಅವಳ ಮುಖ ಮೇಣದ ಹಾಗಾಗಿದೆ ; ಅವಳ ಬೆರಳುಗಳು ತಣ್ಣಗಾಗಿವೆ. ಮುದುಕಿಯರು ಹೇಳುತ್ತಾರೆ, ಇವು ಬಹು ಅವಲಕ್ಷಣದ ಚಿಹ್ನೆಗಳೆಂದು....”

ಅಮೀರನು ಸ್ವಲ್ಪ ಹೊತ್ತು ಆಲೋಚಿಸುತ್ತ ಕುಳಿತನು. ಖೋಜಾ ನಸ್ರೆದ್ದೀನ್ ನೆರಳಿನ ಮರೆಗೆ ಸರಿದನು. ಶಯ್ಯಾಗೃಹದಲ್ಲಿ ಆವರಿಸಿದ್ದ ಹೊಗೆ ದುಂಬಿದ ಅರೆಗತ್ತಲೆಗೆ ಅವನು ಬಹು ಕೃತಜ್ಞನಾದನು ; ಅದು ಅವನ ಮುಖ

ಕಳೆಗುಂದಿ ಬೆಳ್ಳಗಾದ್ದನ್ನು ಅಮೀರನಿಗೆ ಕಾಣದಂತೆ ಮರೆ ಮಾಡಿತು.

"ಹೌದು, ಹೌದು!" ಎಂದನು ಅಮೀರ ಕಟ್ಟಕಡೆಗೆ. "ಸಂದರ್ಭ ಹೀಗಿರುವ ಪಕ್ಷದಲ್ಲಿ ಅವಳು ಸಾಯಲೇ ಬಹುದು. ಅದರಿಂದ ನಮಗೆ ತುಂಬ ದುಃಖವಾಗುತ್ತದೆ. ಆದರೆ, ಮೌಲಾನಾ ಹುಸೇನ್, ನಿನಗೆ ಧೈರ್ಯವಿದೆಯೇ? ನೀನವಳನ್ನು ಗುಣಪಡಿಸಬಲ್ಲೆಯಾ?" ಎಂದು ಕೇಳಿದನು.

"ಬಾಗ್ದಾದಿನಿಂದ ಬುಖಾರದ ವರೆಗೂ ನನ್ನನ್ನು ಮೀರಿಸಿದ ಚಾತುರ್ಯವುಳ್ಳ ವೈದ್ಯ ಬೇರೊಬ್ಬನೂ ಇಲ್ಲವೆಂದು ಮಹಾಪ್ರಭುಗಳಿಗೆ ವೇದ್ಯವೇ ಆಗಿದೆ."

"ಹೋಗು, ಮೌಲಾನಾ, ಅವಳಿಗೊಂದು ಕಷಾಯವನ್ನು ತಯಾರಿಸು."

"ಮಹಾಸ್ವಾಮಿ, ಮೊದಲು ಅವಳ ಕಾಯಿಲೆಯ ಸ್ವರೂಪವೇನೆಂದು ನಿರ್ಧರಿಸಬೇಕು. ಇದಕ್ಕೆ ಅವಳನ್ನು ನಾನು ಪರೀಕ್ಷೆ ಮಾಡಬೇಕು."

"ಪರೀಕ್ಷೆ ಮಾಡಬೇಕೆ?" ಎಂದು ಒಳಗೊಳಗೇ ನಕ್ಕನು ಅಮೀರ. "ನೀನು ಮುಖ್ಯ ವರ್ಜವರನಾದ ಮೇಲೆ, ಮೌಲಾನಾ ಹುಸೇನ್, ನಿನ್ನ ಇಷ್ಟ ಪೂರ್ತಿಯಾಗಿ ಪರೀಕ್ಷೆ ಮಾಡಬಹುದು."

ಖೋಜಾ ನಸ್ರೆದ್ದೀನ್ ನೆಲಕ್ಕೆ ಬಗ್ಗಿ ಅರಿಕೆ ಮಾಡಿದನು: "ಓ ಮಹಾ ಪ್ರಭೂ! ನಾನು ಪರೀಕ್ಷೆ ಮಾಡಲೇ ಬೇಕು—"

"ಕೆಲಸಕ್ಕೆ ಬಾರದ ಗುಲಾಮಾ! ನಮ್ಮ ಉಪಪತ್ನಿಯರ ಮುಖಗಳನ್ನು ಯಾವ ಮಾನವ ಪ್ರಾಣಿಯೂ ಕಾಣಲಾರನೆಂದೂ, ಕಂಡರೆ ಅವನಿಗೆ ಚಿತ್ರಹಿಂಸೆಯ ಸಾವು ಕಾದಿದೆಯೆಂದೂ ನಿನಗೆ ಗೊತ್ತಿಲ್ಲವೆ?" ಎಂದು ಅಬ್ಬರಿಸಿದನು ಅಮೀರ.

"ನನಗೆ ಗೊತ್ತು, ಮಹಾಪ್ರಭೂ!" ಎಂದು ಖೋಜಾ ನಸ್ರೆದ್ದೀನ್ ತಕ್ಷಣ ಮರುನುಡಿದನು. "ಆದರೆ, ನಾನು ಪರೀಕ್ಷಿಸಬೇಕೆಂದದ್ದು ಅವಳ ಮುಖವನ್ನಲ್ಲ. ಅವಳ ಮುಖದ ಕಡೆ ನಸುನೋಟ ಸುಳಿಸಲೂ ನಾನು ಸಾಹಸ ಮಾಡಲಾರೆ. ಅವಳ ಕೈ ನೋಡಿದರೆ ಸಾಕು, ನನಗೆ. ಏಕೆಂದರೆ, ನನ್ನ ವಿದ್ಯೆಯಲ್ಲಿ ನನಗಿರುವ ಚಾತುರ್ಯವೆಷ್ಟೆಂದರೆ, ಕೇವಲ ಉಗುರ ಬಣ್ಣವನ್ನು ಕಂಡ ಮಾತ್ರಕ್ಕೇ ಯಾವುದೇ ರೋಗವನ್ನಾದರೂ ಚೆನ್ನಾಗಿ ಗುರುತಿಸಬಲ್ಲೆ" ಎಂದನು.

"ಅವಳ ಕೈಗಳನ್ನೆ? ಮೊದಲೇ ಏಕೆ ಹೀಗೆ ಹೇಳಲಿಲ್ಲ? ಹೇಳದೆ ನನ್ನ

ಕೋಪವನ್ನು ಕೆರಳಿಸಿಬಿಟ್ಟಿಯಲ್ಲ? ಕೈಗಳನ್ನೆ? ಅದನ್ನೇನೋ ಮಾಡಬಹುದು. ನಿನ್ನ ಜೊತೆಯಲ್ಲಿ ನಾವೂ ಅಂತಃಪುರಕ್ಕೆ ಬರುತ್ತೇವೆ. ಹೆಂಗಸಿನ ಕೈಯನ್ನು ಬೇರೆಯವರು ನೋಡಿದ ಮಾತ್ರಕ್ಕೇ ಅದರಿಂದ ನಮ್ಮ ವಿಷಯದಲ್ಲಿ ದುರಭಿಪ್ರಾಯ ಮೂಡುವುದಿಲ್ಲವೆಂದು ನಂಬುತ್ತೇವೆ."

"ಅವಳ ಕೈಯನ್ನು ನೋಡಿದರೆ, ಅದರಿಂದ ಮಹಾಪ್ರಭುಗಳ ಬಗ್ಗೆ ಯಾವ ಬಗೆಯ ದುರಭಿಪ್ರಾಯವೂ ಮೂಡಲಾರದು" ಎಂದು ಖೋಜಾ ನಸ್ರೆದ್ದೀನ್ ಉತ್ತರ ಕೊಟ್ಟನು. ಅವನು ಮನಸ್ಸಿನಲ್ಲಿ ಸಿದ್ಧಾಂತ ಮಾಡಿಕೊಂಡಿದ್ದನು: ತಾನೊಬ್ಬನೇ ಒಂಟಿಯಾಗಿ ಗುಲ್ಜಾನನ್ನು ನೋಡಲು ಸಾಧ್ಯವಿಲ್ಲವಾದ್ದರಿಂದಲೂ, ಜೊತೆಯಲ್ಲಿ ಸಾಕ್ಷಿಯೊಬ್ಬನಿರಬೇಕಾದ್ದು ಆವಶ್ಯಕವಾದ್ದರಿಂದಲೂ, ಆ ಸಾಕ್ಷಿ ಬೇರೆ ಯಾರೂ ಆಗಿರದೆ ಸ್ವತಃ ಅಮೀರನೇ ಆಗಿರುವುದು ಸರ್ವೋತ್ಕೃಷ್ಟವೆಂದು ಅವನು ನಿರ್ಧರಿಸಿದ್ದನು. ಸ್ವತಃ ಅಮೀರನೇ ಜೊತೆಯಲ್ಲಿ ಬಂದರೆ ಅವನ ಮನಸ್ಸಿನಲ್ಲಿ ಯಾವ ಸಂಶಯವೂ ಉಳಿಯದೆ ತನ್ನ ಕಾರ್ಯ ಸುಗಮವಾಗುವುದೆಂದು ಅವನೆಣಿಕೆ.

೩

ಎಷ್ಟೋ ದಿನಗಳ ವರೆಗೆ ವ್ಯರ್ಥವಾಗಿ ಸಾಹಸಪಟ್ಟು ಕಾಯುತ್ತಿದ್ದ ಮೇಲೆ, ಕಟ್ಟಕಡೆಗೆ ಒಂದು ದಿನ ಅಂತಃಪುರದ ಬಾಗಿಲು ಖೋಜಾ ನಸ್ರೆದ್ದೀನನ ಎದುರು ತೆರೆದು ನಿಂತಿತು. ಕಾವಲುಗಾರರು ಕೆಳಕ್ಕೆ ಬಗ್ಗಿ ನಮಸ್ಕರಿಸಿ ಪಕ್ಕಕ್ಕೆ ಸರಿದರು. ಖೋಜಾ ನಸ್ರೆದ್ದೀನನು ಅಮೀರನನ್ನು ಹಿಂಬಾಲಿಸಿ ಹೋದನು. ಕಲ್ಲಿನ ಮೆಟ್ಟಿಲುಸಾಲನ್ನು ಹತ್ತಿ, ಪಕ್ಕದ ಒಂದು ಸಣ್ಣ ಬಾಗಿಲಿನಿಂದ ಒಂದು ಸುಂದರವಾದ ಉದ್ಯಾನವನ್ನು ಪ್ರವೇಶಿಸಿದರು. ಇಲ್ಲಿ ಗುಲಾಬಿ, ಸ್ಟಾರ್ ಹೂವು, ಹಯಸಿಂತ್ ಹೂವುಗಳ ಪಾತಿಗಳ ನಡುನಡುವೆ ಬಿಳಿಯ ಮತ್ತು ಕರಿಯ ಅಮೃತಶಿಲೆಯ ತಳಗಟ್ಟೆಗಳಲ್ಲಿ ಚಿಲುಮೆಗಳು ಚಿಮ್ಮುತ್ತಿದ್ದವು. ಚಿಲುಮೆಗಳ ಮೇಲುಗಡೆ ತೆಳ್ಳನೆಯ ಆವಿ ಹರಡಿತ್ತು. ಹೂವುಗಳ ಮೇಲೂ ಹುಲ್ಲುಗರಿಗಳ ಮೇಲೂ ಬೆಳಗಿನ ಮಂಜುಹನಿ ಮಣಿಮಣಿಯಾಗಿ ಹೊಳೆಯುತ್ತಿತ್ತು.

ಖೋಜಾ ನಸ್ರೆದ್ದೀನನ ಮುಖವರ್ಣ ಬರುತ್ತಿತ್ತು, ಹೋಗುತ್ತಿತ್ತು.

ನಪುಂಸಕರು ವಾಲ್ನಟ್ ಮರದ ಬಾಗಿಲುಗಳನ್ನು ತೆರೆದು ಹಾರ ಹೊಡೆದರು. ಪನ್ನಂಬರ, ಕಸ್ತೂರಿ, ಗುಲಾಬಿ ಅತ್ತರು—ಇವುಗಳ ಪರಿಮಳ ನೆರಳು ತುಂಬಿದ ಒಳ ಭಾಗದಿಂದ ಗಾಳಿಯಲ್ಲಿ ತೇಲಿ ಬಂತು. ಇದೇ ಅಂತಃಪುರ—ಅಮೀರನ ಸುಂದರ ಸೆರೆಯಾಳುಗಳ ದುಃಖಪೂರ್ಣ ವಾಸಸ್ಥಾನ.

ಖೋಜಾ ನಸ್ರೆದ್ದೀನ್ ಮೂಲೆಗಳು, ನಡುವೆಗಳು, ತಿರುವುಗಳು—ಇವನ್ನೆಲ್ಲಾ ಒಂದನ್ನೂ ಬಿಡದಂತೆ ಬಹು ಎಚ್ಚರಿಕೆಯಿಂದ ಗಮನಿಸುತ್ತಿದ್ದನು. ನಿರ್ಣಾಯಕ ಸಮಯ ಬಂದಾಗ ಯಾವುದೊಂದನ್ನೂ ಮರೆಯದಂತೆ, ಮರೆತು ತನಗೂ ಗುಲ್ಜಾನಿಗೂ ವಿನಾಶವನ್ನು ತಂದುಕೊಳ್ಳದಂತೆ ಮನಸ್ಸಿನಲ್ಲೆ ಎಲ್ಲವನ್ನೂ ಚೆನ್ನಾಗಿ ಸ್ಥಾಪಿಸಿಕೊಳ್ಳುತ್ತಿದ್ದನು.

ತನ್ನಲ್ಲೇ ಹೀಗೆಂದುಕೊಳ್ಳುತ್ತಿದ್ದನು : "ಬಲಕ್ಕೆ, ಆ ಮೇಲೆ ಎಡಕ್ಕೆ, ಇಲ್ಲೊಂದು ಮೆಟ್ಟಲ ಸಾಲು, ಒಬ್ಬ ಮುದುಕಿಯ ಕಾವಲು. ಈಗ ಮತ್ತೆ ಬಲಕ್ಕೆ...."

ನಡುವೆಗಳಲ್ಲಿ ಬೆಳಕು ಸಮರ್ಪಕವಾಗಿರಲಿಲ್ಲ. ನೀಲಿ, ಹಸುರು ಮತ್ತು ಪಾಟಲ ವರ್ಣದ ದೀಪಗಳ ಪ್ರಭೆ ಅಲ್ಲಿ ಹರಡಿತ್ತು; ಬಣ್ಣದ ಚೀನಾ ಗಾಜಿನ ಮೂಲಕ ತೂರಿ ಬಂದು ಬೆಳಕು ಬಣ್ಣ ತಾಳಿತ್ತು. ನಪುಂಸಕರು ಒಂದು ತಗ್ಗು ಬಾಗಿಲಿನ ಮುಂದೆ ನಿಂತುಕೊಂಡರು.

"ಅವಳಿಲ್ಲಿದ್ದಾಳೆ, ಓ ಪ್ರಭೂ."

ಖೋಜಾ ನಸ್ರೆದ್ದೀನ್ ಅಮೀರನ ಹಿಂದೆಯೇ ತನ್ನ ವಿಧಿಯನ್ನು ನಿರ್ಣಯಿಸುವ ಆ ಹೊಸಿಲನ್ನು ದಾಟಿದನು.

ಕೋಣೆ ಚಿಕ್ಕದು. ಅದರ ಗೋಡೆಗಳಿಗೂ ನೆಲಕ್ಕೂ ರತ್ನಗಂಬಳಿಗಳನ್ನು ಹಾಸಿತ್ತು. ಗೂಡುಗಳಲ್ಲಿ ಮುತ್ತಿನ ಚಿಪ್ಪಿನ ಪೆಟ್ಟಿಗೆಗಳಿದ್ದವು; ಅವುಗಳಲ್ಲಿ ಕೈಕಡಗಗಳೂ, ಓಲೆಗಳೂ, ಹಾರಗಳೂ ತುಂಬಿದ್ದವು. ಗೋಡೆಯ ಮೇಲೆ ದೊಡ್ಡದೊಂದು ಬೆಳ್ಳಿಕಟ್ಟಿನ ಕನ್ನಡಿ ಹಾಕಿತ್ತು. ಬಡ ಗುಲ್ಜಾನ್ ಅಂಥ ಸಂಪತ್ತನ್ನು ಕನಸಿನಲ್ಲಿಯೂ ಕಂಡಿರಲಿಲ್ಲ! ಅವಳ ಪುಟ್ಟ ಸ್ಲಿಪ್ಪರ್‌ಗಳನ್ನು—ಮುತ್ತಿನಿಂದ ನಕಾಸೆಕೆಲಸ ಮಾಡಿದ ಸ್ಲಿಪ್ಪರ್‌ಗಳನ್ನು—ಕಂಡ ಕೂಡಲೆ ಖೋಜಾ ನಸ್ರೆದ್ದೀನ್ ನಡುಗಿದನು. ತನ್ನ ಹೃದಯದಲ್ಲಿ ಹೊಮ್ಮುತ್ತಿದ್ದ ಭಾವಗಳನ್ನು ಅದುಮಿಕೊಳ್ಳಲು ಅವನು ಬಹಳ ಸಾಹಸ ಮಾಡುತ್ತಿದ್ದನು.

ಕೋಣೆಯ ಒಂದು ಮೂಲೆಯಲ್ಲಿ ಇಳಿಯಬಿಟ್ಟಿದ್ದ ಒಂದು ರೇಷ್ಮೆ ತೆರೆಯ ಕಡೆ ನಪುಂಸಕ ಕೈ ತೋರಿಸಿದನು. ಗುಲ್ಜಾನ್ ಅಲ್ಲಿ ಮಲಗಿದ್ದಳು.

"ಅವಳು ನಿದ್ದೆ ಮಾಡುತ್ತಿದ್ದಾಳೆ" ಎಂದು ಪಿಸುಗುಟ್ಟಿದನು ಆ ನಪುಂಸಕ.

ಖೋಜಾ ನಸ್ರೆದ್ದೀನನ ಮೈಯಲ್ಲೆಲ್ಲಾ ಒಂದು ಬಗೆಯ ಕಂಪನ ಹರಿಯಿತು. ಅವನ ಪ್ರೇಯಸಿ ತೀರ ಹತ್ತಿರದಲ್ಲೇ ಇದ್ದಳು. "ಮನಸ್ಸು ಕಲ್ಲು ಮಾಡಿಕೊ. ತಾಳಿಕೊ, ಖೋಜಾ ನಸ್ರೆದ್ದೀನ್!" ಎಂದು ತನಗೆ ತಾನೇ ಎಚ್ಚರಿಕೆ ಹೇಳಿಕೊಂಡನು.

ತೆರೆಯ ಬಳಿ ಹೋದಾಗ, ಹೋಗಿ ನಿದ್ರಿಸುತ್ತಿದ್ದ ಗುಲ್ಜಾನಿನ ಉಸಿರ ಏರಿಳಿತಗಳನ್ನು ಕೇಳಿದಾಗ, ಮಂಚದ ತಲೆಯ ಕಡೆ ರೇಷ್ಮೆ ಬಟ್ಟೆಯಲ್ಲಿ ಏಳುವ ತೆರೆಗಳನ್ನು ಕಂಡಾಗ ಅವನ ಗಂಟಲು ಕಟ್ಟಿತು; ಉಕ್ಕಿನ ಹಿಡಿಯಿಂದ ಅಮುಕಿದರೆ ಹೇಗೋ ಹಾಗೆ ಆಯಿತು. ಅಶ್ರುಗಳು ಕಣ್ಣಿಗೆ ಚಿಗಿದು ಬಂದವು; ಉಸಿರು ಕಟ್ಟಿತು.

"ಅದೇಕಿಷ್ಟು ನಿದಾನ ಮಾಡುತ್ತೀಯೆ, ಮೌಲಾನಾ ಹುಸೇನ್?" ಎಂದು ಕೇಳಿದನು ಅಮೀರ.

"ಮಹಾಪ್ರಭೂ, ಅವಳ ಉಸಿರಾಟವನ್ನು ಕೇಳುತ್ತಿದ್ದೇನೆ. ಈ ತೆರೆಯ ಮೂಲಕ ಆಕೆಯ ಹೃದಯದ ಬಡಿತವನ್ನು ತಿಳಿದುಕೊಳ್ಳಲು ಯತ್ನಿಸುತ್ತಿದ್ದೇನೆ. ಅವಳ ಹೆಸರೇನು?"

"ಅವಳ ಹೆಸರು ಗುಲ್ಜಾನ್" ಎಂದನು ಅಮೀರ.

"ಗುಲ್ಜಾನ್!" ಎಂದು ಬಹು ಮೃದುವಾಗಿ ಕರೆದನು ಖೋಜಾ ನಸ್ರೆದ್ದೀನ್.

ಮಂಚದ ತಲೆಯ ಕಡೆ ತಾಳಬದ್ಧವಾಗಿ ಏರಿಳಿಯುತ್ತಿದ್ದ ತೆರೆಯ ಚಲನೆ ತಟ್ಟನೆ ನಿಂತಿತು. ಗುಲ್ಜಾನ್ ಎಚ್ಚತ್ತು ಅಳ್ಳಾಡದೆ ಮಲಗಿದ್ದಳು. ತನ್ನ ಪ್ರಿಯನ ಕಂಠಸ್ವರವನ್ನು ಕನಸಿನಲ್ಲಿ ಕೇಳುತ್ತಿರುವಳೋ ಅಥವಾ ಹಾಗೆ ಕೇಳುತ್ತಿರುವುದು ನಿಜವೇಯೋ ಎಂದು ನಿರ್ಧರಿಸಲಾರದೆ ಸುಮ್ಮನೆ ಮಲಗಿದ್ದಳು.

"ಗುಲ್ಜಾನ್!" ಎಂದು ಮತ್ತೆ ಕರೆದನು ಖೋಜಾ ನಸ್ರೆದ್ದೀನ್. ಅವಳು ಬಹು ಮೆಲ್ಲಗೆ ಕೂಗಿದಳು. ಅವನು ಅವಸರವಾಗಿ ಹೇಳತೊಡಗಿದನು:

" ನನ್ನ ಹೆಸರು ಮೌಲಾನಾ ಹುಸೇನ್. ನಾನು ಬಾಗ್ದಾದ್ ಪಟ್ಟಣದಿಂದ ಬಂದು ಅಮೀರರ ಸೇವೆಯಲ್ಲಿ ಸೇರಿರುವ ಹೊಸ ಜ್ಞಾನಿ, ಜ್ಯೋತಿಷಿ ಮತ್ತು ವೈದ್ಯ. ತಿಳಿಯಿತೇ, ಗುಲ್ಜಾನ್. ನಾನು ಹೊಸ ಜ್ಞಾನಿ, ಜ್ಯೋತಿಷಿ ಮತ್ತು ವೈದ್ಯ. ನನ್ನ ಹೆಸರು ಮೌಲಾನಾ ಹುಸೇನ್."

ಅಮೀರನ ಕಡೆ ತಿರುಗಿ, ಖೋಜಾ ನಸ್ರೆದ್ದೀನನು ಹೇಳಿದನು :

" ಅದೇಕೋ ಕಾಣೆ, ನನ್ನ ದನಿ ಕೇಳಿ ಅವಳು ಹೆದರಿದ್ದಾಳು. ಬಹುಶಃ ಮಹಾಸ್ವಾಮಿಯವರು ಇಲ್ಲದಿರುವಾಗ ಈ ನಪುಂಸಕನು ಇವಳ ವಿಷಯದಲ್ಲಿ ನಿರ್ದಯವಾಗಿ ವರ್ತಿಸಿದ್ದನೋ ಏನೋ ? "

ಅಮೀರನು ನಪುಂಸಕನ ಕಡೆಗೆ ದುರುಗುಟ್ಟಿ ನೋಡಿದನು. ಅವನು ನಡುಗಿ ನೆಲಕ್ಕೆ ಬಗ್ಗಿದನು. ತನ್ನ ನಡತೆ ಸರಿಯೆಂದು ಸಮರ್ಥನೆ ಮಾಡಿಕೊಳ್ಳುವುದಕ್ಕೆ ಮಾತೆತ್ತದೆಯೇ ಸುಮ್ಮನಿದ್ದನು.

ಖೋಜಾ ನಸ್ರೆದ್ದೀನ್, " ಗುಲ್ಜಾನ್, ನಿನಗೆ ಅಪಾಯದ ಭೀತಿಯಿದೆ. ಆದರೆ ನಾನು ನಿನ್ನನ್ನು ಕಾಪಾಡುತ್ತೇನೆ. ನೀನು ನನ್ನನ್ನು ನಂಬಬೇಕು. ಏಕೆಂದರೆ, ನನ್ನ ವಿದ್ಯೆ ಎಲ್ಲವನ್ನೂ ಗೆಲ್ಲಬಲ್ಲದು " ಎಂದನು.

" ಮೌಲಾನಾ ಹುಸೇನರೇ, ಬಾಗ್ದಾದಿನ ಜ್ಞಾನಿಗಳೇ, ನಿಮ್ಮ ಮಾತನ್ನು ಕೇಳಿದೆ. ನಿಮ್ಮಲ್ಲಿ ನನಗೆ ನಂಬಿಕೆಯಿದೆ. ಈ ಮಾತನ್ನು ಮಹಾಸ್ವಾಮಿಗಳ ಎದುರಿಗೇ ಹೇಳುತ್ತೇನೆ; ಅವರ ಪಾದಗಳು ನನ್ನ ಈ ತೆರೆಗಳ ಸಂದಿಗಳಿಂದ ನನಗೆ ಕಾಣಿಸುತ್ತಿವೆ."

ಅಮೀರನ ಎದುರಿಗೆ ತಾನು ಬಹು ಗಂಭೀರವಾಗಿ ಪಂಡಿತನಂತೆ ವರ್ತಿಸುವುದು ತೀರಾ ಅಗತ್ಯವೆಂದು ನೆನಪಿನಲ್ಲಿಟ್ಟುಕೊಂಡು ಖೋಜಾ ನಸ್ರೆದ್ದೀನ್ ಗಡಸು ದನಿಯಿಂದ ನುಡಿದನು :

" ನಿನ್ನ ಕೈಯನ್ನಿಲ್ಲಿ ಕೊಡು. ನಿನ್ನ ಕಾಯಿಲೆಗೆ ಕಾರಣವೇನೆಂಬುದನ್ನು ನಿನ್ನ ಬೆರಳುಗುರಿನ ಬಣ್ಣದಿಂದ ಗೊತ್ತುಮಾಡಬೇಕಾಗಿದೆ."

ರೇಷ್ಮೆಯ ತೆರೆ ಅಲೆಯೆದ್ದು ಭಾಗವಾಯಿತು. ಗುಲ್ಜಾನಿನ ತೆಳ್ಳನೆಯ ಪುಟ್ಟ ಕೈ ಹೊರಬಂತು. ಖೋಜಾ ನಸ್ರೆದ್ದೀನ್ ಆ ಕೈಯನ್ನು ಮೃದುವಾಗಿ ಹಿಡಿದುಕೊಂಡನು. ಕೈಮೇಲೆ ಅಮುಕುವ ಒತ್ತಡದಿಂದ ಮಾತ್ರವೇ ಅವನು ತನ್ನ ಮನಸ್ಸಿನ ಭಾವವನ್ನು ತಿಳಿಸಬಹುದಾಗಿತ್ತು. ಅವಳಿಕ್ಕುತ್ತರವಾಗಿ

ಗುಲ್ಜಾನ್ ಸ್ವಲ್ಪವೇ ಸ್ವಲ್ಪ ಒಕ್ತಿದಳು. ಅವಳ ಕೈಯನ್ನು ಮುಗುಚಿ ನೋಡಿದನು. ಸ್ವಲ್ಪ ಹೆಚ್ಚು ಹೊತ್ತಿನ ವರೆಗೂ ಅಂಗೈಯನ್ನು ಗಮನಿಸಿ ನೋಡುತ್ತಿದ್ದನು. "ಎಷ್ಟು ಬಡವಾಗಿಬಿಟ್ಟಿದ್ದಾಳೆ!" ಎಂದು ತನ್ನ ಮನಸ್ಸಿನಲ್ಲೇ ಯೋಚಿಸಿಕೊಂಡನು. ಅದನ್ನು ಭಾವಿಸಿ ತುಂಬ ಸಂಕಟವಾಯಿತು. ಅಮೀರನು ಅವನ ಭುಜದ ಮೇಲೆ ಬಗ್ಗಿ ನೋಡುತ್ತಿದ್ದನು; ಅಮೀರನ ಬಿಸಿಯುಸಿರು ಅವನ ಕಿವಿಗೆ ತುಂಬುತ್ತಿತ್ತು. ಖೋಜಾ ನಸ್ರೆದ್ದೀನನು ಗುಲ್ಜಾನಿನ ಕಿರುಬೆರಳ ಉಗುರನ್ನು ಅಮೀರನಿಗೆ ತೋರಿಸಿ ಅಪಾಯಸೂಚನೆಯಾಗಿ ತಲೆ ಅಳ್ಳಾಡಿಸಿದನು. ಈ ಉಗುರು ಇತರ ಉಗುರುಗಳ ಹಾಗೆಯೇ ಇದ್ದಿತಾದರೂ, ಅದರಲ್ಲೇನೋ ಅವಲಕ್ಷಣ ಅಡಗಿರುವಂತೆ ಅಮೀರನಿಗೆ ಭಾಸವಾಯಿತು; ಆತಂಕದೃಷ್ಟಿಯಿಂದ ಖೋಜಾ ನಸ್ರೆದ್ದೀನನ ಮುಖ ನೋಡಿದನು.

"ಎಲ್ಲಿ ನೋಯುತ್ತದೆ, ನಿನಗೆ?" ಎಂದು ಖೋಜಾ ನಸ್ರೆದ್ದೀನ್ ಕೇಳಿದನು.

"ನನ್ನ ನೋವಿರುವುದು ಹೃದಯದಲ್ಲಿ. ನನ್ನ ಹೃದಯ ದುಃಖದಿಂದಲೂ ನಿರೀಕ್ಷಣೆಯಿಂದಲೂ ಬಹಳ ನೋಯುತ್ತಿದೆ" ಎಂದು ಗುಲ್ಜಾನ್ ನಿಟ್ಟುಸಿರು ಬಿಡುತ್ತಾ ಉತ್ತರ ಕೊಟ್ಟಳು.

"ನಿನ್ನ ದುಃಖದ ಕಾರಣವೇನು?"

"ನಾನು ಯಾರನ್ನು ಪ್ರೀತಿಸುತ್ತೇನೋ ಆತನಿಂದ ನಾನು ಅಗಲಿಬಿಟ್ಟಿದ್ದೇನೆ."

ಖೋಜಾ ನಸ್ರೆದ್ದೀನ್ ಅಮೀರನ ಕಿವಿಯಲ್ಲಿ ಪಿಸುಗುಟ್ಟಿದನು:

"ಮಹಾಪ್ರಭುಗಳಿಂದ ಅಗಲಿಸಿರುವುದರಿಂದ ಅವಳು ಅಸ್ವಸ್ಥಳಾಗಿದ್ದಾಳೆ."

ಅಮೀರನ ಮುಖ ಸಂತೋಷದಿಂದ ಕಳೆದುಂಬಿತು. ಇನ್ನೂ ಬಿರುಸಾಗಿ ಉಸಿರು ಬಿಡತೊಡಗಿದನು.

"ನನ್ನ ಪ್ರಿಯನಿಂದ ನನ್ನನ್ನು ಅಗಲಿಸಿದ್ದಾರೆ" ಎಂದು ಗುಲ್ಜಾನ್ ಮುಂದುವರಿಸಿದಳು. "ಈಗ ನನ್ನ ಆ ಪ್ರಿಯನು ಇಲ್ಲೇ ನನ್ನ ಸಮೀಪದಲ್ಲೇ ಇರುವಂತೆ ನನಗೆ ಭಾಸವಾಗುತ್ತಿದೆ; ಆದರೆ ಅವನನ್ನು ನಾನು ಅಪ್ಪಿಕೊಳ್ಳಲಾಗಲಿ ಅವನಿಗೆ ಮುತ್ತಿಡಲಾಗಲಿ ಅವಕಾಶವಿಲ್ಲವಾಗಿದೆ. ಓ, ಆ ದಿನ

ಎಂದು ಬಂದೀತೋ? ನನ್ನನ್ನವನು ತಬ್ಬಿ ಎದೆಗೊತ್ತಿಕೊಳ್ಳುವ ಆ ಸುದಿನ ಎಂದು ಬಂದೀತೋ?"

ಅತ್ಯಂತ ಆಶ್ಚರ್ಯವನ್ನು ನಟಿಸುತ್ತಾ ಖೋಜಾ ನಸ್ರೆದ್ದೀನ್, "ಸರ್ವ ಶಕ್ತ ಅಲ್ಲಾ! ಎಷ್ಟು ಅಲ್ಪಕಾಲದಲ್ಲಿ ನನ್ನು ಮಹಾಪ್ರಭುಗಳು ಇವಳಲ್ಲಿ ಎಷ್ಟು ಮಟ್ಟಿನ ಗಾಢಾನುರಾಗವನ್ನು ಉದ್ರೇಕಿಸಿಬಿಟ್ಟಿದ್ದಾರೆ!" ಎಂದು ನುಡಿದನು.

ಅಮೀರನು ಆನಂದದಿಂದ ಪರವಶನಾಗಿಬಿಟ್ಟನು. ಶಾಂತವಾಗಿ ನಿಲ್ಲಲು ಅವನಿಗೆ ಸಾಧ್ಯವಾಗಲಿಲ್ಲ; ಅತ್ತ ಇತ್ತ ಚಲಿಸಿ ಚಡಪಡಿಸತೊಡಗಿದನು; ಹೆಡ್ಡನಂತೆ ಕಿಲಕಿಲಗುಟ್ಟಿ ನಗುತ್ತಿದ್ದನು.

ಖೋಜಾ ನಸ್ರೆದ್ದೀನ್ ನುಡಿದನು: "ಗುಲ್ಜಾನ್! ಸಮಾಧಾನ ವಾಗಿರು. ಯಾರನ್ನು ನೀನು ಪ್ರೀತಿಸುತ್ತಿದ್ದೀಯೋ ಆತ ನಿನ್ನ ಮಾತು ಕೇಳು ತ್ತಿದ್ದಾನೆ!"

"ಹೌದು, ಹೌದು!" ಎಂದು ಅಮೀರನು ನಡುವೆ ಬಾಯಿ ಹಾಕಿದನು. ಅವನಿಗೆ ಇನ್ನು ತಡೆಯಲಾಗಲಿಲ್ಲ. "ಹೌದು, ಅವನು ನಿನ್ನ ನುಡಿ ಕೇಳು ತ್ತಿದ್ದಾನೆ, ಗುಲ್ಜಾನ್! ನಿನ್ನ ಪ್ರಿಯನು ನಿನ್ನ ಮಾತು ಕೇಳುತ್ತಿದ್ದಾನೆ!" ಎಂದನು.

ನೀರಿನ ಜುಳುಜುಳು ಸದ್ದಿನಂತೆ ಮಂಜುಳ ನಾದದ ತಿಳಿನಗೆಯ ದನಿ ತೆರೆಯ ಹಿಂದಿನಿಂದ ಕೇಳಬಂತು. ಖೋಜಾ ನಸ್ರೆದ್ದೀನ್ ಮುಂದುವರಿಸಿದನು:

"ಗುಲ್ಜಾನ್! ನಿನಗೆ ಅಪಾಯದ ಭಯವಿದೆ. ಆದರೆ, ಹೆದರಬೇಡ. ನಾನು, ಮಹಾ ಪ್ರಖ್ಯಾತ ಜ್ಞಾನಿ, ಜ್ಯೋತಿಷಿ ಮತ್ತು ವೈದ್ಯ, ಮೌಲಾನಾ ಹುಸೇನ್ ನಿನ್ನನ್ನು ಕಾಪಾಡುತ್ತೇನೆ."

ಆನಂದಪರವಶನಾದ ಅಮೀರನು, "ಅವನು ನಿನ್ನನ್ನು ಕಾಪಾಡು ತ್ತಾನೆ! ತಪ್ಪದೆ ಕಾಪಾಡುತ್ತಾನೆ!" ಎಂದು ಆ ಮಾತುಗಳನ್ನು ಪ್ರತಿಧ್ವನಿಸಿ ನುಡಿದನು.

"ಮಹಾಸ್ವಾಮಿಗಳು ಹೇಳುವುದನ್ನು ಕೇಳಿದೆಯೊ?" ಎಂದು ಖೋಜಾ ನಸ್ರೆದ್ದೀನ್ ತನ್ನ ಮಾತನ್ನು ಮುಂದುವರಿಸಿದನು. "ನೀನು ನನ್ನಲ್ಲಿ ನಂಬಿಕೆಯಿಡಬೇಕು. ನಿನ್ನನ್ನು ನಾನು ಅಪಾಯದಿಂದ ಪಾರುಮಾಡುತ್ತೇನೆ. ನಿನ್ನ ಸುಖದ ದಿನ ಹತ್ತಿರ ಬರುತ್ತಿದೆ. ಸದ್ಯಕ್ಕೆ ಮಹಾಸ್ವಾಮಿಯವರು ನಿನ್ನ

ಬಳಿ ಬರಲಾರರು ; ಏಕೆಂದರೆ, ನಾನು ಅವರಿಗೆ ಎಚ್ಚರಿಕೆ ಕೊಟ್ಟಿದ್ದೇನೆ—ಅವರು ಸ್ತ್ರೀಯ ಮುಖಪರದೆಯನ್ನು ಮುಟ್ಟಕೂಡದೆಂದು ನಕ್ಷತ್ರಗಳು ನಿಷೇಧಿಸುತ್ತಿವೆಯೆಂದು. ಆದರೆ ನಕ್ಷತ್ರಗಳ ಸ್ಥಾನ ಬದಲಾಯಿಸುತ್ತಿದೆ. ಅರ್ಥವಾಯಿತೆ, ಗುಲ್ಜಾನ್ ? ಬಹು ಬೇಗನೆ ಅವು ಅನುಕೂಲಸ್ಥಾನಕ್ಕೆ ಬರುತ್ತವೆ. ಆಗ ನಿನ್ನ ಪ್ರಿಯನನ್ನು ಅಪ್ಪುವೆ. ಯಾವ ದಿನ ನಿನಗೆ ನಾನೊಂದು ಕಷಾಯವನ್ನು ಕಳಿಸುತ್ತೇನೋ ಆ ದಿನದ ಮಾರನೆಯ ದಿನ ನಿನ್ನ ಸುಖಸಾಧನೆಯಾಗುತ್ತದೆ. ತಿಳಿಯಿತೇ, ಗುಲ್ಜಾನ್ ? ಕಷಾಯವನ್ನು ತೆಗೆದುಕೊಂಡ ಮೇಲೆ ನೀನು ಸಿದ್ಧವಾಗಿರಬೇಕು. ಗೊತ್ತಾಯಿತೊ ? "

" ಉಪಕಾರವಾಯಿತು, ತಮ್ಮಿಂದ ತುಂಬ ಉಪಕಾರವಾಯಿತು, ಮೌಲಾನಾ ಹುಸೇನ್ ! ಅಸದೃಶ ಚಿಕಿತ್ಸಾ ಚಾತುರ್ಯವುಳ್ಳ ಜ್ಞಾನಿಗಳೇ, ನಿಮಗೆ ನಮಸ್ಕಾರ ! ನನ್ನ ಪ್ರಿಯನು ಇಲ್ಲೇ ಸಮೀಪದಲ್ಲಿದ್ದಾನೆ ! ನಮ್ಮ ಹೃದಯಗಳು ಐಕ್ಯಭಾವದಿಂದ ತುಡಿಯುತ್ತಿವೆಯೆಂದು ನನಗನ್ನಿಸುತ್ತಿದೆ ! ಈ ಉಪಕಾರಕ್ಕಾಗಿ ನಿಮಗೆ ನನ್ನ ವಂದನೆಗಳು ! " ಎಂದಳು ಗುಲ್ಜಾನ್. ಆನಂದದಿಂದ ಅವಳು ಒಮ್ಮೆ ನಗುತ್ತಲೂ ಒಮ್ಮೆ ಅಳುತ್ತಲೂ ಇದ್ದಳು.

ಅಮೀರನೂ ಖೋಜಾ ನಸ್ರೆದ್ದೀನನೂ ಹೊರಕ್ಕೆ ನಡೆದರು. ಅವರು ಪಕ್ಕ ಬಾಗಿಲ ಬಳಿ ಹೋಗುವಷ್ಟರಲ್ಲಿ ಪ್ರಧಾನ ವರ್ಷವರನು ಹಿಂದಿನಿಂದ ಓಡಿ ಬಂದನು.

" ಓ, ಮಹಾಸ್ವಾಮೀ ! " ಎಂದು ಅವನು ಅಮೀರನ ಮುಂದೆ ಮಂಡಿಯೂರಿ ನಮಸ್ಕರಿಸಿದನು. " ಪ್ರಪಂಚದಲ್ಲೆಲ್ಲೂ ಇದುವರೆಗೆ ಇಂಥ ಚತುರ ವೈದ್ಯನನ್ನು ಕಂಡಿಲ್ಲ, ಕೇಳಿಲ್ಲ ! ಮೂರು ದಿನದಿಂದಲೂ ಅವಳು ಒಂದು ಸಲವೂ ಅತ್ತಿತ್ತ ಚಲಿಸದೆ ಕೊರಡಿನಂತೆ ಬಿದ್ದಿದ್ದಳು. ಅಂಥವಳು ಈಗ ಇದ್ದಕ್ಕಿದ್ದಂತೆ ಮಂಚದಿಂದಿಳಿದಳು. ಅವಳು ಹಾಡುತ್ತಾಳೆ, ನಗುತ್ತಾಳೆ, ನರ್ತಿಸುತ್ತಾಳೆ ; ನಾನು ಹತ್ತಿರ ಹೋದಾಗ ಕಿವಿ ಕೂಡ ಹಿಂಡಿಬಿಟ್ಟಳು ! " ಎಂದನು.

" ಅದೀಗ ನನ್ನ ಗುಲ್ಜಾನಿನ ರೀತಿ ! ಯಾವಾಗಲೂ ಅವಳ ಕೈ ಬಹಳ ಚುರುಕು ! " ಎಂದುಕೊಂಡನು ಖೋಜಾ ನಸ್ರೆದ್ದೀನ್.

ಹೊತ್ತರೂಟದ ಸಂದರ್ಭದಲ್ಲಿ ಅಮೀರನು ಆಸ್ಥಾನಿಕರಿಗೆಲ್ಲಾ ಅನೇಕ ಬಗೆಯಲ್ಲಿ ಅನುಗ್ರಹದ ಮಳೆಗರೆದನು. ಖೋಜಾ ನಸ್ರೆದ್ದೀನನಿಗೆ ಎರಡು

ಚೀಲಗಳನ್ನು ಕೊಟ್ಟನು : ಒಂದು ಬೆಳ್ಳಿ ನಾಣ್ಯ ತುಂಬಿದ ದೊಡ್ಡ ಚೀಲ ; ಇನ್ನೊಂದು ಚಿನ್ನ ತುಂಬಿದ ಚಿಕ್ಕ ಚೀಲ.

ಅವನು ಕುಲುಕುಲು ನಗುತ್ತ ಹೀಗೆಂದನು : "ಎಂಥ ಗಾಢಾನುರಾಗವನ್ನು ಕೆರಳಿಸಿಬಿಟ್ಟಿದ್ದೇವೆ ! ಮೌಲಾನಾ, ನೀನೂ ಒಪ್ಪಿಕೊಳ್ಳಬೇಕು. ಇಷ್ಟು ಗಾಢಾನುರಾಗವನ್ನು ನೀನೆಲ್ಲೂ ಕಂಡಿರಲಾರೆ. ಅವಳ ದನಿ ಹೇಗೆ ಅದುರುತ್ತಿತ್ತು ! ಅವಳು ಹೇಗೆ ಅಳುತ್ತಿದ್ದಳು, ನಗುತ್ತಿದ್ದಳು ! ಆದರೆ, ನೀನು ಪ್ರಧಾನ ವರ್ಷವರನ ಪದವಿಯಲ್ಲಿ ನಿಂತ ಮೇಲೆ ಏನಾದೀತೆಂಬುದರೊಡನೆ ಹೋಲಿಸಿದರೆ, ಇದು ಏನೇನೂ ಅಲ್ಲವೆಂದೇ ಹೇಳಬೇಕಾಗುತ್ತದೆ."

ಬಗ್ಗಿ ನಮಸ್ಕರಿಸುತ್ತಿದ್ದ ಆಸ್ಥಾನಿಕರ ಸಾಲಿನಲ್ಲಿ ಗುಜುಗುಜು ಹರಿಯಿತು. ಬಖ್ತಿಯಾರ್ ಕೇಡಿಗತನದಿಂದ ಮುಗುಳು ನಕ್ಕನು. ಆಗ ಗೊತ್ತಾಯಿತು ಖೋಜಾ ನಸ್ರೆದ್ದೀನನಿಗೆ, ತನ್ನನ್ನು ಪ್ರಧಾನ ವರ್ಷವರನ ಪದವಿಗೆ ನೇಮಿಸಬೇಕೆಂದು ಅಮೀರನಿಗೆ ಸಲಹೆ ಕೊಟ್ಟವರು ಯಾರು—ಎಂದು.

ಅಮೀರನು ಮುಂದುವರಿಸಿದನು : "ಅವಳು ಗುಣ ಹೊಂದಿದ್ದಾಳೆ. ನಿನ್ನ ಅಧಿಕಾರ ಸ್ವೀಕಾರವನ್ನು ಮುಂದೆ ತಳ್ಳುವುದಕ್ಕೆ ಏನೂ ಕಾರಣವಿಲ್ಲ. ನೀನು ವೈದ್ಯನ ಜೊತೆ ಹೋಗಬಹುದು" ಎಂದನು ಖೋಜಾ ನಸ್ರೆದ್ದೀನನಿಗೆ. ಆ ಮೇಲೆ, ವೈದ್ಯನ ಕಡೆ ತಿರುಗಿದವನು "ಹೇಯ್, ನೀನು ಕೇಳಿಲ್ಲಿ. ಹೋಗಿ ನಿನ್ನ ಶಸ್ತ್ರಗಳನ್ನು ತೆಗೆದುಕೊಂಡು ಬಾ. ಬಖ್ತಿಯಾರ್, ಆಜ್ಞಾಪತ್ರವನ್ನಿಲ್ಲಿ ಕೊಡು" ಎಂದನು.

ಕುಡಿಯುತ್ತಿದ್ದ ಬಿಸಿ ಬಿಸಿ ಟೀ ಖೋಜಾ ನಸ್ರೆದ್ದೀನನಿಗೆ ಗಂಟಲಿನಲ್ಲೇ ಸಿಕ್ಕಿಕೊಂಡಿತು. ಅವನು ಕೆಮ್ಮಿದನು. ಬಖ್ತಿಯಾರ್ ಅಷ್ಟರಲ್ಲೇ ಸಿದ್ಧಪಡಿಸಿಟ್ಟಿದ್ದ ಆಜ್ಞಾಪತ್ರವನ್ನು ಕೈಯಲ್ಲಿ ಹಿಡಿದು ಮುಂದೆ ಬಂದನು. ಅವನಿಗೆ ಪರಮಾನಂದವಾಗಿತ್ತು. ಪ್ರತೀಕಾರದ ತೃಪ್ತಿ ಅವನ ಮುಖದಲ್ಲಿ ತಾಂಡವವಾಡುತ್ತಿತ್ತು. ಅಮೀರನ ಕೈಗೆ ಒಂದು ಲೇಖಣಿಯನ್ನು ಎತ್ತಿ ಕೊಟ್ಟರು. ಅದಕ್ಕೆ ಅವನು ರುಜು ಮಾಡಿ ಪತ್ರವನ್ನು ಬಖ್ತಿಯಾರನ ಕೈಗೆ ಹಿಂದಿರುಗಿ ಕೊಟ್ಟನು. ಬಖ್ತಿಯಾರ್ ಸ್ವಲ್ಪವೂ ತಡಮಾಡದೆ ಆಜ್ಞಾಪತ್ರಕ್ಕೆ ರಾಜಮುದ್ರೆಯೊತ್ತಿದನು. ಇಷ್ಟೆಲ್ಲಾ ಒಂದೇ ನಿಮಿಷದಲ್ಲಿ ನಡೆದು ಹೋಯಿತು.

ಬಖ್ತಿಯಾರ್ ವಿಜಯದ ಮುಗುಳ್ನಗೆ ನಗುತ್ತಾ, "ಓ, ಪರಮ ಜ್ಞಾನಿ,

ಮಾನ್ಯ ಮೌಲಾನಾ ಹುಸೇನ್ ! ನಿನ್ನ ಆನಂದಾತಿಶಯದ ಮಹತ್ತ್ವದಿಂದ ನೀನು ಮಾತಾಡಲಾರದಂತಾಗಿರುವ ಹಾಗೆ ಕಾಣುತ್ತದೆ. ಆದರೂ, ಅಮೀರ ರಿಗೆ ನಿನ್ನ ಕೃತಜ್ಞತೆ ಅರ್ಪಿಸಬೇಕಾದ್ದು ನಿನ್ನ ಕರ್ತವ್ಯ ಮತ್ತು ಸತ್ಸಂಪ್ರ ದಾಯ " ಎಂದನು.

ಖೋಜಾ ನಸ್ರೆದ್ದೀನ್ ಸಿಂಹಾಸನದ ಮುಂದೆ ಮಂಡಿಯೂರಿದನು.

" ಕಟ್ಟಕಡೆಗೆ ನನ್ನ ಅಂತರಂಗದ ಅಭಿಲಾಷೆ ನೆರವೇರಿತು. ಆದರೆ ಅಮೀರರ ಉಪಪತ್ನಿಗಾಗಿ ತಯಾರಿಸಬೇಕಾಗಿರುವ ಕಷಾಯಕ್ಕಾಗಿ ಸ್ವಲ್ಪ ತಡವಾಗುವುದು ಅನಿವಾರ್ಯವಾಗಿದೆಯಲ್ಲಾ ಎಂದು ತುಂಬ ವಿಷಾದಿಸುತ್ತೇನೆ. ವಾಸಿಯಾಗಿರುವುದನ್ನು ದೃಢಪಡಿಸಿಕೊಳ್ಳಬೇಕು. ಇಲ್ಲದಿದ್ದರೆ, ರೋಗ ಮತ್ತೆ ಶರೀರಕ್ಕೆ ವ್ಯಾಪಿಸಿಬಿಡಬಹುದು " ಎಂದು ಯಾವ ಬಗೆಯ ಆತಂಕವೂ ಇಲ್ಲದೆ ನುಡಿದನು.

ಬಖ್ತಿಯಾರನಿಗೆ ಕಳವಳವಾಯಿತು. " ಕಷಾಯವನ್ನು ತಯಾರಿಸು ವುದಕ್ಕೆ ಅಷ್ಟೊಂದು ಕಾಲ ಬೇಕಾಗುತ್ತದೆಯೆ ? ಒಂದರ್ಧ ಗಂಟೆಯೊಳಗಾಗಿ ತಯಾರಿಸಿಬಿಡಬಹುದಲ್ಲವೇ...." ಎಂದನು.

" ಸರಿ, ಸರಿ ! ಅರ್ಧ ಗಂಟೆಯಾದರೆ ಬೇಕಾದಷ್ಟಾಯಿತು " ಎಂದು ಅಮೀರನು ಬಖ್ತಿಯಾರನ ಮಾತನ್ನು ಸಮರ್ಥಿಸಿದನು.

" ಓ, ಮಹಾಪ್ರಭೂ, ಅದು ಸಾಅದ್ ಅಧ್-ಥಬಿಹ್ ನಕ್ಷತ್ರವನ್ನವ ಲಂಬಿಸಿದೆ " ಎಂದು ಉತ್ತರ ಕೊಟ್ಟನು ಖೋಜಾ ನಸ್ರೆದ್ದೀನ್. ತನ್ನ ಕೊನೆಯ ಮತ್ತು ಅತ್ಯಂತ ಪ್ರಬಲವಾದ ಮಹಾಸ್ತ್ರವನ್ನು ಪ್ರಯೋಗಿಸಿದನು. " ಆ ನಕ್ಷತ್ರಗಳ ಸ್ಥಾನವನ್ನು ನೋಡಿದರೆ, ನನಗೆ ಎರಡರಿಂದ ಐದು ದಿನಗಳ ವರೆಗೆ ಬೇಕಾದೀತು " ಎಂದನು.

" ಐದು ದಿನಗಳು ! ಒಂದು ಕಷಾಯವನ್ನು ತಯಾರಿಸುವುದಕ್ಕೆ ಐದು ದಿನ ಹಿಡಿಯುವುದೆಂದು ಇದುವರೆಗೆ ನಾನೆಂದೂ ಕೇಳಿಯೇ ಇಲ್ಲ, ಮೌಲಾನಾ ಹುಸೇನ್ " ಎಂದು ನುಡಿದನು ಬಖ್ತಿಯಾರ್.

ಖೋಜಾ ನಸ್ರೆದ್ದೀನ್ ಅಮೀರನ ಕಡೆಗೆ ತಿರುಗಿ ಹೇಳಿದನು :

" ಪರಮ ಪ್ರಶಾಂತ ಮಹಾ ಪ್ರಭುಗಳವರು ತಮ್ಮ ಹೊಸ ಉಪ ಪತ್ನಿಯ ಚಿಕಿತ್ಸೆಯನ್ನು ನನ್ನ ಕೈಯಲ್ಲಿ ಕೊಡದೆ ಪ್ರಧಾನ ವಜೀರ ಬಖ್ತಿಯಾರ

ನಿಗೆ ಒಪ್ಪಿಸಿಬಿಡುವುದೇ ಮೇಲೆಂದು ತೋರುತ್ತದೆ. ಅವಳ ರೋಗವನ್ನು ವಾಸಿಮಾಡುವುದಕ್ಕೆ ಅವನೇ ಪ್ರಯತ್ನ ಮಾಡಲಿ. ಆಗ, ಅವಳ ಪ್ರಾಣಕ್ಕೆ ನಾನು ಹೊಣೆಯಲ್ಲ" ಎಂದನು.

ಅಮೀರನಿಗೆ ದಿಗಿಲಾಯಿತು. ಆತಂಕದ ದನಿಯಲ್ಲಿ, "ಏನದು, ಮೌಲಾನಾ? ನೀನು ಹೇಳುತ್ತಿರುವುದೇನು? ಬಖ್ತಿಯಾರನಿಗೆ ಔಷಧಿಗಳ ವಿಷಯ ಏನೇನೂ ಗೊತ್ತಿಲ್ಲ. ಅವನು ಚತುರನೂ ಅಲ್ಲ. ನಾವು ನಿನಗೆ ಆ ವಿಷಯವನ್ನು ಹಿಂದೆಯೇ ತಿಳಿಸಿದ್ದೇವೆಯಲ್ಲಾ, ನಿನಗೆ ಪ್ರಧಾನ ವಜೀರನ ಪದವಿಯನ್ನು ಕೊಡುತ್ತೇವೆಂದಾಗ!" ಎಂದನು.

ಈ ಮಾತು ಕೇಳಿ ಪ್ರಧಾನ ವಜೀರನ ಮೈಮೇಲೆಲ್ಲಾ ಸೂಕ್ಷ್ಮವಾದ ಕಂಪನದ ತೆರೆ ಹರಿದುಹೋಯಿತು. ಅವನು ವಿಷತುಂಬಿದ ದೃಷ್ಟಿಯಿಂದ ಖೋಜಾ ನಸ್ರೆದ್ದೀನನ ಕಡೆ ನೋಡಿದನು.

"ಹೋಗು, ಕಷಾಯವನ್ನು ಸಿದ್ಧಪಡಿಸು. ಆದರೆ ಐದು ದಿನ ಬಹು ದೀರ್ಘಕಾಲವಾಯಿತು, ಮೌಲಾನಾ! ಅದಕ್ಕಿಂತ ಬೇಗ ಅದನ್ನು ಸಿದ್ಧಮಾಡಲಾರೆಯಾ? ನಿನ್ನ ಹೊಸ ಪದವಿಯನ್ನು ನೀನು ಬೇಗ ವಹಿಸಿಕೊಳ್ಳಬೇಕೆಂದು ನಮಗೆ ಅತ್ಯಂತ ಕುತೂಹಲವಾಗಿದೆ" ಎಂದು ಅಪ್ಪಣೆ ಕೊಡಿಸಿದನು ಮಹಾಪ್ರಭು.

"ಓ, ಮಹಾಸ್ವಾಮೀ, ನನಗೂ ಬಹಳ ಆಸೆಯಿದೆ. ಬೇಗ ಮುಗಿಸುವುದಕ್ಕೆ ಸಾಧ್ಯವಾದಷ್ಟೂ ಪ್ರಯತ್ನಮಾಡುತ್ತೇನೆ" ಎಂದು ಖೋಜಾ ನಸ್ರೆದ್ದೀನ್ ಬಹು ವಿನಯದಿಂದ ನುಡಿದನು.

ಹಿಂದುಹಿಂದಾಗಿಯೇ ನಡೆಯುತ್ತ, ಅಡಿಗಡಿಗೂ ತಲೆಬಾಗಿ ನಮಸ್ಕಾರ ಮಾಡುತ್ತ ಖೋಜಾ ನಸ್ರೆದ್ದೀನ್ ಅಮೀರನನ್ನು ಬೀಳ್ಕೊಂಡನು. ಅವನು ಹೋಗುವುದನ್ನೇ ನೋಡುತ್ತಿದ್ದನು ಬಖ್ತಿಯಾರ್. ತನ್ನ ಶತ್ರು ಮತ್ತು ಪ್ರತಿಸ್ಪರ್ಧಿ ಏನೊಂದು ಅಪಾಯವೂ ಇಲ್ಲದೆ ಸುರಕ್ಷಿತವಾಗಿ ಹಿಂದಿರುಗಿ ಹೋಗುತ್ತಿರುವುದನ್ನು ಕಂಡು ಅವನಿಗೆ ಎಷ್ಟು ರೋಷ ಕೆರಳಿತ್ತೆಂಬುದು ಅವನ ಮುಖದಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿತ್ತು.

"ದುಷ್ಟ ಸರ್ಪ! ವಿಶ್ವಾಸಘಾತಕ ಕಿರುಬ!" ಎಂದುಕೊಂಡು ಖೋಜಾ

ನಸ್ರೆದ್ದೀನ್ ಕೋಪದಿಂದ ಕಟಕಟನೆ ಹಲ್ಲು ಕಡಿಯುತ್ತಿದ್ದನು. “ಆದರೆ ನಿನ್ನ ಅವಕಾಶವನ್ನು ಕಳೆದುಕೊಂಡುಬಿಟ್ಟೆ, ಬಖ್ತಿಯಾರ್! ನನಗೆ ಅಪಾಯ ಮಾಡುವುದಕ್ಕೆ ನಿನಗೆ ಅವಕಾಶವಿಲ್ಲ. ನನಗೆ ಏನು ತಿಳಿಯಬೇಕಾಗಿತ್ತೋ ಅದು ಈಗ ನನಗೆ ತಿಳಿದುಹೋಯಿತು : ಅಮೀರನ ಅಂತಃಪುರಕ್ಕೆ ಹೋಗುವ ಮತ್ತು ಹೊರಬರುವ ಬಾಗಿಲುಗಳು, ದಾರಿಗಳು ಎಲ್ಲವೂ ನನಗೆ ಗೊತ್ತಾಗಿ ಹೋಯಿತು. ಓ, ನನ್ನ ಅಮೂಲ್ಯ ಗುಲ್ಜಾನ್, ನೀನೆಂಥ ಜಾಣೆ, ಸರಿಯಾದ ಸಮಯದಲ್ಲಿ ಕಾಯಿಲೆ ಬಿದ್ದೆ! ಹೊತ್ತಿಗೆ ಸರಿಯಾಗಿ ಕಾಯಿಲೆ ಬಿದ್ದು ನಿನ್ನ ಖೋಜಾ ನಸ್ರೆದ್ದೀನನನ್ನು ವೈದ್ಯನ ಶಸ್ತ್ರಗಳಿಗೆ ಸಿಕ್ಕದಂತೆ ಕಾಪಾಡಿದೆ! ನಿಜವಾಗಿ ಹೇಳುವುದಾದರೆ, ಆಗ ನಿನ್ನ ವಿಚಾರವಾಗಿ ಮಾತ್ರ ನೀನು ಯೋಚಿಸುತ್ತಿದ್ದೆಯೆನ್ನಬಹುದು!”

ಅವನು ತನ್ನ ಗೋಪುರಕ್ಕೆ ಹಿಂದಿರುಗಿದನು. ಅದರ ಬುಡದಲ್ಲಿ ಕಾವು ಸಿಪಾಯಿಗಳು ವಿನೋದಕ್ಕೆ ಪಗಡೆಯಾಟ ಆಡುತ್ತಿದ್ದರು. ತನ್ನಲ್ಲಿದ್ದದ್ದನ್ನೆಲ್ಲ ಒಡ್ಡಿ ಕಳೆದುಕೊಂಡಿದ್ದವನೊಬ್ಬನು ಮತ್ತೆ ಪಣವೊಡ್ಡುವುದಕ್ಕಾಗಿ ತನ್ನ ಬೂಟುಗಳನ್ನು ಕಳಚುತ್ತಿದ್ದನು. ಬಹಳ ಸೆಕೆಯಾಗಿತ್ತು. ಆದರೆ ಒಳಗೆ ಗೋಪುರದಲ್ಲಿ ಮತ್ತು ಅದರ ದಪ್ಪನೆಯ ಕಲ್ಲು ಗೋಡೆಗಳ ಹಿಂದೆ ತಣ್ಣಗೆ ಹಿತವಾಗಿತ್ತು. ಖೋಜಾ ನಸ್ರೆದ್ದೀನ್ ಇಕ್ಕಟ್ಟಾದ ಕಲ್ಲು ಮೆಟ್ಟಿಲುಗಳನ್ನು ಹತ್ತಿ ಮೇಲೆ ಹೋದನು. ತನ್ನ ಕೋಣೆಯನ್ನೂ ದಾಟಿ ಮೇಲಿನ ಕೋಣೆಗೆ ಹೋದನು. ಬಾಗ್ದಾದಿನ ಜ್ಞಾನಿಯನ್ನು ನೋಡಹೋದನು.

ಮುದುಕ ನೋಡುವುದಕ್ಕೆ ಒರಟೊರಟಾಗಿ ಕಾಣುತ್ತಿದ್ದನು. ಆ ಸೆರೆಯ ಅವಧಿಯಲ್ಲಿ ಅವನ ಗಡ್ಡವೂ ಕೂದಲೂ ಅಣಿಯಿಲ್ಲದೆ ಅತಿಯಾಗಿ ಬೆಳೆದು ಉದ್ದವಾಗಿ ಪೊದೆಯಾಗಿಬಿಟ್ಟಿತ್ತು. ಪೊದೆಯ ಹಾಗಿದ್ದ ಹುಬ್ಬುಗಳ ಕೆಳಗಿನಿಂದ ಅವನ ಕಣ್ಣುಗಳು ವಿಚಿತ್ರವಾಗಿ ಹೊಳೆಯುತ್ತಿದ್ದವು. ಬೈಗುಳದ ಪ್ರವಾಹ ಖೋಜಾ ನಸ್ರೆದ್ದೀನನ ಮೇಲೆ ಹರಿದು ಬರುತ್ತಿತ್ತು.

“ಅಯ್ಯೋ ಹಾಳು ಪಾಪದ ಮಗನೇ! ಇನ್ನೂ ಎಷ್ಟು ದಿನ ನನ್ನನ್ನಿಲ್ಲಿ ಕೂಡಿಹಾಕಿರುತ್ತೀಯ? ನಿನ್ನ ತಲೆಯ ಮೇಲೆ ಕಲ್ಲು ಬಿದ್ದು ಅಂಗಾಲುಗಳಲ್ಲಿ ಹೊರಬರುವಂತಾಗಲಿ! ಅಯ್ಯೋ ನೀಚ ಮೋಸಗಾರಾ, ಠಕ್ಕಾ, ವೇಷಗಾರಾ! ನೀನು ನನ್ನ ಹೆಸರನ್ನು ಕದ್ದೆ, ನನ್ನ ಮೇಲುಡುಪು, ನನ್ನ ರುಮಾಲು, ನನ್ನ

ನಡುಪಟ್ಟಿ—ಎಲ್ಲವನ್ನೂ ಕದ್ದುಕೊಂಡೆ! ನೀನು ಬದುಕಿರುವಾಗಲೇ ಕ್ರಿಮಿಗಳು ನಿನ್ನನ್ನು ತಿಂದುಹಾಕಲಿ; ನಿನ್ನ ಪಿತ್ತಕೋಶವನ್ನೂ ಹೊಟ್ಟೆಯನ್ನೂ ಹುಳು ಹೊಕ್ಕು ಹಾಳುಮಾಡಲಿ!"

ಇಂಥ ಬೈಗುಳದ ಸುರಿಮಳೆ ಖೋಜಾ ನಸ್ರೆದ್ದೀನನಿಗೆ ಒಗ್ಗಿಹೋಗಿತ್ತು. ಆದರಿಂದ ಅವನು ಸ್ವಲ್ಪವೂ ಅಸಮಾಧಾನ ಮಾಡಿಕೊಳ್ಳಲಿಲ್ಲ.

"ಮಾನ್ಯ ಮೌಲಾನಾ ಹುಸೇನ್, ಇವತ್ತೊಂದು ಹೊಸ ಹಿಂಸೆಯನ್ನು ಕಂಡುಹಿಡಿದಿದ್ದೇನೆ, ನಿನಗೆ. ಒಂದು ಹಗ್ಗದ ಕುಣಿಕೆ, ಒಂದು ಕೋಲು—ಇವುಗಳಿಂದ ನಿನ್ನ ತಲೆಯನ್ನು ಹಿಸುಕಿ ಹಿಂಡುವುದು. ಕಾವು ಸಿಪಾಯಿಗಳು ಕೆಳಗಡೆ ಇದ್ದಾರೆ—ಅವರಿಗೆ ಕೇಳುವ ಹಾಗೆ ನೀನು ಕಿರಿಚಬೇಕು" ಎಂದನು.

ಮುದುಕ ಕಂಬಿಕಿಟಕಿಯ ಬಳಿ ಹೋಗಿ ಒಂದೇ ದನಿಯಿಂದ ಕೂಗ ತೊಡಗಿದನು.

"ಓ, ಸರ್ವಶಕ್ತ ಅಲ್ಲಾ! ನನ್ನ ಯಾತನೆ ಅನಂತವಾಗಿದೆ! ಅಯ್ಯೋ, ಕುಣಿಕೆ ಕೋಲುಗಳಿಂದ ನನ್ನ ತಲೆಯನ್ನು ಅಮುಕಿ ಹಿಂಡಬೇಡ! ಇಂಥ ಯಾತನೆಗಿಂತ ಸಾವೇ ಮೇಲು!"

"ತಡೆ, ಒಂದು ನಿಮಿಷ ತಡೆ, ಮೌಲಾನಾ ಹುಸೇನ್!" ಎಂದು ಖೋಜಾ ನಸ್ರೆದ್ದೀನ್ ನಡುವೆ ಅಡ್ಡ ಮಾತಾಡಿದನು. "ನೀನು ತುಂಬಾ ನಿದಾನವಾಗಿ, ಬಹು ಸೋಮಾರಿಯಂತೆ, ಕೂಗುತ್ತಿದ್ದೀಯ. ಇದು ಕೇಳಿದವರಿಗೆ ತೃಪ್ತಿಯಾಗುವ ಹಾಗಿಲ್ಲ. ಕಾವು ದಳದವರಿಗೆ ಇಂಥ ವಿಷಯಗಳಲ್ಲಿ ಅಪಾರ ಅನುಭವವಿದೆ. ನೀನು ನಟಿಸುತ್ತಿದ್ದೀಯೆಂದು ಅವರಿಗೆ ಅನುಮಾನ ಬಂತೆಂದರೆ, ಅವರು ಆರ್ಸ್‌ಲಾನ್-ಬೆಕ್‌ಗೆ ವರದಿ ಮಾಡುತ್ತಾರೆ; ಆಗ ನೀನು ನಿಜವಾದ ವಧಕಾರನ ಕೈಗೇ ಸಿಕ್ಕಿಕೊಳ್ಳಬೇಕಾಗುತ್ತದೆ. ಈ ಕೆಲಸದಲ್ಲಿ ಹೆಚ್ಚು ಉತ್ಸಾಹ ತೋರಬೇಕಾದ್ದು ನಿನ್ನ ಹಿತಕ್ಕಾಗಿಯೇ ಬಹು ಅವಶ್ಯವಾಗಿದೆ. ಇಲ್ಲಿ ಕೇಳು, ಹೇಗೆ ಮಾಡಬೇಕೆಂದು ನಾನು ತೋರಿಸಿಕೊಡುತ್ತೇನೆ."

ಹೀಗೆಂದು ಅವನು ತಾನೇ ಕಿಟಕಿಯ ಬಳಿ ಹೋಗಿ, ದೊಡ್ಡದಾಗಿ ಉಸಿರೆಳೆದುಕೊಂಡು, ತಟ್ಟನೆ ಕಿಟಾರನೆ ಕಿರಿಚಿಕೊಂಡನು. ಅದನ್ನು ಕೇಳಿ ಮುದುಕ ಕಿವಿ ಮುಚ್ಚಿಕೊಂಡು ತತ್ತರಿಸಿ ಹಿಂದಕ್ಕೆ ಸರಿದನು.

"ನಾಸ್ತಿಕ ಸಂತಾನದ ಮಗುವೇ! ಅಂಥ ಕಂಠವನ್ನು ನಾನೆಲ್ಲಿಂದ

ತರಲಿ? ಪಟ್ಟಣದ ಇನ್ನೊಂದು ತುದಿಗೆ ಕೇಳಿಸುವಷ್ಟು ಗಟ್ಟಿಯಾಗಿ ನಾನು ಹೇಗೆ ತಾನೆ ಕಿರಿಚಲಿ?" ಎಂದು ಮುದುಕ ನರಳಿದನು.

"ಅದೊಂದೇ ನಿನಗಿರುವ ರಕ್ಷಣೋಪಾಯ. ವಧಕಾರರ ಕೈಗೆ ಸಿಕ್ಕಿ ಬೀಳುವ ಇಷ್ಟ ನಿನಗಿಲ್ಲವಾದರೆ ಇದನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲ" ಎಂದು ನಸ್ರೆದೀನ್ ಖಡಾಖಂಡಿತವಾಗಿ ಹೇಳಿಬಿಟ್ಟನು.

ಮುದುಕ ಮತ್ತೆ ಪ್ರಯತ್ನಮಾಡಿದನು: ಅವನಿಗೆ ಎಷ್ಟು ಸಾಧ್ಯವೋ ಅಷ್ಟೂ ಗಟ್ಟಿಯಾಗಿ ಕಿರಿಚಿದನು. ಅವನು ಎಷ್ಟು ಭಯಂಕರವಾಗಿ ಕಿರಿಚಿ ಕೂಗಾಡಿದನೆಂದರೆ, ಕೆಳಗೆ ಆಟವಾಡುತ್ತಿದ್ದ ಕಾಪಿನವರು ಆಟವನ್ನು ಅಷ್ಟಕ್ಕೇ ನಿಲ್ಲಿಸಿ, ಈ ಕಿರಿಚಾಟವನ್ನು ಕೇಳುತ್ತಾ ಕೂತರು.

ಇನ್ನೊಂದು ಪ್ರಯತ್ನಮಾಡಿದ್ದರಿಂದ ಮುದುಕನಿಗೆ ಏದುಸುರು ಹತ್ತಿತು; ಕೆಮ್ಮತೊಡಗಿದನು.

"ಅಯ್ಯೋ! ಅಯ್ಯೋ! ನನ್ನ ಬಡ ಗಂಟಲೇ!" ಎಂದು ಗೋಳಾಡುತ್ತಾ, "ಎಲಾ ಕೀಳು ನೀಚ ಪೋಕರೀ! ಈಗ ನಿನಗೆ ತೃಪ್ತಿಯಾಯಿತೆ? ಅಸ್ರಯೀಲ್ ನಿನ್ನನ್ನು ವಶಮಾಡಿಕೊಳ್ಳಲಿ!" ಎಂದು ಬೈದನು.

"ನನಗೆ ತೃಪ್ತಿಯಾಯಿತು. ಸರ್ವ ಶ್ರೇಷ್ಠ ಜ್ಞಾನಿಯಾದ ಮೌಲಾನಾ ಹುಸೇನ್, ನಿನ್ನ ಈ ಸತ್ಕೃತ್ಯ ಪ್ರಯತ್ನಕ್ಕೆ ಇಗೊ, ಇಲ್ಲಿದೆ, ತಕ್ಕ ಪ್ರತಿಫಲ" ಎಂದು ನಸ್ರೆದ್ದೀನ್ ಮರುನುಡಿದನು.

ಅಮೀರನು ತನಗೆ ಕೊಟ್ಟಿದ್ದ ಚೀಲಗಳನ್ನು ಹೊರಕ್ಕೆ ತೆಗೆದು, ಅದರೊಳಗಿದ್ದದ್ದನ್ನೆಲ್ಲ ಒಂದು ತಟ್ಟೆಗೆ ಸುರಿದು, ಆ ಹಣವನ್ನೆಲ್ಲಾ ಸಮವಾಗಿ ಎರಡು ಪಾಲು ಮಾಡಿದನು.

ಮುದುಕ ಶಪಿಸುತ್ತಲೇ ಇದ್ದನು; ಗೊಣಗುತ್ತಲೇ ಇದ್ದನು.

"ಅದೇಕೆ ನನ್ನನ್ನು ಹಾಗೆ ಶಪಿಸುತ್ತೀಯೆ?" ಎಂದು ಖೋಜಾ ನಸ್ರೆದ್ದೀನ್ ಶಾಂತವಾಗಿಯೇ ಪ್ರಶ್ನಿಸಿದನು. ಯಾವುದಾದರೂ ರೀತಿಯಿಂದ ನಾನು ಮೌಲಾನಾ ಹುಸೇನನ ಹೆಸರಿಗೆ ಕಳಂಕ ತಂದಿದ್ದೇನೆಯೆ? ಅವನ ಪಾಂಡಿತ್ಯವನ್ನು ನಾನೇನಾದರೂ ತಗ್ಗಿಸಿದ್ದೇನೆಯೆ? ಅಮೀರನು ಈ ಹಣವನ್ನು ಮೌಲಾನಾ ಹುಸೇನನಿಗೆ ಕೊಟ್ಟನು; ಪ್ರಸಿದ್ಧ ಜ್ಯೋತಿಷಿಯೂ ವಿಖ್ಯಾತ ವೈದ್ಯನೂ ಆದ ಮೌಲಾನಾ ಹುಸೇನನಿಗೆ, ಅಂತಃಪುರದ ಒಬ್ಬ

ಹುಡುಗಿಯನ್ನು ಗುಣಪಡಿಸಿದ್ದಕ್ಕೆ ಇದನ್ನು ಬಹುಮಾನ ಕೊಟ್ಟನು" ಎಂದು ವಿವರಿಸಿದನು.

"ನೀನು ಒಬ್ಬ ಹುಡುಗಿಯನ್ನು ಗುಣಪಡಿಸಿದೆಯಾ!" ಆಶ್ಚರ್ಯದಿಂದ ಮುದುಕನಿಗೆ ನಿಜವಾಗಿಯೂ ಉಸಿರು ಕಟ್ಟುವಂತಾಯಿತು. "ರೋಗಗಳ ವಿಚಾರದಲ್ಲಿ ನಿನಗೇನು ಗೊತ್ತಿದೆ? ನೀನು ಏನೂ ಅರಿಯದ ದಡ್ಡ, ಠಕ್ಕ, ಮೋಸಗಾರ!"

"ನನಗೆ ರೋಗಗಳ ವಿಷಯವಾಗಿ ಏನೇನೂ ಗೊತ್ತಿಲ್ಲ; ಆದರೆ ಹುಡುಗಿಯರ ವಿಷಯವಾಗಿ ನನಗೆ ಕೆಲವು ಸಂಗತಿಗಳು ಗೊತ್ತು" ಎಂದು ಖೋಜಾ ನಸ್ರೆದ್ದೀನ್ ಉತ್ತರ ಕೊಟ್ಟನು ಮುಂದುವರಿಸಿ, "ಆದ್ದರಿಂದ ಅಮೀರನು ಕೊಟ್ಟ ಬಹುಮಾನವನ್ನು ಎರಡು ಪಾಲಾಗಿ ಹಂಚಿಕೊಳ್ಳುವುದು ನ್ಯಾಯವಾಗಿದೆ: ಒಂದು ನಿನಗೆ—ನಿನಗೇನು ಗೊತ್ತಿದೆಯೋ ಅದಕ್ಕಾಗಿ, ಇನ್ನೊಂದು ನನಗೆ—ನನಗೇನು ಗೊತ್ತಿದೆಯೋ ಅದಕ್ಕಾಗಿ. ಮೌಲಾನಾ, ಒಂದು ವಿಚಾರವನ್ನು ನಿನಗೆ ತಿಳಿಸಬೇಕು; ನಾನು ಆ ಹುಡುಗಿಗೆ ಏನೋ ಒಂದು ರೀತಿ ಅಡ್ಡಾದಿಡ್ಡಿಯಾಗಿ ಚಿಕಿತ್ಸೆ ಮಾಡಲಿಲ್ಲ; ಆದರೆ ನಕ್ಷತ್ರಗಳ ಸ್ಥಿತಿಯನ್ನು ಪರೀಕ್ಷಿಸಿ ನೋಡಿ ಅದಕ್ಕನುಸಾರವಾಗಿ ಚಿಕಿತ್ಸೆ ಮಾಡಿದೆ. ನಿನ್ನೆ ರಾತ್ರಿ ಪರೀಕ್ಷೆ ಮಾಡಿ ನೋಡಿದಾಗ ಸಾಅದ್ ಅಸ್-ಸೂಉದ್ ನಕ್ಷತ್ರಗಳು ಸಾಅದ್ ಅಲ್-ಅಖ್ಬಿಯಾ ನಕ್ಷತ್ರಗಳೊಡನೆ ಸಮಾಗಮದಲ್ಲಿದ್ದದ್ದನ್ನೂ, ವೃಶ್ಚಿಕರಾಶಿ ಕರ್ಕಾಟಕದ ಕಡೆಗೆ ತಿರುಗಿದ್ದದ್ದನ್ನೂ ಕಂಡೆ" ಎಂದನು.

"ಏನು?" ಎಂದು ಅಬ್ಬರಿಸಿದನು ಮುದುಕ. ಹುಚ್ಚು ಕೋಪ ಕೆರಳಿ ಕೋಣೆಯಲ್ಲೆಲ್ಲ ಅತ್ತ ಇತ್ತ ಓಡಾಡತೊಡಗಿದನು. "ಅಯ್ಯೋ, ದಡ್ಡ ಮಡ್ಡೀ! ನೀನು ಕತ್ತೆ ಕಾಯುವುದಕ್ಕೆ ಮಾತ್ರ ತಕ್ಕವನು! ನಿನಗೆ ಇಷ್ಟೂ ಗೊತ್ತಿಲ್ಲವಲ್ಲಾ!—ಸಾಅದ್ ಅಸ್-ಸೂಉದ್ ನಕ್ಷತ್ರಗಳು ಸಾಅದ್ ಅಲ್-ಅಖ್ಬಿಯಾ ನಕ್ಷತ್ರಗಳೊಡನೆ ಸಮಾಗಮದಲ್ಲಿರುವುದೆಂಬುದೇ ಅಸಾಧ್ಯವಲ್ಲಾ! ಅವೆಲ್ಲ ಒಂದೇ ನಕ್ಷತ್ರಪುಂಜಕ್ಕೆ ಸೇರಿದ ನಕ್ಷತ್ರಗಳು. ವರ್ಷದ ಈ ಕಾಲದಲ್ಲಿ ವೃಶ್ಚಿಕರಾಶಿಯನ್ನು ಅದು ಹೇಗೆ ಕಾಣಬಲ್ಲೆ? ನಾನು ಇಡಿ ರಾತ್ರಿಯನ್ನೆಲ್ಲಾ ಆಕಾಶವನ್ನು ನೋಡುತ್ತಲೇ ಕಳೆದೆ ಸಾಅದ್-ಬುಲಾ ಮತ್ತು ಅಸ್-ಸಿಮಾಕ್ ನಕ್ಷತ್ರಗಳು ಸಮಾಗಮದಲ್ಲಿದ್ದವು; ಅಲ್-ಜಬಾ ನಕ್ಷತ್ರಪುಂಜವು ಇಳಿಗತಿ

ಯಲ್ಲಿತ್ತು. ಕೇಳಿಸಿತೇ ನಾನು ಹೇಳಿದ್ದು, ಏ ಮೊದ್ದೇ! ಗೊತ್ತಾಯಿತೇ? ಈಗ ವೃಶ್ಚಿಕ ಅಲ್ಲಿಲ್ಲ! ನೀನು ಎಲ್ಲವನ್ನೂ ಕಲಸುಮೇಲೋಗರ ಮಾಡಿಬಿಟ್ಟಿದ್ದೀಯೆ. ಕತ್ತೆ ಕಾಯುವವನು ತನಗೆ ತಿಳಿಯದ, ತನ್ನ ಬುದ್ಧಿಶಕ್ತಿಗೆ ಮೀರಿದ ವಿಷಯಗಳಲ್ಲಿ ಪ್ರವೇಶಿಸಿದರೆ ಇನ್ನೇನಾಗುತ್ತದೆ? ಅಲ್-ಹಕ್‌ಅ ನಕ್ಷತ್ರಗಳು ಈಗ ಅಲ್-ಬುಟಯಿನ್ ನಕ್ಷತ್ರಗಳಿಗೆ ಪ್ರತಿಯೋಗದಲ್ಲಿವೆ; ಇವನ್ನು ನೋಡಿ ನೋಡಿ ವೃಶ್ಚಿಕವನ್ನು ಕಂಡದ್ದಾಗಿ ಭ್ರಮಿಸಿಬಿಟ್ಟಿದ್ದೀಯೆ!" ಎಂದು ರೇಗಾಡಿದನು.

ಖೋಜಾ ನಸ್ರೆದ್ದೀನನ ಅಜ್ಞಾನ ಎಷ್ಟೆಂದು ಬಯಲಿಗೆಳೆಯುವ ಉತ್ಸಾಹದಲ್ಲಿ ಮುದುಕ ಬಹಳ ಹೊತ್ತು ಮಾತಾಡಿ, ಆಗಿನ ಗ್ರಹನಕ್ಷತ್ರಗಳ ನಿಜವಾದ ಸ್ಥಿತಿಯನ್ನು ವಿಸ್ತಾರವಾಗಿ ವಿವರಿಸಿದನು. ಖೋಜಾ ನಸ್ರೆದ್ದೀನ್ ತನ್ನ ಕಿವಿಗೆ ಬಿದ್ದ ಒಂದೊಂದು ಮಾತನ್ನೂ ಬಹು ಜಾಗರೂಕತೆಯಿಂದ ಗಮನಿಸಿ ಮರೆಯದಂತೆ ಮಂದಟ್ಟು ಮಾಡಿಕೊಳ್ಳುತ್ತಿದ್ದನು. ಇತರ ಜ್ಞಾನಿಗಳೆದುರಿಗೆ ಅಮೀರನೊಡನೆ ಮಾತಾಡುವಾಗ ತಪ್ಪು ಮಾಡುವ ಸಂಭವ ತಪ್ಪಲೆಂಬ ಉದ್ದೇಶದಿಂದ ಒಂದೊಂದು ಮಾತನ್ನೂ ನೆನಪಿಟ್ಟುಕೊಳ್ಳುತ್ತಿದ್ದನು.

ಮುದುಕನು ಅತ್ಯಂತ ತಿರಸ್ಕಾರಭಾವದಿಂದ ನಿಂದಿಸುತ್ತಲೇ ಇದ್ದನು: "ಎಲಾ ಅಜ್ಞಾ! ಅಜ್ಞನ ಮಗನೇ! ಅಜ್ಞನ ಮೊಮ್ಮಗನೇ! ಅಜ್ಞನ ಮರಿಮಗನೇ! ಇದು ಕೂಡ ನಿನಗೆ ತಿಳಿಯದು: ಈಗ ಚಂದ್ರನ ಹತ್ತೊಂಬತ್ತನೆಯ ನೆಲೆಯಲ್ಲಿ—ಇದಕ್ಕೆ ಅಷ್-ಸೂಲ ಎಂದು ಹೆಸರು ಮತ್ತು ಇದು ಧನು ರಾಶಿಯಲ್ಲಿರುತ್ತದೆ—ಮನುಷ್ಯರ ಅದೃಷ್ಟಗಳನ್ನು ನಿರ್ಧರಿಸುವುದು ಈ ರಾಶಿಯ ನಕ್ಷತ್ರಗಳನ್ನವಲಂಬಿಸಿಯೇ ಹೊರತು ಬೇರೆ ಅಲ್ಲ. ಈ ಸಂಗತಿಯನ್ನು ಪರಮಪಂಡಿತ ಷಿಹಾಬ್ ಅಲ್-ದಿನ್ ಮಹ್ಮೂದ್ ಅಲ್-ಕರಜಿ ರಚಿಸಿರುವ ಪುಸ್ತಕದಲ್ಲಿ ಬಹು ಸ್ಪಷ್ಟವಾಗಿ ವಿವರಿಸಿ ಹೇಳಿದೆ...."

"ಷಿಹಾಬ್ ಅಲ್-ದಿನ್ ಮಹ್ಮೂದ್ ಅಲ್-ಕರಜಿ"—ಇದನ್ನು ಮತ್ತೆ ಮತ್ತೆ ಹೇಳಿಕೊಂಡು ಖೋಜಾ ನಸ್ರೆದ್ದೀನ್ ಗಟ್ಟಿಮಾಡಿಕೊಂಡನು. "ನಾಳೆ ಅಮೀರನ ಎದುರಿಗೆ ಉದ್ದ ಗಡ್ಡದ ಜ್ಞಾನಿಯ ಅಜ್ಞತೆಯನ್ನು ಹೊರಗೆಡವುತ್ತೇನೆ; ಅವನಿಗೆ ಈ ಗ್ರಂಥದ ಅರಿವಿಲ್ಲವೆಂಬುದನ್ನು ಹೊರಡಿಸಿಬಿಡುತ್ತೇನೆ. ಹಾಗೆ ಮಾಡಿದರೆ ನನ್ನ ಮಹಾ ಪಾಂಡಿತ್ಯವನ್ನು ಕಂಡು ಅವನಿಗೆ

ಭಯಭಕ್ತಿ ಹುಟ್ಟುತ್ತದೆ! ಅದು ನನ್ನ ಶ್ರೇಯಸ್ಸಿಗೆ ದಾರಿ" ಎಂದು ಅವನು ಯೋಚಿಸಿಕೊಂಡನು.

೪

ದುಬಾರಿ ಬಡ್ಡಿಗಾರ ಜಾಫರನ ಮನೆಯಲ್ಲಿ ಚಿನ್ನ ತುಂಬಿ ಮುದ್ರೆಮಾಡಿದ್ದ ಹನ್ನೆರಡು ಜಾಡಿಗಳಿದ್ದವು. ಆದರೆ ಆ ಜಾಡಿಗಳ ಸಂಖ್ಯೆ ಇಪ್ಪತ್ತಕ್ಕಿಂತ ಕಡಮೆಯಾಗಬಾರದೆಂದು ಅವನ ಆಸೆ. ಅವನಿಗೆ ಸ್ವಾಭಾವಿಕವಾದ ದುರಾಸೆ ಅಪ್ರಾಮಾಣಿಕತೆಗಳನ್ನು ಅಡಗಿಸದೆ ಎತ್ತಿ ತೋರಿಸುವಂಥ ರೂಪವನ್ನು ಕೊಟ್ಟು ಅದೃಷ್ಟ ಅವನಿಗೆ ವಿರೋಧವಾಗಿಬಿಟ್ಟಿತ್ತು. ಎಲ್ಲರನ್ನೂ ಸುಲಭದಲ್ಲಿ ನಂಬಿಬಿಡುವ ಸರಳಸ್ವಭಾವದ ಜನಕ್ಕೆ ಇವನ ಈ ರೂಪ ಎಚ್ಚರಿಕೆ ಕೊಡುತ್ತಿತ್ತು. ಇದರಿಂದ ಹೊಸ ಹೊಸ ಬಲಿಗಳನ್ನು ಎಳೆದುಕೊಂಡು ಬರುವುದು ಅವನಿಗೆ ತುಂಬ ಕಷ್ಟವಾಗುತ್ತಿತ್ತು. ಅವನ ಜಾಡಿಗಳು ಅವನಿಚ್ಛಿಸಿದಷ್ಟು ಬೇಗ ಬೇಗ ತುಂಬುತ್ತಿರಲಿಲ್ಲ.

"ಆಹಾ! ಈ ನನ್ನ ವಿಕಾರಗಳನ್ನು ಹೇಗಾದರೂ ಮಾಡಿ ಪರಿಹರಿಸಿಕೊಳ್ಳುವುದಕ್ಕೆ ಆಗುವ ಹಾಗಿದ್ದರೆ!" ಎಂದು ಅವನು ನಿಟ್ಟುಸಿರು ಬಿಟ್ಟನು. "ಆಗ ನನ್ನನ್ನು ಕಂಡ ಕೂಡಲೆ ಜನ ಓಡಿಹೋಗುತ್ತಿರಲಿಲ್ಲ. ನಾನು ವಂಚಕನೆಂದು ಅನುಮಾನಿಸದೆ ನನ್ನನ್ನು ನಂಬುತ್ತಿದ್ದರು. ಆಗ ಅವರನ್ನು ಮೋಸಗೊಳಿಸುವುದು ಎಷ್ಟು ಸುಲಭವಾಗುತ್ತಿತ್ತೊ! ನನ್ನ ಆದಾಯ ಎಷ್ಟು ಬೇಗ ಬೇಗ ಹೆಚ್ಚುತ್ತಿತ್ತೊ" ಎಂದು ಅವನು ಎಣಿಕೆ ಹಾಕುತ್ತಿದ್ದನು.

ಅಮೀರನ ಸೇವೆಗೆ ಬಂದಿರುವ ಹೊಸ ಜ್ಞಾನಿ ಮೌಲಾನಾ ಹುಸೇನನು ರೋಗಗಳನ್ನು ವಾಸಿಮಾಡುವುದರಲ್ಲಿ ಅದ್ಭುತ ಸಾಮರ್ಥ್ಯ ತೋರಿದನೆಂಬ ಸಂಗತಿ ಪಟ್ಟಣದಲ್ಲೆಲ್ಲ ಹರಡಿದಾಗ, ದುಬಾರಿ ಬಡ್ಡಿಗಾರ ಜಾಫರನು ಒಂದು ಕುಕ್ಕೆಯಲ್ಲಿ ಬೆಲೆಬಾಳುವ ವಸ್ತುಗಳನ್ನು ತುಂಬಿಕೊಂಡು ಅರಮನೆಯ ಬಾಗಿಲಿಗೆ ಬಂದನು.

ಕುಕ್ಕೆಯೊಳಗಿದ್ದ ವಸ್ತುಗಳನ್ನೆಲ್ಲ ಚೆನ್ನಾಗಿ ನೋಡಿದ ಮೇಲೆ ಆರ್ಸ್ಲಾನ್-ಬೆಕ್ ತಾನು ಅವನಿಗೆ ನೆರವಾಗಲು ಸಿದ್ಧವಾಗಿರುವುದಾಗಿ ಹೇಳಿದನು.

"ಮಾನ್ಯ ಜಾಫರ್, ನೀನು ಸರಿಯಾದ ಹೊತ್ತಿನಲ್ಲಿ ಬಂದಿದ್ದೀಯೆ.

ನಮ್ಮ ಮಹಾ ಪ್ರಭುಗಳು ಇವತ್ತು ಬಹು ಹರ್ಷವಾಗಿದ್ದಾರೆ ನಿನ್ನ ಕೋರಿಕೆಯನ್ನು ಅವರು ಖಂಡಿತ ನಿರಾಕರಿಸಲಾರರು."

ಅಮೀರನು ದುಬಾರಿ ಬಡ್ಡಿಗಾರನ ಹೇಳಿಕೆಯನ್ನೆಲ್ಲ ಕೇಳಿ, ಅವನು ನೀಡಿದ ಕಾಣಿಕೆಯನ್ನು—ದಂತದ ಕಟ್ಟು ಹಾಕಿದ ಒಂದು ಚಿನ್ನದ ಚದುರಂಗದ ಮಣೆ—ಸ್ವೀಕರಿಸಿದನು. ಆ ಮೇಲೆ ಜ್ಞಾನಿಗೆ ಕರೆ ಕಳಿಸಿದನು.

ಖೋಜಾ ನಸ್ರೆದ್ದೀನ್ ಬಂದು ಅಮೀರನೆದುರಿಗೆ ಮಂಡಿಯೂರಿ ನಮಸ್ಕಾರ ಮಾಡಿದನು. ಅಮೀರನು, "ಮೌಲಾನಾ ಹುಸೇನ್, ಈ ಮನುಷ್ಯ, ದುಬಾರಿ ಬಡ್ಡಿಗಾರ ಜಾಫರ್—ನಮ್ಮ ರಾಜಭಕ್ತ ಗುಲಾಮ—ನಮಗೆ ಕೆಲವು ಸೇವೆಗಳನ್ನು ಸಲ್ಲಿಸಿದ್ದಾನೆ. ಅವನಿಗಿರುವ ವಿಕಾರಗಳನ್ನು—ಕುಂಟು, ಬೆನ್ನ ಡುಬ್ಬ, ಕುರುಡುಗಣ್ಣು ಮತ್ತು ಇತರ ನ್ಯೂನತೆಗಳನ್ನು—ಪರಿಹರಿಸಿ ಈಗಲೆ ಅವನನ್ನು ತಕ್ಷಣ ಸ್ವಸ್ಥಗೊಳಿಸಬೇಕೆಂದು ನಾವು ನಿನಗೆ ಆಜ್ಞೆಮಾಡುತ್ತೇವೆ" ಎಂದನು.

ಹೀಗೆ ನುಡಿದು ಅಮೀರನು ಬೇರೆ ಕಡೆಗೆ ತಿರುಗಿಕೊಂಡನು; ಯಾವ ಪ್ರತಿವಾದವನ್ನೂ ಕಿವಿಗೆ ಹಾಕಿಕೊಳ್ಳುವುದಿಲ್ಲವೆಂದು ಇದರಿಂದ ವ್ಯಕ್ತಪಡಿಸಿದನು. ಖೋಜಾ ನಸ್ರೆದ್ದೀನನಿಗೆ ಬೇರೆ ದಾರಿಯೇ ಇರಲಿಲ್ಲ. ತಲೆ ಬಗ್ಗಿ ನಮಸ್ಕರಿಸಿ ಹೊರಬಂದನು. ದುಬಾರಿ ಬಡ್ಡಿಗಾರನು ತನ್ನ ಡುಬ್ಬವನ್ನೆಳೆದುಕೊಂಡು ಅವನ ಹಿಂದೆಯೇ ಬಂದನು.

ಅವನು ಹೀಗನ್ನುತ್ತಿದ್ದನು: "ಪರಮ ಪ್ರಾಜ್ಞನಾದ ಓ, ಮೌಲಾನಾ ಹುಸೇನ್! ಬೇಗ ಬೇಗ ಹೋಗೋಣ. ಸೂರ್ಯ ಇನ್ನೂ ಮುಳುಗಿಲ್ಲ. ರಾತ್ರಿಯಾಗುವುವರೊಳಗೆ ನನಗೆ ವಾಸಿಮಾಡಿಬಿಡು.... ನೀನೇ ಕಿವಿಯಾರ ಕೇಳಿದ್ದೀಯ, ನನ್ನನ್ನು ತಕ್ಷಣ ಸ್ವಸ್ಥಪಡಿಸಬೇಕೆಂದು ಅಮೀರರು ಅಪ್ಪಣೆ ಮಾಡಿದ್ದಾರೆ" ಎಂದನು. ಕೃತಕ ಗಡ್ಡವನ್ನು ಕಟ್ಟಿಕೊಂಡಿದ್ದ ಖೋಜಾ ನಸ್ರೆದ್ದೀನನನ್ನು ಅವನು ಗುರುತಿಸಲು ಅಸಮರ್ಥನಾದನು.

ಖೋಜಾ ನಸ್ರೆದ್ದೀನ್ ತನ್ನ ಮನಸ್ಸಿನಲ್ಲಿ ದುಬಾರಿ ಬಡ್ಡಿಗಾರನನ್ನೂ ಅಮೀರನನ್ನೂ ತನ್ನನ್ನೂ ಕೂಡ ಶಪಿಸುತ್ತಿದ್ದನು. ತನ್ನ ಜ್ಞಾನದ ಮಹಿಮೆಯನ್ನು ಅಷ್ಟೊಂದು ಅತಿಯಾಗಿ ಹೊಗಳಿಕೊಂಡು ಪ್ರಚಾರ ಮಾಡಿದ್ದಕ್ಕಾಗಿ ತನ್ನನ್ನೇ ತಾನು ನಿಂದಿಸಿಕೊಳ್ಳುತ್ತಿದ್ದನು. ಇಂಥ ಕಷ್ಟದ ಕೆಲಸದಿಂದ ತಪ್ಪಿಸಿ

ಕೊಳ್ಳುವುದು ಹೇಗೆ ? ಬೇಗ ಬೇಗ ಹೆಜ್ಜೆ ಹಾಕಬೇಕೆಂದು ಪ್ರೇರಿಸುತ್ತ ದುಬಾರಿ ಬಡ್ಡಿಗಾರನು ಅವನ ಖಲತ್ತಿನ ತೋಳು ಹಿಡಿದೆಳೆಯುತ್ತಿದ್ದನು. ಬೀದಿಗಳಲ್ಲಿ ಯಾರೂ ಇರಲಿಲ್ಲ. ಕಾವ ಧೂಳಿನಲ್ಲಿ ಖೋಜಾ ನಸ್ರೆದ್ದೀನನ ಹೆಜ್ಜೆಗಳು ಹೂತುಕೊಳ್ಳುತ್ತಿದ್ದವು. ಮುಂದೆ ಮುಂದೆ ಹೋಗುತ್ತಿರುವಾಗಲೇ "ಈ ಬಿಕ್ಕಟ್ಟಿನಿಂದ ಹೇಗೆ ತಪ್ಪಿಸಿಕೊಳ್ಳಲಿ ?" ಎಂದು ಅವನು ಆಲೋಚಿಸುತ್ತಿದ್ದನು. ತಟಕ್ಕನೆ ಅವನು ನಿಂತುಬಿಟ್ಟನು. "ನನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿ ಕೊಳ್ಳುವ ಕಾಲ ಬಂತೆಂದು ತೋರುತ್ತದೆ." ಬಹು ಬೇಗ ಒಂದು ಯೋಜನೆ ಯನ್ನು ಸಿದ್ಧಪಡಿಸಿಕೊಂಡನು. ಒದಗಬಹುದಾದ ಒಂದೊಂದು ಸಂದರ್ಭ ವನ್ನೂ ಚೆನ್ನಾಗಿ ತೂಗಿನೋಡಿದನು. "ಹೌದು. ಅದಕ್ಕೆ ಸಕಾಲ ಬಂದಿದೆ! ದುಬಾರಿ ಬಡ್ಡಿಗಾರಾ, ಬಡವರನ್ನು ಯಾತನೆಗೊಳಿಸುವ ನಿರ್ದಯ ಪೀಡಕಾ, ಈ ದಿನವೇ ನಿನ್ನನ್ನು ಮುಳುಗಿಸಿಬಿಡುತ್ತೇನೆ" ಎಂದು ತೀರ್ಮಾನ ಮಾಡಿ ಕೊಂಡನು.

ತನ್ನ ಕಪ್ಪುಗಣ್ಣಿನಲ್ಲಿ ಹೊಳೆಯುವ ತೀಕ್ಷ್ಣ ಕಾಂತಿಯನ್ನು ದುಬಾರಿ ಬಡ್ಡಿಗಾರನು ಕಾಣದಿರಲೆಂದು ಪಕ್ಕಕ್ಕೆ ತಿರುಗಿಕೊಂಡನು.

ಗಾಳಿ ಸಣ್ಣ ಸಣ್ಣ ಧೂಳಿನ ಸುಳಿಗಳನ್ನೆಬ್ಬಿಸುತ್ತಿದ್ದ ಒಂದು ಓಣಿಗೆ ಅವರು ತಿರುಗಿದರು. ದುಬಾರಿ ಬಡ್ಡಿಗಾರನು ತನ್ನ ಮನೆಯ ಪಕ್ಕಬಾಗಿಲನ್ನು ತೆರೆದನು. ಅಂಗಳದ ಆಚೆಯ ತುದಿಯಲ್ಲಿ ಜನಾನಾ ಭಾಗವನ್ನು ಪ್ರತ್ಯೇಕಿ ಸುತ್ತಿದ್ದ ಒಂದು ತಗ್ಗುಬೇಲಿಯ ಆಚೆ ಕಡೆ ಖೋಜಾ ನಸ್ರೆದ್ದೀನನಿಗೆ ಅಸ್ಪಷ್ಟ ಚಲನೆಗಳು ಕಾಣಿಸಿದುವು; ತಗ್ಗುದನಿಯ ನಗು ಮರ್ಮರಗಳು ಕೇಳಿಸಿದವು. ದುಬಾರಿ ಬಡ್ಡಿಗಾರನ ಹೆಂಡಿರೂ ಉಪಪತ್ನಿಯರೂ ಅಪರೂಪಕ್ಕೆ ಯಾರೋ ಹೊಸಬ ಮನೆಗೆ ಬಂದದ್ದನ್ನು ಕಂಡು ಸಂಭ್ರಮಗೊಂಡಿದ್ದರು. ದುಬಾರಿ ಬಡ್ಡಿಗಾರ ನಿಂತು ಅತ್ತ ಕಡೆ ದೃಷ್ಟಿಸಿ ನೋಡಿದನು. ತಕ್ಷಣ ಎಲ್ಲಾ ತಣ್ಣ ಗಾಯಿತು.

"ಸುಂದರ ಸೆರೆಯಾಳುಗಳೇ, ಇವತ್ತು ನಿಮಗೆಲ್ಲ ಬಿಡುಗಡೆ ಕೊಡು ತ್ತೇನೆ" ಎಂದುಕೊಂಡನು ಖೋಜಾ ನಸ್ರೆದ್ದೀನ್.

ದುಬಾರಿ ಬಡ್ಡಿಗಾರನು ಅವನನ್ನು ಕರೆದುಕೊಂಡು ಹೋದ ಕೋಣೆಗೆ ಕಿಟಕಿಗಳಿರಲಿಲ್ಲ. ಬಾಗಿಲಿಗೆ ಮೂರು ಬೀಗಗಳನ್ನೂ ಅನೇಕ ಅಗುಳಿಗಳನ್ನೂ

ಹಾಕಿ ಭದ್ರಪಡಿಸಿತ್ತು. ಆ ಬೀಗ ಮತ್ತು ಅಗುಳಿಗಳ ಗುಟ್ಟು ಮನೆಯ ಯಜಮಾನನೊಬ್ಬನಿಗೆ ಮಾತ್ರ ತಿಳಿದಿತ್ತು. ಬಾಗಿಲು ತೆರೆಯುವುದಕ್ಕೆ ಅವನಿಗೆ ಬಹಳ ಹೊತ್ತು ಹಿಡಿಯಿತು. ಇಲ್ಲಿಯೇ ಅವನು ಹಣದ ಜಾಡಿಗಳನ್ನಿಟ್ಟಿದ್ದದ್ದು. ಕೆಳಗಿನ ನೆಲಮಾಳಿಗೆಯಲ್ಲಿ ಆ ಜಾಡಿಗಳನ್ನಿಟ್ಟು ಮಾಳಿಗೆಯ ಬಾಗಿಲಿಗೆ ಮುಚ್ಚಿದ ಹಲಗೆಯ ಮೇಲೆ ಹಾಸಿಗೆ ಹಾಸಿಕೊಂಡು ಮಲಗುತ್ತಿದ್ದನು.

"ಉಡುಪನ್ನೆಲ್ಲಾ ಬಿಚ್ಚು!" ಎಂದು ಖೋಜಾ ನಸ್ರೆದ್ದೀನ್ ಅಪ್ಪಣೆ ಮಾಡಿದನು.

ದುಬಾರಿ ಬಡ್ಡಿಗಾರನು ಬಟ್ಟೆಗಳನ್ನು ಬಿಚ್ಚಿ ಎಸೆದನು. ಆ ನಗ್ನ ಸ್ಥಿತಿಯಲ್ಲಿ ಅವನು ನಂಬಲಾರದಷ್ಟು ಅಸಹ್ಯವಾಗಿ ಕಾಣುತ್ತಿದ್ದನು. ಖೋಜಾ ನಸ್ರೆದ್ದೀನ್ ಬಾಗಿಲು ಮುಚ್ಚಿ ಮಾಡಬೇಕಾದ್ದೇನೆಂದು ಸೂಚನೆ ಕೊಡತೊಡಗಿದನು.

ಇಷ್ಟರಲ್ಲಿ ಜಾಫರನ ಅನೇಕ ಮಂದಿ ಬಂಧುಗಳು ಬಂದು ಅಂಗಳದಲ್ಲಿ ಸೇರಿದರು. ಅವರಲ್ಲಿ ಅನೇಕರು ಅವನಿಗೆ ಸಾಲ ತೀರಿಸಬೇಕಾಗಿತ್ತು. ಈ ಶುಭ ಸಮಯದಲ್ಲಿ ಜಾಫರನು ಆ ಸಾಲಗಳನ್ನೆಲ್ಲ ರದ್ದುಗೊಳಿಸುವನೆಂದು ಅವರು ನಿರೀಕ್ಷಿಸಿದ್ದರು ಆದರೆ ಅವರ ನಿರೀಕ್ಷಣೆಗೆ ಆಧಾರವಿರಲಿಲ್ಲ. ಮುಚ್ಚಿದ ಬಾಗಿಲಿನ ಮೂಲಕ ತನ್ನ ಆ ಸಾಲಗಾರರ ದನಿಗಳನ್ನಾಲಿಸಿ ದುಬಾರಿ ಬಡ್ಡಿಗಾರನಿಗೆ ದುಷ್ಟತನದ ಹಿಗ್ಗು ಹಿಡಿಸದಾಯಿತು.

ಅವನು ಹೀಗೆ ಯೋಚಿಸುತ್ತಿದ್ದನು: "ಇವತ್ತು ಅವರ ಸಾಲಗಳನ್ನು ಬಿಟ್ಟುಬಿಡುವುದಾಗಿ ಅವರಿಗೆ ಹೇಳುತ್ತೇನೆ; ಹಾಗೆ ಹೇಳುವುದಷ್ಟೇ ಹೊರತು ಪತ್ರಗಳನ್ನು ಹಿಂದಕ್ಕೆ ಕೊಡುವುದಿಲ್ಲ. ನಂಬಿಕೆಯಿಟ್ಟುಕೊಂಡು ಎಚ್ಚರ ತಪ್ಪಿ ಜೀವಿಸುತ್ತಾರೆ. ನಾನು ಇನ್ನೇನೂ ಹೇಳುವುದಿಲ್ಲ. ಆದರೆ ಗುಟ್ಟಾಗಿಯೇ ಎಲ್ಲ ಸಾಲಗಳ ಲೆಕ್ಕವನ್ನು ಇಟ್ಟಿರುತ್ತೇನೆ. ಆ ಮೇಲೆ, ಅವರು ಸಾಲವಾಗಿ ತೆಗೆದುಕೊಂಡ ಒಂದೊಂದು ಟಂಗಕ್ಕೂ ಹತ್ತು ಟಂಗ ಬಡ್ಡಿ ಕೂಡಿದ ಮೇಲೆ, ಮತ್ತು ಆ ಒಟ್ಟು ಮೊತ್ತವು ಅವರ ಮನೆ ತೋಟ ದ್ರಾಕ್ಷಿ ಅಂಗಳ—ಎಲ್ಲವುಗಳ ಬೆಲೆಗಿಂತಲೂ ಹೆಚ್ಚಾದಾಗ, ನ್ಯಾಯಾಧಿಪತಿಗಳ ಬಳಿ ದೂರು ಕೊಟ್ಟು, ನಾನು ಮಾಡಿದ ವಾಗ್ದಾನವನ್ನು ಅಲ್ಲಗಳೆದು, ಪತ್ರಗಳನ್ನು ಹಾಜರು ಮಾಡುತ್ತೇನೆ. ಅವರ ಆಸ್ತಿಪಾಸ್ತಿಯನ್ನೆಲ್ಲ ಮಾರಿ, ಅವರನ್ನು ಭಿಕ್ಷುಕ ಸ್ಥಿತಿಗಿಳಿಸಿ, ಮತ್ತೊಂದು ಜಾಡಿಗೆ ಬಂಗಾರ ತುಂಬುತ್ತೇನೆ."

ಏಳು. ಪವಿತ್ರ ತುರಖಾನನ ಕೊಳಕ್ಕೆ ಹೋಗಬೇಕು. ಅಲ್ಲಿ ನೀನು ಪುಣ್ಯ ತೀರ್ಥದಲ್ಲಿ ಸ್ನಾನ ಮಾಡಬೇಕು. ಚಿಕಿತ್ಸೆಗೆ ಇದು ಅತ್ಯಾವಶ್ಯಕ" ಎಂದನು ಖೋಜಾ ನಸ್ರೆದ್ದೀನ್.

ದುಬಾರಿ ಬಡ್ಡಿಗಾರನಿಗೆ ದಿಗಿಲಾಯಿತು. "ಪವಿತ್ರ ತುರಖಾನನ ಕೊಳವೆ! ಅದರ ನೀರಿನಲ್ಲಿ ಹಿಂದೊಮ್ಮೆ ಮುಳುಗಿ ಸಾಯುವುದರಲ್ಲಿದ್ದೆ. ಓ, ಪರಮಜ್ಞಾನಿ ಮೌಲಾನಾ ಹುಸೇನ್, ನನಗೆ ಈಜು ಬರುವುದಿಲ್ಲವೆಂದು ನಿನಗೆ ಗೊತ್ತಿಲ್ಲವೇನೋ!" ಎಂದನು

"ಕೊಳಕ್ಕೆ ಹೋಗುವಾಗ ಎಡೆಬಿಡದೆ ನೀನು ಪ್ರಾರ್ಥನೆಗಳನ್ನು ಹೇಳುತ್ತಿರಬೇಕು. ಆಗ ಪ್ರಾಪಂಚಿಕ ವಿಚಾರಗಳನ್ನು ನೀನು ನೆನೆಯಬಾರದು. ಮತ್ತು ಒಂದು ಹಣದ ಚೀಲವನ್ನು ತೆಗೆದುಕೊಂಡಿರು. ದಾರಿಯಲ್ಲಿ ಸಿಕ್ಕಿದವರಿಗೆಲ್ಲ ಒಂದೊಂದು ಚಿನ್ನದ ನಾಣ್ಯವನ್ನು ಕೊಡಬೇಕು" ಎಂದು ಖೋಜಾ ನಸ್ರೆದ್ದೀನ್ ಚಿಕಿತ್ಸೆಯ ವಿಧಿಯನ್ನು ಮುಂದುವರಿಸಿದನು.

ದುಬಾರಿ ಬಡ್ಡಿಗಾರನು ನರಳಿ ಸಿಟ್ಟುಸಿರಿಟ್ಟನು. ಆದರೆ ಈ ಅಪ್ಪಣೆಯನ್ನು ಅಕ್ಷರಶಃ ನಡಸಿದನು. ದಾರಿಯಲ್ಲಿ ನಾನಾ ಬಗೆಯ ಜನ ಎದುರಾದರು—ಕಾರೇಗಾರರು, ಕೂಲಿಗಾರರು ಮತ್ತು ಭಿಕ್ಷುಕರು. ಅವರೆಲ್ಲರಿಗೂ ತಲಾ ಒಂದೊಂದು ಚಿನ್ನದ ನಾಣ್ಯವನ್ನು ಕೊಟ್ಟನು. ಹೀಗೆ ಕೊಡುವಾಗ ಅವನ ಹೃದಯ ಒಡೆಯುವಂತೆಯೇ ಆಯಿತು. ಆದರೂ ಹಿಂಜರಿಯಲಿಲ್ಲ. ನೆರೆದಿದ್ದ ನೆಂಟರೆಲ್ಲ ಹಿಂಬಾಲಿಸಿದರು. ಖೋಜಾ ನಸ್ರೆದ್ದೀನನು ಅವರನ್ನೆಲ್ಲಾ ಉದ್ದೇಶಪೂರ್ವಕವಾಗಿಯೇ ಆಹ್ವಾನಿಸಿದ್ದನು. ಮುಂದೆ ತನ್ನ ಮೇಲೆ ದೂರು ಹೊರಿಸಿಯಾರೆಂದು—ಬೇಕೆಂದೇ ಜಾಫರನನ್ನು ಮುಳುಗಿಸಿ ಸಾಯಿಸಿದನೆಂದು ಅಪರಾಧ ಹೊರಿಸುವ ಸಂಭವ ಬಂದೀತೆಂದು—ನಿರೀಕ್ಷಿಸಿ, ನಡೆಯುವುದನ್ನೆಲ್ಲಾ ಕಣ್ಣಾರ ನೋಡಿ ಇವರು ಸಾಕ್ಷಿಗಳಾಗಲೆಂಬ ಉದ್ದೇಶದಿಂದ ಆ ನೆಂಟರನ್ನು ಆಹ್ವಾನಿಸಿದ್ದನು.

ಸೂರ್ಯ ಮರಗಳ ಹಿಂದೆ ಕೆಳಗಿಳಿಯುತ್ತಿದ್ದನು. ಮರಗಳ ನೆರಳು ಕೊಳದ ಮೇಲೆ ಹರಡಿತ್ತು. ಸೊಳ್ಳೆಗಳು ಗಾಳಿಯಲ್ಲಿ ಗಾನ ಮಾಡುತ್ತಿದ್ದವು. ಜಾಫರ್ ಬಟ್ಟೆ ಕಳಚಿ ನೀರಿನ ಬಳಿ ಹೋದನು.

"ಇಲ್ಲಿ ಬಹಳ ಆಳ. ಮೌಲಾನಾ ಹುಸೇನ್, ನಾನು ಹೇಳಿದ್ದನ್ನು

ಮರೆತಿಲ್ಲ ತಾನೆ ? ನನಗೆ ಈಜು ಬರುವುದಿಲ್ಲ" ಎಂದನು.

ನೆಂಟರೆಲ್ಲ ಮೌನವಾಗಿ ನೋಡುತ್ತಿದ್ದರು. ದುಬಾರಿ ಬಡ್ಡಿಗಾರನು ಲಜ್ಜೆಯಿಂದ ಕೈಮುರಿಮಾಡಿಕೊಂಡು ಏನಾದೀತೋ ಎಂದು ಆಳುಕುತ್ತಳುಕುತ್ತ ಆಳವಿಲ್ಲದ ಸ್ಥಳವನ್ನು ಹುಡುಕಿಕೊಂಡು ಕೊಳವನ್ನು ಸುತ್ತುಹಾಕಿದನು.

ಜಾಫರ್ ನೀರಿನ ಅಂಚಿನಲ್ಲಿ ಕುಳಿತುಕೊಂಡನು. ಮೇಲಿನಿಂದ ಒಗ್ಗಿದ್ದ ಯಾವುದೊ ಪೊದೆಯನ್ನು ಕೈಯಲ್ಲಿ ಹಿಡಿದುಕೊಂಡು ಅಂಜುತ್ತಂಜುತ್ತಲೆ ಕಾಲ್ಬೆರಳನ್ನು ನೀರಿಗೆ ನೋಕಿಸಿದನು.

"ತಣ್ಣಗಿದೆ" ಎಂದು ಗೊಣಗಿದನು. ಆತಂಕದಿಂದ ಕಣ್ಣು ಗುಡ್ಡೆ ಮುಂದಕ್ಕೆ ಚಾಚಿತು.

ಖೋಜಾ ನಸ್ರೆದ್ದೀನ್, "ಸುಮ್ಮಸುಮ್ಮನೆ ನೀನು ಕಾಲ ಕಳೆಯು ತ್ತಿದ್ದೀಯೆ" ಎಂದು ಉತ್ತರ ಕೊಟ್ಟನು. ಕರುಣೆಗೆ ಅನರ್ಹನಾದವನಿಗೆ ಎಲ್ಲಿ ಮನಸ್ಸು ಕರಗಿ ದಯೆದೋರಬೇಕಾಗಿ ಬರುವುದೋ ಎಂದು ಹೆದರಿ ಅವನು ತನ್ನ ದೃಷ್ಟಿಯನ್ನು ಬೇರೆ ಕಡೆ ತಿರುಗಿಸಿದನು. ಆಗ ಜಾಫರನಿಂದ ತಮ್ಮ ಸರ್ವಸ್ವವನ್ನು ಕಳೆದುಕೊಂಡು ಹಾಳಾದ ಅಸಂಖ್ಯಾತ ಬಡ ಜನರ ಕಷ್ಟಗಳನ್ನು ಅವನು ನೆನೆದುಕೊಂಡನು: ಕಾಯಿಲೆ ಮಗುವಿನ ಒಣಗಿದ ಸುಕ್ಕುದುಟಿ; ಮುದುಕ ನಿಯಾಸನ ಕಣ್ಣೀರು ಮೊದಲಾದ್ದನ್ನೆಲ್ಲಾ ಜ್ಞಾಪಿಸಿಕೊಂಡನು. ಅವನ ಮುಖ ಕೋಪದಿಂದ ಕೆಂಚಾಯಿತು. ಆಗ ದುಬಾರಿ ಬಡ್ಡಿಗಾರನ ದೃಷ್ಟಿಗೆ ಪ್ರತಿಯಾಗಿ ದೃಷ್ಟಿ ಹರಿಸುವುದಕ್ಕೆ, ಅವನ ಕಣ್ಣಿಗೆ ಕಣ್ಣಿಟ್ಟು ಬಹಿರಂಗ ವಾಗಿ, ಧೈರ್ಯವಾಗಿ ನೋಡುವುದಕ್ಕೆ ಸಮರ್ಥನಾದನು.

"ಸುಮ್ಮನೆ ನೀನು ಕಾಲಹರಣ ಮಾಡುತ್ತಿದ್ದೀಯೆ. ನಿನಗೆ ವಾಸಿಮಾಡಿ ಕೊಳ್ಳಬೇಕೆಂಬ ಇಚ್ಛೆಯಿದ್ದರೆ ತಕ್ಷಣ ನೀರಿಗಿಳಿಯಬೇಕು" ಎಂದು ಅವ ನೆಂದನು.

ದುಬಾರಿ ಬಡ್ಡಿಗಾರನು ನೀರಿನೊಳಕ್ಕೆ ಸರಿಯಲು ಮೊದಲುಮಾಡಿದನು. ಅವನು ಎಷ್ಟು ನಿದಾನವಾಗಿ ನೀರಿಗಿಳಿದನೆಂದರೆ, ಅವನ ಮೊಳಕಾಲಿಗೆ ನೀರು ಬಂದಿದ್ದಾಗ ಅವನ ಹೊಟ್ಟೆ ಇನ್ನೂ ದಡದ ಮೇಲೆಯೇ ಇತ್ತು. ಕೊನೆಗೆ ಅವನು ಎದ್ದು ನಿಂತುಕೊಂಡನು. ನೀರು ಸೊಂಟದವರೆಗೆ ಬಂತು. ನೀರೊಳಗಿನ ಕಸ ಕಳೆಗಳು ಅಲುಗಿದವು; ಅವು ಮೈಗೆ ಸೋಕಿ ಕಚಗುಳಿ ಇಟ್ಟಂತಾಯಿತು.

ಚಳಿಯಿಂದ ಅವನ ಭುಜ ನಡುಗಿತು. ಅವನು ಒಂದು ಹೆಜ್ಜೆ ಮುಂದಿಟ್ಟು ಹಿಂದಿರುಗಿ ನೋಡಿದನು. ಮೂಕ ಪ್ರಾಣಿಯ ಕಣ್ಣುಗಳ ಹಾಗೆ ಅವನ ಕಣ್ಣುಗಳು ಪ್ರಾರ್ಥಿಸುತ್ತಿರುವಂತೆ ತೋರಿದವು. ಆದರೆ ಖೋಜಾ ನಸ್ರೆದ್ದೀನನು ಅದಕ್ಕೆ ತಕ್ಕ ಪ್ರತಿಕ್ರಿಯೆ ತೋರಲಿಲ್ಲ. ಈಗ ದುಬಾರಿ ಬಡ್ಡಿಗಾರನನ್ನು ಹೋಗಬಿಡುವುದಾದರೆ, ಸಾವಿರಾರು ಮಂದಿ ಬಡವರನ್ನು ಮತ್ತಷ್ಟು ದುಃಖಕ್ಕೆ ಗುರಿಮಾಡಿದಂತೆಯೇ ಆಗುತ್ತಿತ್ತು.

ನೀರು ದುಬಾರಿ ಬಡ್ಡಿಗಾರನ ಹುಬ್ಬದ ಮೇಲಕ್ಕೆ ಬಂತು. ಆದರೆ ಖೋಜಾ ನಸ್ರೆದ್ದೀನನ ಮನಸ್ಸು ಕರಗಲಿಲ್ಲ.

" ಇನ್ನೂ.... ಇನ್ನೂ ಇಳಿ. ನೀರು ನಿನ್ನ ಕಿವಿಯ ವರೆಗೆ ಬರಲಿ. ಇಲ್ಲವಾದರೆ, ನಿನಗೆ ಗುಣವಾಗುವ ವಿಷಯದಲ್ಲಿ ನಾನು ಹೊಣೆಯಲ್ಲ. ಹೀಗೆ ಬಾ ! ಧೈರ್ಯ ಮಾಡು, ಮಾನ್ಯ ಜಾಫರ್ ! ಮನಸ್ಸು ಗಟ್ಟಿಮಾಡಿಕೊ ! ಒಂದೇ ಒಂದು ಹೆಜ್ಜೆ ಮುಂದಿಡು ! ಇನ್ನು ಸ್ವಲ್ಪವೇ ಸ್ವಲ್ಪ ಮುಂದೆ ಹೋಗು ! " ಎನ್ನುತ್ತಿದ್ದನು

" ಅಪ್ ! " ಎಂದು ನೀರು ಮುಕ್ಕುಳಿಸಿದನು ; ತಕ್ಷಣ ನೀರಿನೊಳಗೆ ಮುಳುಗಿದನು

ಮೇಲಕ್ಕೆ ಬಂದಾಗ ಮತ್ತೆ ನೀರು ಮುಕ್ಕುಳಿಸಿದನು.

" ಮುಳುಗುತ್ತಿದ್ದಾನೆ ! ಮುಳುಗುತ್ತಿದ್ದಾನೆ ! " ಎಂದು ಬಂಧುಗಳೆಲ್ಲಾ ಕೂಗಿಕೊಂಡರು.

ದೊಡ್ಡ ಗದ್ದಲವೆದ್ದಿತು ಮುಳುಗುತ್ತಿರುವವನು ಹಿಡಿದುಕೊಂಡು ಮೇಲೆ ಬರಲೆಂದು ಕೊಂಬೆಗಳನ್ನೂ ಕೋಲುಗಳನ್ನೂ ನೀಡಿ ಹಿಡಿದರು. ಕೆಲವರು ಕೇವಲ ದಯಾಭಾವದಿಂದ ಅವನಿಗೆ ಸಹಾಯ ಮಾಡಬಯಸಿದರು ; ಮತ್ತೆ ಕೆಲವರು ಸಹಾಯ ಮಾಡುವಂತೆ ನಟಿಸುತ್ತಿದ್ದರು ಜಾಫರನಿಗೆ ಯಾರು ಯಾರು ಸಾಲ ಕೊಡಬೇಕಾಗಿತ್ತು, ಎಷ್ಟೆಷ್ಟು ಕೊಡಬೇಕಾಗಿತ್ತು—ಎಂದು ಸುಲಭವಾಗಿ ಹೇಳಿಬಿಡಬಹುದಾಗಿತ್ತು ಅವರ ನಡವಳಿಕೆಯನ್ನು ನೋಡಿ. ಅವನೇ ಎಲ್ಲರಿಗಿಂತ ಹೆಚ್ಚು ಗದ್ದಲ ಮಾಡುತ್ತ ಕೂಗಾಡುತ್ತಾ ಅತ್ತಿತ್ತ ಓಡಾಡುತ್ತಿದ್ದನು.

" ಇಲ್ಲಿ ! ನಿನ್ನ ಕೈ ಕೊಡು. ಮಾನ್ಯ ಜಾಫರ್ ! ಕೇಳು ; ಕೊಡು

ನಿನ್ನ ಕೈಯನ್ನು ! ಕೊಡು, ಕೊಡು ! ” ಎಂದು ಗಟ್ಟಿಯಾಗಿ ಕೂಗುತ್ತಿದ್ದನು.

ಹೀಗೆ ಕೂಗುತ್ತಿದ್ದರೂ ಅವನಿಗೆ ಚೆನ್ನಾಗಿ ಗೊತ್ತಿತ್ತು ದುಬಾರಿ ಬಡ್ಡಿಗಾರ ಕೈ ನೀಡುವುದಿಲ್ಲವೆಂದು. ‘ ಕೊಡು ’ ಎಂಬ ಪದವೇ ಸಾಕಾಗಿತ್ತು ಅವನು ಮೈ ಕೈ ಅಳ್ಳಾಡಿಸದಂತೆ ಅವನನ್ನು ಸ್ತಬ್ಧಗೊಳಿಸುವುದಕ್ಕೆ.

ನೆಂಟರೆಲ್ಲರೂ ಒಟ್ಟಾಗಿ, “ ಕೊಡು ನಮಗೆ ನಿನ್ನ ಕೈಯನ್ನು ! ಎಲ್ಲಿ, ಕೈ ಕೊಡು ! ” ಎಂದು ಕೂಗುತ್ತಿದ್ದರು.

ದುಬಾರಿ ಬಡ್ಡಿಗಾರನು ಮುಳುಗುತ್ತಲೂ ಸ್ವಲ್ಪ ಹೊತ್ತಿನ ಮೇಲೆ ಮೇಲಕ್ಕೆ ಬರುತ್ತಲೂ ಇದ್ದನು. ಮುಳುಗಿ ಮೇಲೆ ಬರುವ ಕಾಲಾವಧಿ ಸಲಸಲಕ್ಕೂ ಹೆಚ್ಚುತ್ತಾ ಹೋಗುತ್ತಿತ್ತು. ಅಷ್ಟರಲ್ಲಿ ನೀರು ಹೊರುವವನೊಬ್ಬನು ಒಂದು ಖಾಲಿ ನೀರು ಬುದ್ದಲಿಯನ್ನು ಹೆಗಲಮೇಲೆ ಹಾಕಿಕೊಂಡು ಬಿರುಬಿರನೆ ಓಡಿಬರದೆ ಇದ್ದಿದ್ದರೆ, ಆ ಕೊಳದ ಪವಿತ್ರ ತೀರ್ಥದಲ್ಲಿ ದುಬಾರಿ ಬಡ್ಡಿಗಾರನು ತನ್ನ ಜೀವನವನ್ನು ಕೊನೆಗಾಣಿಸಿಯೇ ಬಿಡುತ್ತಿದ್ದನು.

ಮುಳುಗುತ್ತಿರುವ ಮನುಷ್ಯನು ದೃಷ್ಟಿಗೆ ಬಿದ್ದಾಗ, “ ಸರಿ, ಸರಿ ! ಅವನು ದುಬಾರಿ ಬಡ್ಡಿಗಾರ ಜಾಫರನಲ್ಲವೆ ! ” ಎಂದು ಉದ್ಗರಿಸಿದನು.

ಸ್ವಲ್ಪವೂ ಹಿಂದೆ ಮುಂದೆ ನೋಡದೆ, ಬಟ್ಟೆಯನ್ನೂ ಕಳಚದೆ ಅವನು ನೀರಿಗೆ ನೆಗೆದನು ; ಕೈ ನೀಡಿ ಗಟ್ಟಿಯಾಗಿ ಕಿರಿಚಿದನು :

“ ಇಗೋ ! ತಗೋ ನನ್ನ ಕೈ ! ತಗೋ ನನ್ನ ಕೈಯನ್ನು ! ”

ದುಬಾರಿ ಬಡ್ಡಿಗಾರ ಕೈ ಹಿಡಿದುಕೊಂಡನು. ನೀರು ಹೊರುವವನು ಅವನನ್ನು ದಡಕ್ಕೆ ಎಳೆದುಹಾಕಿದನು.

ದುಬಾರಿ ಬಡ್ಡಿಗಾರನು ದಡದ ಮೇಲೆ ಮಲಗಿ ಎಚ್ಚರ ಮಾಡಿಕೊಳ್ಳುತ್ತಿರುವ ಸಮಯದಲ್ಲಿ, ಅವನನ್ನು ಕಾಪಾಡಿದಾತನು ನಿರರ್ಗಳವಾಗಿ ಮಾತಾಡುತ್ತ ಬಂಧುಗಳಿಗೆಲ್ಲಾ ಹೀಗೆ ವಿವರಿಸುತ್ತಿದ್ದನು :

“ ಅವನಿಗೆ ಸಹಾಯ ಮಾಡಹೊರಟಾಗ ನೀವು ತಪ್ಪು ದಾರಿಯಲ್ಲಿ ಹೊರಟಿರಿ. ನೀವು ‘ ತೆಗೆದುಕೊ ’ ಎನ್ನುವುದಕ್ಕೆ ಬದಲಾಗಿ ‘ ಕೊಡು ’ ಎಂದು ಕೂಗುತ್ತಿದ್ದಿರಿ. ನಿಮಗೆ ಗೊತ್ತಿಲ್ಲವೆ ? ಹಿಂದೆ ಒಂದು ಸಲ ಮಾನ್ಯ ಜಾಫರ್ ಇದೇ ಕೊಳದಲ್ಲಿ ಮುಳುಗಿಹೋಗುವುದರಲ್ಲಿದ್ದಾಗ, ಯಾರೋ ಒಬ್ಬ ಅಪರಿಚಿತ, ಬೂದು ಬಣ್ಣದ ಕತ್ತೆಯ ಮೇಲೆ ಆ ಬಳಿ ಹಾದುಹೋಗುತ್ತಿದ್ದವನು, ಬಂದು

ಅವನನ್ನು ಬದುಕಿಸಿದನು. ಜಾಫರನನ್ನು ಬದುಕಿಸುವುದಕ್ಕಾಗಿ ಅವನು ಇದೇ ಉಪಾಯವನ್ನು ಅನುಸರಿಸಿದ್ದನು; ಅದನ್ನು ನಾನು ನೆನಪಿಟ್ಟುಕೊಂಡಿದ್ದೆ. ಆ ತಿಳಿವಳಿಕೆ ಇವತ್ತು ಉಪಯೋಗಕ್ಕೆ ಬಂತು"

ಈ ವಿವರಣೆಯನ್ನು ಕೇಳಿ ಖೋಜಾ ನಸ್ರೆದ್ದೀನ್ ತುಟಿ ಕಚ್ಚಿಕೊಂಡನು. ಹೀಗೆ, ಅವನು ಎರಡು ಸಲ ದುಬಾರಿ ಬಡ್ಡಿಗಾರನನ್ನು ಕಾಪಾಡಿದಂತಾಯಿತು! ಒಂದು ಸಲ ತಾನೇ ಕೈಯಾರ ಕಾಪಾಡಿದ್ದನು; ಇನ್ನೊಂದು ಸಲ, ಈಗ, ಈ ನೀರು ಹೊರುವವನ ಮೂಲಕ. "ಹೋಗಲಿ. ಹೇಗಿದ್ದರೂ ಅವನು ಮುಳುಗಿಯೇ ತೀರುವಂತೆ ಮಾಡುತ್ತೇನೆ. ಅದಕ್ಕೆ ಒಂದು ವರ್ಷಕಾಲ ಬುಖಾರದಲ್ಲಿರಬೇಕಾಗಿ ಬಂದರೂ ಸರಿಯೆ!" ಎಂದುಕೊಂಡನು.

ಇಷ್ಟು ಹೊತ್ತಿಗೆ ದುಬಾರಿ ಬಡ್ಡಿಗಾರನು ಸಮಾಧಾನ ಸ್ಥಿತಿಗೆ ಬಂದು ಸರಿಯಾಗಿ ಉಸಿರಾಡುತ್ತಿದ್ದನು. ಕುಂಯ್ಗುಡುವ ಗೋಳು ದನಿಯಲ್ಲಿ ಹೀಗೆ ಗೊಣಗುತ್ತಿದ್ದನು :

"ಓ, ಮೌಲಾನಾ ಹುಸೇನ್! ನನಗೆ ವಾಸಿಮಾಡುವುದಾಗಿ ಹೇಳಿದೆ ನೀನು; ಆದರೆ, ಈಗ ನನ್ನನ್ನು ಸ್ವಲ್ಪದರಲ್ಲಿ ಮುಳುಗಿ ಸಾಯುವಂತೆ ಮಾಡಿಬಿಡುತ್ತಿದ್ದೆಯಲ್ಲ! ಅಲ್ಲಾನ ಆಣೆ! ಈ ಕೊಳದ ಹತ್ತಿರಕ್ಕೆ—ನೂರು ಗಜ ದೂರಕ್ಕೆ ಕೂಡ—ಸುಳಿಯುವುದಿಲ್ಲ. ಇದು ನನ್ನ ಪ್ರತಿಜ್ಞೆ. ಎಂಥ ಜ್ಞಾನಿ ನೀನು? ಕೇವಲ ಒಬ್ಬ ನೀರು ಹೊರುವವನು ನಿನಗೆ ಹೇಳಿಕೊಡಬೇಕಾಯಿತಲ್ಲ—ಮುಳುಗುತ್ತಿರುವ ಮನುಷ್ಯನನ್ನು ಬದುಕಿಸುವುದು ಹೇಗೆಂದು ನಿನಗೆ ತೋರಿಸಿಕೊಡಬೇಕಾಯಿತಲ್ಲ—ಅದೆಂಥ ಜ್ಞಾನಿ ನೀನು? ನನ್ನ ಖಲತ್ತನ್ನೂ ರುಮಾಲನ್ನೂ ಕೊಡು. ಕೊಡು ಮೌಲಾನಾ, ಕತ್ತಲೆಯಾಗುತ್ತಿದೆ; ಪ್ರಾರಂಭಮಾಡಿದ್ದನ್ನು ಮುಗಿಸಿಬಿಡೋಣ." ಹೀಗೆಂದು ಎದ್ದು ನಿಂತು ಅತ್ತ ತಿರುಗಿ, "ನೀನು, ಏ ನೀರು ಹೊರುವವನೇ, ನಿನ್ನ ಸಾಲದ ಅವಧಿ ಇನ್ನೊಂದು ವಾರದಲ್ಲಿ ಮುಗಿಯುತ್ತದೆ. ಮರೆತೀಯೆ, ಜೋಕೆ. ಆದರೆ ನಿನಗೆ ಬಹುಮಾನ ಕೊಡಬೇಕೆಂದಿದ್ದೇನೆ; ಆದ್ದರಿಂದ ನಿನ್ನ ಸಾಲದಲ್ಲಿ ಅರ್ಧ ಬಿಟ್ಟುಬಿಡುತ್ತೇನೆ.... ಅಲ್ಲ, ಅಲ್ಲ ಕಾಲು ಭಾಗವನ್ನು....ಅಲ್ಲ, ಹತ್ತನೆಯ ಒಂದು ಪಾಲನ್ನು. ಅದು ಸಾಕಷ್ಟಾಯಿತು. ಏಕೆಂದರೆ, ನಿನ್ನ ಸಾಹಾಯವಿಲ್ಲದೆಯೇ ನಾನು ಸುಲಭವಾಗಿ ಬದುಕಿ ಬಂದು ಬಿಡುತ್ತಿದ್ದೆ" ಎಂದನು.

ನೀರು ಹೊರುವವನು ಅಂಜುತ್ತ್ತಂಜುತ್ತಲೇ, "ಓ, ಮಾನ್ಯ ಜಾಫರ್! ನನ್ನ ಸಹಾಯವಿಲ್ಲದಿದ್ದರೆ ನೀನೇ ಬದುಕಿ ಬರುವುದಕ್ಕಾಗುತ್ತಿರಲಿಲ್ಲ. ನನ್ನ ಸಾಲದಲ್ಲಿ ನಾಲ್ಕನೆಯ ಒಂದು ಪಾಲನ್ನು ಬಿಡಲಾರೆಯಾ?" ಎಂದು ಕೇಳಿ ಕೊಂಡನು.

"ಹಾ! ಹೇಗೋ? ಸ್ವಾರ್ಥಸಾಧನೆಗಾಗಿ ನೀನು ನನ್ನನ್ನು ಕಾಪಾಡಿದೆ! ಒಳ್ಳೆಯ ಮುಸ್ಲಿಮನಿಗಿರಬೇಕಾದ ದಯಾಭಾವನೆಯಿಂದ ನೀನು ಕಾರ್ಯ ಮಾಡಲಿಲ್ಲ! ಲೋಭದಿಂದ ಮಾಡಿದೆ! ಅಲ್ಲವೆ? ಅದಕ್ಕೆ ಶಿಕ್ಷೆಯೇ ತಕ್ಕದ್ದು, ನೀರು ಹೊರುವವನೇ! ನಿನ್ನ ಸಾಲದಲ್ಲಿ ಸ್ವಲ್ಪವನ್ನೂ, ಒಂದೇ ಒಂದು ಚೂರನ್ನೂ ಬಿಡುವುದಿಲ್ಲ" ಎಂದುಬಿಟ್ಟನು ದುಬಾರಿ ಬಡ್ಡಿಗಾರ.

ಮುಖ ಜೋಲು ಬಿಟ್ಟುಕೊಂಡು ನೀರು ಹೊರುವವನು ಅಲ್ಲಿ ನಿಲ್ಲದೆ ಹೊರಟು ಹೋದನು. ಖೋಜಾ ನಸ್ರೆದ್ದೀನ್ ಹೋಗುವವನ ಕಿವಿಯಲ್ಲಿ ಮೆಲ್ಲಗೆ ಏನೋ ಹೇಳಿದನು; ಕರುಣಾದೃಷ್ಟಿಯಿಂದ ಅವನನ್ನೇ ನೋಡುತ್ತಿದ್ದನು. ಆ ಮೇಲೆ ತಿರಸ್ಕಾರ ಮತ್ತು ದ್ವೇಷ ತುಂಬಿದ ದೃಷ್ಟಿಯನ್ನು ಜಾಫರನ ಮೇಲೆ ತಿರುಗಿಸಿದನು.

"ಬಾ, ಮೌಲಾನಾ ಹುಸೇನ್. ಈ ಅಸೆಬುರುಕ ನೀರು ಹೊರುವವನ ಜೊತೆ ಪಿಸುಗುಟ್ಟುತ್ತಿರುವುದಕ್ಕೆ ನಿನಗೇನಿದೆ ಸಂಬಂಧ?" ಎಂದು ಜಾಫರ್ ಆತುರಪಡಿಸತೊಡಗಿದನು.

"ತಡೆ, ತಡೆ! ನೀನಾಗಲೇ ಮರೆತುಬಿಟ್ಟೆ, ಯಾರುಯಾರನ್ನು ಸಂಧಿಸಿದರೂ ಅವರಿಗೆಲ್ಲಾ ಒಂದೊಂದು ಚಿನ್ನದ ನಾಣ್ಯ ಕೊಡಬೇಕೆಂಬುದನ್ನು ನೀನಾಗಲೆ ಮರೆತುಬಿಟ್ಟೆ. ನೀರು ಹೊರುವವನಿಗೇಕೆ ಕೊಡಲಿಲ್ಲ?" ಎಂದು ಖೋಜಾ ನಸ್ರೆದ್ದೀನ್ ಕೇಳಿದನು.

"ಅಯ್ಯೋ! ಅಯ್ಯೋ! ನಾನು ಹಾಳಾಗಿ ಹೋಗುತ್ತೇನೆ! ಅಂಥ ನೀಚನಿಗೆ, ದುರಾಸೆಯ ಲೋಭಿಗೆ ನಾನು ಹಣ ಕೊಡಲೇಬೇಕಾಗುವಂತೆ ಬಲಾತ್ಕಾರಕ್ಕೆ ಸಿಕ್ಕಿದೆನಲ್ಲಾ!" ಎಂದು ದುಬಾರಿ ಬಡ್ಡಿಗಾರ ಗೋಳಾಡಿದನು. ತನ್ನ ಚೀಲದ ಗಂಟು ಬಿಚ್ಚಿ ಒಂದು ನಾಣ್ಯವನ್ನೆಸೆದನು ಎಸೆದು, "ಇದೇ ಕಡೆಯದು. ಈಗ ಕತ್ತಲೆಯಾಗಿದೆ. ನಾವು ಮನೆಗೆ ಹಿಂದಿರುಗುವಾಗ ದಾರಿಯಲ್ಲಿ ಯಾರನ್ನೂ ನಾವು ಕಾಣಲಾರೆವು" ಎಂದನು.

ಆದರೆ ಸುಮ್ಮಸುಮ್ಮನೆ ಅಲ್ಲ, ಖೋಜಾ ನಸ್ರೆದ್ದೀನನು ನೀರು ಹೊರುವವನ ಸಂಗಡ ಪಿಸುಮಾತಾಡುತ್ತಿದ್ದದ್ದು.

ಹಿಂದಿರುಗಿ ಹೋಗಲು ಹೊರಟರು. ದುಬಾರಿ ಬಡ್ಡಿಗಾರನು ಮುಂದೆ, ಖೋಜಾ ನಸ್ರೆದ್ದೀನ್ ಅವನ ಹಿಂದೆ, ಅವರಿಬ್ಬರಿಗೂ ಹಿಂದುಗಡೆ ನೆಂಟರು— ಹೀಗೆ ಸಾಲಾಗಿ ಹೊರಟರು. ಐವತ್ತು ಹೆಜ್ಜೆ ಹೋಗುವುದಕ್ಕಿಲ್ಲ, ಅಷ್ಟರಲ್ಲೇ ಒಂದು ಓಣಿಯಿಂದ ಒಬ್ಬ ನೀರು ಹೊರುವವನು ಹೊರಬಂದನು—ಕೊಳದ ದಡದ ಮೇಲೆ ಆಗಿನ್ನೂ ಬಿಟ್ಟು ಬಂದಿದ್ದ ಅದೇ ಮನುಷ್ಯ ಅವನು.

ದುಬಾರಿ ಬಡ್ಡಿಗಾರ ಅವನನ್ನು ಕಂಡೂ ಕಾಣದಂತೆ ಉದಾಸೀನವಾಗಿ ಅತ್ತ ತಿರುಗಿದನು. ಆದರೆ ಖೋಜಾ ನಸ್ರೆದ್ದೀನ್ ಅವನನ್ನು ಛೀಗುಟ್ಟಿದನು.

"ಜ್ಞಾಪಿಸಿಕೊ, ಜಾಫರ್; ಯಾರನ್ನು ಸಂಧಿಸುತ್ತೀಯೋ ಅವರಿಗೆಲ್ಲಾ!"

ಕತ್ತಲೆಯಲ್ಲಿ ಒಂದು ವ್ಯಥೆಯ ನರಳಿಕೆ ಕೇಳಬಂತು—ಜಾಫರ್ ಚೀಲದ ಗಂಟು ಬಿಚ್ಚುತ್ತಿದ್ದನು

ನೀರು ಹೊರುವವನು ನಾಣ್ಯವನ್ನು ತೆಗೆದುಕೊಂಡು ಕತ್ತಲೆಯಲ್ಲಿ ಮರೆಯಾಗಿ ಹೋದನು. ಇನ್ನೊಂದೈವತ್ತು ಹೆಜ್ಜೆ ಮುಂದೆ ಹೋದ ಮೇಲೆ ಅವನೇ ಮತ್ತೊಂದು ಕಡೆಯಿಂದ ಅವರೆದುರಿಗೆ ಬಂದನು. ದುಬಾರಿ ಬಡ್ಡಿಗಾರನು ಮುಖ ಬಿಳಿಚಿ ನಡುಗತೊಡಗಿದನು.

"ಮೌಲಾನಾ, ಅವನೇ ಮತ್ತೆ ಬಂದಿದ್ದಾನೆ...." ಎಂದು ಗೋಗರೆದನು ಜಾಫರ್.

"ನಿನಗೆದುರಾದವರಿಗೆಲ್ಲಾ" ಎಂದನು ಖೋಜಾ ನಸ್ರೆದ್ದೀನ್ ನಿಷ್ಕರುಣೆಯಿಂದ.

ಆ ಪ್ರಶಾಂತ ಸನ್ನಿವೇಶದಲ್ಲಿ ಮತ್ತೊಂದು ನರಳಿಕೆಯೆದ್ದಿತು; ಜಾಫರ್ ಚೀಲ ಬಿಚ್ಚುತ್ತಿದ್ದನು.

ದಾರಿಯುದ್ದಕ್ಕೂ ಹೀಗೆಯೇ ಆಗುತ್ತಿತ್ತು. ನೀರು ಹೊರುವವನು ಪ್ರತಿ ಐವತ್ತು ಹೆಜ್ಜೆ ದೂರಕ್ಕೊಂದು ಸಲದಂತೆ ಮತ್ತೆ ಮತ್ತೆ ಬರುತ್ತಿದ್ದನು. ಅವನು ಬಲವಾಗಿ ಏದುಸುರುಬಿಡುತ್ತಿದ್ದನು; ಅವನ ಮುಖದಿಂದ ಬೆವರಿಳಿಯುತ್ತಿತ್ತು. ನಡೆಯುತ್ತಿದ್ದದ್ದೇನೆಂದು ಅವನಿಗೆ ಅರ್ಥವಾಗಲಿಲ್ಲ; ಆದರೆ ನಾಣ್ಯವನ್ನು

ಕೈಗೆ ಹಾಕಿಕೊಳ್ಳುವುದು, ಅಲ್ಲಿ ನಿಲ್ಲದೆ ರಭಸವಾಗಿ ಓಟ ಕೀಳುವುದು, ಹಿಂದಿರುಗಿ ದಾರಿಯಲ್ಲಿ ಸ್ವಲ್ಪ ಮೇಲುಗಡೆ ಪೊದೆಗಳ ನಡುವೆಯಿಂದ ಹೊರ ಬಂದು ಜಾಫರನಿಗೆ ಕಾಣಿಸಿಕೊಳ್ಳುವುದು—ಇಷ್ಟನ್ನು ಮಾತ್ರ ಯಂತ್ರದಂತೆ ಮಾಡುತ್ತಿದ್ದನು.

ಹಣ ಉಳಿಸಬೇಕೆಂದುಕೊಂಡು ದುಬಾರಿ ಬಡ್ಡಿಗಾರನು ನಡಗೆಯನ್ನು ಜೋರುಮಾಡಿದನು; ಕಡೆಗೆ ಓಡತೊಡಗಿದನು. ಆದರೆ ಅವನು, ಕುಂಟ ಗಾಲಿನವನು, ನೀರು ಹೊರುವವನನ್ನು ಹೇಗೆ ತಾನೆ ಹಿಂದೆ ಬೀಳಿಸಿಯಾನು? ನೀರು ಹೊರುವವನು ಭಾವೋದ್ರೇಕಹೊಂದಿ ಹುಚ್ಚು ಕೆರಳಿ ವಾಯುವೇಗ ದಿಂದ ಓಡುತ್ತಿದ್ದನು; ಬೇಲಿಗಳನ್ನು ಹಾರಿ ಹಾರಿ ಓಡುತ್ತಿದ್ದನು. ಹಾಗೂ ಹೀಗೂ ಅವನು ದುಬಾರಿ ಬಡ್ಡಿಗಾರನನ್ನು ಐವತ್ತು ಸಲಕ್ಕೆ ಕಡಮೆಯಿಲ್ಲದೆ ಕಂಡು ಐವತ್ತು ಚಿನ್ನದ ನಾಣ್ಯಗಳನ್ನು ಗಿಟ್ಟಿಸಿಕೊಂಡನು. ಕಡೆಯ ಸಲ ಕಂಡದ್ದು ಅವನ ಮನೆಗೆ ತೀರಾ ಹತ್ತಿರದಲ್ಲೇ; ಒಂದು ಚಾವಣಿಯ ಮೇಲೆ ಹಾರಿ ಬಂದು ಬಾಗಿಲಿಗೆ ಅಡ್ಡವಾಗಿ ನಿಂತುಬಿಟ್ಟನು. ಕೊಟ್ಟಕೊನೆಯ ನಾಣ್ಯ ವನ್ನು ಕೈಗೆ ತೆಗೆದುಕೊಂಡ ಕೂಡಲೇ ಸೋತು ಸೊರಗಿ ನೆಲದ ಮೇಲೆ ಬಿದ್ದು ಬಿಟ್ಟನು.

ದುಬಾರಿ ಬಡ್ಡಿಗಾರನು ಅಂಗಳದೊಳಕ್ಕೆ ನುಸುಳಿಕೊಂಡನು; ಅವನ ಹಿಂದೆಯೇ ಖೋಜಾ ನಸ್ರೆದ್ದೀನ್ ಒಳಹೊಕ್ಕನು. ಅವನು ತನ್ನ ಬರಿದಾದ ಚೀಲವನ್ನು ಖೋಜಾ ನಸ್ರೆದ್ದೀನನ ಕಾಲ ಬಳಿ ಜೋರಾಗಿ ಎಸೆದುಬಿಟ್ಟು ರೇಗಿ ರೇಗಿ ಕೂಗಾಡುತ್ತಿದ್ದನು:

"ಮೌಲಾನಾ, ನನ್ನ ಚಿಕಿತ್ಸೆ ತುಂಬ ದುಬಾರಿಯಾಯಿತು! ಬಹು ಮಾನಕ್ಕೆ, ಭಿಕ್ಷಕ್ಕೆ ಮತ್ತು ಈ ಹಾಳು ನೀರು ಹೊರುವವನಿಗೆ—ಇಷ್ಟಕ್ಕೇ ಇದುವರೆಗಾಗಲೇ ಮೂರು ಸಾವಿರ ಟಂಗಗಳಿಗಿಂತ ಹೆಚ್ಚು ಖರ್ಚಾಗಿ ಹೋಯಿತು!"

"ಶಾಂತವಾಗು, ಸಮಾಧಾನ ಮಾಡಿಕೊ! ಇನ್ನೊಂದು ಅರ್ಧ ಗಂಟೆ ಯೊಳಗಾಗಿ ನಿನ್ನ ಫಲ ಕೈಸೇರುತ್ತದೆ. ಅಂಗಳದ ಮಧ್ಯದಲ್ಲಿ ಒಂದು ದೊಡ್ಡ ಅಗ್ನಿಕುಂಡದಲ್ಲಿ ಬೆಂಕಿಯುರಿಸುವಂತೆ ಅಪ್ಪಣೆ ಮಾಡು" ಎಂದನು ಖೋಜಾ ನಸ್ರೆದ್ದೀನ್.

ಆಳುಗಳು ಅಗ್ನಿಕುಂಡಕ್ಕೆ ಸೌದೆಯನ್ನು ಹೊತ್ತು ತರುತ್ತಿದ್ದರು. ಆಗ ಖೋಜಾ ನಸ್ರೆದ್ದೀನ್ ದುಬಾರಿ ಬಡ್ಡಿಗಾರನ ಸ್ವಾಭಾವಿಕವಾದ ವಿಕಾರಗಳು ವಾಸಿಯಾಗದೆ ಇರುವುದಕ್ಕೆ ಅವನೇ ಕಾರಣವೆಂದು ಅವನ ಮೇಲೆಯೇ ತಪ್ಪು ಹೊರುವಂತೆ ಮಾಡುವುದು ಹೇಗೆಂದು ಮನಸ್ಸಿನಲ್ಲೇ ಎಣಿಕೆ ಹಾಕುತ್ತಿದ್ದನು. ಅವನು ನಾನಾ ಉಪಾಯಗಳನ್ನು ಯೋಚಿಸಿದನು: ಒಂದೂ ಸಮರ್ಪಕ ವಾಗದೆ ಎಲ್ಲವನ್ನೂ ತಿರಸ್ಕರಿಸಿಬಿಟ್ಟನು. ಅಷ್ಟರಲ್ಲಿ ಕುಂಡ ಸಿದ್ಧವಾಯಿತು; ಸಣ್ಣಗೆ ಗಾಳಿ ಬೀಸಿ ಉರಿ ಹಬ್ಬಿ ದ್ರಾಕ್ಷಿಯೆಲೆಗಳ ಮೇಲೆ ಕೆಂಬೆಳಕು ಚೆಲ್ಲಿತು.

“ಜಾಫರ್, ಬಟ್ಟೆ ಕಳಚಿ ಮೂರು ಸಲ ಬೆಂಕಿಯನ್ನು ಸುತ್ತಿ ಬಾ” ಎಂದನು ಖೋಜಾ ನಸ್ರೆದ್ದೀನ್. ಅವನಿಗಿನ್ನೂ ಸಮರ್ಪಕವಾದ ಉಪಾಯ ಹೊಳೆದಿರಲಿಲ್ಲ. ಕಾಲಕಳೆಯಲೆಂದು ನೋಡುತ್ತಿದ್ದನು. ಯಾವುದೋ ಯೋಚನೆ ಯಲ್ಲಿ ಮುಳುಗಿರುವಂತೆ ತೋರಿಸಿಕೊಂಡನು. ನೆಂಟರೆಲ್ಲ ಮೌನವಾಗಿ ನೋಡುತ್ತ ಕುಳಿತರು. ದುಬಾರಿ ಬಡ್ಡಿಗಾರ ಕೆಂಡದ ಸುತ್ತ ಸುತ್ತುಹಾಕು ತ್ತಿದ್ದನು. ಕೈಗಳೆರಡನ್ನೂ ಬೀಸಿಕೊಂಡು—ಅವು ಹತ್ತಿರ ಹತ್ತಿರ ಅವನ ಮೊಳಕಾಲವರೆಗೂ ಬರುತ್ತಿದ್ದವು—ಕುಂಟ ಕಾಲಿನಿಂದ ಒಂದು ಕಡೆಗೆ ಓರೆ ಯಾಗಿ ಅವನು ನಡೆಯುತ್ತಿದ್ದರೆ, ಸೊಂಟಕ್ಕೆ ಸರಪಣಿ ಬಿಗಿದ ಕಪಿ ಸುತ್ತಾಡು ವಂತೆ ಕಾಣುತ್ತಿತ್ತು.

ಖೋಜಾ ನಸ್ರೆದ್ದೀನನ ಮುಖ ತಿಳಿಯಾಯಿತು. ಏನೋ ಭಾರ ಕಳೆದಂತಾಯಿತು. ತಲೆಯೆತ್ತಿ ನೆಟ್ಟಗೆ ಕುಳಿತುಕೊಂಡನು.

ಖಣಿಖಣಿಗುಟ್ಟುವ ಕಂಠದಿಂದ, “ಒಂದು ಕಂಬಳಿಯ ತನ್ನಿ” ಎಂದು ಅಪ್ಪಣೆ ಮಾಡಿದನು. ಆ ಮೇಲೆ, “ಜಾಫರ್ ಮತ್ತು ಉಳಿದೆಲ್ಲರೂ, ಬನ್ನಿ ಇಲ್ಲಿ” ಎಂದನು.

ನೆಂಟರನ್ನೆಲ್ಲ ದುಂಡಗೆ ಸುತ್ತ ಕೂರಿಸಿದನು. ಆ ವಲಯದ ನಟ್ಟನಡುವೆ ಕೇಂದ್ರದಲ್ಲಿ, ಜಾಫರ್ ನೆಲದ ಮೇಲೆ ಕೂತುಕೊಳ್ಳಬೇಕೆಂದು ಹೇಳಿದನು. ಆ ಮೇಲೆ ಅವರನ್ನು ಕುರಿತು ಅವನು ಹೀಗೆ ಹೇಳಿದನು:

“ನಾನು ಈಗ ಜಾಫರನ ಮೇಲೆ ಈ ಕಂಬಳಿಯನ್ನು ಮುಚ್ಚಿ ಪ್ರಾರ್ಥನೆ ಹೇಳುತ್ತೇನೆ. ನೀವೆಲ್ಲರೂ ಜಾಫರ್ ಕೂಡ, ಕಣ್ಣು ಮುಚ್ಚಿಕೊಂಡಿರಬೇಕು;

ನಾನು ಹೇಳಿದ ಮೇಲೆ ಅದೇ ಪ್ರಾರ್ಥನೆಯನ್ನು ನಾನು ಹೇಳಿಕೊಟ್ಟಂತೆಯೇ ನೀವೆಲ್ಲ ಹೇಳಬೇಕು. ಆ ಮೇಲೆ, ನಾನು ಕಂಬಳಿಯನ್ನು ಎತ್ತಿ ತೆಗೆದಾಗ ಜಾಫರನ ಅಂಗವಿಕಾರಗಳೆಲ್ಲ ಮರೆಯಾಗಿ ಅವನಿಗೆ ವಾಸಿಯಾಗಿರುತ್ತದೆ. ಆದರೆ ಮೊದಲೇ ನಿಮಗೊಂದು ಎಚ್ಚರಿಕೆ ಕೊಟ್ಟುಬಿಡುತ್ತೇನೆ. ಇದಕ್ಕೆ ಒಂದು ಬಹು ಮುಖ್ಯ ನಿಯಮವಿದೆ. ಆದರಂತೆ ನಡೆಯದೆ ಹೋದರೆ ಜಾಫರನಿಗೆ ವಾಸಿಯಾಗುವುದಿಲ್ಲ. ನಾನು ಹೇಳುವುದನ್ನು ಎಚ್ಚರಿಕೆಯಿಟ್ಟು ಕೇಳಿ; ಚೆನ್ನಾಗಿ ನೆನಪಿಟ್ಟುಕೊಳ್ಳಿ."

ಬಂಧುಗಳು ಯಾರೂ ಏನೂ ಹೇಳಲಿಲ್ಲ. ಕೇಳಿ ನೆನಪಿಟ್ಟುಕೊಳ್ಳುವುದಕ್ಕೆ ಸಿದ್ಧಮಾಡಿಕೊಳ್ಳುತ್ತಿದ್ದರು.

ಖೋಜಾ ನಸ್ರೆದ್ದೀನ್ ಬಹು ಗಟ್ಟಿಯಾಗಿ ಸ್ಪಷ್ಟವಾಗಿಯೂ ಹೇಳತೊಡಗಿದನು: "ನಾನು ಹೇಳಿಕೊಟ್ಟಹಾಗೆ ನೀವು ಪ್ರಾರ್ಥನೆಯ ನುಡಿಗಳನ್ನು ಮರುನುಡಿಯುತ್ತಿರುವಾಗ ನೀವು ಯಾರೂ ಕಪಿಯನ್ನು ನೆನಸಿಕೊಳ್ಳಕೂಡದು. ಎಲ್ಲರಿಗಿಂತ ಹೆಚ್ಚಾಗಿ, ಜಾಫರನಂತೂ ಖಂಡಿತ ಕಪಿಯನ್ನು ನೆನೆಯಕೂಡದು. ನಿಮ್ಮಲ್ಲಿ ಯಾರಾದರೊಬ್ಬರು ಅದನ್ನು ನೆನೆದುಕೊಂಡರೆ ಅಥವಾ ಇನ್ನೂ ಕೇಡು, ಅದನ್ನು ಕಲ್ಪನೆಯಲ್ಲಿ ಚಿತ್ರಿಸಿಕೊಂಡು ನೋಡಿಬಿಟ್ಟರೆ—ಅದರ ಬಾಲ, ಕೆಂಪನೆಯ ಪೃಷ್ಠಭಾಗ, ಅಸಹ್ಯಕರವಾದ ಮುಖ ಮತ್ತು ಹಳದಿ ಹಲ್ಲುಗಳು ಇವನ್ನು ಕಂಡುಬಿಟ್ಟರೆ ಆಗ ಚಿಕಿತ್ಸೆ ಸಫಲವಾಗುವುದಿಲ್ಲ; ವಿಕಾರ ಪರಿಹಾರವಾಗುವುದಿಲ್ಲ, ಜಾಫರನಿಗೆ ವಾಸಿಯಾಗುವುದಿಲ್ಲ; ಏಕೆಂದರೆ, ದೈವಭಕ್ತಿಯಿಂದ ಕೂಡಿದ ಪುಣ್ಯಕಾರ್ಯಕ್ಕೂ ಕಪಿಯಂಥ ಅಪವಿತ್ರ ಪ್ರಾಣಿಗೆ ಸಂಬಂಧಿಸಿದ ಯೋಚನೆಗಳಿಗೂ ಹೊಂದಿಕೆಯಾಗುವುದಿಲ್ಲ; ಸ್ವಲ್ಪವೂ ಹೊಂದಿಕೆಯಾಗುವುದಿಲ್ಲ ತಿಳಿಯಿತೊ?"

"ತಿಳಿಯಿತು!" ಎಂದು ಬಂಧುಗಳು ಉತ್ತರ ಕೊಟ್ಟರು.

ಖೋಜಾ ನಸ್ರೆದ್ದೀನ್ ದುಬಾರಿ ಬಡ್ಡಿಗಾರನಿಗೆ ಕಂಬಳಿ ಹೊದೆಸಿ ಅವನನ್ನು ಮುಚ್ಚಿದನು. ಮುಚ್ಚಿ "ಸಿದ್ಧನಾಗು ಜಾಫರ್, ಕಣ್ಣು ಮುಚ್ಚಿಕೊ" ಎಂದನು. ಆ ಬಳಿಕ ಬಂಧುಗಳ ಕಡೆ ತಿರುಗಿ, "ಈಗ ನೀವು ಕಣ್ಣು ಮುಚ್ಚಿಕೊಳ್ಳಿ. ನಿಯಮವನ್ನು ಮಾತ್ರ ಮರೆಯದೆ ನೆನಪಿಟ್ಟುಕೊಳ್ಳಿ: ಕಪಿಯನ್ನು ನೆನೆಯಲೇ ಬೇಡಿ" ಎಂದನು.

ಆ ಮೇಲೆ ಅವನು ಪ್ರಾರ್ಥನೆಯ ಮೊದಲ ಪದಗಳನ್ನು ರಾಗವಾಗಿ ಉಚ್ಚರಿಸಿದನು :

"ಜ್ಞಾನನಿಧಿ ಅಲ್ಲಾ ! ಸರ್ವಜ್ಞಾ ! ಪವಿತ್ರಾಕ್ಷರಗಳಾದ ಅಲೀಫ್, ಲಾಮ್, ಮೀಮ್, ಮತ್ತು ರ—ಇವುಗಳ ಮಹಿಮೆಯಿಂದ ನಿನ್ನ ಅನರ್ಹ ಗುಲಾಮ ಜಾಫರನಿಗೆ ಅವನ ಅಂಗವಿಕಾರಗಳಿಂದ ವಿಮೋಚನೆಯನ್ನನು ಗ್ರಹಿಸು........"

"ಜ್ಞಾನನಿಧಿ ಅಲ್ಲಾ ! ಸರ್ವಜ್ಞಾ !" ಎಂದು ಒಂದಕ್ಕೊಂದು ಹೊಂದದ ಹಲವು ದನಿಗಳಿಂದ ಬಂಧುಗಳು ಮೇಳವಾಗಿ ಹೇಳತೊಡಗಿದರು. ಈ ಸಮಯ ದಲ್ಲಿ ಅವರಲ್ಲೊಬ್ಬನ ಮುಖದಮೇಲೆ ಸ್ವಲ್ಪ ಗೊಂದಲ ಮತ್ತು ಆತಂಕ ಭಾವ ಗಳು ಮೂಡಿದ್ದು ಖೋಜಾ ನಸ್ರೆದ್ದೀನನಿಗೆ ಗೋಚರವಾಯಿತು. ಮತ್ತೊಬ್ಬ ನೆಂಟ ಕೆಮ್ಮತೊಡಗಿದನು ; ಮೂರನೆಯವನೊಬ್ಬನು ಮಾತುಗಳನ್ನು ಸರಿಯಾಗಿ ನುಡಿಯಲಾರದೆ ತಡವರಿಸಿದನು ; ನಾಲ್ಕನೆಯವನೊಬ್ಬನು ಯಾವುದೋ ಒಂದು ಕಣವನ್ನು ಹೊರದೂಡಲು ಹೆಣಗುತ್ತಿರುವನೆಂಬಂತೆ ತಲೆ ಕೊಡವತೊಡಗಿದನು. ಇನ್ನೊಂದು ಕ್ಷಣ ಕಳೆಯುವಷ್ಟರಲ್ಲಿ ಕಂಬಳಿಯ ಮುಸುಕಿನಲ್ಲಿ ಅಡಗಿದ್ದ ಜಾಫರನೇ ಸಮಾಧಾನವಿಲ್ಲದೆ ಚಲಿಸತೊಡಗಿದನು. ಅವನ ಮನಃಪಟಲದ ಮೇಲೆ ಹೇಳಲಾರದಷ್ಟು ಅಸಹ್ಯಕರವಾದ ಒಂದು ಕಪಿ ಕಾಣಿಸಿಕೊಂಡಿತು. ಉದ್ದ ಬಾಲ ಮತ್ತು ಹಳದಿ ಕೋರೆಗಳಿಂದ ಕೂಡಿ ಜುಗುಪ್ಸೆ ಹುಟ್ಟಿಸುತ್ತಿದ್ದ ಆ ಕಪಿ ಒಮ್ಮೆ ತನ್ನ ನಾಲಗೆಯನ್ನೂ ಇನ್ನೊಮ್ಮೆ ತನ್ನ ಕೆಂಪನೆಯ ದುಂಡು ಪಿರ್ರೆಗಳನ್ನೂ ತೋರಿಸಿ ಅಣಕಿಸುತ್ತಿತ್ತು. ಮುಸ್ಲಿಮ ನೊಬ್ಬನು ಯೋಚಿಸುವುದಕ್ಕೆ ಅನುಚಿತವಾದ ಅಶ್ಲೀಲವಾದ ದೇಹಭಾಗಗಳನ್ನು ತೋರಿಸುತ್ತಿತ್ತು.

ಖೋಜಾ ನಸ್ರೆದ್ದೀನ್ ಪ್ರಾರ್ಥನೆಯನ್ನು ಗಟ್ಟಿಯಾಗಿ ಹೇಳುತ್ತಿದ್ದನು. ಹೀಗೆ ಹೇಳುತ್ತಿದ್ದವನು ತಟಕ್ಕನೆ ನಿಲ್ಲಿಸಿಬಿಟ್ಟನು ; ಏನನ್ನೋ ಆಲಿಸುತ್ತಿರುವ ನೆಂಬಂತೆ ನಡುವೆಯೇ ನಿಲ್ಲಿಸಿಬಿಟ್ಟನು. ಬಂಧುಗಳು ಕೂಡ ಸುಮ್ಮನಾದರು ; ಅವರಲ್ಲಿ ಕೆಲವರು ಹಿಂದಕ್ಕೆ ಸರಿದರು. ಕಂಬಳಿಯ ಒಳಗೆ ಜಾಫರ್ ಹಲ್ಲು ಕಡಿಯುತ್ತಿದ್ದನು ; ಏಕೆಂದರೆ ಅವನ ಮನಸ್ಸಿನ ಆ ಕೋತಿ ನಿಸ್ಸಂಶಯ ವಾಗಿಯೂ ಪರಮಾನುಚಿತವೆನ್ನಿಸುವ ಚೇಷ್ಟೆಗಳಲ್ಲಿ ತೊಡಗಿಬಿಟ್ಟಿತ್ತು.

"ಏನಿದು!" ಎಂದು ಖೋಜಾ ನಸ್ರೆದ್ದೀನ್ ಗುಡುಗಿದನು. "ನೀಚರಾ! ಧರ್ಮ ದೂಷಕರಾ! ನಾನು ವಿಧಿಸಿದ ನಿಷೇಧಗಳನ್ನು ಮೀರುವುದಕ್ಕೆ ನಿಮಗೆ ಎದೆಯೆಷ್ಟಿದ್ದೀತು! ಅಬ್ಬಾ! ಏನು ಧೈರ್ಯ ನಿಮಗೆ; ಇದು ಕೂಡದೆಂದು ಸ್ಪಷ್ಟವಾಗಿ ಯಾವುದನ್ನು ನಿಷೇಧಿಸಿದ್ದೆನೋ ಅದನ್ನು ನೆನೆಯುತ್ತಲೇ ಪ್ರಾರ್ಥನೆ ಹೇಳುವುದಕ್ಕೆ ನಿಮ್ಮ ಎದೆಗಾರಿಕೆಯೆಷ್ಟು!" ಹೀಗೆಂದು ರೇಗಿ ಕಂಬಳಿಯನ್ನು ಕಿತ್ತೆಸೆದು ದುಬಾರಿ ಬಡ್ಡಿಗಾರನ ಕಡೆ ತಿರುಗಿದನು. "ನೀನೇಕೆ ನನ್ನ ಸಹಾಯವನ್ನು ಕೋರಿದೆ? ಈಗ ತಿಳಿಯಿತು ನನಗೆ, ನಿಜವಾಗಿಯೂ ವಾಸಿಮಾಡಿಕೊಳ್ಳಬೇಕೆಂಬ ಆಸೆಯಿರಲಿಲ್ಲ ನಿನಗೆ! ನನಗೆ ಅವಮಾನ ಮಾಡಬೇಕೆಂಬುದೇ ನಿನ್ನ ಉದ್ದೇಶ. ನನ್ನ ಶತ್ರುಗಳ ಪರವಾಗಿ ನೀನು ಕೆಲಸಮಾಡುತ್ತಿದ್ದೆ! ಜೋಕೆ, ಜಾಫರ್, ಜೋಕೆ! ನಾಳೆ ಅಮೀರರಿಗೆ ಎಲ್ಲ ಕತೆಯೂ ಗೊತ್ತಾಗುತ್ತದೆ. ಉದ್ದೇಶಪೂರ್ವಕವಾಗಿ, ಧರ್ಮದ್ರೋಹ ಬುದ್ಧಿಯಿಂದ ಒಂದು ಕಪಿಯ ವಿಷಯವಾಗಿ ಯೋಚನೆಮಾಡುತ್ತ ಅದೇ ಸಮಯದಲ್ಲಿ ನೀನು ಪ್ರಾರ್ಥನೆ ಹೇಳುತ್ತಿದ್ದ ಸಂಗತಿಯನ್ನು ಅಮೀರರಿಗೆ ನಾನೇ ತಿಳಿಸುತ್ತೇನೆ ಎಚ್ಚರಾ, ಜಾಫರ್! ನೀವೆಲ್ಲರೂ ಎಚ್ಚರವಾಗಿರಿ! ನೀವು ಯಾರೂ ಸುಲಭವಾಗಿ ತಪ್ಪಿಸಿಕೊಳ್ಳಲಾರಿರಿ! ಧರ್ಮದ್ರೋಹಕ್ಕೆ ಶಿಕ್ಷೆಯೇನೆಂದು ನಿಮಗೆಲ್ಲ ಗೊತ್ತೇ ಇದೆ...."

ಧರ್ಮದ್ರೋಹಕ್ಕೆ ಶಿಕ್ಷೆ ಯಾವಾಗಲೂ ಬಹು ಕಠಿನವೇ ಆದ್ದರಿಂದ ಬಂಧುಗಳೆಲ್ಲ ನೈಮರಗಟ್ಟಿ ಸ್ತಬ್ಧರಾದರು ಅವರು ಅತಿ ಭೀತರಾದರು. ದುಬಾರಿ ಬಡ್ಡಿಗಾರನು ತನ್ನದು ಸರಿಯೆಂದು ಸಮರ್ಥಿಸುವ ಪ್ರಯತ್ನ ಮಾಡಿ ಅರ್ಥವಾಗದಂತೆ ಏನೇನೋ ಗೊಣಗಿದನು. ಅವನ ವಿವರಣೆಯನ್ನು ಕೇಳಲು ಖೋಜಾ ನಸ್ರೆದ್ದೀನ್ ಅಲ್ಲಿ ನಿಲ್ಲಲೇ ಇಲ್ಲ. ಹಿಂದಿರುಗಿ ನಡೆದು ಬಾಗಿಲುಬಡಿದುಕೊಂಡು ಹೊರಟೇಬಿಟ್ಟನು.

ಆದಾದ ಸ್ವಲ್ಪ ಹೊತ್ತಿನಲ್ಲೇ ಚಂದ್ರೋದಯವಾಯಿತು. ಪ್ರಶಾಂತ ಪ್ರಕಾಶದಲ್ಲಿ ಪಟ್ಟಣ ಮುಳುಗಿಹೋಯಿತು. ರಾತ್ರೆ ಬಹಳ ಹೊತ್ತಿನ ವರೆಗೂ ದುಬಾರಿ ಬಡ್ಡಿಗಾರನ ಮನೆಯಲ್ಲಿ ಕೂಗಾಟ ಕಿರಿಚಾಟಗಳೂ ಕಲಹವೂ ನಡೆಯುತ್ತಲೇ ಇದ್ದವು. ಕಪಿಯನ್ನು ಮೊದಲು ಯೋಚಿಸಿಕೊಂಡವರು ಯಾರೆಂದು ಗೊತ್ತು ಮಾಡಹೊರಟು ಪ್ರತಿಯೊಬ್ಬರೂ ಕಾವೇರಿ ವಾದಿಸುತ್ತಿದ್ದರು.

೫

ಹೀಗೆ ದುಬಾರಿ ಬಡ್ಡಿಗಾರನನ್ನು ಮಂಕುಮಾಡಿ ಖೋಜಾ ನಸ್ರೆದ್ದೀನ್ ಅರಮನೆಗೆ ಹಿಂದಿರುಗಲು ಹೊರಟನು.

ಬುಖಾರ ಪಟ್ಟಣದ ಜನ ಹಗಲೆಲ್ಲ ದುಡಿದ ಮೇಲೆ ರಾತ್ರಿ ನಿದ್ರಿಸಲು ಸಿದ್ಧಮಾಡಿಕೊಳ್ಳುತ್ತಿದ್ದರು. ಓಣಿಗಳೂ ಸಂದಿಗೊಂದಿಗಳೂ ತಣ್ಣಗೆ ಮಬ್ಬು ತುಂಬಿದ್ದವು. ಸೇತುವೆಗಳ ಬಳಿ ನೀರು ಗಟ್ಟಿಯಾಗಿ ಮೊರೆಯುತ್ತಿತ್ತು. ನೆನೆದ ಮಣ್ಣಿನ ವಾಸನೆ ಹರಡುತ್ತಿತ್ತು ಆಗಾಗ ಕೆಸರಿನಲ್ಲಿ ಖೋಜಾ ನಸ್ರೆದ್ದೀನನ ಕಾಲು ಜಾರುತ್ತಿತ್ತು. ಮನೆಯ ಅಂಗಳಗಳಲ್ಲಿಯೂ ಚಾವಣಿಗಳ ಮೇಲೆಯೂ ಮಲಗಿದ್ದ ಜನರಿಗೆ ತೊಂದರೆಯಾಗುವ ಹಾಗೆ ರಾತ್ರಿಯ ಗಾಳಿ ರಸ್ತೆಯ ದೂಳನ್ನು ಎಬ್ಬಿಸಿ ಹಾರಿಸದಂತೆ ನೆಲಕ್ಕೆ ನೀರು ಚಿಮುಕಿಸುವಾಗ ಅತ್ಯುತ್ಸಾಹಿಗಳಾದವರು ಹೆಚ್ಚು ನೀರು ಸುರಿದಿದ್ದ ಕಡೆ ಕೆಸರಾಗಿ ನಡೆಯುವವರು ಆಗಾಗ ಜಾರುವಂತಾಗುತ್ತಿತ್ತು. ತೋಟಗಳು ಕತ್ತಲೆಯಲ್ಲಿ ಮುಚ್ಚಿಹೋಗಿದ್ದವು. ಅಲ್ಲಿನ ತಂಪಾದ ಪರಿಮಳವು ಗೋಡೆಗಳ ಮೇಲಿನಿಂದ ಎಲ್ಲೆಡೆಗೂ ಚೆಲ್ಲಾಡಿ ಹರಿಯುತ್ತಿತ್ತು. ದೂರದ ನಕ್ಷತ್ರಗಳು ಖೋಜಾ ನಸ್ರೆದ್ದೀನನ ಕಡೆ ಕಣ್ಣು ಮಿಟುಕಿಸಿ ಅವನಿಗೆ ಜಯವಾಗುವುದೆಂದು ಭರವಸೆ ಹೇಳುತ್ತಿದ್ದವು.

"ಹೌದು, ಹೌದು. ಈ ಪ್ರಪಂಚ ಅಷ್ಟೇನು ಕೆಟ್ಟ ಸ್ಥಳವಲ್ಲ! ಕನಿಷ್ಠ ಪಕ್ಷ, ಕತ್ತಿನ ಮೇಲೆ ಖಾಲಿ ಮಡಕೆಗೆ ಬದಲಾಗಿ, ನಿಜವಾದ ತಲೆಯಿರುವವನಿಗಾದರೂ ಅದು ಕೆಟ್ಟ ಸ್ಥಳವಲ್ಲ" ಎಂದುಕೊಂಡು ಸಂತೋಷದಿಂದ ಹಲ್ಲು ಕಿರಿದನು.

ಹೋಗುತ್ತಾ ದಾರಿಯಲ್ಲಿ ಮಾರ್ಕೆಟ್ಟೆಯ ಕಡೆಗೆ ತಿರುಗಿದನು. ತನ್ನ ಗೆಳೆಯ ಅಲಿಯ ಟೀ ಅಂಗಡಿಯಲ್ಲಿ ಇನ್ನೂ ದೀಪಗಳು ಪ್ರಕಾಶಿಸುತ್ತಿದ್ದವು. ಅಲ್ಲಿ ಹೋದಾಗ ಯಜಮಾನ ತಾನೇ ಬಾಗಿಲು ತೆರೆದನು. ಒಬ್ಬರನ್ನೊಬ್ಬರು ತಬ್ಬಿಕೊಂಡರು. ಆ ಮೇಲೆ ಇಬ್ಬರೂ ಒಂದು ಕತ್ತಲೆಯ ಕೋಣೆಗ ಹೋದರು. ಮಧ್ಯದ ತೆಳ್ಳನೆಯ ತಡಿಕೆಯ ಆಚೆ ಕಡೆಯಿಂದ ಜನ ಮಾತಾಡುವ ದನಿಗಳು, ನಗುವಿನ ಸದ್ದು ಮತ್ತು ತಟ್ಟೆಬಟ್ಟಲುಗಳ ಖಣಿ ಖಣಿ ಕೇಳಬರುತ್ತಿತ್ತು. ಅಲಿ ಬಾಗಿಲ ಕದ ಹಾಕಿ ಭದ್ರಪಡಿಸಿ ಹೊಗೆಯುಗುಳುವ ಒಂದು ಎಣ್ಣೆ ದೀಪ ಹಚ್ಚಿದನು.

ಪಿಸುಮಾತಿನಲ್ಲಿ ಅವನು ವರದಿ ಒಪ್ಪಿಸಿದನು : "ಎಲ್ಲವೂ ಸಿದ್ಧವಾಗಿದೆ. ಟೀ ಅಂಗಡಿಯಲ್ಲಿ ಗುಲ್ಜಾನಿನಾಗಿ ನಾನು ನಿರೀಕ್ಷಿಸುತ್ತಿರುತ್ತೇನೆ. ಕಮ್ಮಾರ ಯೂಸೂಫ್ ಅವಳಿಗೆ ಅಡಗಿರುವುದಕ್ಕೆ ಒಂದು ಭದ್ರವಾದ ಕ್ಷೇಮವಾದ ಸ್ಥಳವನ್ನು ಸಿದ್ಧಮಾಡಿಟ್ಟಿದ್ದಾನೆ. ನಿನ್ನ ಕತ್ತೆಗೆ ಜೀನು ಹಾಕಿ ಹಗಲೂ ರಾತ್ರಿ ಸಿದ್ಧವಾಗಿಟ್ಟಿದ್ದೇವೆ. ಅದು ಬಹಳ ಆರೋಗ್ಯವಾಗಿದೆ; ಚೆನ್ನಾಗಿ ತಿನ್ನುತ್ತದೆ; ಬಹಳ ಕೊಬ್ಬಿ ಬೆಳೆದಿದೆ."

"ಬಹಳ ಉಪಕಾರವಾಯಿತಯ್ಯಾ, ಅಲಿ. ನೀನು ನನಗೆ ಮಾಡಿರುವ ಉಪಕಾರಕ್ಕೆ ತಕ್ಕಂತೆ ಪ್ರತಿ ಮಾಡಲು ಎಂದಾದರೂ ನನಗೆ ಸಾಧ್ಯವಾದೀತೋ ಇಲ್ಲವೋ ಕಾಣೆ."

"ನೀನು ಮಾಡಿಯೇ ತೀರುತ್ತೀಯ, ಖೋಜಾ ನಸ್ರೆದ್ದೀನ್. ನೀನು ಏನು ಮಾಡಬೇಕೆಂದೆಣಿಸುತ್ತೀಯೋ ಅದನ್ನು ಮಾಡುವ ಶಕ್ತಿ ನಿನಗಿದೆ. ಆದ್ದರಿಂದ ಇನ್ನು ಕೃತಜ್ಞತೆಯ ವಿಷಯವಾಗಿ ನಾವು ಮಾತಾಡಬೇಕಾದ್ದಿಲ್ಲ. ನಿನಗೆ ಟೀ ಬೇಕೇನು ?"

ಅವನು ಹೊರಕ್ಕೆ ಹೋಗಿ ಒಂದು ಕ್ಷಣ ಬಿಟ್ಟುಕೊಂಡು ಟೀ ಗಡಿಗೆ ಯೊಡನೆ ಒಳಕ್ಕೆ ಬಂದನು.

ಪಿಸುಮಾತಿನಲ್ಲಿ ಸಂಭಾಷಣೆ ನಡೆಸತೊಡಗಿದರು. ಗುಲ್ಜಾನಿಗೆಂದು ಸಿದ್ಧಮಾಡಿದ್ದ ಗಂಡಸಿನ ಖಲತ್ತೊಂದನ್ನೂ ಅವಳ ಜಡೆಗಳೆಲ್ಲಾ ಮುಚ್ಚಿ ಹೋಗುವಂತೆ ಸುತ್ತಿಕೊಳ್ಳಲು ಒಂದು ರುಮಾಲನ್ನೂ ಅಲಿ ತಂದು ಕೊಟ್ಟನು.

ಕೊಟ್ಟಕೊನೆಯ ಸಣ್ಣ ವಿಷಯದ ವರೆಗೆ ಎಲ್ಲವನ್ನೂ ವಿವರವಾಗಿ ಚರ್ಚಿಸಿ ತೀರ್ಮಾನಿಸಿದರು. ಖೋಜಾ ನಸ್ರೆದ್ದೀನ್ ಹೊರಡುವುದರಲ್ಲಿದ್ದನು. ಅಷ್ಟರಲ್ಲಿ ನಡು ಗೋಡೆಯ ಆಚೆ ಕಡೆಯಿಂದ ತನಗೆ ಪರಿಚಿತವಾದ ದನಿಯೊಂದು ಕೇಳ ಬಂತು. ಅಂಗಡಿಯ ಕಡೆಯ ಬಾಗಿಲನ್ನು ಸ್ವಲ್ಪವೇ ಸ್ವಲ್ಪ ತೆರೆದು ಕಿವಿ ನೆಟ್ಟಗೆ ಮಾಡಿಕೊಂಡನು. ಆ ದನಿ ಪಿಡುಬಿನ ಕಲೆಯ ಗೂಢಚಾರನದು. ಖೋಜಾ ನಸ್ರೆದ್ದೀನ್ ಬಾಗಿಲನ್ನು ದೊಡ್ಡದಾಗಿ ತೆರೆದು ಒಳಗೆ ನೋಡಿದನು.

ಪಿಡುಬಿನ ಕಲೆಯ ಗೂಢಚಾರನು ಬಹು ಬೆಲೆಯ ಖಲತ್ ತೊಟ್ಟು ರುಮಾಲು ಸುತ್ತಿ ಕೃತಕ ಗಡ್ಡ ಕಟ್ಟಿಕೊಂಡು ಕುಳಿತಿದ್ದನು. ಕೆಲವು ಜನರು ಅವನ ಸುತ್ತಲೂ ನೆರೆದಿದ್ದರು. ತನ್ನ ಪ್ರಾಮುಖ್ಯತೆಯನ್ನು ಎತ್ತಿ ತೋರಿಸು ವಂತೆ ಅವನು ಹೀಗೆ ಹೇಳುತ್ತಿದ್ದನು :

" ತಾನು ಖೋಜಾ ನಸ್ರೆದ್ದೀನ್ ಎಂದುಕೊಂಡು ತಿರುಗುತ್ತಿದ್ದಾನಲ್ಲ, ಆ ಆಸಾಮಿ ವೇಷಗಾರ. ನಾನೇ ನಿಜವಾದ ಖೋಜಾ ನಸ್ರೆದ್ದೀನ್. ಆದರೆ, ನಾನು ಬಹಳ ಹಿಂದೆಯೇ ನನ್ನ ತಪ್ಪುಗಳನ್ನು ತಿಳಿದುಕೊಂಡು ಪಶ್ಚಾತ್ತಾಪ ಪಟ್ಟು ತಿದ್ದಿಕೊಂಡೆ ನನ್ನ ಹಿಂದಿನ ರೀತಿ ಎಷ್ಟು ಕೆಟ್ಟದಾಗಿತ್ತು, ಎಷ್ಟು ಅಧಾರ್ಮಿಕವಾಗಿತ್ತು—ಎಂಬುದು ನನಗೆ ಮನದಟ್ಟಾಯಿತು. ಆದ್ದರಿಂದ, ಈಗ ನಾನು, ನಿಜವಾದ ಖೋಜಾ ನಸ್ರೆದ್ದೀನ್, ನನ್ನನ್ನೇ ನೀವೂ ಅನುಸರಿಸ ಬೇಕೆಂದು ಹೇಳುತ್ತೇನೆ. ಸೂರ್ಯಸಂಥ ಘನ ಹೊಂದಿದ ನಮ್ಮ ಅಮೀರರು ನಿಜವಾಗಿಯೂ ಈ ಭೂಮಂಡಲದಲ್ಲಿರುವ ಅಲ್ಲಾನ ಪ್ರತಿನಿಧಿಗಳು. ಅವರ ಅಸದೃಶವಾದ ಜ್ಞಾನ, ದೈವಭಕ್ತಿ ಮತ್ತು ಎಣೆಯಿಲ್ಲದ ಕರುಣೆ ಇವೇ ಸಾಕ್ಷಿ ಅವರು ಅಲ್ಲಾನ ಪ್ರತಿನಿಧಿಗಳೆಂಬುದಕ್ಕೆ ನಾನು, ನಿಜವಾದ ಪ್ರತ್ಯಕ್ಷ ಖೋಜಾ ನಸ್ರೆದ್ದೀನನೇ ಇದನ್ನು ನಿಮಗೆ ಹೇಳುತ್ತಿದ್ದೇನೆ."

ಖೋಜಾ ನಸ್ರೆದ್ದೀನ್ ಅಲಿಯನ್ನು ಮೊಳಕೈಯಿಂದ ತಿವಿಯುತ್ತ, " ಓಹೋ! ಹೀಗಿದೆಯೋ ಸಂದರ್ಭ! ನಾನು ಊರು ಬಿಟ್ಟು ಹೋದೆನೆಂದು ತಿಳಿದುಕೊಂಡು ಈ ಉಪಾಯ ಹೂಡಿದ್ದಾರೆಯೋ? ನಾನಿರುವ ವಿಚಾರವನ್ನು ಅವರಿಗೆ ಸ್ವಲ್ಪ ಜ್ಞಾಪಿಸಿಕೊಡಬೇಕಾಗಿದೆ. ಅಲಿ, ಈ ನನ್ನ ಗಡ್ಡ, ಕಿಂಕಾಪಿನ ಖಲತ್ ಮತ್ತು ಈ ರುಮಾಲು ಇಷ್ಟನ್ನೂ ಈ ಕೋಣೆಯಲ್ಲಿ ಇಟ್ಟಿರುತ್ತೇನೆ, ಸ್ವಲ್ಪ ಹೊತ್ತು " ಎಂದು ಮೆಲ್ಲಗೆ ನುಡಿದನು.

ಅಲಿ ಅವನಿಗೊಂದು ಕೊಳಕಾದ ಚಿಗುಟೆ ತುಂಬಿದ ಹರುಕಲು ಖಲತ್ ತಂದುಕೊಟ್ಟನು. ಅದರ ಕೆಲಸ ಮುಗಿಯಿತೆಂದು ಅದನ್ನು ಎಲ್ಲೋ ಒಂದು ಮೂಲೆಗೆ ಎಸೆದಿದ್ದನು.

ಅದನ್ನು ತೊಟ್ಟುಕೊಳ್ಳುತ್ತ ಖೋಜಾ ನಸ್ರೆದ್ದೀನ್ ಹೀಗೆಂದನು : " ನೀನು ಚಿಗುಟೆಗಳನ್ನು ಸಾಕುತ್ತಿದ್ದೀಯೇನು? ಚಿಗುಟೆದಂಗಡಿ ಇಡಬೇಕೆಂದು ನೀನು ಎಣಿಕೆ ಹಾಕುತ್ತಿರಬಹುದು. ಆದರೆ, ಅದಕ್ಕೆ ಮೊದಲು ನಿನ್ನನ್ನೇ ಅವು ತಿಂದು ಬಿಟ್ಟಾವು, ಜೋಕೆ! " ಎಂದನು.

ಆ ಮೇಲೆ ಅವನು ಹೊರಗಡೆ ಬೀದಿಗೆ ಹೋದನು. ಟೀ ಅಂಗಡಿಯ ಮಾಲೀಕ ಗಿರಾಕಿಗಳ ಕಡೆಗೆ ಹಿಂದಿರುಗಿದನು. ಅಲ್ಲಿ ಹೋಗಿ, ಮುಂದೇನಾಗು ವುದೋ ನೋಡಲೆಂದು ತವಕಪಡುತ್ತ ಕಾಯುತ್ತಿದ್ದನು. ಅವನು ಬಹಳ

ಹೊತ್ತು ಕಾಯಬೇಕಾಗಿರಲಿಲ್ಲ. ಖೋಜಾ ನಸ್ರೆದ್ದೀನ್ ಒಂದು ಓಣಿಯಿಂದ ಹೊರ ಹೊರಟು ಅಂಗಡಿಗೆ ಬಂದನು. ದಿನವೆಲ್ಲ ದಾರಿ ನಡೆದು ನಡೆದು ಶೀರಾ ಬಳಲಿ ಹೋದ ಪ್ರಯಾಣಿಕನಂತೆ ಅವನು ನಡೆಯುತ್ತಿದ್ದನು. ಮೆಟ್ಟಿಲು ಹತ್ತಿ ಒಳಕ್ಕೆ ಬಂದು ತಕ್ಕಷ್ಟು ಬೆಳಕಿಲ್ಲದ ಒಂದು ಮೂಲೆಯಲ್ಲಿ ಕುಳಿತು ಕೊಂಡು ಟೀ ತರುವಂತೆ ಹೇಳಿದನು. ಅವನ ಕಡೆ ಯಾರೂ ಸ್ವಲ್ಪವೂ ಲಕ್ಷ್ಯ ಕೊಡಲಿಲ್ಲ: ಬುಖಾರಕ್ಕೆ ಎಲ್ಲೆಲ್ಲಿಂದಲೋ ಎಂಥೆಂಥವರೊ ಪ್ರಯಾಣ ಮಾಡಿ ಬರುತ್ತಿದ್ದರು! ಸಿಡುಬಿನ ಕಲೆಯ ಗೂಢಚಾರ ಇನ್ನೂ ಹೇಳುತ್ತಲೇ ಇದ್ದನು:

"ನನ್ನ ತಪ್ಪುಗಳು ಲೆಕ್ಕವಿಲ್ಲದಷ್ಟು. ಆದರೆ ಈಗ, ನಾನು ಖೋಜಾ ನಸ್ರೆದ್ದೀನ್, ಆ ತಪ್ಪುಗಳನ್ನೆಲ್ಲ ತೊರೆದುಬಿಟ್ಟಿದ್ದೇನೆ; ಪಶ್ಚಾತ್ತಾಪ ಪಟ್ಟಿದ್ದೇನೆ. ಧರ್ಮನಿಷ್ಠನಾಗಿರುತ್ತೇನೆಂದು ಪ್ರತಿಜ್ಞೆ ಮಾಡಿದ್ದೇನೆ. ಇಸ್ಲಾಮಿನ ಎಲ್ಲಾ ಆಜ್ಞೆಗಳನ್ನೂ ನಡಸುವೆನೆಂದೂ, ಅಮೀರರು, ಅವರ ವಜೀರರು, ರಾಜ್ಯಪಾಲರು ಮತ್ತು ಕಾಪುದಳದವರು ಇವರೆಲ್ಲರಿಗೂ ವಿಧೇಯನಾಗಿ ನಡೆದುಕೊಳ್ಳುವೆನೆಂದೂ ಪ್ರತಿಜ್ಞೆ ಮಾಡಿದ್ದೇನೆ. ಹೀಗೆ ಮಾಡಿದಂದಿನಿಂದ ನನಗೆ ಮನಶ್ಶಾಂತಿಯೂ ಸುಖವೂ ದೊರೆತಿವೆ; ನನ್ನ ಪ್ರಾಪಂಚಿಕ ಸಂಪತ್ತು ಕೂಡ ಹೆಚ್ಚಿದೆ ಹಿಂದೆ ನಾನೊಬ್ಬ ಪೋಕರಿಯೆಂದು ತಿರಸ್ಕಾರಕ್ಕೆ ಗುರಿಯಾಗಿದ್ದೆ. ಈಗ ಒಳ್ಳೆಯ ಮುಸ್ಲಿಮ್ ಸದ್ಗೃಹಸ್ಥ ಹೇಗಿರಬೇಕೋ ಹಾಗೆ ಗೌರವಸ್ಥನಾಗಿದ್ದೇನೆ."

ಬಂಡಿ ಹೊಡೆಯುವವನೊಬ್ಬನು ಚಾವಟಿಯನ್ನು ನಡುಪಟ್ಟಿಗೆ ಸೆಕ್ಕಿಸಿಕೊಂಡು ಎದ್ದು ಬಂದು ಬಹಳ ಮರ್ಯಾದೆಯಿಂದ ಅವನಿಗೆ ಒಂದು ಟೀಯನ್ನು ಅರ್ಪಿಸಿದನು.

"ಎಣೆಯಿಲ್ಲದವನಾದ ಓ ಖೋಜಾ ನಸ್ರೆದ್ದೀನ್, ನಾನು ಖೋಕಂಡಿನಿಂದ ಬುಖಾರಕ್ಕೆ ಬಂದಿದ್ದೇನೆ. ನಿನ್ನ ಬುದ್ಧಿವಂತಿಕೆಯ ವಿಚಾರವಾಗಿ ನಾನೆಷ್ಟೋ ಕೇಳಿದ್ದೆ; ಆದರೆ ಒಂದಾನೊಂದು ದಿನ ನಿನ್ನನ್ನು ಕಾಣುವೆನೆಂದು, ನಿನ್ನ ಜೊತೆ ಮಾತು ಕೂಡ ಆಡುವೆನೆಂದು, ನೆನಸಿಯೇ ಇರಲಿಲ್ಲ. ಈಗ, ನಾನು ನಿನ್ನನ್ನು ಕಂಡಿದ್ದ ಸಂಗತಿಯನ್ನು ಪ್ರತಿಯೊಬ್ಬರಿಗೂ ಹೇಳುತ್ತೇನೆ; ಆಗ ಇಲ್ಲಿ ನೀನು ನಮಗೆಲ್ಲ ಏನು ಹೇಳಿದೆಯೋ ಅದನ್ನು ಅವರಿಗೆ ತಿಳಿಸುತ್ತೇನೆ" ಎಂದನು.

"ಅದೀಗ ಸರಿಯಾದ್ದು!" ಎಂದು ಸಿಡುಬಿನ ಕಲೆಯ ಗೂಢಚಾರ ಸಮ್ಮತಿ ಸೂಚಿಸುತ್ತ ತಲೆ ಆಳ್ಳಾಡಿಸಿದನು. "ಕೇಳು ಎಲ್ಲರಿಗೂ: ಖೋಜಾ ನಸ್ರೆದ್ದೀನ್ ಈಗ ತಿದ್ದಿಕೊಂಡು ಹೊಸ ಮನುಷ್ಯನಾಗಿದ್ದಾನೆ; ತನ್ನ ತಪ್ಪು ಗಳನ್ನೆಲ್ಲಾ ತೊರೆದುಬಿಟ್ಟು ದೈವಭಕ್ತನಾದ ಆಸ್ತಿಕ ಮುಸ್ಲಿಮ್ ಆಗಿದ್ದಾನೆ; ಘನ ಅಮೀರರಿಗೆ ದೃಢ ನಿಷ್ಠೆಯ ಗುಲಾಮನಾಗಿದ್ದಾನೆ—ಎಂದು ಪ್ರತಿ ಯೊಬ್ಬನಿಗೂ ತಿಳಿಸು. ಕಂಡಕಂಡವರಿಗೆಲ್ಲಾ ಈ ಸಂತೋಷದ ಸಮಾಚಾರ ವನ್ನು ತಿಳಿಸುತ್ತಿರು."

"ಎಣೆಯೇ ಇಲ್ಲದ ಓ ಖೋಜಾ ನಸ್ರೆದ್ದೀನ್, ನಿನ್ನನ್ನು ನಾನು ಒಂದು ಪ್ರಶ್ನೆ ಕೇಳಬೇಕಾಗಿದೆ" ಎಂದು ಬಂಡಿ ಹೊಡೆಯುವವನು ಮತ್ತೆ ಪ್ರಾರಂಭಿಸಿದನು. "ನಾನೊಬ್ಬ ಶ್ರದ್ಧಾವಂತ ಆಸ್ತಿಕ ಮುಸ್ಲಿಮ್. ಅಜ್ಞಾನ ದಿಂದ ಕೂಡ ಧರ್ಮನಿಯಮಗಳನ್ನು ಮೀರುವುದಕ್ಕೆ ನನಗಿಷ್ಟವಿಲ್ಲ. ನಾನು ತಿಳಿದುಕೊಳ್ಳಬೇಕೆಂದಿರುವುದೇನೆಂದರೆ—ನಾನು ಸ್ನಾನ ಮಾಡುತ್ತಿರುವಾಗ ಮುಯೆಜಿನ್ನನು ಪ್ರಾರ್ಥನೆಗೆ ಕರೆಯುವ ಘೋಷಣೆ ಫಟಕ್ಕನೆ ಕಿವಿಗೆ ಬಿದ್ದರೆ, ಆಗ ನಾನೇನು ಮಾಡಬೇಕು? ನಾನು ಯಾವ ಕಡೆಗೆ ತಿರುಗಬೇಕು?" ಎಂದು ಕೇಳಿದನು.

"ನಿಸ್ಸಂಶಯವಾಗಿ, ಮಕ್ಕಾ ಕಡೆಗೆ—"

ಕತ್ತಲೆ ಮೂಲೆಯಿಂದ ಒಂದು ದನಿ ಕೇಳಿಸಿತು:

"ನಿನ್ನ ಉಡುಪಿನ ಕಡೆಗೆ. ಮನೆಗೆ ಬೆತ್ತಲೆ ಹೋಗದಂತಿರಬೇಕಾದರೆ, ಅದೇ ಕ್ಷೇಮವಾದ ದಾರಿ."

ಸಿಡುಬಿನ ಕಲೆಯ ಗೂಢಚಾರನು ತನ್ನಲ್ಲಿ ಜನಕ್ಕೆ ಬಹಳ ಗೌರವ ಮೂಡುವಂತೆ ಮಾಡಿದ್ದನಾದರೂ ನೆರೆದಿದ್ದವರೆಲ್ಲ ಕತ್ತು ಬಗ್ಗಿಸಿಕೊಂಡು ತಮ್ಮ ಮುಗುಳು ನಗೆ ಕಾಣದಂತೆ ಮರೆಮಾಡಿದರು.

ಗೂಢಚಾರನು ಖೋಜಾ ನಸ್ರೆದೀನನ ಕಡೆ ದೃಷ್ಟಿಸಿ ನೋಡಿದನು. ಆದರೆ ಅವನು ನೆರಳಿನಲ್ಲಿದ್ದದ್ದರಿಂದ ಅವನ ಗುರುತು ಸಿಕ್ಕಲಿಲ್ಲ.

ಅವನು ಬಹು ದರ್ಪದಿಂದ, "ಯಾವನವನು, ಮೂಲೆಯಲ್ಲಿ ವಟಗುಟ್ಟಿ ದವನು?" ಎಂದು ವಿಚಾರಿಸಿದನು. ಮೂಲೆಯ ಕಡೆ ತಿರುಗಿಕೊಂಡು,

"ಹೇಯ್! ಏ ತಿರುಕಾ, ನಿನ್ನ ಬುದ್ಧಿಯನ್ನು ಖೋಜಾ ನಸ್ರೆದ್ದೀನನಿ

ಗೆದುರಾಗಿ ಒಡ್ಡಿ ಸ್ಪರ್ಧಿಸಲು ಯತ್ನಿಸುತ್ತೀಯೋ?" ಎಂದು ಕೇಳಿದನು.

"ನಾನು ತುಂಬ ಸಣ್ಣ ಮನುಷ್ಯ; ಅದಕ್ಕೆಲ್ಲ ತಕ್ಕವನಲ್ಲ" ಎಂದನು ಖೋಜಾ ನಸ್ರೆದ್ದೀನ್. ಹೀಗೆಂದು ಟೀ ಕುಡಿಯುವುದರಲ್ಲಿ ನಿರತನಾದನು.

ಆ ಮೇಲೆ ಮಾತಾಡಿದವನು ಒಬ್ಬ ರೈತ. ಅವನು ಹೀಗೆ ಕೇಳಿದನು:

"ಓ, ನಿಷ್ಠಾವಂತ ಖೋಜಾ ನಸ್ರೆದ್ದೀನ್; ಶ್ಮಶಾನಕ್ಕೆ ಹೆಣ ತೆಗೆದು ಕೊಂಡು ಹೋಗುತ್ತಿರುವಾಗ, ಮುಸ್ಲಿಮ್ ಧರ್ಮಶಾಸ್ತ್ರದ ಅಪ್ಪಣೆಯ ಪ್ರಕಾರ, ಯಾವ ಕಡೆ ಇರುವುದು ಮೇಲು—ಶವಸಂಪುಟದ ಮುಂದೋ, ಹಿಂದೋ? ಇದಕ್ಕೆ ಉತ್ತರ ಹೇಳು" ಎಂದನು.

ಗೂಢಚಾರನು ತನ್ನ ಉತ್ತರದ ಮಹತ್ತ್ವವನ್ನು ಎಲ್ಲರ ಮನಸ್ಸಿಗೂ ಮೂಡಿಸುವುದಕ್ಕಾಗಿ ಒಂದು ಬೆರಳೆತ್ತಿ ಹಿಡಿದು, ಉತ್ತರ ಕೊಡಲು ಸಿದ್ಧನಾಗುತ್ತಿದ್ದನು. ಆದರೆ, ಅಷ್ಟರಲ್ಲೆ ಮೂಲೆಯ ದನಿ ಅವನಿಗಿಂತ ಮೊದಲೇ ಉತ್ತರ ಹೇಳಿಬಿಟ್ಟಿತು:

"ಶವಪೆಟ್ಟಿಗೆಯ ಹಿಂದೋ ಮುಂದೋ ಎಲ್ಲಿದ್ದರೂ ಒಂದೇ; ಅದರೊಳಗೆ ಮಾತ್ರ ಇಲ್ಲದಿದ್ದರೆ ಸರಿ."

ಬಹು ಬೇಗ ವಿನೋದಭಾವಕ್ಕೊಳಗಾಗುವ ಸ್ವಭಾವದ ಟೀ ಅಂಗಡಿಯ ಯಜಮಾನ ಎರಡು ಕೈಗಳಿಂದಲೂ ಹೊಟ್ಟೆಯನ್ನದುಮಿಕೊಂಡು ನೆಲದ ಮೇಲೆ ಕೂತು ಫಕಫಕನೆ ನಗತೊಡಗಿದನು. ಉಳಿದವರಿಗೂ ನಗು ತಡೆಯಲಾಗಲಿಲ್ಲ. ಮೂಲೆಯಲ್ಲಿ ಕೂತಿದ್ದ ಮನುಷ್ಯನಿಗೆ ಯಾವ ಪ್ರಶ್ನೆಗಾದರೂ ಉತ್ತರ ನಾಲಿಗೆಯ ತುದಿಯಲ್ಲೇ ಇತ್ತೆಂದೂ ಅವನು ಖೋಜಾ ನಸ್ರೆದ್ದೀನನಿಗೆ ಕೂಡ ಎದುರಾಗಿ ವಾದಿಸಲು ಸಮರ್ಥನೆಂದೂ ಸ್ಪಷ್ಟವಾಯಿತು.

ಗೂಢಚಾರನಿಗೆ ಕೋಪವೇರುತ್ತಿತ್ತು. ಅವನು ಮೆಲ್ಲನೆ ಇತ್ತ ಕಡೆ ತಲೆ ತಿರುಗಿಸಿದನು.

"ಹೇಯ್, ಯಾರೋ ನೀನು? ನಿನ್ನ ಹೆಸರೇನು? ನೀನು ನಾಲಿಗೆಯನ್ನು ಹರಿಯಬಿಡುತ್ತಿರುವ ಹಾಗೆ ಕಾಣುತ್ತಿದೆ. ಜೋಕೆ! ಅದಕ್ಕೆ ಪೂರ್ತಿಯಾಗಿ ನಮಸ್ಕಾರ ಹೇಳಿಬಿಡಬೇಕಾದೀತು ನೀನು!" ಎಂದನು. ಆ ಮೇಲೆ ಶ್ರೋತೃಗಳ ಕಡೆ ತಿರುಗಿ, "ಒಂದೇ ಒಂದು ಚಮತ್ಕಾರದ ಮಾತಿನಿಂದ ಅವನನ್ನು ಜಜ್ಜಿ ಹಾಕಿಬಿಡಬಲ್ಲೆ. ಆದರೆ ಈಗ ನಾವು ಧಾರ್ಮಿಕ ಸಂಭಾಷಣೆ

ನಡಸುತ್ತಿದ್ದೇನೆ; ಚಮತ್ಕಾರಕ್ಕೂ ಜಾಣತನಕ್ಕೂ ಇಲ್ಲಿ ಸ್ಥಳವಿಲ್ಲ. ಎಲ್ಲಾ ಅದರದರ ಕಾಲದಲ್ಲಿ ಸದ್ಯಕ್ಕೆ ಈ ತಿರುಕನಿಗೆ ನಾನು ಏನೂ ಉತ್ತರ ಕೊಡುವುದಿಲ್ಲ. ನಾನು ಹೇಳುತ್ತಿದ್ದದ್ದೇನೆಂದರೆ: ನಾನು, ಖೋಜಾ ನಸ್ರೆದ್ದೀನನು, ಓ ಮುಸ್ಲಿಮರೇ, ನೀವು ನನ್ನನ್ನು ಅನುಸರಿಸಬೇಕೆಂದು ಹೇಳುತ್ತೇನೆ. ಎಂದರೆ, ಮುಲ್ಲಾಗಳಿಗೆ ಮರ್ಯಾದೆ ಸಲ್ಲಿಸಿ, ಅಧಿಕಾರಿಗಳಿಗೆ ವಿಧೇಯರಾಗಿರಿ; ಇದರಿಂದ ನಿಮ್ಮ ಮನೆಗಳಲ್ಲಿ ಸಮೃದ್ಧಿ ನೆಲಸುತ್ತದೆ. ಇದೆಲ್ಲಕ್ಕಿಂತ ಹೆಚ್ಚಾಗಿ ತಾವೇ ಖೋಜಾ ನಸ್ರೆದ್ದೀನ್ ಎಂದು ನಟಿಸುವ ಸಂದೇಹಾಸ್ಪದರಾದ ಪೋಲಿಗಳ ಮಾತನ್ನೆಲ್ಲ ನಂಬಬೇಡಿ; ಅಂಥವರ ಮಾತಿಗೆ ಕಿವಿಗೊಡಬೇಡಿ. ಈಗ ಸ್ವಲ್ಪ ದಿನಗಳ ಕೆಳಗೆ ಇಲ್ಲಿ ಬಂದು ರಂಪ ಮಾಡಿ ಗೊಂದಲವೆಬ್ಬಿಸಿ, ನಿಜವಾದ ಖೋಜಾ ನಸ್ರೆದ್ದೀನ್ ಬಂದಿರುವನೆಂದು ತಿಳಿದು ಎಲ್ಲೋ ಓಡಿಹೋಗಿ ಅಡಗಿ ಮರೆಯಾದನಲ್ಲಾ, ಆ ಠಕ್ಕನಂಥವರನ್ನು ಖಂಡಿತ ನಂಬಬೇಡಿ. ಅಂಥ ವೇಷಗಾರ ಠಕ್ಕರನ್ನೆಲ್ಲಾ ಹಿಡಿದು ಅಮೀರರ ಕಾವಲಿನವರ ವಶಕ್ಕೆ ಒಪ್ಪಿಸಿಬಿಡಿ" ಎಂದನು.

ಖೋಜಾ ನಸ್ರೆದ್ದೀನ್ ನೆರಳಿನಿಂದ ಹೊರ ಹೊರಟು ಬೆಳಕಿಗೆ ಬಂದು, "ಸರಿ, ಸರಿ! ಸರಿಯಾದ ಮಾತು!" ಎಂದನು.

ಅಲ್ಲಿದ್ದವರೆಲ್ಲ ತಕ್ಷಣ ಅವನನ್ನು ಗುರುತಿಸಿದರು. ಅವನು ಅಷ್ಟು ತಟ್ಟನೆ ಬಂದದ್ದನ್ನು ಕಂಡು ಎಲ್ಲಾ ಬೆಕ್ಕಸಬೆರಗಾದರು. ಗೂಢಚಾರನ ಮುಖ ಬಿಳಿಚಿಕೊಂಡಿತು. ಖೋಜಾ ನಸ್ರೆದ್ದೀನನು ಅವನ ಹತ್ತಿರಕ್ಕೆ, ತೀರ ಹತ್ತಿರಕ್ಕೆ ಬಂದನು. ಆಲಿ ಅವನ ಬೆನ್ನ ಹಿಂದೆಯೇ ನಿಂತನು; ಗೂಢಚಾರನ ಮೇಲೆ ಹಾರಲು ಸಿದ್ಧನಾಗಿಯೇ ನಿಂತಿದ್ದನು.

"ಹೀಗೋ? ನಿಜವಾದ ಸಾಚಾ ಖೋಜಾ ನಸ್ರೆದ್ದೀನ್ ನೀನೇಯೋ?"

ತಬ್ಬಿಬ್ಬು ಹಿಡಿದು ಗೂಢಚಾರ ಹಿಂದೆ ಮುಂದೆ ನೋಡತೊಡಗಿದನು. ಅವನ ಕೆನ್ನೆಗಳು ನಡುಗಿದವು, ಕಣ್ಣು ಗುಡ್ಡೆಗಳು ಮುಂದೆ ಚಾಚಿದವು. ಕಷ್ಟಪಟ್ಟುಕೊಂಡು ಹೀಗೆ ಉತ್ತರ ಕೊಟ್ಟನು:

"ಹೌದು, ನಿಜವಾದ, ಸಾಚಾ ಖೋಜಾ ನಸ್ರೆದ್ದೀನ್ ನಾನೇ. ಉಳಿದವರೆಲ್ಲಾ ವೇಷಗಾರರು. ನೀನೂ ವೇಷಗಾರನೇ."

ಈ ಮಾತು ಕೇಳಿ ಖೋಜಾ ನಸ್ರೆದ್ದೀನನು, "ಮುಸ್ಲಿಮರೇ, ಏಕೆ

ಕಾಯುತ್ತಿದ್ದೀರಿ ?" ಎಂದು ಗಟ್ಟಿಯಾಗಿ ಕಿರಿಚಿದನು. "ತಾನು ಯಾರೆಂದು ಅವನೇ ಹೇಳಿಕೊಂಡಿದ್ದಾನೆ! ಹಿಡಿಯಿರಿ, ಹಿಡಿದುಕೊಳ್ಳಿರಿ, ಅವನನ್ನು! ಅಮೀರರ ಆಜ್ಞೆಯನ್ನು ಕೇಳಿಲ್ಲವೇ ನೀವು? ಖೋಜಾ ನಸ್ರೆದ್ದೀನ್ ಕೈಗೆ ಸಿಕ್ಕಿದರೆ ಏನು ಮಾಡಬೇಕೆಂದು ನಿಮಗೆ ಗೊತ್ತಿಲ್ಲವೆ? ಹಿಡಿಯಿರಿ ಅವನನ್ನು. ಇಲ್ಲದಿದ್ದರೆ, ಅವನನ್ನು ಅಡಗಿಸಿಟ್ಟ ಅಪರಾಧಕ್ಕಾಗಿ ತಕ್ಕ ಶಿಕ್ಷೆ ಅನುಭವಿಸ ಬೇಕಾದೀತು, ಜೋಕೆ!"

ಹೀಗೆನ್ನುತ್ತಾ, ಅವನು ಆ ಗೂಢಚಾರನ ಕೃತಕ ಗಡ್ಡವನ್ನೆಳೆದನು.

ಆಗ ಟೀ ಅಂಗಡಿಯಲ್ಲಿ ನೆರೆದಿದ್ದವರೆಲ್ಲ ಚಪ್ಪಟೆ ಮೂಗಿನ ಹೊರಳು ಗಣ್ಣಿನ ಸಿಡುಬಿನ ಕಲೆಯ ಮುಖವನ್ನು—ಆ ಹಾಳು ಶನಿ ಮುಖವನ್ನು—ಗುರುತಿಸಿದರು.

"ತಾನು ಯಾರೆಂಬುದನ್ನು ಅವನೇ ಹೇಳಿಕೊಂಡಿದ್ದಾನೆ!" ಎನ್ನುತ್ತ ಖೋಜಾ ನಸ್ರೆದ್ದೀನ್ ಬಲಗಡೆ ಇದ್ದವರಿಗೆ ಕಣ್ಣು ಸನ್ನೆ ಮಾಡಿದನು. "ಹಿಡಿಯಿರಿ, ಖೋಜಾ ನಸ್ರೆದ್ದೀನನನ್ನು!" ಎಂದು ಎಡಗಡೆಯವರಿಗೆ ಕಣ್ಣು ಮಿಟುಕಿಸಿದನು.

ಟೀ ಅಂಗಡಿಯ ಯಜಮಾನ ಅಲಿಯೇ ಮೊದಲು ಗೂಢಚಾರನ ಮೈ ಮೇಲೆ ಕೈಹಾಕಿದನು. ಗೂಢಚಾರನು ಬಿಡಿಸಿಕೊಳ್ಳುವುದಕ್ಕೆ ಪ್ರಯತ್ನ ಮಾಡಿದನು. ಆದರೆ, ನೀರು ಹೊರುವವರು, ರೈತರು, ಕಾರೇಗಾರರು ಎಲ್ಲರೂ ಆ ಹೊಡೆದಾಟದಲ್ಲಿ ಸೇರಿಕೊಂಡರು. ಸ್ವಲ್ಪ ಹೊತ್ತಿನ ವರೆಗೆ ಏಳುವ ಬೀಳುವ ಮುಷ್ಟಿಗಳ ಹೊರತು ಮತ್ತೇನೂ ಕಾಣುತ್ತಿರಲಿಲ್ಲ. ಖೋಜಾ ನಸ್ರೆದ್ದೀನ್ ಎಲ್ಲರಿಗಿಂತ ಹೆಚ್ಚು ಬಲವಾಗಿ ಚಚ್ಚುತ್ತಿದ್ದನು.

"ವಿನೋದಕ್ಕೆ ಹಾಗೆಂದೆ!" ಎಂದು ಗೂಢಚಾರ ನರಳಿದನು. "ಓ, ಮುಸ್ಲಿಮರೇ, ಅದೊಂದು ತಮಾಷೆ! ನಾನು ಖೋಜಾ ನಸ್ರೆದ್ದೀನ್ ಅಲ್ಲ! ನನ್ನನ್ನು ಬಿಟ್ಟುಬಿಡಿ, ಹೋಗುತ್ತೇನೆ!" ಎಂದು ಗೋಗರೆದನು.

"ಸುಳ್ಳು!" ಎಂದು ಕೂಗಿದನು ಖೋಜಾ ನಸ್ರೆದ್ದೀನ್; ಆಗಲೂ ರೊಟ್ಟಿಗಾರನು ಹಿಟ್ಟನ್ನು ಕಲಸಿ ನಾದುವಾಗ ಕುಟ್ಟುವಂತೆ ಕುಟ್ಟುತ್ತಲೇ ಇದ್ದನು. "ನೀನಾಗಿಯೇ ಹೇಳಿಕೊಂಡೆ! ನಾವೆಲ್ಲಾ ಕೇಳಿದೆವು! ಓ ಮುಸ್ಲಿಮರೇ, ಇಲ್ಲಿ ನೆರೆದಿರುವ ನಾವೆಲ್ಲ ನಮ್ಮ ಅಮೀರರಲ್ಲಿ ಅಪಾರ ಭಕ್ತಿ

ಯುಳ್ಳವರು ; ಅವರ ಅಪ್ಪಣೆಯನ್ನು ಶ್ರದ್ಧೆಯಿಂದ ನೆರವೇರಿಸಬೇಕು. ಆದ್ದರಿಂದ, ಓ ಮುಸ್ಲಿಮರೇ, ಖೋಜಾ ನಸ್ರೆದ್ದೀನನಿಗೆ ಚೆನ್ನಾಗಿ ಏಟು ಕೊಡಿ. ಅವನನ್ನು ಅರಮನೆಗೆ ಎಳೆದುಕೊಂಡು ಹೋಗಿ, ಕಾವಲುದಳದವರ ಕೈಗೆ ಒಪ್ಪಿಸಿಬಿಡಿ! ಹೊಡೆಯಿರಿ, ಚಚ್ಚಿರಿ ಅವನನ್ನ! ಅಲ್ಲಾಗೆ ಜಯವಾಗಲಿ! ನಮ್ಮ ಅಮೀರರಿಗೆ ಜಯವಾಗಲಿ!" ಎಂದು ಗಟ್ಟಿಯಾಗಿ ಕೂಗುತ್ತಿದ್ದನು.

ಗುಂಪು ಬೇಹುಗಾರನನ್ನು ಅರಮನೆಯ ಕಡೆಗೆ ಎಳೆದುಕೊಂಡು ಹೊರಟಿತು. ಸ್ವಲ್ಪವೂ ಉತ್ಸಾಹ ಕುಗ್ಗದೆ ದಾರಿಯುದ್ದಕ್ಕೂ ಅವನನ್ನು ಜನವೆಲ್ಲಾ ಚೆನ್ನಾಗಿ ಚಚ್ಚುತ್ತಿದ್ದರು ಖೋಜಾ ನಸ್ರೆದ್ದೀನ್ ಬಲವಾಗಿ ಒಂದು ಒದೆತ ಕೊಟ್ಟು ಅವನನ್ನು ಪ್ರಯಾಣ ಮಾಡಿಸಿ ಕಳಿಸಿದನು. ಆ ಮೇಲೆ ಟೀ ಅಂಗಡಿಗೆ ಹಿಂದಿರುಗಿದರು.

ಮುಖದ ಬೆವರೊರಸಿಕೊಳ್ಳುತ್ತ ಅವನು, "ಓ! ಈ ಸಲ ಅವನಿಗೆ ಚೆನ್ನಾಗಿ ಹೊಡೆತ ತಿನ್ನಿಸಿದ್ದೇವೆ. ಸದ್ಯ ನೋಡಿದರೆ ಇನ್ನೂ ಅವನಿಗೆ ಒದೆಗಡುಬು ಸಿಕ್ಕುತ್ತಲೇ ಇವೆಯೆನ್ನಬಹುದು" ಎಂದನು

ಉದ್ರೇಕಗೊಂಡ ಜನಸಮೂಹದ ಕಲಕಲವೂ, ಕರುಣೆ ಹುಟ್ಟಿಸುವ ಗೋಳಾಟವೂ ದೂರದಿಂದ ಕೇಳಬರುತ್ತಿತ್ತು. ಒಬ್ಬರನ್ನೂ ಬಿಡದೆ ಅಲ್ಲಿದ್ದ ಎಲ್ಲರಿಗೂ ಅವನ ಮೇಲೆ ಒಂದಲ್ಲ ಒಂದು ಅಸಮಾಧಾನ ಇದ್ದೇ ಇತ್ತು; ಮುಯ್ಯಿ ತೀರಿಸಿಯೇನೇ—ಎಂದು ಹಂಬಲಿಸುತ್ತಿದ್ದರು. ಈಗ ಅಮೀರನ ಆಜ್ಞೆಯ ಬಲದಿಂದ ಆ ಸಾಲವನ್ನು ತೀರಿಸುವುದಕ್ಕೆ ಒಳ್ಳೆಯ ಸಂದರ್ಭ ಒದಗಿಬಂದಿತ್ತು.

ಟೀ ಅಂಗಡಿಯ ಮಾಲೀಕ ಪರಮಾನಂದಭರಿತನಾಗಿ ಹಲ್ಲು ಕಿರಿದು ನಗುತ್ತ ಹೊಟ್ಟೆ ಸವರಿಕೊಳ್ಳುತ್ತಿದ್ದನು.

"ಇದೊಂದು ಪಾಠವಾಯಿತು ಅವನಿಗೆ. ಇನ್ನು ಮೇಲೆ ಅವನು ನನ್ನ ಅಂಗಡಿಯೊಳಕ್ಕೆ ಕಾಲಿಡುವುದಿಲ್ಲ."

ಖೋಜಾ ನಸ್ರೆದ್ದೀನ್ ಹಿಂದಿನ ಕೋಣೆಗೆ ಹೋಗಿ ಬಟ್ಟೆ ಬದಲಿಸಿಕೊಂಡು ಕೃತಕ ಗಡ್ಡ ಕಟ್ಟಿಕೊಂಡು ಮತ್ತೊಮ್ಮೆ ಬಾಗ್ದಾದ್ ಜ್ಞಾನಿ ಮೌಲಾನಾ ಹುಸೇನ್ ಆಗಿಬಿಟ್ಟನು.

ಅವನು ಅರಮನೆಗೆ ತಲುಪಿದಾಗ ಕಾವು ಕೋಣೆಯಿಂದ ನರಳಿಕೆ ಕೇಳ

ಬಂತು. ಒಳಗೆ ಹೋಗಿ ನೋಡಿದನು. ಸಿಡುಬಿನ ಕಲೆಯ ಗೂಢಚಾರನು ಮೈಯೆಲ್ಲಾ ಗಾಯವಾಗಿ ಊದಿಕೊಂಡು ಅಸ್ತವ್ಯಸ್ತವಾಗಿ ಫೆಲ್ಟ್ ಹಾಳೆಯ ಮೇಲೆ ಬಿದ್ದುಕೊಂಡಿದ್ದನು. ಆರ್ಸ್‌ಲಾನ್-ಬೆಕ್ ಒಂದು ಲಾಟೀನು ಹಿಡಿದುಕೊಂಡು ಅವನ ಮೇಲೆ ಬಗ್ಗಿ ನೋಡುತ್ತಿದ್ದನು.

"ಏನಾಯಿತು, ಮಾನ್ಯ ಆರ್ಸ್‌ಲಾನ್-ಬೆಕ್?" ಎಂದು ಖೋಜಾ ನಸ್ರೆದ್ದೀನ್ ಶಾಂತಭಾವದಿಂದ ಪ್ರಶ್ನೆ ಮಾಡಿದನು.

"ಪ್ರಮಾದವಾಯಿತು, ಮೌಲಾನಾ! ಆ ಠಕ್ಕ, ಪೋಕರಿ, ಖೋಜಾ ನಸ್ರೆದ್ದೀನ್ ಮತ್ತೆ ಊರಿಗೆ ಹಿಂದಿರುಗಿ ಬಂದಿದ್ದಾನೆ. ನಮ್ಮ ಗೂಢಚಾರರಲ್ಲಿ ಅತ್ಯಂತ ಸಮರ್ಥನಾದವನನ್ನು ಅವನು ಚೆನ್ನಾಗಿ ಚಚ್ಚಿಬಿಟ್ಟಿದ್ದಾನೆ. ನನ್ನ ಅಪ್ಪಣೆಯ ಪ್ರಕಾರವೇ ಇವನು ತಾನೇ ಖೋಜಾ ನಸ್ರೆದ್ದೀನನೆಂದು ಹೇಳಿಕೊಳ್ಳುತ್ತಿದ್ದನು. ನಿಜವಾದ ಖೋಜಾ ನಸ್ರೆದ್ದೀನನ ದುಷ್ಟ ಪ್ರಭಾವವನ್ನು ಸಾಧ್ಯವಾದಷ್ಟು ತಗ್ಗಿಸುವುದಕ್ಕಾಗಿ ರಾಜಭಕ್ತಿಯನ್ನೂ ಧರ್ಮಶ್ರದ್ಧೆಯನ್ನೂ ಪ್ರಚೋದಿಸುವ ಭಾಷಣಗಳನ್ನು ಮಾಡುತ್ತಿದ್ದನು. ಅದರ ಫಲ ಹೀಗಾಯಿತು!"

ಗೂಢಚಾರನು ಜಜ್ಜಿ ಗಾಯಹೊಂದಿದ ಮುಖವನ್ನೆತ್ತಿಕೊಂಡು, "ಆ! ಆ!" ಎಂದು ನರಳಿದನು. "ಈ ಹಾಳು ಶಸಿಯ ವಿಚಾರಕ್ಕೆ ಇನ್ನು ನಾನು ಕೈಹಾಕುವುದಿಲ್ಲ. ಈ ಪೋಲಿಯ ತಂಟೆಗೆ ಹೋಗುವುದಿಲ್ಲ. ಮುಂದಿನ ಸಲ, ನನಗೆ ಗೊತ್ತು, ನನ್ನನ್ನವನು ಕೊಂದೇ ಬಿಡುತ್ತಾನೆ. ಇನ್ನು ಮುಂದೆ ನಾನು ಬೇಹುಗಾರಿಕೆಯನ್ನೇ ಮಾಡುವುದಿಲ್ಲ. ನಾಳೆ ದಿನ ನಾನು ಇಲ್ಲಿಂದ ಹೊರಟು ಹೋಗುತ್ತೇನೆ. ನನ್ನನ್ನು ಯಾರೂ ಅರಿಯದಿರುವ ಎಲ್ಲಿಗಾದರೂ ಓಡಿಹೋಗಿ ಯಾವುದಾದರೊಂದು ಪ್ರಾಮಾಣಿಕವಾದ ಉದ್ಯೋಗವನ್ನು ಕೈಕೊಳ್ಳುತ್ತೇನೆ?" ಎನ್ನುತ್ತಿದ್ದನು.

ಲಾಟೀನು ಬೆಳಕಿನಲ್ಲಿ ಗೂಢಚಾರನ ಸ್ಥಿತಿಯನ್ನು ಪರಿಶೀಲಿಸಿ ನೋಡಿ ಖೋಜಾ ನಸ್ರೆದ್ದೀನನಿಗೆ ಸ್ವಲ್ಪ ಮಟ್ಟಿಗೆ ಮರುಕವೂ ಹುಟ್ಟಿತು. "ನನ್ನ ಗೆಳೆಯರು ತಮ್ಮ ಕೆಲಸವನ್ನು ಬಹಳ ಸಮರ್ಪಕವಾಗಿ ಮಾಡಿದ್ದಾರೆ. ಅರಮನೆ ಇನ್ನೊಂದಿನ್ನೂರು ಗಜ ಹೆಚ್ಚು ದೂರ ಇದ್ದಿದ್ದರೆ, ಅವನನ್ನು ಅವರು ಜೀವಸಹಿತ ತರುತ್ತಿರಲೇ ಇರಲಿಲ್ಲವೆನ್ನಬಹುದು. ಅವನು ಸರಿಯಾಗಿ ಪಾಠ

ಕಲಿತುಕೊಂಡನೋ ಇಲ್ಲವೋ ಮುಂದೆ ನೋಡಬೇಕು" ಎಂದುಕೊಂಡನು.

ಮುಂಬೆಳಗಿನಲ್ಲಿ ಆ ಸಿಡುಬಿನ ಕಲೆಯ ಗೂಢಚಾರ ಒಂದು ಸಣ್ಣ ಗಂಟನ್ನು ಹೊತ್ತುಕೊಂಡು ಅರಮನೆಯಿಂದ ಹೊರ್ರ ಹೊರಡುತ್ತಿದ್ದದ್ದನ್ನು ಖೋಜಾ ನಸ್ರೆದ್ದೀನ್ ತಾನಿದ್ದ ಗೋಪುರದ ಕಿಟಕಿಯಿಂದ ಕಂಡನು. ಅವನು ಕುಂಟುತ್ತಿದ್ದನು; ಕೈಯಿಂದ ಎದೆ, ಭುಜ ಮತ್ತು ಪಕ್ಕಗಳನ್ನು ಮುಟ್ಟಿ ನೋಡಿಕೊಳ್ಳುತ್ತಲೇ ಇದ್ದನು. ಆಗಾಗ ಸುಧಾರಿಸಿಕೊಳ್ಳಲೆಂದು ನೆಲದ ಮೇಲೆ ಕೂರುತ್ತಿದ್ದನು. ಅವನು ಮಾರ್ಕಟ್ಟೆಯ ಚೌಕವನ್ನು ದಾಟಿ ಅಂಗಡಿ ಸಾಲುಗಳ ನೆರಳಿನಲ್ಲಿ ಮರೆಯಾಗಿ ಹೋದನು.

ರಾತ್ರಿಯ ಕತ್ತಲೆ ಬೆಳಗಿನ ಬೆಳಕಿನ ಮುಂದೆ ನಿಲ್ಲಲಾರದೆ ಓಡಿ ಹೋಯಿತು. ಪ್ರಾತಃಕಾಲದ ಆ ಬೆಳಕು ಪರಿಶುದ್ಧವಾಗಿ, ಪ್ರಶಾಂತವಾಗಿ, ಪ್ರಕಾಶಿಸುತ್ತಿತ್ತು. ಇಬ್ಬನಿಯ ಹನಿಗಳು ಸೂರ್ಯಕಿರಣಗಳಲ್ಲಿ ಪೋಣಿಸಿದಂತೆ ಕಾಣುತ್ತಿದ್ದವು ಹಕ್ಕಿಗಳು ಚಿಲಿಪಿಲಿಗುಟ್ಟುತ್ತಾ ಸಿಳ್ಳುಹಾಕುತ್ತಾ ಹಾರಾಡುತ್ತಿದ್ದವು ಚಿಟ್ಟೆಗಳು ರೆಕ್ಕೆ ಬಿಚ್ಚಿಕೊಂಡು ಎಳೆ ಬಿಸಿಲಿನಲ್ಲಿ ಹಾರಿ ವಿಹರಿಸುತ್ತಿದ್ದವು. ಒಂದು ದುಂಬಿ ಖೋಜಾ ನಸ್ರೆದ್ದೀನನ ಎದುರಿಗೆ, ಕೋಣೆಯ ಕಿಟಕಿಯ ದಿಂಡಿನ ಮೇಲೆ ಕುಳಿತು, ಅದರ ಚೆಡಿಯ ಮೇಲಿಟ್ಟಿದ್ದ ಜಾಡಿಯಲ್ಲಿದ್ದ ಜೇನುತುಪ್ಪದ ವಾಸನೆಯನ್ನು ಕಂಡು ಅದನ್ನು ಹುಡುಕಿಕೊಂಡು ಅಲ್ಲೆಲ್ಲಾ ಸುತ್ತಾಡತೊಡಗಿತು.

ಈಗ ಸೂರ್ಯೋದಯವಾಗುತ್ತಿತ್ತು. ಸೂರ್ಯ ಖೋಜಾ ನಸ್ರೆದ್ದೀನನ ಹಳೆಯ ಗೆಳೆಯ, ನಿಷ್ಠಾವಂತ ಸ್ನೇಹಿತ. ಪ್ರತಿ ಪ್ರಾತಃಕಾಲವೂ ಅವರು ಪರಸ್ಪರವಾಗಿ ನೋಡುತ್ತಿದ್ದರು. ಪ್ರತಿ ಪ್ರಾತಃಕಾಲವೂ ಖೋಜಾ ನಸ್ರೆದ್ದೀನ್ ಕಳೆದ ಒಂದು ವರ್ಷದಿಂದಲೂ ಸೂರ್ಯನನ್ನು ನೋಡಿಯೇ ಇರಲಿಲ್ಲವೇನೋ ಎಂಬಂತೆ, ಒಂದೇ ರೀತಿ ಆನಂದಪರವಶನಾಗುತ್ತಿದ್ದನು. ಸೂರ್ಯ ಉದಯವಾಗುತ್ತಿದ್ದನು—ತನ್ನ ಅನುಗ್ರಹವನ್ನು ಎಲ್ಲರಿಗೂ ಒಂದೇ ಸಮನಾಗಿ ನೀಡುವ ದಯಾಮಯ ಉದಾರದೇವತೆ. ಬೆಳಗಿನ ಕಿರಣಗಳಲ್ಲಿ ಕೆಂಪಗೆ ಉರಿದು ಥಳಥಳನೆ ಹೊಳೆದು ಉಜ್ಜ್ವಲ ಪ್ರಕಾಶದಲ್ಲಿ ಮಿಂದು ಲೋಕವೆಲ್ಲಾ ತನ್ನ ಸೌಂದರ್ಯವನ್ನು ತೆರೆದು ತೋರಿ ಸ್ವಾಗತ ಬಯಸಿತು. ಕುರಿ ತುಪ್ಪಟದಂತೆ ಕಾಣುವ ತುಂಡು ಮೋಡಗಳು, ಗೋಪುರಗಳ ನಯ ಮಾಡಿದ ಇಟ್ಟಿಗೆ

ಗಳು, ನೆನೆದ ಎಲೆಗಳು, ನೀರು, ಹುಲ್ಲು, ಹೂವುಗಳು; ಸರ್ವ ಸಾಧಾರಣ ವಾದ ಒರಟು ಕಲ್ಲು ತುಂಡು ಕೂಡ—ಪ್ರಕೃತಿದೇವಿಯ ಸವತಿ ಮಗುವೋ ಎಂಬಂತೆ ಅನಾದರಣೆಗೊಳಗಾಗಿರುವ ಆ ಕಲ್ಲು ತುಂಡು ಕೂಡ—ಸೂರ್ಯ ನನ್ನು ಸ್ವಾಗತಿಸಲು ಒಂದು ವಿಚಿತ್ರ ಸೌಂದರ್ಯವನ್ನು ತಳೆದು ಮೆರೆಯು ತ್ತಿದ್ದವು.

ಸಂತೋಷದಿಂದ ನಗುನಗುತ್ತ ಕಳೆಯೆರಚುವ ಮುಖ ತೋರಿ ಹೊರ ಬರುತ್ತಿರುವ ಗೆಳೆಯನ ಮುಂದೆ ಖೋಜಾ ನಸ್ರೆದ್ದೀನ್ ಹೇಗೆ ತಾನೆ ಉದಾ ಸೀನತೆಯಿಂದಿದ್ದಾನು! ಪ್ರಕಾಶಮಾನವಾದ ಸೂರ್ಯಕಿರಣಗಳಲ್ಲಿ ಒಂದು ಮರ ಮಿನುಗಿತು; ಖೋಜಾ ನಸ್ರೆದ್ದೀನ್ ಹಸುರೆಲೆ ತೊಟ್ಟವನೋ ಏನೋ ಎಂಬಂತೆ ಆ ಮರದೊಡನೆ ತಾನೂ ಮಿನುಗಿದನು. ತೀರ ಹತ್ತಿರದ ಮಿನರೆಟ್ಟಿನಲ್ಲಿ ಪಾರಿವಾಳಗಳು ಗುಬ್ಬಳಿಸುತ್ತ ರೆಕ್ಕೆಗಳನ್ನು ಕೊಕ್ಕಿನಿಂದ ಒಪ್ಪಮಾಡಿಕೊಳ್ಳು ತ್ತಿದ್ದವು; ಅದನ್ನು ಕಂಡು ಖೋಜಾ ನಸ್ರೆದ್ದೀನನಿಗೆ ತಾನೂ ತನ್ನ ರೆಕ್ಕೆಯನ್ನು ಒಪ್ಪಮಾಡಿಕೊಳ್ಳಬೇಕೆನ್ನಿಸಿತು. ಕಿಟಕಿಯ ಮುಂದುಗಡೆ ಒಂದೆರಡು ಚಿಟ್ಟೆ ಗಳು ರೆಕ್ಕೆಯಾಡಿಸುತ್ತ ಮೆಲ್ಲನೆ ಹಾರಿದವು; ಖೋಜಾ ನಸ್ರೆದ್ದೀನ್ ಅವುಗಳ ಜೊತೆ ತಾನೂ ಮೂರನೆಯವನಾಗಬೇಕೆಂದು ಬಯಸಿದನು.

ಖೋಜಾ ನಸ್ರೆದ್ದೀನ್ ಆಗ ಸುಖಿಯಾಗಿದ್ದನು; ಸುಖದಿಂದ ಅವನ ಕಣ್ಣುಗಳು ಕಳೆದುಂಬಿದವು. ಆಗ ಸಿಡುಬಿನ ಕಲೆಯ ಗೂಢಚಾರನ ನೆನಪು ಮನಸ್ಸಿನಲ್ಲಿ ಸುಳಿಯಿತು. ನಲವೇರಿಯುತ್ತಿರುವ ಈ ಪ್ರಾತಃಕಾಲ ಅವನಿಗೆ ಹೊಸ ಬಾಳಿನ—ಪರಿಶುದ್ಧವಾದ ಗೌರವಾರ್ಹವಾದ ಜೀವನದ—ಪ್ರಾತಃಕಾಲ ವಾಗಲೆಂದು ಖೋಜಾ ನಸ್ರೆದ್ದೀನ್ ಹಾರಯಿಸಿದನು. ಆದರೆ ಹೀಗೆ ಹಾರಯಿ ಸಿದ ಕೂಡಲೆ ಆ ಹಾರಯಿಕೆ ನೆರವೇರಲಾರದೆಂದು ಅವನ ಮನಸ್ಸಿನಲ್ಲಿ ವಿಷಾದ ತಲೆದೋರಿತು. ಈ ಮನುಷ್ಯನ ಆತ್ಮದಲ್ಲಿ ಮಿತಿಮೀರಿ ಕೇಡು ತುಂಬಿ ಕೇಡಿಗ ತನ ಅವನ ಮೈಯುಂಡು ಹೋಗಿರುವುದರಿಂದ ಅದನ್ನು ತೊರೆದು ಬಿಸುಟು ಬಿಡುವುದು ಅವನಿಗೆ ಸಾಧ್ಯವಾಗುವುದಿಲ್ಲವೆಂದೂ ಪೂರ್ತಿ ವಾಸಿಯಾದ ಕೂಡಲೆ ತನ್ನ ಹಳೆಯ ತಂತ್ರಗಳನ್ನೇ ಮತ್ತೆ ಕೈಕೊಳ್ಳುವನೆಂದೂ ಅವನು ಭಾವಿಸಿ ದನು.

ಅನಂತರ ನಡೆದ ಘಟನೆಗಳು ಖೋಜಾ ನಸ್ರೆದ್ದೀನನ ಊಹೆ ತಪ್ಪಲ್ಲ

ವೆಂದು ಸಿದ್ಧಪಡಿಸಿದವು. ಅವನಿಗೆ ಮಾನವಗುಣಪರಿಜ್ಞಾನ ಚೆನ್ನಾಗಿದ್ದದ್ದರಿಂದ ಅವರ ವಿಷಯದ ಅವನ ಅಭಿಪ್ರಾಯ ಸಾಮಾನ್ಯವಾಗಿ ತಪ್ಪಾಗುತ್ತಲೇ ಇರಲಿಲ್ಲ. ಈ ಒಂದು ಸಂದರ್ಭದಲ್ಲಿ ಈ ಗೂಢಚಾರನ ವಿಷಯದಲ್ಲಿ ತನ್ನ ಅಭಿಪ್ರಾಯ ತಪ್ಪಾಗಿದ್ದಿದ್ದರೆ ಅವನಿಗೆ ಮಹದಾನಂದವಾಗುತ್ತಿತ್ತು; ಗೂಢಚಾರನ ಆತ್ಮೋದ್ಧಾರವನ್ನು ಅವನು ಸಂತೋಷದಿಂದ ಸ್ವಾಗತಿಸುತ್ತಿದ್ದನು. ಏನಾದರೇನು? ಕೊಳೆತು ಹೋದ ವಸ್ತು ಮತ್ತೆ ಹೊಸದಾಗಿ ಸ್ವಚ್ಛತೆಯಿಂದ ಕಳಕಳಿಸಲಾರದು. ಆಗಲಾರದು; ದುರ್ನಾತ ಪರಿಮಳವಾಗಿ ಪರಿವರ್ತನೆ ಹೊಂದಲಾರದು. ಇದನ್ನು ನೆನೆದು ಖೋಜಾ ನಸ್ರೆದ್ದೀನ್ ವಿಷಾದದಿಂದ ನಿಟ್ಟುಸುರು ಬಿಟ್ಟನು.

ಅವನು ಕನಸು ಕಾಣುತ್ತಿದ್ದ ಪ್ರಪಂಚ ಇದು: ಅಲ್ಲಿ ಜನರೆಲ್ಲ ಅಣ್ಣ ತಮ್ಮಂದಿರಂತೆ ಹೊಂದಿಕೊಂಡು ಬಾಳುತ್ತಾರೆ. ಲೋಭವನ್ನಾಗಲಿ ಮಾತ್ಸರ್ಯವನ್ನಾಗಲಿ ಅನೃತವನ್ನಾಗಲಿ ಕೋಪವನ್ನಾಗಲಿ ಅವರರಿಯರು. ಕಷ್ಟ ಕಾಲದಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡುತ್ತಾರೆ; ಪ್ರತಿಯೊಬ್ಬನೂ ತನ್ನ ಸಂತೋಷವನ್ನು ಉಳಿದೆಲ್ಲರೊಡನೆಯೂ ಹಂಚಿಕೊಂಡು ಅನುಭವಿಸುತ್ತಾನೆ. ಹೀಗೆ ಇಂಥ ಸುಖಮಯವಾದ ಪ್ರಪಂಚವನ್ನು ಕಾಣಬೇಕೆಂದು ಹಂಬಲಿಸುತ್ತಿದ್ದನಾದರೂ ಅವನು ಪ್ರಪಂಚದ ವಾಸ್ತವ ಸ್ಥಿತಿಯನ್ನು ಚೆನ್ನಾಗಿ ಅರಿತಿದ್ದನು; ಆ ಅರಿವಿನಿಂದ ಬಹು ದುಃಖ ಪಟ್ಟಿದ್ದನು; ಇಲ್ಲಿ ಜನ ತಾವು ಹೇಗೆ ಬಾಳಬಾರದೋ ಹಾಗೆಯೇ ಬಾಳುತ್ತಿದ್ದಾರೆ; ಒಬ್ಬರನ್ನೊಬ್ಬರು ಕಾಡಿಸಿ ಪೀಡಿಸಿ ಗುಲಾಮಗಿರಿಗೆ ತಳ್ಳುತ್ತಿದ್ದಾರೆ; ತಮ್ಮ ಪರಿಶುದ್ಧ ಆತ್ಮಕ್ಕೆ ಎಲ್ಲ ಬಗೆಯ ಪಾಪಗಳನ್ನೂ ಲೇಪಿಸಿಕೊಳ್ಳುತ್ತಿದ್ದಾರೆ! ಹೀಗಾದರೆ, ಪರಿಶುದ್ಧವಾದ ಮತ್ತು ಪ್ರಾಮಾಣಿಕವಾದ ಜೀವನದ ನಿಯಮಗಳನ್ನು ಅರಿತುಕೊಳ್ಳಲು ಮಾನವರಿಗೆ ಎಷ್ಟು ಕಾಲ ಹಿಡಿದೀತು?

ಒಂದಲ್ಲ ಒಂದು ದಿನ ಮನುಷ್ಯರು ಈ ಪರಿಶುದ್ಧ ಜೀವನದ ನಿಯಮಗಳನ್ನು ಅರಿತುಕೊಳ್ಳುವರೆಂಬುದರಲ್ಲಿ ಖೋಜಾ ನಸ್ರೆದ್ದೀನನಿಗೆ ಸ್ವಲ್ಪವೂ ಸಂಶಯವಿರಲಿಲ್ಲ. ಈ ಪ್ರಪಂಚದಲ್ಲಿ ಕೆಟ್ಟವರಿಗಿಂತ ಒಳ್ಳೆಯವರೇ ಹೆಚ್ಚು ಸಂಖ್ಯೆಯಲ್ಲಿದ್ದಾರೆಂದು ಅವನು ದೃಢವಾಗಿ ನಂಬಿದ್ದನು: ದುಬಾರಿ ಬಡ್ಡಿಗಾರ ಜಾಫರ್ ಮತ್ತು ಸಿಡುಬಿನ ಕಲೆಯ ಗೂಢಚಾರ— ಇವರಿಬ್ಬರು ಪಾಪಾತ್ಮರು

ಭಯಂಕರವಾದ ವಿನಾಯಿತಿ ಮಾತ್ರ. ಪ್ರಕೃತಿಯು ಮಾನವನಿಗೆ ಒಳ್ಳೆಯದನ್ನು ಮಾತ್ರವೇ ದಯಪಾಲಿಸಿತ್ತೆಂದೂ, ಅವನಲ್ಲಿ ಕಾಣಬರುವ ಕೇಡೆಲ್ಲಾ—ಪಾಪವೆಲ್ಲಾ—ಹೊರಗಿನಿಂದ ಆವನ ಆತ್ಮದೊಳಕ್ಕೆ ಹರಿದು ಬಂದ 'ಮಷ್ಟು' ಎಂದೂ, ಈ ಮಷ್ಟು ಹುಟ್ಟಿ ಒಳಕ್ಕೆ ಹರಿದು ಬರುವುದಕ್ಕೆ ತಪ್ಪುತಪ್ಪಾಗಿ ರಚಿಸಿ ಅನ್ಯಾಯ ಮಾರ್ಗದಲ್ಲಿ ನಡಸುತ್ತಿರುವ ಸಾಮಾಜಿಕ ಜೀವನ ಸ್ವರೂಪವೇ ಕಾರಣವೆಂದೂ ಅವನು ದೃಢವಾಗಿ ನಂಬಿದ್ದನು. ಮಾನವರು ತಮ್ಮ ಜೀವನವನ್ನು ಹೊಸದಾಗಿ ರೂಪುಗೊಳಿಸಿಕೊಂಡು ಅದಕ್ಕಂಟಿದ ಕಲ್ಮಷಗಳನ್ನು ತೊಳೆದುಕೊಳ್ಳಲು ಮೊದಲುಮಾಡುವ ಆ ಪವಿತ್ರ ಪ್ರಯತ್ನದಿಂದ ತಮ್ಮ ಆತ್ಮದ ಕಂದು ಕರೆಗಳನ್ನೆಲ್ಲಾ ಪೂರ್ತಿಯಾಗಿ ತೊಳೆದುಕೊಂಡು ಪರಿಶುದ್ಧರಾಗುವ ಆ ಸುದಿನ ಬಂದೇ ಬರುವುದೆಂದು ಅವನು ಬಹು ದೃಢವಾಗಿ ನಂಬಿದ್ದನು.

ಖೋಜಾ ನಸ್ರೆದ್ದೀನನ ಆಲೋಚನೆಗಳು ಹೀಗೆ ಹರಿಯುತ್ತಿದ್ದವೆಂಬುದಕ್ಕೆ ಅವನ ವಿಷಯವಾಗಿ ಕೇಳಬರುವ, ಅವನ ಆತ್ಮಸತ್ತ್ವದ ಮುದ್ರೆಯೊತ್ತಿದಂತೆ ತೋರುವ ಅನೇಕ ಕಥೆಗಳು ಸಮರ್ಥನೆ ನೀಡುತ್ತವೆ. ಅವನ ಹೆಸರಿಗೆ ಮಸಿ ಬಳಿಯುವ ಅನೇಕ ಪ್ರಯತ್ನಗಳು ನಡೆದಿವೆ—ಹೊಟ್ಟೆಕಿಚ್ಚಿನಿಂದ, ನಿರುದ್ದೇಶವಾದ ಕೇವಲ ಕರುಬಿನಿಂದ ಇಂಥ ಪ್ರಯತ್ನಗಳು ನಡೆದಿವೆ. ಆದರೂ ಈ ಪ್ರಯತ್ನಗಳು ಸಫಲವಾಗಿಲ್ಲ; ಏಕೆಂದರೆ ಅಸತ್ಯಗಳೆಂದೂ ಸತ್ಯವನ್ನು ಜಯಿಸಲಾರವು. ಖೋಜಾ ನಸ್ರೆದ್ದೀನನ ಹೆಸರು ಏನೇ ಆದರೂ, ಸರ್ವದಾ ಘನವಾಗಿಯೂ ಪರಿಶುದ್ಧವಾಗಿಯೂ ಉಳಿದಿರುತ್ತದೆ, ಏನೇ ಅಡ್ಡಿ ಬಂದರೂ ತನ್ನ ಥಳಥಳಿಸುವ ಪ್ರಖರವಾದ ಪ್ರಭೆಯನ್ನು ಕಳೆದುಕೊಳ್ಳದೆ ಉಜ್ಜ್ವಲವಾಗಿ ಪ್ರಕಾಶಿಸುತ್ತಿರುವ ವಜ್ರದಂತೆ ಅವನ ಹೆಸರು ಶಾಶ್ವತವಾಗಿ ಬೆಳಗುತ್ತಿರುವುದು. ಈಗಲೂ ಕೂಡ, ತುರ್ಕಿ ದೇಶದಲ್ಲಿ ಅಕ್-ಷೆಹಿರ್‌ನಲ್ಲಿರುವ ಸಾಮಾನ್ಯ ರೀತಿಯ ಅವನ ಗೋರಿಯ ಮುಂದೆ ನಿಲ್ಲುವ ಪ್ರಯಾಣಿಕರು ಬುಖಾರ ಪಟ್ಟಣದ ಹರ್ಷಪ್ರಕೃತಿಯ ಪ್ರವಾಸಿಗ ಖೋಜಾ ನಸ್ರೆದ್ದೀನನ ವಿಷಯವಾಗಿ ಒಳ್ಳೆಯ ಮಾತನ್ನೇ ಆಡುತ್ತಾರೆ. ಕವಿ ವಿವರಿಸುವಂತೆ ಅವರು ಹೀಗೆ ಹೇಳುತ್ತಾರೆ:

"ಅವನು ಗಾಳಿಯಂತೆ ಪ್ರಪಂಚವನ್ನು ಸುತ್ತಿದರೂ ತನ್ನ ಹೃದಯ

ವನ್ನು ಭೂಮಿಗೆ ನೀಡಿದನು— ಗಾಳಿ, ಅವನ ಮರಣಾನಂತರ ಅವನ ಹೃದಯ ದಲ್ಲರಳಿದ್ದ ಗುಲಾಬಿಗಳ ಪರಿಮಳವನ್ನು ಪ್ರಪಂಚದ ಎಲ್ಲೆಡೆಗೂ ಹೊತ್ತು ಸಾಗಿಸಿತು. ಪ್ರಪಂಚದ ಸಮಗ್ರ ಸೌಂದರ್ಯವನ್ನು ನೋಡುತ್ತ ನಡಸಿದ ಜೀವನ ನಿಜವಾಗಿಯೂ ಸುಂದರವಾದ್ದು. ತಾನು ಬಿಟ್ಟು ಹೋದ ಮೇಲೆ ತನ್ನ ಆತ್ಮದ ಪರಿಶುದ್ಧ ಪ್ರಭೆಯನ್ನು ಉಳಿಸಿ ಹೋಗುವ ಜೀವನ ಬಹು ಸುಂದರ ಜೀವನ "

ಆಕ್-ಷೆಹಿರ್‌ನ ಗೋರಿಯಲ್ಲಿ ಯಾವುದೊಂದು ಶರೀರವೂ ಇಲ್ಲವೆಂದೂ ತಾನು ಸತ್ತುಹೋದದ್ದಾಗಿ ಸುದ್ದಿ ಹುಟ್ಟಿಸುವುದಕ್ಕೋಸ್ಕರ ಉದ್ದೇಶಪೂರ್ವಕ ವಾಗಿಯೇ ಖೋಜಾ ನಸ್ರೆದ್ದೀನ್ ಆ ಗೋರಿಯನ್ನು ಸ್ಥಾಪಿಸಿದನೆಂದೂ, ಅದನ್ನು ಸ್ಥಾಪಿಸಿ ಎಂದಿನಂತೆ ತನ್ನ ಪ್ರಪಂಚ ಸಂಚಾರವನ್ನು ಮುಂದುವರಿಸಿದ ನೆಂದೂ ಕೆಲವರು ಹೇಳುತ್ತಾರೆ. ಇದು ನಿಜವೆ? ಅಥವಾ ಸುಳ್ಳೆ? ವ್ಯರ್ಥ ವಾದ ಬರಿ ಊಹೆಗಳಲ್ಲಿ ತೊಡಗುವುದು ಬೇಡ. ನಮಗೆ ಗೊತ್ತಿರುವುದಿಷ್ಟು: ಖೋಜಾ ನಸ್ರೆದ್ದೀನ್ ಏನು ಬೇಕಾದರೂ ಮಾಡಬಲ್ಲ; ಏನು ಮಾಡಿದ ನೆಂದರೂ ಅವನಿಗೆ ಒಪ್ಪುತ್ತದೆ.

೬

ಪ್ರಾತಃಕಾಲ ಬಹು ಬೇಗ ಹಾರಿಹೋಯಿತು; ಸೆಕೆಯಿಂದ ಉಸಿರು ಕಟ್ಟಿಸುವ ಮಧ್ಯಾಹ್ನ ಓಡಿ ಓಡಿ ಬಂತು.

ತಪ್ಪಿಸಿಕೊಂಡು ಹೋಗುವುದಕ್ಕೆ ಎಲ್ಲವೂ ಸಿದ್ಧವಾಗಿತ್ತು. ಖೋಜಾ ನಸ್ರೆದ್ದೀನ್ ತನ್ನ ಸೆರೆಯಾಳಿನ ಬಳಿಗೆ ಹತ್ತಿ ಹೋದನು.

"ಓ, ಪರಮಪ್ರಾಜ್ಞ ಮೌಲಾನಾ ಹುಸೇನ್, ನಿನ್ನ ಸೆರೆಮನೆಯ ವಾಸದ ಅವಧಿ ಮುಗಿಯಿತು. ಇವತ್ತು ರಾತ್ರಿ ನಾನು ಅರಮನೆಯನ್ನು ಬಿಟ್ಟು ಹೋಗುತ್ತೇನೆ. ನಿನ್ನ ಕೋಣೆಯ ಬಾಗಿಲಿಗೆ ನಾನು ಬೀಗ ಹಾಕುವು ದಿಲ್ಲ. ಇದಕ್ಕೆ ಒಂದೇ ಒಂದು ಷರತ್ತು: ನೀನು ಈ ಸ್ಥಳವನ್ನು ಇನ್ನೆರಡು ದಿನಗಳ ವರೆಗೆ ಬಿಟ್ಟು ಹೋಗಕೂಡದು. ಅದಕ್ಕೆ ಮುಂಚೆ ನೀನು ಇಲ್ಲಿಂದ ಹೊರಟುಬಿಟ್ಟರೆ, ನಾನು ಇನ್ನೂ ಅರಮನೆಯಲ್ಲಿ ಇದ್ದರೂ ಇರಬಹುದು; ಹಾಗೇನಾದರೂ ನಾನಿಲ್ಲೇ ಇದ್ದು ನೀನು ಹೊರ ಬಂದರೆ, ಆಗ ನೀನು ಸೆರೆ

ಯಿಂದ ತಪ್ಪಿಸಿಕೊಂಡು ಬರುತ್ತಿದ್ದೀಯೆಂದು ಅಪರಾಧ ಹೊರಿಸಿ ವಧಕಾರರ ಕೈಗೆ ಒಪ್ಪಿಸಬೇಕಾಗಿ ಬರುತ್ತದೆ. ನಮಸ್ಕಾರ, ಹೋಗಿ ಬರುತ್ತೇನೆ, ಮೌಲಾನಾ ಹುಸೇನ್! ಬಾಗ್ದಾದಿನ ಜ್ಞಾನೀ, ಹೋಗಿ ಬರುತ್ತೇನೆ; ನನ್ನ ವಿಷಯದಲ್ಲಿ ಅತಿ ಕಠಿನವಾಗಿ ಭಾವಿಸಬೇಡ. ಅಮೀರನಿಗೆ ಸತ್ಯವನ್ನು ತಿಳಿಸುವ ಮತ್ತು ನನ್ನ ಹೆಸರನ್ನು ಅವನಿಗೆ ಹೇಳುವ ಕೆಲಸವನ್ನು ನಿನಗೆ ಒಪ್ಪಿಸುತ್ತೇನೆ. ಕಿವಿಗೊಟ್ಟು ಕೇಳು: ನನ್ನ ಹೆಸರು ಖೋಜಾ ನಸ್ರೆದ್ದೀನ್" ಎಂದನು.

"ಏನು!" ಎಂದು ನುಡಿದು ಮುದುಕ ಬೆಚ್ಚಿಬಿದ್ದನು. ಅವನು ಒಂದೇ ಒಂದು ಮಾತನ್ನುಚ್ಚರಿಸುವುದಕ್ಕೂ ಅಶಕ್ತನಾದನು. ಆ ಹೆಸರನ್ನು ನುಡಿದ ಸದ್ದು ಕೇಳಿಯೇ ಅವನು ಮಾತಿಲ್ಲದ ಮೂಕನಾದನು.

ಕದ ಮುಚ್ಚಿಕೊಂಡಾಗ ಕಿರುಗುಟ್ಟಿತು. ಮೆಟ್ಟಲಿಳಿದು ಹೋಗುತ್ತಿದ್ದ ಖೋಜಾ ನಸ್ರೆದ್ದೀನನ ಹೆಜ್ಜೆಯ ಸದ್ದು ಕ್ರಮಕ್ರಮವಾಗಿ ಮೆತ್ತಗಾಗುತ್ತ ಬಂದು ಕೊನೆಗೆ ಕೇಳಿಸದೆ ಹೋಯಿತು. ಮುದುಕ ಬಹು ಎಚ್ಚರಿಕೆಯಿಂದ ಬಾಗಿಲ ಬಳಿ ಬಂದು ಎಳೆದು ಪರೀಕ್ಷಿಸಿದನು; ಬೀಗ ಹಾಕಿರಲಿಲ್ಲ. ಹೊರಕ್ಕೆ ಇಣಕಿ ನೋಡಿದನು—ಅಲ್ಲಿ ಯಾರೂ ಕಾಣಿಸಲಿಲ್ಲ ಆಗ ಆತುರಾತುರವಾಗಿ ಕದವನ್ನು ಸದ್ದಾಗುವಂತೆ ಮುಚ್ಚಿ ಅಗುಣಿ ಹಾಕಿಕೊಂಡನು.

"ಇಲ್ಲ, ಇಲ್ಲ. ನಾನು ಈಗ ಹೊರಗೆ ಹೋಗುವುದಿಲ್ಲ. ಇಡೀ ಒಂದು ವಾರದ ವರೆಗೆ ಬೇಕಾದರೂ ಇಲ್ಲೇ ಇದ್ದೇನು; ಆದರೆ ಆ ಖೋಜಾ ನಸ್ರೆದ್ದೀನನ ತಂಟೆ ಇನ್ನು ಬೇಡ ನನಗೆ" ಎಂದು ಗೊಣಗಿಕೊಳ್ಳುತ್ತಿದ್ದನು.

ರಾತ್ರಿಯಾಯಿತು. ನೀಲಾಕಾಶದಲ್ಲಿ ನಕ್ಷತ್ರಗಳು ಕಾಣಿಸಿಕೊಂಡವು. ಆಗ ಖೋಜಾ ನಸ್ರೆದ್ದೀನ್ ಒಂದು ಮಡಕೆಯನ್ನು ಕೈಯಲ್ಲಿ ಹಿಡಿದುಕೊಂಡು ಅಮೀರನ ಅಂತಃಪುರದ ಬಾಗಿಲಲ್ಲಿ ಕಾವಲಿದ್ದ ಸಿಪಾಯಿಗಳ ಬಳಿ ಹೋದನು. ಅವನು ಬಂದದ್ದು ಸಿಪಾಯಿಗಳಿಗೆ ಕಾಣಿಸಲಿಲ್ಲ. ಅವರು ತಮ್ಮ ಸಂಭಾಷಣೆಯನ್ನು ನಿಲ್ಲಿಸದೆ ಮುಂದುವರಿಸುತ್ತಿದ್ದರು.

"ಅಲ್ಲಿ ನೋಡು, ಇನ್ನೊಂದು ನಕ್ಷತ್ರ ಬಿತ್ತು" ಎಂದನು ಇಡಿ ರೊಟ್ಟಿಗಳನ್ನು ನುಂಗುವ ಸೋಮಾರಿ ಠೊಣೆಯ. "ನೀನು ಹೇಳುವ ಹಾಗೆ, ಅವು ನೆಲದ ಮೇಲೆ ಬೀಳುವ ಹಾಗಿದ್ದರೆ, ಆದೇಕೆ ಜನ ಅವನ್ನು ಕಂಡೇ ಇಲ್ಲ?" ಎಂದು ಕೇಳಿದನು.

“ ಬಹುಶಃ ಅವು ಸಮುದ್ರದಲ್ಲಿ ಬೀಳಬಹುದು ” ಎಂದನು ಎರಡನೆಯ ಸಿಪಾಯಿ.

ಖೋಜಾ ನಸ್ರದ್ದೀನ್ ನಡುವೆ ಬಂದು, “ ಹೇಯ್, ಶೂರ ಸಿಪಾಯಿಗಳೇ! ಪ್ರಧಾನ ವರ್ಷವರನನ್ನು ಕರೆಯಿರಿ. ಕಾಯಿಲೆ ಬಿದ್ದಿರುವ ಉಪಪತ್ನಿಗೆ ಔಷಧವನ್ನು ತಂದಿದ್ದೇನೆ ” ಎಂದನು.

ಪ್ರಧಾನ ವರ್ಷವರನು ಹೊರಬಂದನು. ಪೊಟ್ಟಣವನ್ನು ತೆಗೆದುಕೊಳ್ಳುವುದಕ್ಕೆ ಬಹು ಭಕ್ತಿಯಿಂದ ಕೈಗಳೆರಡನ್ನೂ ನೀಡಿದನು. ಆ ಪೊಟ್ಟಣದಲ್ಲಿದ್ದದ್ದು ಸುಣ್ಣದ ತಿಳಿ, ಅಷ್ಟೇ. ಔಷಧಿಯನ್ನು ಹೇಗೆ ತೆಗೆದುಕೊಳ್ಳಬೇಕೆಂಬ ವಿಷಯದಲ್ಲಿ ವಿವರವಾದ ಸೂಚನೆಗಳನ್ನೆಲ್ಲಾ ಗಮನವಿಟ್ಟು ಕೇಳಿ ತಿಳಿದುಕೊಂಡು, ವರ್ಷವರನು ಅಂತಃಪುರಕ್ಕೆ ಹಿಂತಿರುಗಿ ಹೊರಟು ಹೋದನು.

ರೋಣೆಯು ಕೇಳಿದನು : “ ಓ, ಪರಮಜ್ಞಾನಿ ಮೌಲಾನಾ ಹುಸೇನ್, ಪ್ರಪಂಚದಲ್ಲಿ ನೀನು ಎಲ್ಲವನ್ನೂ ಬಲ್ಲವನು. ನಿನ್ನ ಪಾಂಡಿತ್ಯ ಅನಂತವಾದದ್ದು. ಆಕಾಶದಿಂದ ಬೀಳುವ ನಕ್ಷತ್ರಗಳು ಎಲ್ಲಿ ಬೀಳುತ್ತವೆ? ಜನಕ್ಕೇಕೆ ಅವು ಸಿಕ್ಕುವುದಿಲ್ಲ? ದಯಮಾಡಿ ಹೇಳಬೇಕು ” ಎಂದು ಕೇಳಿದನು.

ಖೋಜಾ ನಸ್ರದ್ದೀನನಿಗೆ ಒಂದು ತಮಾಷೆ ಮಾಡಬೇಕೆಂದು ಮನಸ್ಸಾಯಿತು.

“ ಏನು? ನಿಮಗೆ ಗೊತ್ತಿಲ್ಲವೆ? ನಕ್ಷತ್ರಗಳು ಬಿದ್ದಾಗ ಅವು ಒಡೆದು ಸಣ್ಣ ಸಣ್ಣ ಬೆಳ್ಳಿಯ ನಾಣ್ಯಗಳಾಗುತ್ತವೆ; ಭಿಕ್ಷುಕರು ಅವನ್ನು ಎತ್ತಿಕೊಳ್ಳುತ್ತಾರೆ. ಈ ರೀತಿ ಭಾಗ್ಯವಂತರಾದ ಜನರನ್ನು ನಾನು ಕಂಡಿದ್ದೇನೆ ” ಎಂದು ಗಂಭೀರವಾಗಿ ಉತ್ತರ ಕೊಟ್ಟನು.

ಕಾವುಸಿಪಾಯಿಗಳು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಅವರ ಮುಖದ ಮೇಲೆ ಎಣೆಯಿಲ್ಲದ ಬೆರಗು ಮೂಡಿತ್ತು.

ಅವರ ದಡ್ಡತನಕ್ಕೆ ಹಲ್ಲುಕಿರಿಯುತ್ತಾ ಖೋಜಾ ನಸ್ರದ್ದೀನ್ ತನ್ನ ದಾರಿ ಹಿಡಿದು ತಾನು ಹೊರಟು ಹೋದನು. ತನ್ನ ಈ ವಿನೋದ ಮುಂದೆ ಎಷ್ಟು ಮಟ್ಟಿಗೆ ತನಗೆ ಅನುಕೂಲವಾಗಿ ಪರಿಣಮಿಸುವುದೆಂದು ಅವನಿಗೆ ಸ್ವಲ್ಪವೂ ಹೊಳೆದೇ ಇರಲಿಲ್ಲ

ಅರ್ಧ ರಾತ್ರಿಯ ವರೆಗೂ ಅವನು ತನ್ನ ಗೋಪುರದಲ್ಲೇ ಇದ್ದನು.

ಕೊನೆಗೆ ಪಟ್ಟಣದಲ್ಲೂ ಅರಮನೆಯಲ್ಲೂ ಎಲ್ಲಾ ಶಾಂತವಾಯಿತು; ನಿಶ್ಶಬ್ದ ವಾಯಿತು. ಇನ್ನು ಕಾಲ ಕಳೆಯುವ ಹಾಗಿರಲಿಲ್ಲ. ಬೇಸಿಗೆಯ ರಾತ್ರಿಗಳು ರೆಕ್ಕೆ ಕಟ್ಟಿಕೊಂಡು ಬಹು ಬೇಗ ಹಾರಿ ಹೋಗುತ್ತವೆ. ಖೋಜಾ ನಸ್ರೆದ್ದೀನ್ ಕೆಳಕ್ಕಿಳಿದು ಕಳ್ಳ ಹೆಜ್ಜೆಯಿಟ್ಟುಕೊಂಡು ಅಮೀರನ ಅಂತಃಪುರದ ಕಡೆ ಹೊರಟನು.

"ಕಾವಲಿಪಾಯಿಗಳು ಇಷ್ಟು ಹೊತ್ತಿಗೆ ನಿದ್ದೆ ಮಾಡುತ್ತಿರಬಹುದು" ಎಂದು ಅವನು ಯೋಚಿಸಿದನು.

ಹತ್ತಿರ ಹೋದಾಗ ಅವರು ಮೆತ್ತಗೆ ಮಾತಾಡಿಕೊಳ್ಳುತ್ತಿದ್ದದ್ದನ್ನು ಕೇಳಿ ಅವನಿಗೆ ತುಂಬ ನಿರಾಸೆಯಾಯಿತು. "ಒಂದೇ ಒಂದು ನಕ್ಷತ್ರವಾದರೂ ಇಲ್ಲಿ ಬೀಳಬಾರದೆ! ಬೆಳ್ಳಿಯನ್ನು ಆರಿಸಿಕೊಂಡು ನಾವು ತಕ್ಷಣ ಐಶ್ವರ್ಯ ವಂತರಾಗಬಹುದು" ಎಂದು ಠೊಣೆಯ ಸೋಮಾರಿ ಅನ್ನುತ್ತಿದ್ದನು.

ಅವನ ಜೊತೆಗಾರ, "ನಕ್ಷತ್ರಗಳು ಒಡೆದು ಬೆಳ್ಳಿಯ ನಾಣ್ಯಗಳಾಗು ತ್ತವೆಯೆಂಬುದು ನಿಜವೇ ಎಂದು ನನಗೆ ಸಂದೇಹ" ಎಂದು ಉತ್ತರ ಕೊಟ್ಟನು.

"ಆದರೆ, ಬಾಗ್ದಾದಿನ ಜ್ಞಾನಿ ಹಾಗೆ ಹೇಳಿದ್ದಾನೆ!" ಎಂದು ತಿರುಗಿ ವಾದಿಸಿದನು ಮೊದಲನೆಯವನು.

"ಹೌದು, ಅವನ ಪಾಂಡಿತ್ಯ ಬಹಳ ಹೆಚ್ಚು; ಅವನು ತಪ್ಪು ಮಾಡಿರು ವುದು ಸಾಧ್ಯವಿಲ್ಲ."

ನೆರಳಿನಲ್ಲಿ ಅಡಗಿಕೊಂಡಿದ್ದ ಖೋಜಾ ನಸ್ರೆದ್ದೀನ್, "ಅಯ್ಯೋ, ಇವರ ಮನೆ ಹಾಳಾಗ! ನಕ್ಷತ್ರಗಳ ವಿಚಾರವಾಗಿ ಇವರಿಗೇಕೆ ಹೇಳಿದೆನೋ? ಈಗ ಇವರು ಬೆಳಗಿನ ವರಗೂ ಚರ್ಚೆ ಮಾಡುತ್ತಲೇ ಇರುತ್ತಾರೆ, ತಪ್ಪಿಸಿಕೊಂಡು ಹೋಗುವುದು ತಡವಾಗಬೇಕಾಗುತ್ತದೆಯೋ ಏನೋ!" ಎಂದು ಯೋಚಿಸು ತ್ತಿದ್ದನು.

ಬುಖಾರ ಪಟ್ಟಣದ ಮೇಲೆ ನಿರ್ಮಲವಾದ ಗಗನಮಂಡಲದಲ್ಲಿ ಶಾಂತ ಪ್ರಕಾಶವನ್ನು ಚೆಲ್ಲುತ್ತಾ ಸಾವಿರಾರು ನಕ್ಷತ್ರಗಳು ಹೊಳೆಯುತ್ತಿದ್ದವು. ಒಂದು ಪುಟ್ಟ ನಕ್ಷತ್ರ ತಟಕ್ಕನೆ ಕೆಳಕ್ಕೆ ಜಾರಿತು; ಓರೆಯಾಗಿ ನುಗ್ಗಿ ಕೆಳಗೆ ಬಿತ್ತು; ಮತ್ತೊಂದು ಅದರ ಹಿಂದೆಯೇ ನುಗ್ಗಿ ಬಂತು; ಹಿಂದುಗಡೆ ಉರಿಯ ಜಾಡೊಂದು ಕಾಣಿಸಿದಂತಾಯಿತು. ಅದು ಬೇಸಗೆಯ ಮಧ್ಯಕಾಲ; ನಕ್ಷತ್ರ

ಬೀಳುವುದಕ್ಕೆ ಹೆಸರಾದ ಸಮಯ ಸಮೀಪಿಸುತ್ತಿತ್ತು.

"ಅವು ನಿಜವಾಗಿ ಬೆಳ್ಳಿಯ ನಾಣ್ಯಗಳಾಗಿ ಒಡೆಯುವಹಾಗಿದ್ದರೆ...." ಎಂದು ಎರಡನೆಯ ಸಿಪಾಯಿ ಪ್ರಾರಂಭಿಸಿದನು.

ಇದ್ದಕ್ಕಿದ್ದಹಾಗೆಯೇ ಖೋಜಾ ನಸ್ರೆದ್ದೀನನಿಗೆ ಒಂದು ಸ್ಫೂರ್ತಿ ಹೊಳೆಯಿತು. ಬೆಳ್ಳಿಯ ನಾಣ್ಯಗಳಿಂದ ತುಂಬಿ ಉಬ್ಬಿಹೋಗಿದ್ದ ತನ್ನ ಚೀಲವನ್ನು ಹೊರಕ್ಕೆ ತೆಗೆದು ಹಿಡಿದುಕೊಂಡನು. ಬಹಳ ಹೊತ್ತಿನ ವರೆಗೂ ಒಂದು ನಕ್ಷತ್ರವೂ ಬೀಳಲಿಲ್ಲ. ತುಂಬ ಕಾದ ಮೇಲೆ, ಕಡೆಗೆ, ಒಂದು ಬಿತ್ತು. ಧ್ವಜಸ್ತಂಭದ ಹತ್ತಿರದ ಕಲ್ಲುಗಳ ಮೇಲೆ ಒಂದು ನಾಣ್ಯ 'ರಣ್' ಎಂದಿತು. ಸಿಪಾಯಿಗಳು ಮೊದಲು ಆಶ್ಚರ್ಯದಿಂದ ಸ್ತಬ್ಧರಾದರು; ಆ ಮೇಲೆ ಒಬ್ಬರನ್ನೊಬ್ಬರು ದುರುಗುಟ್ಟಿ ನೋಡುತ್ತ ಎದ್ದು ನಿಂತರು.

"ನೀನು ಕೇಳಿದೆಯಾ ಅದನ್ನ?" ಎಂದು ನಡುಗುದನಿಯುಲ್ಲಿ ಮೊದಲನೆಯವನು ಕೇಳಿದನು.

"ಹೂ; ಕೇಳಿದೆ" ಎಂದು ತೊದಲಿದನು ಎರಡನೆಯವನು.

ಖೋಜಾ ನಸ್ರೆದ್ದೀನ್ ಇನ್ನೊಂದು ನಾಣ್ಯವನ್ನೆಸೆದನು. ಅದು ಬೆಳದಿಂಗಳಿನಲ್ಲಿ ಮಿರುಮಿರನೆ ಮಿಂಚಿತು. ನೋಮಾರಿ ಸಿಪಾಯಿ ಸಣ್ಣದಾಗಿ ಕೂಗಿಕೊಂಡು ಅದರ ಮೇಲೆ ಬಿದ್ದನು.

"ಸಿ-ಸಿ-ಸಿಕ್ಕಿತೇನೋ?" ಎರಡನೆಯವನಿಗೆ ಮಾತಾಡುವುದೇ ಕಷ್ಟವಾಗಿತ್ತು.

"ಸಿ-ಸಿ-ಸಿಕ್ಕಿತು!" ಎಂದು ಉತ್ತರ ಕೊಟ್ಟನು ರೋಣೆಯ. ಅವನ ತುಟಿ ಅದುರುತ್ತಿತ್ತು. ಎದ್ದು ನಿಂತು ನಾಣ್ಯವನ್ನು ಎತ್ತಿ ತೋರಿಸಿದನು.

ಮತ್ತೆ ಕೆಲವು ನಕ್ಷತ್ರಗಳು ಒಟ್ಟಿಗೆ ಬಿದ್ದವು. ಖೋಜಾ ನಸ್ರೆದ್ದೀನ್ ಮುಷ್ಟಿ ಮುಷ್ಟಿ ನಾಣ್ಯಗಳನ್ನು ಎರಚಲು ಮೊದಲು ಮಾಡಿದನು. ರಾತ್ರಿಯ ನಿಶ್ಶಬ್ದತೆ ನಾಣ್ಯಗಳ ಠಂಠಣ ಸದ್ದಿನಿಂದ ಭಂಗವಾಯಿತು. ಸಿಪಾಯಿಗಳಿಗೆ ವಿವೇಚನೆ ಮಾಯವಾಯಿತು. ಕೈಯ ಭಲ್ಲೆಗಳನ್ನೆಸೆದು ನೆಲದ ಮೇಲೆ ಬಗ್ಗಿ ನಾಣ್ಯಗಳನ್ನು ಆಯ್ದುಕೊಳ್ಳಲು ಕೈಕಾಲೂರಿಕೊಂಡು ಹರಿದಾಡತೊಡಗಿದರು.

"ಇಲ್ಲಿ! ಇಲ್ಲಿ!" ಎಂದು ಒಬ್ಬ ಅರೆಮುಚ್ಚಿದ ಬಾಯಿಂದ ಕಿರಿಚಿದನು. ಎರಡನೆಯವನು ಮೌನವಾಗಿ ಅಂಬೆಗಾಲಿಡುತ್ತಿದ್ದನು. ಆ ಮೇಲೆ

ಒಂದು ಕಡೆ ಸುತ್ತಮುತ್ತ ನಾಣ್ಯ ಚೆಲ್ಲಾಡಿರುವುದನ್ನು ಕಂಡು ಗಂಟಲಿನಲ್ಲಿ ಗುಳಗುಳನೆ ಸದ್ದು ಮಾಡಿದನು.

ಖೋಜಾ ನಸ್ರೆದ್ದೀನ್ ಇನ್ನೊಂದು ಮುಷ್ಟಿ ಹಣವನ್ನೆರಚಿ, ತಡೆಯಿಲ್ಲದೆ ನಿರ್ಭಯವಾಗಿ ಪಕ್ಕ ಬಾಗಿಲಿನಿಂದ ಒಳಕ್ಕೆ ನುಸುಳಿದನು.

ಉಳಿದದ್ದೆಲ್ಲ ಬಹಳ ಸುಲಭವಾಯಿತು. ಮೆತ್ತನೆಯ ಪರ್ಶಿಯನ್ ರತ್ನಗಂಬಳಿಗಳು ಅವನ ಹೆಜ್ಜೆಯ ಸದ್ದನ್ನು ಅಲ್ಲೇ ಅಡಗಿಸುತ್ತಿದ್ದವು. ಅಲ್ಲಿನ ತಿರುವುಮುರುವುಗಳನ್ನೆಲ್ಲಾ ಅವನು ಚೆನ್ನಾಗಿ ನೆನಪಿಟ್ಟುಕೊಂಡಿದ್ದನು. ನಪುಂಸಕರು ಮಲಗಿ ನಿದ್ರಿಸುತ್ತಿದ್ದರು.

ಗುಲ್ಜಾನ್ ಅವನನ್ನು ಕಂಡು ತಬ್ಬಿ ಮುತ್ತಿಟ್ಟು ಗಡಗಡನೆ ನಡುಗುತ್ತ ಅವನಿಗೇ ಅಂಟಿಕೊಂಡಳು.

“ಬೇಗ, ಜಾಗ್ರತೆ!” ಅವನು ಅವಳ ಕಿವಿಯಲ್ಲಿ ಪಿಸುಗುಟ್ಟಿದನು.

ಅವರನ್ನು ಯಾರೂ ತಡೆಯಲಿಲ್ಲ. ನಪುಂಸಕರಲ್ಲೊಬ್ಬ ನಿದ್ದೆಯಲ್ಲಿ ಹೊರಳಿ ನರಳಿದನು. ಖೋಜಾ ನಸ್ರೆದ್ದೀನ್ ಅವನ ಮೇಲೆ ಬಾಗಿದನು; ಆದರೆ, ಅವನಿಗಿನ್ನೂ ಸಾಯುವ ಸಮಯ ಬಂದಿರಲಿಲ್ಲ; ತುಟಿ ಸವರಿಕೊಂಡು ಅವನು ಮತ್ತೆ ಗೊರಕೆ ಹೊಡೆಯುತ್ತೊಡಗಿದನು. ಬಣ್ಣಬಣ್ಣದ ಗಾಜುಗಳ ಮೂಲಕ ಬೆಳದಿಂಗಳು ಬಹಳ ಕಷ್ಟಪಟ್ಟು ನುಸಿದು ಬರುತ್ತಿತ್ತು.

ಪಕ್ಕ ಬಾಗಿಲಿನ ಹತ್ತಿರ ಖೋಜಾ ನಸ್ರೆದ್ದೀನ್ ನಿಂತು, ಎಚ್ಚರಿಕೆಯಿಂದ ಸುತ್ತಮುತ್ತ ನೋಡಿದನು. ಸಿಪಾಯಿಗಳು ಅಂಗಳದ ನಡುವೆ ಕೈಕಾಲೂರಿ ಅಂಬೆಗಾಲಿಟ್ಟುಕೊಂಡು, ಮತ್ತೊಂದು ನಕ್ಷತ್ರ ಯಾವಾಗ ಬೀಳುತ್ತದೆಯೋ ಎಂದು ಆಕಾಶದ ಕಡೆ ಕತ್ತೆತ್ತಿ ನೋಡುತ್ತಾ ಇದ್ದರು. ಅದನ್ನು ಕಂಡು ಖೋಜಾ ನಸ್ರೆದ್ದೀನ್ ಇನ್ನೊಂದು ಹಿಡಿ ಹಣ ತೆಗೆದುಕೊಂಡು ದೂರಕ್ಕೆ ಎಸೆದನು; ಅದು ಅಲ್ಲಿದ್ದ ಕೆಲವು ಮರಗಳ ಆಚೆ ಕಡೆ ಬಿತ್ತು. ಸಿಪಾಯಿಗಳು ಬೂಟುಗಳಿಂದ ಟಪಟಪ ಸದ್ದುಮಾಡುತ್ತ ನಾಣ್ಯದ ಠಂಠಣ ಕೇಳಿದ ಕಡೆಗೆ ನುಗ್ಗಿದರು. ಅವರ ಆ ಸಂಭ್ರಮದಲ್ಲಿ ಅವರಿಗೆ ಸುತ್ತಮುತ್ತ ಏನೂ ಕಾಣಿಸಲಿಲ್ಲ. ಕರಡಿಗಳ ಹಾಗೆ ಕತ್ತು ಬಗ್ಗಿಸಿಕೊಂಡು ಮುನ್ನುಗ್ಗಿದರು. ಅವರು ಮುಳ್ಳು ಬೇಲಿಯ ಸಂದಿ ನುಸಿದು ಅಲ್ಲಿ ಬಟ್ಟೆ ಸಿಕ್ಕಿಕೊಂಡಾಗ ಅಸ್ಪಷ್ಟವಾಗಿ ಏನೇನೋ ಕೂಗುತ್ತ ಏದುಸುರು ಬಿಡುತ್ತಾ ನುಗ್ಗಿ ನಡೆದರು.

ಈ ದಿವಸ ರಾತ್ರಿ ಅಂತಃಪುರದಿಂದ ಒಬ್ಬಳನ್ನಲ್ಲ, ಎಲ್ಲ ಉಪಪತ್ನಿಯರನ್ನೂ ಕದ್ದುಕೊಂಡು ಹೋಗಿಬಿಡಬಹುದಾಗಿತ್ತು.

"ಜಾಗ್ರತೆ! ಜಾಗ್ರತೆ!" ಎಂದು ಖೋಜಾ ನಸ್ರೆದ್ದೀನ್ ಹೇಳುತ್ತಲೇ ಇದ್ದನು.

ಅವರು ಗೋಪುರದ ಬಳಿಗೆ ಓಡಿದರು; ಸರಸರನೆ ಮೇಲೆ ಹತ್ತಿದರು. ಖೋಜಾ ನಸ್ರೆದ್ದೀನ್ ಹಾಸಿಗೆಯ ಕೆಳಗಿನಿಂದ ಒಂದು ಹಗ್ಗವನ್ನು ಹೊರಕ್ಕೆ ತೆಗೆದನು. ಮೊದಲೇ ಇದನ್ನು ಸಿದ್ಧಮಾಡಿಟ್ಟುಕೊಂಡಿದ್ದನು.

"ಬಹಳ ಎತ್ತರ........ಹೆದರಿಕೆಯಾಗುತ್ತದೆ?" ಗುಲ್ಜಾನ್ ಪಿಸುಗುಟ್ಟಿದಳು. ಆದರೆ ಅವನು ಕಠಿನವಾಗಿ ಬೈದು ಗದರಿಸಿದನು; ಅವಳು ಸಮಾಧಾನ ಮಾಡಿಕೊಂಡಳು.

ಖೋಜಾ ನಸ್ರೆದ್ದೀನ್ ಅವಳ ಸೊಂಟಕ್ಕೆ ಒಂದು ಸುತ್ತು ಹಾಕಿ ಹಗ್ಗ ಕಟ್ಟಿದನು. ಆ ಮೇಲೆ ತಾನು ಮೊದಲೆ ಗರಗಸದಿಂದ ಕತ್ತರಿಸಿಟ್ಟಿದ್ದ ಕಬ್ಬಿಣದ ಕಂಬಿಯನ್ನು ಕಿಟಕಿಯಿಂದ ಸಡಿಲಿಸಿ ಎತ್ತಿಟ್ಟನು. ಗುಲ್ಜಾನ್ ಚೆಡಿಯ ಮೇಲೆ ಕೂತಳು. ಎತ್ತರ ನೋಡಿ ಅವಳು ನಡುಗಿದಳು.

"ನಡಿ, ಹೊರಕ್ಕೆ!" ಎಂದು ದೃಢಸ್ವರದಿಂದ ಖೋಜಾ ನಸ್ರೆದ್ದೀನ್ ನುಡಿದನು; ನುಡಿಯೊಡನೆಯೇ ಅವಳ ಬೆನ್ನ ಮೇಲೆ ಕೈಹಾಕಿ ಮೆತ್ತಗೆ ತಳ್ಳಿದನು.

ಅವಳು ಕಣ್ಣು ಮುಚ್ಚಿಕೊಂಡಳು. ನಯವಾದ ಕಲ್ಲಿನ ಮೇಲೆ ಜಾರುತ್ತ ಗಾಳಿಯಲ್ಲಿ ತೂಗಾಡುತ್ತಿದ್ದಳು. ಕೊನೆಗೆ ನೆಲ ಸೋಕಿದಾಗ ಅವಳಿಗೆ ಮನಸ್ಸು ಸ್ವಸ್ಥವಾಯಿತು. "ಓಡು! ಓಡು!" ಎಂದು ಮೇಲಿನಿಂದ ದನಿ ಬರುತ್ತಿತ್ತು. ಖೋಜಾ ನಸ್ರೆದ್ದೀನ್ ಕಿಟಕಿಯಿಂದ ಹೊರಕ್ಕೆ ಬಗ್ಗಿ, ಕೈ ಆಡಿಸಿ ಹಗ್ಗ ಎಳೆಯುತ್ತಿದ್ದನು. ಗುಲ್ಜಾನ್ ಆತುರಾತುರವಾಗಿ ಗಂಟು ಬಿಚ್ಚಿ ಬಿಡಿಸಿಕೊಂಡು ಓಡಿದಳು; ನಿರ್ಜನವಾಗಿದ್ದ ಮಾರ್ಕಟ್ಟೆ ಬಯಲಿಗೆ, ಅದನ್ನು ದಾಟಿ ಓಡಿದಳು.

ಅರಮನೆಯೆಲ್ಲಾ ಗೊಂದಲದಲ್ಲಿ ಮುಳುಗಿದೆಯೆಂದು ಅವಳಿಗೆ ಗೊತ್ತಿರಲಿಲ್ಲ. ಇತ್ತೀಚೆಗೆ ತನಗಾದ ಅಹಿತವಾದ ಅನುಭವದಿಂದ ಪ್ರಧಾನ ವರ್ಜೀರನಿಗೆ ಒಂದು ಹೊಸ ಉತ್ಸಾಹ ಬಂದು, ಅಕಾಲದಲ್ಲಿ ಪರೀಕ್ಷೆ ಮಾಡ ಹೊರಟ

ದ್ದನು. ಈ ಹೊಸ ಉಪಪತ್ನಿಯ ಕೋಣೆಯೊಳಕ್ಕೆ ಅರ್ಧ ರಾತ್ರಿ ಹೊತ್ತಿನಲ್ಲಿ ಬಂದು ನೋಡಿದಾಗ ಅವಳ ಹಾಸಿಗೆ ಬರಿದಾಗಿತ್ತು. ಅವನು ಅಮೀರನ ಬಳಿಗೆ ಓಡಿ ಹೋಗಿ ಎಬ್ಬಿಸಿ ಸುದ್ದಿ ತಿಳಿಸಿದನು. ಅಮೀರನು ಆರ್ಸ್‌ಲಾನ್-ಬೆಕ್ಕನ್ನು ಕರಸಿದನು ; ಆರ್ಸ್‌ಲಾನ್-ಬೆಕ್ ಅರಮನೆಯ ಕಾವುದಳದವರನ್ನೆಲ್ಲಾ ಎಬ್ಬಿಸಿದನು ; ಪಂಜುಗಳು ಹೊತ್ತಿದವು, ಗುರಾಣಿಗಳೂ ಭಲ್ಲೆಗಳೂ ಖಣಿಖಣಿಸಿದವು.

ಬಾಗ್ದಾದ್ ಜ್ಞಾನಿಗೆ ಕರೆ ಹೋಯಿತು. ಅಮೀರನು ಕೀರಲು ದನಿಯಿಂದ ದೂರು ಹೇಳುತ್ತಾ ಅವನನ್ನು ಬರಮಾಡಿಕೊಂಡನು.

“ ಮೌಲಾನಾ ಹುಸೇನ್ ! ಇದೆಂಥ ಸ್ಥಿತಿ ನಮ್ಮದು ? ನಾವು, ಮಹಾಘನ ಅಮೀರರು, ನಮ್ಮ ಅರಮನೆಯಲ್ಲಿಯೇ ಶಾಂತಿಯಿಂದಿರುವುದಕ್ಕೆ ಸಾಧ್ಯವಿಲ್ಲವಾಗಿದೆಯಲ್ಲ, ಆ ಪೋಕರಿ ಖೋಜಾ ನಸ್ರೆದ್ದೀನನಿಂದ ? ಅಮೀರರ ಅರಮನೆಯಿಂದ ಉಪಪತ್ನಿಯೊಬ್ಬಳನ್ನು ಅಪಹರಿಸಿಕೊಂಡು ಹೋಗಿರುವ ವಿಚಾರ ನಂಬಲಾಗದಂಥದು ! ”

“ ಓ ಮಹಾ ಘನ ಅಮೀರರೇ ! ಇದು ಬಹುಶಃ ಖೋಜಾ ನಸ್ರೆದ್ದೀನನ ಕೆಲಸವಾಗಿರಲಾರದು ! ” ಎಂದು ಬಖ್ತಿಯಾರ್ ನುಡಿದನು.

“ ಮತ್ತೆ ಯಾರ ಕೆಲಸ ? ” ಎಂದು ಅಮೀರ ಅಬ್ಬರಿಸಿದನು “ ಬೆಳಗ್ಗೆ ತಾನೆ ನನಗೆ ವರದಿ ಬಂತು ಅವನು ಬುಖಾರಕ್ಕೆ ಬಂದಿದ್ದಾನೆಂದು ; ರಾತ್ರೆ ನಮ್ಮ ಉಪಪತ್ನಿ ಅರಮನೆಯಿಂದ ಮಾಯವಾಗಿದ್ದಾಳೆ ! ಅವನಲ್ಲದೆ ಮತ್ತೆ ಯಾರಾಗಿದ್ದಾರು ಈ ಕೆಲಸ ಮಾಡಿದವರು ? ಹುಡುಕಿ ಅವನನ್ನು, ಎಲ್ಲ ಕಡೆಯಲ್ಲೂ. ಈಗಿರುವುದಕ್ಕೆ ಮೂರರಷ್ಟು ಸಿಪಾಯಿಗಳನ್ನಿಡಿ. ಅರಮನೆಯಿಂದ ಹೊರಕ್ಕೆ ನುಸುಳಿ ಹೋಗುವುದಕ್ಕೆ ಅವನಿಗೆ ಹೊತ್ತು ಸಿಕ್ಕುವುದಕ್ಕೆ ಸಾಧ್ಯವಿಲ್ಲ. ಆರ್ಸ್‌ಲಾನ್-ಬೆಕ್, ಮರೆಯಬೇಡ, ನಿನ್ನ ತಲೆಗೇ ಸಂಚಕಾರ ಬಂದೀತು ! ಜೋಕೆ ! ” ಎಂದನು.

ಹುಡುಕಾಟ ಪ್ರಾರಂಭವಾಯಿತು. ಅರಮನೆಯ ಮೂಲೆ ಮೂಲೆಯನ್ನೂ ಸಂದಿಗೊಂದಿಯನ್ನೂ ಕಾವುಸಿಪಾಯಿಗಳು ತಡಕಿ ತಡಕಿ ಶೋಧಿಸತೊಡಗಿದರು. ಅರಮನೆಯಲ್ಲೆಲ್ಲಾ ಪಂಜುಗಳು ; ಹುಡುಕುವ ಉತ್ಸಾಹದಲ್ಲಿ ಖೋಜಾ ನಸ್ರೆದ್ದೀನ್ ಎಲ್ಲರಿಗಿಂತ ಮುಂದಾದನು. ಅವನು ರತ್ನಗಂಬಳಿ

ಗಳನ್ನೂ ಜಮುಖಾನಗಳನ್ನೂ ಎತ್ತಿ ಎತ್ತಿ ನೋಡಿದನು; ಅಮೃತಶಿಲೆಯ ಬೋಗುಣಿಗಳೊಳಕ್ಕೆ ಕೋಲುಹಾಕಿ ತಿವಿತಿವಿದು ಪರೀಕ್ಷಿಸಿದನು; ಕೆಟಲುಗಳು, ಹೂಜಿಗಳು, ಕಡೆಗೆ ಇಲಿಯ ಬಿಲಗಳನ್ನು ಕೂಡ ಬಿಡದೆ ಎಲ್ಲವನ್ನೂ ಒಳ ಹೊರಗು ಮಾಡಿ ನೋಡುತ್ತ ಕೂಗಾಡುತ್ತ ಗಡಿಬಿಡಿಯಿಂದ ಅತ್ತಿತ್ತ ಓಡಾಡು ತ್ತಿದ್ದನು.

ಅಮೀರನ ಶಯ್ಯಾಗೃಹಕ್ಕೆ ಹಿಂದಿರುಗಿ ಬಂದು ವರದಿ ಒಪ್ಪಿಸಿದನು :

"ಮಹಾಪ್ರಭೂ, ಖೋಜಾ ನಸ್ರೆದ್ದೀನ್ ಅರಮನೆಯನ್ನು ಬಿಟ್ಟು ಹೋಗಿರಬೇಕು."

ಅಮೀರನಿಗೆ ಕೋಪ ಕೆರಳಿತು. "ಮೌಲಾನಾ ಹುಸೇನ್! ನಿನ್ನ ಈ ಹುಚ್ಚಾಟವನ್ನು ಕಂಡು ನಮಗೆ ಅತ್ಯಾಶ್ಚರ್ಯವಾಗಿದೆ. ಅವನಿಗೆ ಅಡಗಿ ಕೊಳ್ಳುವುದಕ್ಕೆ ಒಂದು ಸ್ಥಳ ಸಿಕ್ಕಿದೆಯೆಂದಿಟ್ಟುಕೊಳ್ಳೋಣ! ಆಗ, ಅವನು ನಮ್ಮ ಶಯ್ಯಾಗೃಹಕ್ಕೂ ಪ್ರವೇಶಮಾಡಿಬಿಡಬಹುದು! ಕಾವುಸಿಪಾಯಿಗಳನ್ನು ಕರೆಯಿರಿ! ಇಲ್ಲಿ! ಇಲ್ಲಿ ಬಾ, ಸಿಪಾಯಿ!" ಎಂದು ಕೂಗಿದನು. ತನ್ನ ಕಲ್ಪನೆಗೇ ತಾನು ಅತಿಯಾಗಿ ಗಾಬರಿಪಟ್ಟುಕೊಂಡು ಕಿರಿಚುತ್ತಿದ್ದನು.

ಹೊರಗಡೆ ಒಂದು ಫಿರಂಗಿ ಉಡಾಯಿಸಿತು ಕೈಗೆ ಸಿಕ್ಕದೆ ನುಸುಳಿ ಹೋಗುತ್ತಿರುವ ಖೋಜಾ ನಸ್ರೆದ್ದೀನನನ್ನು ಭಯಪಡಿಸುವುದೇ ಅದರ ಉದ್ದೇಶ. ಅಮೀರನು ಒಂದು ಮೂಲೆಯಲ್ಲಿ ಮುದುರಿಕೊಂಡು ಕುಳಿತು,

"ಸಿಪಾಯನ್ನು ಕರೆ! ಸಿಪಾಯನ್ನು ಕರೆ!" ಎಂದು ಕಿರಿಚುತ್ತಿದ್ದನು.

ಅರ್ಸ್‌ಲಾನ್-ಬೆಕ್ ಶಯ್ಯಾಗೃಹದ ಬಾಗಿಲುಗಳ ಬಳಿ ಮೂವತ್ತು ಮೂವತ್ತು ಮಂದಿ ಸಿಪಾಯಿಗಳನ್ನೂ, ಒಂದೊಂದು ಕಿಟಕಿಯ ಕೆಳಗೂ ಹತ್ತು ಹತ್ತು ಮಂದಿಯನ್ನೂ ನಿಲ್ಲಿಸಿದ ಮೇಲೆಯೇ ಅವನ ಹೆದರಿಕೆ ಅಡಗಿದ್ದು, ಮನಸ್ಸಮಾಧಾನವಾದದ್ದು. ಆ ಮೇಲೆ ಅವನು ತಾನು ಅಡಗಿಕೊಂಡಿದ್ದ ಮೂಲೆಯಿಂದ ಹೊರಬಂದು ಅಂಗಲಾಚಿಕೆಯ ದನಿಯಲ್ಲಿ ಹೀಗೆ ಪ್ರಶ್ನೆಮಾಡಿ ದನು :

"ಮೌಲಾನಾ, ಹೇಳು. ಆ ಠಕ್ಕ, ಕಳ್ಳ ಕೊರಮ ಇಲ್ಲೆಲ್ಲಾದರೂ ನಮ್ಮ ಸೆಜ್ಜೆಮನೆಯಲ್ಲಿ ಅಡಗಿಕೊಂಡಿರಬಹುದೇ?" ಎಂದು ಕೇಳಿದನು.

"ಬಾಗಿಲುಗಳ ಮತ್ತು ಕಿಟಕಿಗಳ ಹತ್ತಿರ ಕಾವಲು ಹಾಕಿದೆ. ಕೋಣೆ

ಯೊಳಗೆ ಇರುವವರು ಸಾವಿಬ್ಬರೇ. ಖೋಜಾ ನಸ್ರೆದ್ದೀನ್ ಇಲ್ಲೆಲ್ಲಿ ಬಂದಾನು?" ಎಂದು ಖೋಜಾ ನಸ್ರೆದ್ದೀನ್ ಉತ್ತರ ಹೇಳಿದನು.

"ಅವನು ತಪ್ಪಿಸಿಕೊಂಡು ಹೋಗುವುದಕ್ಕೆ ಅವಕಾಶ ಕೊಡಬಾರದು. ನಮ್ಮ ಉಪಪತ್ನಿಯನ್ನು ಅವನು ಹರಣ ಮಾಡಿಕೊಂಡು ಹೋಗಲಾರ!" ಎಂದು ಕಿರಿಚಿದನು ಅಮೀರ. ಅವನ ಹೆದರಿಕೆ ಈಗ ಕೋಪವಾಗಿ, ರೇಗಾಗಿ ಪರಿಣಮಿಸುತ್ತಿತ್ತು. ಖೋಜಾ ನಸ್ರೆದ್ದೀನನ ಗಂಟಲನ್ನು ಹಿಚುಕುತ್ತಿದ್ದಾನೋ ಎಂಬಂತೆ ಅವನ ಕೈಬೆರಳುಗಳು ಆಡುತ್ತಿದ್ದವು "ಓ, ಮೌಲಾನಾ ಹುಸೇನ್!" ಎಂದು ಮತ್ತೆ ಮಾತು ಮುಂದುವರಿಸಿದನು. "ನಮ್ಮ ಕೋಪ ರೋಷಗಳಿಗೆ ಅಂತ್ಯವೇ ಇಲ್ಲ! ಅವಳ ಬಳಿ ನಾವಿನ್ನೂ ಹೋಗಿರಲೇ ಇಲ್ಲ, ಒಂದು ಸಲವೂ ಇಲ್ಲ. ಈ ಯೋಚನೆ ನಮ್ಮ ಹೃದಯವನ್ನು ಹಿಂಡುತ್ತಿದೆ. ಮೌಲಾನಾ, ಇದೆಲ್ಲಾ ನಿನ್ನ ಆ ದಡ್ಡ ನಕ್ಷತ್ರಗಳ ತಪ್ಪು. ನಮಗೆ ಈ ಅವಮಾನ ಮಾಡಿದ್ದಕ್ಕಾಗಿ ತಕ್ಷಣವೇ ಆ ನಕ್ಷತ್ರಗಳ ತಲೆ ಕಡಿಸಿಬಿಡುತ್ತಿದ್ದೆವು, ನಮ್ಮ ಕೈಯಲ್ಲಿ ಅದು ಆಗುವ ಹಾಗಿದ್ದಿದ್ದರೆ. ಅರ್ಸಲಾನ್-ಬೆಕ್‌ಗೆ ಅಪ್ಪಣೆ ಕೊಟ್ಟಿದ್ದೇವೆ. ಮೌಲಾನಾ ಹುಸೇನ್, ನೀನು ಆ ಪೋಕರಿಯನ್ನು ಹಿಡಿಯುವುದಕ್ಕೆ ನಿನ್ನಿಂದ ಸಾಧ್ಯವಾದಷ್ಟೂ ಪ್ರಯತ್ನ ಮಾಡಬೇಕು. ಪ್ರಧಾನ ಮರ್ಜಮರ ಸ್ಥಾನಕ್ಕೆ ನಿನ್ನನ್ನು ನೇಮಿಸುವುದೂ ಬಿಡುವುದೂ ಈ ಕಾರ್ಯದಲ್ಲಿ ನೀನು ತೋರುವ ಸಾಮರ್ಥ್ಯವನ್ನವಲಂಬಿಸಿದೆ; ಮರೆಯಬೇಡ. ನಾಳೆ ನೀನು ಅರಮನೆಯಿಂದ ಹೊರಟುಬಿಡು; ಖೋಜಾ ನಸ್ರೆದ್ದೀನನನ್ನು ಜೊತೆಯಲ್ಲಿ ತರದೆ ಅರಮನೆಗೆ ಹಿಂದಿರುಗಬೇಡ" ಎಂದು ಅಪ್ಪಣೆ ಮಾಡಿದನು.

ಖೋಜಾ ನಸ್ರೆದ್ದೀನ್, ತನ್ನ ತುಂಟ ಕಣ್ಣುಗಳನ್ನು ಕಿರಿದು ಮಾಡಿಕೊಂಡು, ನೆಲಕ್ಕೆ ಬಗ್ಗಿ ನಮಸ್ಕಾರ ಮಾಡಿದನು.

೭

ಆ ರಾತ್ರಿ ಕಳೆಯುವ ವರೆಗೂ ಖೋಜಾ ನಸ್ರೆದ್ದೀನನು ಅಮೀರನಿಗೆ ತಾನು ಖೋಜಾ ನಸ್ರೆದ್ದೀನನನ್ನು ಹಿಡಿಯುವುದಕ್ಕೆ ಅನುಸರಿಸುವ ಕ್ರಮವನ್ನು, ಬೇರೆ ಬೇರೆ ಉಪಾಯಗಳನ್ನೆಲ್ಲಾ, ಹೇಳಿ ವಿವರಿಸುತ್ತಿದ್ದನು. ಈ ಹಂಚಿಕೆಗಳೆಲ್ಲ ವಿಶೇಷ ತಂತ್ರ ಚಮತ್ಕಾರಗಳನ್ನೊಳಗೊಂಡು ಬಹು ಸಮರ್ಪಕ

ವಾಗಿ ತೋರುತ್ತಿದ್ದವು. ಅಮೀರನಿಗೆ ತುಂಬ ತೃಪ್ತಿಯಾಯಿತು.

ಬೆಳಗಾಗುತ್ತಲೂ ಖರ್ಚಿಗೆಂದು ಅಮೀರನು ಕೊಟ್ಟ ಚಿನ್ನದ ನಾಣ್ಯ ತುಂಬಿದ ಚೀಲವನ್ನು ತೆಗೆದುಕೊಂಡು ತನ್ನ ಗೋಪುರದ ಕಡೆಗೆ ಹೊರಟನು. ತನ್ನ ಕೋಣೆಗೆ ಹೋಗುವ ಮೆಟ್ಟಲ ಸಾಲನ್ನು ಖೋಜಾ ನಸ್ರೆದ್ದೀನ್ ಕಡೆಯ ಸಲ ಹತ್ತಿದನು. ಒಂದು ತೊಗಲಿನ ನಡುಪಟ್ಟಿಯಲ್ಲಿ ಹಣವನ್ನಿಟ್ಟುಕೊಂಡು ಸುತ್ತಲೂ ನೋಡಿದನು ನೋಡಿ ನಿಟ್ಟುಸಿರು ಬಿಟ್ಟನು. ಆ ಸ್ಥಳವನ್ನು ಬಿಟ್ಟು ಹೋಗಬೇಕಲ್ಲಾ ಎಂದು ತಟಕ್ಕನೆ ಮನಸ್ಸಿಗೆ ಸಂಕಟ ತಲೆದೋರಿತು. ಇಲ್ಲಿ ಅನೇಕ ರಾತ್ರಿಗಳನ್ನು ಒಂಟಿಯಾಗಿ ನಿದ್ದೆಯಿಲ್ಲದೆ ಕಳೆದಿದ್ದನು. ಅಲ್ಲಿ ಅವನ ಮನಸ್ಸನ್ನು ಕೊರೆಯುತ್ತಿದ್ದ ಯೋಚನೆಗಳೂ ಅನೇಕ. ಈ ಒರಟು ಸ್ಥಳದಲ್ಲೂ ಅವನ ಆತ್ಮದ ಒಂದು ತುಣುಕು ಉಳಿದಿರುತ್ತಿತ್ತು.

ಅವನು ಬಾಗಿಲನ್ನು ಭದ್ರವಾಗಿ ಬಡಿದು ಮುಚ್ಚಿ ಹಗುರು ಹೆಜ್ಜೆಯಿಂದ ಮೆಟ್ಟಲಿಳಿದು ನಡೆದನು—ಸ್ವಾತಂತ್ರ್ಯದ ಕಡೆಗೆ ನಡೆದನು. ಮತ್ತೊಮ್ಮೆ ಸಮಸ್ತ ಪ್ರಪಂಚವೂ ಅವನೆದುರಿಗೆ ಕರೆಯುತ್ತ ನಿಂತಿತ್ತು. ರಸ್ತೆಗಳು, ಪರ್ವತದ ಕಣಿವೆಗಳು, ಸೀಳು ದಾರಿಗಳು, ಎಲ್ಲವೂ ಅವನನ್ನು ದೂರ ಪ್ರಯಾಣಕ್ಕೆ ಕೈಬೀಸಿ ಕರೆಯುತ್ತಿದ್ದವು ಹಸುರು ಕಾಡುಗಳು ಮೆತ್ತನೆಯ ಎಲೆಗಂಬಳಿಯ ಮೇಲೆ ತಮ್ಮ ನೆರಳಿನಾಶ್ರಯವನ್ನು ಅವನಿಗೆ ನೀಡಲು ಸಿದ್ಧವಾಗಿದ್ದವು. ನದಿಗಳು ತಮ್ಮ ತಂಪಾದ ನೀರನ್ನು ಅವನಿಗೆ ಕುಡಿಯಲು ಕೊಟ್ಟು ಬಾಯಾರಿಕೆಯನ್ನು ಹೋಗಲಾಡಿಸಲು ಕಾದಿದ್ದವು. ಹಕ್ಕಿಗಳು ತಮ್ಮ ಉತ್ತಮೋತ್ತಮ ಗಾನದಿಂದ ಅವನಿಗೆ ಸ್ವಾಗತ ಬಯಸಲು ಸಿದ್ಧವಾಗಿದ್ದವು. ಹರ್ಷಚಿತ್ತನಾದ ಅಲೆಮಾರಿ ಖೋಜಾ ನಸ್ರೆದ್ದೀನ್ ಅತಿ ಹೆಚ್ಚಿನ ಕಾಲ ಚಿನ್ನದ ಪಂಜರದಲ್ಲಿ ಅಡಗಿಬಿಟ್ಟಿದ್ದನು. ಪ್ರಪಂಚವೆಲ್ಲ ಅವನಿಗಾಗಿ ಹಂಬಲಿಸುತ್ತಿತ್ತು.

ಅವನು ಬಾಗಿಲ ಹತ್ತಿರ ಹೋದ ಕೂಡಲೆ ಅಲ್ಲಿನ ದೃಶ್ಯವನ್ನು ಕಂಡು ಅವನಿಗೆ ಸಿಡಿಲು ಬಡಿದಂತಾಯಿತು; ನೋಡಿ ಅವನ ಹೃದಯ ಒಡೆಯುವಂತಾಯಿತು ಅವನು ಅಲ್ಲೆ ನಿಂತುಬಿಟ್ಟನು. ಮುಖದ ರಕ್ತವೆಲ್ಲ ಇಂಗಿ ಹೋಯಿತು. ಗೋಡೆಯನ್ನೊರಗಿ ನಿಂತುಕೊಂಡನು.

ಅವನ ಗೆಳೆಯರದೊಂದು ಉದ್ದನೆಯ ಸಾಲು, ಸಿಪಾಯಿಗಳಿಂದ ಸುತ್ತುವರಿಯಲ್ಪಟ್ಟು ತೆರೆದ ಬಾಗಿಲಿನಿಂದ ಒಬ್ಬರಹಿಂದೊಬ್ಬರಂತೆ ಒಳಕ್ಕೆ ಬರುತ್ತಿತ್ತು.

ಅವರ ಕೈಗಳನ್ನು ಕಟ್ಟಿದ್ದರು; ಅವರು ತಲೆ ತಗ್ಗಿಸಿದ್ದರು. ಮುದುಕ ಕುಂಬಾರ ನಿಯಾಸ್, ಟೀ ಅಂಗಡಿಯ ಯಜಮಾನ ಅಲಿ, ಕಮ್ಮಾರ ಯೂಸುಫ್ ಮತ್ತು ಇನ್ನೂ ಅನೇಕ ಮಂದಿ ಇಲ್ಲಿ ಬಂದಿದ್ದರು ಎಂದಾದರೂ ಎಲ್ಲಿಯಾದರೂ ಅವನು ಯಾರನ್ನು ಸಂಧಿಸಿದ್ದನೋ, ಯಾರೊಡನೆ ಮಾತಾಡಿದ್ದನೋ, ಯಾರು ಯಾರಿಂದ ಅವನು ಒಂದು ಒಟ್ಟಲು ಕುಡಿಯುವ ನೀರು ತೆಗೆದುಕೊಂಡಿದ್ದನೋ, ತನ್ನ ಕತ್ತೆಗೆ ಯಾರಿಂದ ಒಂದು ಕಂತೆ ಹುಲ್ಲು ತೆಗೆದುಕೊಂಡಿದ್ದನೊ—ಅವರೆಲ್ಲ ಅಲ್ಲಿ ಸೇರಿದ್ದರು. ಈ ಗೋಳುಕರೆಯ ಮೆರವಣಿಗೆಯ ಹಿಂದುಗಡೆಯಲ್ಲಿ ಕೊಟ್ಟಕೊನೆಯಲ್ಲಿ ಅರ್ಸ್‌ಲಾನ್-ಬೆಕ್ ಬರುತ್ತಿದ್ದನು.

ಖೋಜಾ ನಸ್ರೆದ್ದೀನ್ ಸಮಾಧಾನ ಸ್ಥಿತಿಗೆ ಬರುವಷ್ಟರಲ್ಲಿ ಬಾಗಿಲು ಹಾಕಿತ್ತು; ಅಂಗಳ ಬರಿದಾಗಿತ್ತು; ಸೆರೆಯಾಳುಗಳನ್ನು ನೆಲಮಾಳಿಗೆಯ ಕತ್ತಲೆ ಗವಿಯಲ್ಲಿ ಕೂಡಿ ಆಗಿತ್ತು. ಖೋಜಾ ನಸ್ರೆದ್ದೀನ್ ಅರ್ಸ್‌ಲಾನ್-ಬೆಕ್ಕನ್ನು ಹುಡುಕಿಕೊಂಡು ಸರಸರನೆ ಹೊರಟು ಹೋದನು.

" ಏನಾಯಿತು, ಮಾನ್ಯ ಅರ್ಸ್‌ಲಾನ್-ಬೆಕ್? ಈ ಜನರೆಲ್ಲ ಎಲ್ಲಿಂದ ಬಂದರು? ಏನಪರಾಧ ಮಾಡಿದ್ದಾರೆ?" ಎಂದು ಕೇಳಿದನು.

ಅರ್ಸ್‌ಲಾನ್-ಬೆಕ್ ವಿಜಯದರ್ಪದಿಂದ ಹೀಗೆಂದನು: " ಈ ಜನರೆಲ್ಲ ಖೋಜಾ ನಸ್ರೆದ್ದೀನನಿಗೆ ಆಶ್ರಯ ಕೊಟ್ಟವರು, ಅವನ ಸಹಾಯಕರು. ನನ್ನ ಗೂಢಚಾರರು ಅವರನ್ನೆಲ್ಲಾ ಪರೀಕ್ಷಿಸಿ ಕಂಡುಹಿಡಿದಿದ್ದಾರೆ. ಅವರು ಖೋಜಾ ನಸ್ರೆದ್ದೀನನ ಅಪರಾಧಗಳನ್ನು ಬಹಿರಂಗವಾಗಿ ಘೋಷಿಸಿದಲ್ಲದೆ ಅವರನ್ನೆಲ್ಲಾ ಇವತ್ತು ಬಹಿರಂಗವಾಗಿ ಕ್ರೂರ ರೀತಿಯಲ್ಲಿ ಮರಣಕ್ಕೆ ಗುರಿಮಾಡಲಾಗುತ್ತದೆ. ಆದರೆ, ನೀನೇಕಿಷ್ಟು ಕಳೆಗುಂದಿದ್ದೀಯೆ, ಹಸೇಲೌನಾ? ನಿನಗೆ ಅಸ್ವಸ್ಥವಾಗಿರುವ ಹಾಗಿದೆ? ಅಲ್ಲವೆ?"

" ಕಳೆಗುಂದಿದ್ದೇನೆಯೆ? ಇರಬಹುದು. ಏಕೆಂದರೆ, ಬಹುಮಾನ ನಿನಗೆ ಸೇರುತ್ತದೆ, ನನಗಲ್ಲ" ಎಂದನು ಖೋಜಾ ನಸ್ರೆದ್ದೀನ್.

ಖೋಜಾ ನಸ್ರೆದ್ದೀನ್ ಅರಮನೆಯಲ್ಲಿ ಇರಲೇಬೇಕಾಯಿತು. ನಿರಪರಾಧಿಗಳಿಗೆ ಮರಣಭಯ ಬಂದಿರುವಾಗ, ಅವನು ಉಳಿದುಕೊಳ್ಳದೆ ಇರಲು ಸಾಧ್ಯವೇ ಇರಲಿಲ್ಲ.

ಮಧ್ಯಾಹ್ನಸಮಯದಲ್ಲಿ ಸೈನ್ಯ ಮಾರ್ಕಟ್ಟೆಯ ಬಯಲಿನಲ್ಲಿ ಅಣಿಯಾಗಿ

ನಿಂತಿತು. ಅಮೀರನ ಜಗುಲಿಯ ಸುತ್ತಲೂ ಒಂದರ ಹಿಂದೊಂದರಂತೆ ಮೂರು ಮೂರು ಸಾಲಾಗಿ ವರ್ತುಲಾಕಾರದಲ್ಲಿ ಅಣೆಗಟ್ಟಿ ನಿಂತಿತು. ಜನಕ್ಕೆಲ್ಲ ತಿಳಿಯುವಂತೆ ಆ ದಿನ ನಡೆಯಲಿರುವ ಮರಣದಂಡನೆಗಳ ವಿಚಾರವನ್ನು ಡಂಗೂರ ಹೊಡೆಯಿಸಿ ಸಾರಲಾಗಿತ್ತು. ಜನ ಮೌನವಾಗಿ ಕಾದಿದ್ದರು. ಬಿಸಿಲು ತಲೆ ಸುಡುತ್ತಿತ್ತು.

ಅರಮನೆಯ ಹೆಬ್ಬಾಗಿಲು ತೆರೆಯಿತು. ಎಂದಿನ ಅನುಕ್ರಮದಲ್ಲಿಯೇ, ಮೊದಲು ಓಡುತ್ತಿರುವ ಹರಿಕಾರರು, ಆ ಮೇಲೆ ಕಾವುದಳದವರು, ವಾದ್ಯಗಾರರು, ಆನೆಗಳು, ಆಸ್ಥಾನಿಕರು—ಹೀಗೆ ಒಬ್ಬೊಬ್ಬರಾಗಿ ಹೊರ ಹೊರಟರು. ಕಟ್ಟಕಡೆಗೆ ಅಮೀರನ ಪಲ್ಲಕ್ಕಿ ಹೊರ ಬಂದು ನಿಧಾನವಾಗಿ ಮುಂದೆ ಸಾಗಿತು. ಗುಂಪು ಅಡ್ಡ ಬಿದ್ದು ನಮಸ್ಕಾರ ಮಾಡಿತು. ಪಲ್ಲಕ್ಕಿ ಜಗುಲಿಯ ಮೇಲಕ್ಕೆ ಬಂತು.

ಅಮೀರನು ಸಿಂಹಾಸನದ ಮೇಲೆ ಕುಳಿತನು. ಅಪರಾಧಿಗಳನ್ನು ಅರಮನೆಯ ಹೆಬ್ಬಾಗಿಲಿನಿಂದ ಹೊರಕ್ಕೆ ಕರೆತಂದರು. ಅವರನ್ನು ಕಂಡು ಗುಂಪಿನಲ್ಲಿ ಸಣ್ಣಗೆ ದನಿಯೆದ್ದು ಮೋಡದ ಒಳಗೊಳಗೇ ಸಣ್ಣಗೆ ಗುಡುಗುತ್ತಿರುವಾಗಿನಂತೆ ಸದ್ದಾಯಿತು. ಶಿಕ್ಷೆಗೆ ಗುರಿಯಾಗಿದ್ದವರ ನಂಟರೂ ಸ್ನೇಹಿತರೂ ಮುಂದಿನ ಸಾಲುಗಳಲ್ಲಿ ನಿಂತಿದ್ದರು; ಅವರನ್ನು ಚೆನ್ನಾಗಿ ನೋಡುವುದಕ್ಕಾಗಿ ಮುಂದೆ ಬಂದಿದ್ದರು

ವಧಕಾರರು ಕೊಡಲಿ, ಶೂಲದ ಕಂಬ, ಹಗ್ಗ ಮೊದಲಾದವನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ಅವರಿಗೆ ಅವತ್ತು ದಿನವೆಲ್ಲಾ ಕೆಲಸವಿತ್ತು; ಒಬ್ಬರಾಗುತ್ತ ಒಬ್ಬರಂತೆ ಅರವತ್ತು ಜನಕ್ಕೆ ಮರಣದಂಡನೆ ಆಗಬೇಕಾಗಿತ್ತು.

ಈ ಮೆರವಣಿಗೆಯಲ್ಲಿ ಮುದುಕ ನಿಯಾಸನೇ ಮೊದಲನೆಯವನು. ವಧಕಾರರು ಅವನ ತೋಳುಗಳನ್ನು ಭದ್ರವಾಗಿ ಹಿಡಿದುಕೊಂಡರು. ಅವನ ಬಲಗಡೆ ತಲೆ ಕತ್ತರಿಸುವ ದಿಮ್ಮಿ, ಮುಂದುಗಡೆ ಶೂಲ ಸಿದ್ಧವಾಗಿದ್ದವು.

ಪ್ರಧಾನ ವಜೀರ ಬಖ್ತಿಯಾರ್ ಗಟ್ಟಿಯಾಗಿ ಗಂಭೀರವಾಗಿ ಹೀಗೆ ಘೋಷಿಸಿದನು :

“ದಯಾಸಾಗರನೂ ಕರುಣಾಮಯನೂ ಆದ ಅಲ್ಲಾನ ಹೆಸರಿನಲ್ಲಿ, ಬುಖಾರವನ್ನು ಆಳುವವರೂ ವಿಶ್ವಕ್ಕೆ ಸೂರ್ಯನೂ ಆಗಿರುವ ಬುಖಾರದ

ಅಮೀರರು, ತಮ್ಮ ಪ್ರಜೆಗಳಲ್ಲಿ ಅರವತ್ತು ಜನರು ದೈವದ್ರೋಹಿಯೂ ಶಾಂತಿ ಭಂಗಕಾರಿಯೂ ಕಲಹಗಳನ್ನು ಬಿತ್ತುವವನೂ ನೀಚನೂ ಪೋಕರಿಯೂ ಆದ ಖೋಜಾ ನಸ್ರೆದ್ದೀನನಿಗೆ ಆಶ್ರಯ ಕೊಟ್ಟ ಅಪರಾಧಗಳನ್ನು ನ್ಯಾಯದ ತಕ್ಕಡಿಯಲ್ಲಿ ತೂಗಿ, ಅವರ ವಿಷಯದಲ್ಲಿ ತಮ್ಮ ಆಜ್ಞೆಗಳನ್ನು ಈ ರೀತಿ ಪ್ರಕಟಿಸಿದ್ದಾರೆ :

"ತನ್ನ ಮನೆಯಲ್ಲಿ ಮೇಲೆ ಹೇಳಿದ ಅಲೆಮಾರಿ ತಂಟೆಕೋರ ಖೋಜಾ ನಸ್ರೆದ್ದೀನನಿಗೆ ಬಹು ಕಾಲದ ವರೆಗೂ ಆಶ್ರಯ ಕೊಟ್ಟ ಮುಖ್ಯ ಆಶ್ರಯ ದಾತ ಕುಂಬಾರ ನಿಯಾಸನಿಗೆ ಅವನ ತಲೆಯನ್ನು ದೇಹದಿಂದ ಪ್ರತ್ಯೇಕಿಸು ವುದರ ಮೂಲಕ ಮರಣದಂಡನೆ ವಿಧಿಸಲಾಗಿದೆ. ಉಳಿದ ಅಪರಾಧಿಗಳ ವಿಷಯದಲ್ಲಿ, ನಿಯಾಸನ ಮರಣದಂಡನೆಯನ್ನು ನೋಡುವುದು ಮತ್ತು ಅದ ಕ್ಕಿಂತ ಘೋರವಾದ ಮರಣವನ್ನು ನಿರೀಕ್ಷಿಸಿ ನಡುಗುವುದು—ಇದೇ ಪ್ರಥಮ ಶಿಕ್ಷೆ. ಅವರಲ್ಲಿ ಪ್ರತಿಯೊಬ್ಬನಿಗೂ ಯಾವ ರೂಪದಲ್ಲಿ ಮರಣದಂಡನೆ ವಿಧಿಸು ವುದೆಂಬುದನ್ನು ಪ್ರತ್ಯೇಕವಾಗಿ ತಿಳಿಸಲಾಗುತ್ತದೆ."

ಗುಂಪು ನಿಶ್ಶಬ್ದವಾಗಿತ್ತು. ಎಷ್ಟು ಮಟ್ಟಿಗೆ ಎಂದರೆ, ಬಖ್ತಿಯಾರ್ ಆಡಿದ ಪ್ರತಿಯೊಂದು ಮಾತೂ ಹಿಂದಿನ ಸಾಲಿನ ವರೆಗೂ ಸ್ಪಷ್ಟವಾಗಿ ಕೇಳು ತ್ತಿತ್ತು.

ಬಖ್ತಿಯಾರ್ ದನಿಯೇರಿಸಿ ಮತ್ತೆ ಮುಂದುವರಿಸಿದನು : "ಎಲ್ಲರಿಗೂ ಇದು ಚೆನ್ನಾಗಿ ತಿಳಿದಿರಲಿ! ಇನ್ನು ಮುಂದೆ ಖೋಜಾ ನಸ್ರೆದ್ದೀನನಿಗೆ ಆಶ್ರಯ ಕೊಡುವ ಯಾವನಿಗೇ ಆದರೂ ಇದೇ ಶಿಕ್ಷೆಯನ್ನು ಕೊಡಲಾಗುತ್ತದೆ; ಅಂಥವರಲ್ಲಿ ಯಾವೊಬ್ಬನೂ ವಧಕಾರನ ಕೈಗೆ ಬೀಳದಂತೆ ತಪ್ಪಿಸಿಕೊಳ್ಳಲಾಗು ವುದಿಲ್ಲ. ಆದರೂ ಈಗ ಮರಣಶಿಕ್ಷೆಗೆ ಗುರಿಯಾಗಿರುವ ಅಪರಾಧಿಗಳಲ್ಲಿ ಯಾವನಾದರೊಬ್ಬನು ಈ ನಾಸ್ತಿಕ ಪಟಿಂಗ ಎಲ್ಲಿದ್ದಾನೆಂದು ಅವನಿರುವ ಸ್ಥಳ ವನ್ನು ತಿಳಿಸುವುದಾದರೆ, ಆಗ ಅವನಿಗೆ ಕ್ಷಮೆ ನೀಡುವುದರ ಜೊತೆಗೆ ಈಗ ಅಮೀರರು ಪ್ರಕಟಿಸಿರುವ ಬಹುಮಾನವನ್ನೂ ಕೊಡಲಾಗುವುದಲ್ಲದೆ, ಅವನು ಆ ಕೃತ್ಯದಿಂದ ಉಳಿದೆಲ್ಲ ಅಪರಾಧಿಗಳಿಗೂ ಕ್ಷಮೆಯನ್ನು ಪಡೆದುಕೊಳ್ಳ ಬಹುದಾಗಿದೆ. ಕುಂಬಾರ ನಿಯಾಸ್, ಖೋಜಾ ನಸ್ರೆದ್ದೀನನಿರುವ ಸ್ಥಳವನ್ನು ತಿಳಿಸಿಬಿಟ್ಟು ಆ ಮೂಲಕ ನಿನಗೂ ಮತ್ತು ನಿನ್ನ ಜೊತೆಯಲ್ಲಿ ಶಿಕ್ಷೆಗೆ ಗುರಿ

ಯಾಗಿರುವ ಉಳಿದವರಿಗೂ ಬಿಡುಗಡೆ ಪಡೆದುಕೊಳ್ಳುತ್ತೀಯೋ? ಏನು? ಹೇಳು" ಎಂದನು.

ನಿಯಾಸ್ ಬಹಳ ಹೊತ್ತಿನ ವರೆಗೂ ಮೌನವಾಗಿಯೇ ಇದ್ದನು; ಬಗ್ಗಿಸಿದ ತಲೆಯನ್ನು ಮೇಲೆತ್ತಲಿಲ್ಲ. ಬಖ್ತಿಯಾರ್ ಮತ್ತೆ ಅದೇ ಪ್ರಶ್ನೆ ಕೇಳಿದನು. ಆಗ ನಿಯಾಸ್ ಉತ್ತರ ಕೊಟ್ಟನು :

"ಇಲ್ಲ, ಅವನೆಲ್ಲಿದ್ದಾನೆಂದು ನಾನು ಹೇಳಲಾರೆ."

ವಧಕಾರರು ಮುದುಕನನ್ನು ಶಿರಶ್ಛೇದನದ ಮರದ ತುಂಡಿನ ಬಳಿಗೆ ಎಳೆದೊಯ್ದರು. ಗುಂಪಿನಲ್ಲಿ ಯಾರೋ ಒಬ್ಬರು ಕಿರಿಚಿಕೊಂಡರು. ಮುದುಕ ಮಂಡಿಯೂರಿ ಕುಳಿತು, ಕತ್ತು ನೀಡಿ ನರೆತ ತಲೆಯನ್ನು ಮರಗೊರಡಿನ ಮೇಲೆ ಇಟ್ಟನು.

ಈ ಕ್ಷಣದಲ್ಲೆ ಖೋಜಾ ನಸ್ರೆದ್ದೀನನು ಆಸ್ಥಾನಿಕರ ಗುಂಪಿನಲ್ಲಿ ಮೊಳಕೈಯಿಂದ ನೂಕಿ ನೂಕಿ ದಾರಿ ಮಾಡಿಕೊಂಡು ಮುಂದೆ ಬಂದು ಅಮೀರನ ಎದುರಿಗೆ ಬಂದು ನಿಂತನು.

ಗುಂಪಿಗೆಲ್ಲಾ ಕೇಳಿಸುವಷ್ಟು ಗಟ್ಟಿ ದನಿಯಿಂದ, "ಓ, ದಯಾಮಯ ಪ್ರಭೂ! ಮರಣದಂಡನೆಯನ್ನು ನಿಲ್ಲಿಸುವಂತೆ ಅಪ್ಪಣೆಯಾಗಬೇಕು. ನಾನು ಖೋಜಾ ನಸ್ರೆದ್ದೀನನನ್ನು, ಇಲ್ಲಿಯೇ, ಈಗಲೇ ಹಿಡಿದು ಕೊಡುತ್ತೇನೆ" ಎಂದನು.

ಅಮೀರನು ಬೆರಗಿನಿಂದ ಅವನ ಮುಖವನ್ನೇ ದುರುಗುಟ್ಟಿ ನೋಡತೊಡಗಿದನು. ಗುಂಪು ಇದ್ದಲ್ಲಿಯೇ ಅತ್ತಿತ್ತ ಹೊಯ್ದಾಡತೊಡಗಿತು. ಅಮೀರನ ಸನ್ನೆಯನ್ನರಿತು ವಧಕಾರನು, ಎತ್ತಿದ್ದ ಕೊಡಲಿಯನ್ನು ತಗ್ಗಿಸಿ ಕೆಳಗಿಟ್ಟು, ಕಾಲಿಗೊರಗಿಸಿಕೊಂಡು ನಿಂತನು.

"ಓ ಮಹಾಪ್ರಭೂ!" ಎಂದು ಗಟ್ಟಿ ದನಿಯಲ್ಲಿ ಖೋಜಾ ನಸ್ರೆದ್ದೀನ್ ಹೇಳಲು ಪ್ರಾರಂಭಿಸಿದನು : "ಮುಖ್ಯ ಆಶ್ರಯದಾತನನ್ನು ಹಾಗೆಯೇ ಬಿಟ್ಟು, ಕೇವಲ ಅಲ್ಪರೂ ಅಪ್ರಸಿದ್ಧರೂ ಆದ ಈ ಆಶ್ರಯದಾತರಿಗೆ ಮರಣದಂಡನೆಯನ್ನು ವಿಧಿಸುವುದು ನ್ಯಾಯವೆ? ಇತ್ತೀಚೆಗೆ ಖೋಜಾ ನಸ್ರೆದ್ದೀನನು ಯಾರ ಮನೆಯಲ್ಲಿ ನೆಲಸಿದ್ದನೋ, ಈಗಲೂ ಕೂಡ ಯಾರ ಮನೆಯಲ್ಲಿ ವಾಸಮಾಡುತ್ತಿದ್ದಾನೋ, ಯಾರು ಅವನಿಗೆ ಅನ್ನ ಕೊಟ್ಟು, ಬಹುಮಾನ

ಕೊಟ್ಟು, ಸರ್ವ ವಿಧದಿಂದಲೂ ಎಚ್ಚರಿಕೆ ವಹಿಸಿ ಅವನ ಯೋಗಕ್ಷೇಮ ನೋಡಿ ಕೊಳ್ಳುತ್ತಿದ್ದಾನೋ ಅಂಥ ಪ್ರಧಾನ ಆಶ್ರಯದಾತನನ್ನು ಬಿಟ್ಟುಬಿಡುವುದು ನ್ಯಾಯವೇ ?" ಎಂದು ಕೇಳಿದನು.

"ನೀನು ಹೇಳುವುದು ಸರಿ. ಅಂಥ ಆಶ್ರಯದಾತನೊಬ್ಬನಿರುವುದಾದರೆ, ನ್ಯಾಯವಾಗಿ ಅವನನ್ನೇ ಮೊದಲು ಶಿರಚ್ಛೇದಶಿಕ್ಷೆಗೆ ಗುರಿಪಡಿಸಬೇಕು. ಆದರೆ, ಅವನು ಯಾರು, ತೋರಿಸು, ಮೌಲಾನಾ ಹುಸೇನ್ ?" ಎಂದು ಅಮೀರನು ನಿದಾನವಾಗಿ ಎಳೆದೆಳೆದು ನುಡಿದನು.

"ಆದರೆ, ಮಹಾ ಘನ ಅಮೀರರು ಈ ಪ್ರಧಾನ ಆಶ್ರಯದಾತನನ್ನು ಮರಣಶಿಕ್ಷೆಗೆ ಗುರಿಮಾಡಲು ಇಚ್ಛಿಸದಿದ್ದರೆ, ಮಹಾ ಘನ ಅಮೀರರು ಅವನನ್ನು ಬದುಕಿರಲೆಂದು ಬಿಟ್ಟುಬಿಟ್ಟರೆ, ಅಂಥ ಸಂದರ್ಭದಲ್ಲಿ, ಈ ಅಲ್ಪ ಆಶ್ರಯದಾತರನ್ನು ಶಿಕ್ಷಿಸುವುದು ನ್ಯಾಯವಾಗುತ್ತದೆಯೆ ?" ಎಂದು ಖೋಜಾ ನಸ್ರುದ್ದೀನ್ ಪ್ರಶ್ನೆ ಮಾಡಿದನು.

ಅಮೀರನಿಗೆ ಮೊದಲಿಗಿಂತ ಹೆಚ್ಚು ಬೆರಗಾಯಿತು ; ತಬ್ಬಿಬ್ಬಾಗಿ ಹೀಗೆ ಉತ್ತರ ಕೊಟ್ಟನು :

"ಪ್ರಧಾನ ಆಶ್ರಯದಾತನನ್ನು ಮರಣಶಿಕ್ಷೆಗೊಳಪಡಿಸಲು ನಾವು ಇಚ್ಛಿಸದಿದ್ದಲ್ಲಿ, ಆಗ ಉಳಿದವರೆಲ್ಲರಿಗೂ ನಿಸ್ಸಂಶಯವಾಗಿ ಬಿಡುಗಡೆ ಮಾಡುತ್ತೇವೆ. ಆದರೆ, ನಮಗೆ ಇದು ಅರ್ಥವಾಗುತ್ತಿಲ್ಲ, ಮೌಲಾನಾ : ಪ್ರಧಾನ ಆಶ್ರಯದಾತನನ್ನು ಮರಣದಂಡನೆಗೆ ಗುರಿಪಡಿಸದಂತೆ ನಮ್ಮನ್ನು ನಿರ್ಬಂಧಿಸಲು ಅಂಥ ಕಾರಣ ಏನಿದ್ದೀತು? ಅವನೆಲ್ಲಿದ್ದಾನೆ? ಅವನನ್ನು ನಮಗೆ ತೋರಿಸು. ತಕ್ಷಣ ಅವನ ತಲೆಯನ್ನು ದೇಹದಿಂದ ಪ್ರತ್ಯೇಕಿಸಿಬಿಡುತ್ತೇನೆ."

ಖೋಜಾ ನಸ್ರುದ್ದೀನನು ಗುಂಪಿನ ಕಡೆ ತಿರುಗಿದನು :

"ನೀವೆಲ್ಲಾ ಅಮೀರರ ಮಾತು ಕೇಳಿದ್ದೀರಿ. ಬುಖಾರ ದೇಶವನ್ನಾಳುವ ಪ್ರಭು ಹೇಳಿದ್ದಾರೆ, ಪ್ರಧಾನ ಆಶ್ರಯದಾತನನ್ನು—ಅವನ ಹೆಸರನ್ನು ನಾನು ಈಗಲೇ ಹೇಳಲಿದ್ದೇನೆ—ಮರಣದಂಡನೆಗೆ ಗುರಿಪಡಿಸಲು ತಾವು ಒಪ್ಪದಿದ್ದರೆ, ಆಗ ಉಳಿದ ಅಲ್ಪ ಆಶ್ರಯದಾತರನ್ನೆಲ್ಲ—ಈಗ ಮರಣದಂಡನೆಗೆ ಸಿದ್ಧರಾಗಿ ನಿಂತಿರುವ ಇವರನ್ನೆಲ್ಲ—ಬಿಡುಗಡೆ ಮಾಡುವರೆಂದೂ, ಅವರೆಲ್ಲ ಹಿಂದಿರುಗಿ ಹೋಗಿ ತಮ್ಮ ತಮ್ಮ ಕುಟುಂಬಗಳೊಡನೆ ಬಾಳಬಹುದೆಂದೂ ಹೇಳಿದ್ದಾರೆ.

ನಾನು ಹೇಳಿದ್ದು ನಿಜವೇ, ಮಹಾಪ್ರಭೂ ? "

" ನೀನು ಹೇಳಿದ್ದು ನಿಜ, ಮೌಲಾನಾ ಹುಸೇನ್ " ಎಂದು ಅಮೀರ ಆ ಮಾತನ್ನು ಸಮರ್ಥಿಸಿದನು. " ಹಾಗೆಯೇ ಆಗುವುದೆಂದು ನಾವು ಮಾತು ಕೊಡುತ್ತೇವೆ. ಆದರೆ, ಜಾಗ್ರತೆ ಮಾಡು ; ಹೇಳಿಬಿಡು ನಮಗೆ, ಆ ಪ್ರಧಾನ ಆಶ್ರಯದಾತ ಯಾರು ? " ಎಂದು ಕೇಳಿದನು.

ಖೋಜಾ ನಸ್ರೆದ್ದೀನ್ ಗುಂಪಿನ ಕಡೆ ತಿರುಗಿ, " ಕೇಳಿದಿರೋ ? ಅಮೀರರು ಮಾತು ಕೊಟ್ಟಿದ್ದಾರೆ " ಎಂದನು.

ಅವನು ದೊಡ್ಡದಾಗಿ ನಿಟ್ಟುಸುರು ಬಿಟ್ಟನು. ಸಾವಿರಾರು ದೃಷ್ಟಿಗಳು ತನ್ನ ಮೇಲೆಯೇ ನೆಟ್ಟಿರುವುದು ಅವನಿಗೆ ಅರಿವಾಯಿತು.

" ಮುಖ್ಯ ಆಶ್ರಯದಾತನು...."

ಅವನ ಮಾತು ತಡವರಿಸಿತು ; ಸುತ್ತಲೂ ನೋಡಿದನು ; ಅವನ ಮುಖದ ಮೇಲೆ ಅತ್ಯಂತ ಚಿಂತೆ ಆತಂಕಗಳನ್ನು ಎಷ್ಟೋ ಜನ ಕಂಡರು. ತನಗೆ ಅತ್ಯಂತ ಪ್ರಿಯವಾದ ಪ್ರಪಂಚ, ಜನ, ಸೂರ್ಯ—ಎಲ್ಲವನ್ನೂ ಬೀಳ್ಕೊಟ್ಟು ಹೊರಡುತ್ತಿದ್ದನು ಅವನು.

ಅಮೀರನು ಕುತೂಹಲವನ್ನು ತಡೆದುಕೊಳ್ಳಲಾರದೆ, " ಬೇಗ ! ಬೇಗ ! ಬೇಗ ಹೇಳಿಬಿಡು, ಮೌಲಾನಾ ಹುಸೇನ್ ! " ಎಂದನು.

ಅನುರಣಿಸುವ ದನಿಯಿಂದ ಖೋಜಾ ನಸ್ರೆದ್ದೀನ್ ನುಡಿದನು :

" ಪ್ರಧಾನ ಆಶ್ರಯದಾತ ಯಾರೆಂದರೆ........ನೀವೇ. ಓ ಅಮೀರರೇ, ನೀವೇ ಅವನು ! "

ಈ ಮಾತಾಡುತ್ತಿದ್ದಂತೆಯೇ ಅವನು ತನ್ನ ರುಮಾಲನ್ನೂ ಕೃತಕ ಗಡ್ಡವನ್ನೂ ಕಿತ್ತೆಸೆದನು.

ಗುಂಪು ಬೆರಗಾಗಿ ಬಾಯಿಬಿಟ್ಟಿತು ; ಹಿಂದಕ್ಕೆ ಮುಂದಕ್ಕೆ ತೂಗಾಡಿತು ; ಆ ಮೇಲೆ ನಿಶ್ಚಲವಾಗಿ ನಿಂತಿತು. ಅಮೀರನ ಕಣ್ಣುಗುಡ್ಡೆಗಳು ಮುಂದಕ್ಕೆ ಚಾಚಿಕೊಂಡವು ; ಅವನ ತುಟಿಗಳು ಅಲುಗಿದವು, ಆದರೆ ಸದ್ದು ಮಾತ್ರ ಹೊರಡಲಿಲ್ಲ. ಆಸ್ಥಾನಿಕರೆಲ್ಲ ಇದ್ದಕ್ಕಿದ್ದಂತೆ ಕಲ್ಲುಪ್ರತಿಮೆಗಳಾಗಿದ್ದರೆ ಹೇಗೋ ಹಾಗೆ ಸ್ತಬ್ಧರಾಗಿ ನಿಂತರು.

ಈ ಮೌನ ಇದ್ದದ್ದು ಬಹು ಸ್ವಲ್ಪ ಕಾಲ ಮಾತ್ರ.

" ಖೋಜಾ ನಸ್ರೆದ್ದೀನ್ ! ಖೋಜಾ ನಸ್ರೆದ್ದೀನ್ ! " ಎಂದು ಗುಂಪಿಗೆ ಗುಂಪೇ ಘೋಷಿಸಿತು.

" ಖೋಜಾ ನಸ್ರೆದ್ದೀನ್ ! " ಎಂದು ಪಿಸುಗುಟ್ಟಿದರು ಆಸ್ಥಾನಿಕರು.

" ಖೋಜಾ ನಸ್ರೆದ್ದೀನ್! " ಬೆರಗಾಗಿ ನುಡಿದನು ಆರ್ಸ್‌ಲಾನ್-ಬೆಕ್.

ಕಟ್ಟಕಡೆಗೆ ದೊರೆ ಕೂಡ ಬೆರಗಾಗಿ ಮೈಮರೆತಿದ್ದವನು ಸಮಾಧಾನ ಮಾಡಿಕೊಂಡು ಸ್ವಸ್ಥನಾಗಿ, " ಖೋಜಾ ನಸ್ರೆದ್ದೀನ್ ! " ಎಂದು ಅಸ್ಪಷ್ಟವಾಗಿ ಗೊಣಗಿದನು.

" ಹೌದು, ಖೋಜಾ ನಸ್ರೆದ್ದೀನ್ ! ಪ್ರತ್ಯಕ್ಷ ಖೋಜಾ ನಸ್ರೆದ್ದೀನನೇ ನಾನು ! ಸರಿ, ಅಮೀರರೇ, ನನಗೆ ಮುಖ್ಯ ಆಶ್ರಯದಾತನಾಗಿದ್ದ ತಪ್ಪಿಗಾಗಿ ನಿಮ್ಮ ತಲೆಯನ್ನು ಕತ್ತರಿಸುವಂತೆ ಅವರಿಗೆ ಅಪ್ಪಣೆ ಮಾಡಿರಿ ! ನಾನು ನಿಮ್ಮ ಅರಮನೆಯಲ್ಲಿ ವಾಸಮಾಡುತ್ತಿದ್ದೆ. ನಿಮ್ಮ ಊಟವನ್ನೇ ಹಂಚಿಕೊಂಡು ನಾನು ಊಟ ಮಾಡಿದೆ. ನಿಮ್ಮಿಂದ ಅನೇಕ ಬಹುಮಾನಗಳನ್ನು ಪಡೆದಿದ್ದೇನೆ. ಎಲ್ಲಾ ವ್ಯವಹಾರಗಳಲ್ಲಿಯೂ ನಾನೇ ನಿಮಗೆ ಅತ್ಯಂತ ಆಪ್ತನಾದ ಮುಖ್ಯ ಸಲಹೆಗಾರನಾಗಿದ್ದೆ. ನೀವೇ ನನಗೆ ಪ್ರಧಾನ ಆಶ್ರಯದಾತ, ಅಮೀರರೇ ! ನಿಮ್ಮ ತಲೆಯನ್ನು ತುಂಡರಿಸುವಂತೆ ಅಪ್ಪಣೆ ಮಾಡಿಬಿಡಿ ! " ಎಂದು ಗಂಭೀರ ಕಂಠದಿಂದ ಘೋಷಿಸಿದನು ಖೋಜಾ ನಸ್ರೆದ್ದೀನ್.

ತಕ್ಷಣ ಖೋಜಾ ನಸ್ರೆದ್ದೀನನನ್ನು ಕಾಪಿನವರು ಹಿಡಿದರು. ಅವನ ಕೈಗಳನ್ನು ಕಟ್ಟಿದರು. ಅವನು ಪ್ರತಿಭಟಿಸಲಿಲ್ಲ. ಅವನು ಗಟ್ಟಿಯಾಗಿ ಕೂಗುತ್ತಿದ್ದನು :

" ಅಪರಾಧಿಗಳೆಂದು ಶಿಕ್ಷೆಗೆ ಗುರಿಯಾಗಿರುವವರನ್ನೆಲ್ಲಾ ಬಿಟ್ಟುಬಿಡುವುದಾಗಿ ಅಮೀರರು ವಾಗ್ದಾನ ಮಾಡಿದರು ! ಅಮೀರರು ಮಾತು ಕೊಟ್ಟಿದ್ದನ್ನು ನೀವೆಲ್ಲಾ ಕೇಳಿದ್ದೀರಿ ! " ಎಂದು ಗಟ್ಟಿಯಾಗಿ ಕೂಗುತ್ತಿದ್ದನು.

ಜನರ ಗುಂಪು ಗಜಬಜಿಸುತ್ತಾ ಮುಂದು ಮುಂದಕ್ಕೆ ನುಗ್ಗಿ ಬಂತು. ಮೂರು ಸಾಲಿನಲ್ಲಿ ಸುತ್ತುಗಟ್ಟಿ ನಿಂತಿದ್ದ ಕಾಪುದಳದವರಿಗೆ ಮುನ್ನುಗ್ಗುವ ಜನ ಸಮೂಹವನ್ನು ನುಗ್ಗಿ ಬರದಂತೆ ತಡೆಯುವುದಕ್ಕೆ ಸಾಕುಸಾಕಾಗಿಹೋಯಿತು. ಜನರ ಕೂಗು ಗಳಿಗೆಗಳಿಗೆಗೂ ಹೆಚ್ಚು ಗಟ್ಟಿಯಾಗುತ್ತಿತ್ತು.

" ಶಿಕ್ಷೆಗೆ ಗುರಿಪಡಿಸಿರುವವರನ್ನು ಬಿಡಿ ! ಬಿಡಿ ! ಬಿಡಿ ! "

" ಅಮೀರರು ಮಾತು ಕೊಟ್ಟಿದ್ದಾರೆ! "

" ಬಿಡಿ! ಬಿಡುಗಡೆ ಮಾಡಿ! "

" ಬಿಡಿ!...."

ಗದ್ದಲ ಹೆಚ್ಚಾಯಿತು! ಸದ್ದು ಗಟ್ಟಿಯಾಯಿತು. ಕಾವುಸಿಪಾಯಿಗಳ ಸಾಲು ತತ್ತರಿಸಿ ಬೀಳತೊಡಗಿತು.

ಬಖ್ತಿಯಾರ್ ಅಮೀರನ ಕಿವಿಯ ಬಳಿ ಬಗ್ಗಿದನು :

" ಓ, ದಯಾಮಯ ಪ್ರಭೂ! ಅವರನ್ನು ಬಿಡಿಸಿ ಕಳಿಸಬೇಕು. ಇಲ್ಲದಿದ್ದರೆ, ಜನ ದಂಗೆಯೇಳುತ್ತಾರೆ! "

ಅಮೀರ ಆಗಲೆಂದು ಕತ್ತು ಹಾಕಿದನು.

" ಅಮೀರರು ಮಾತಿನಂತೆ ನಡೆಯುತ್ತಾರೆ! " ಎಂದು ಬಖ್ತಿಯಾರ್ ಗಟ್ಟಿಯಾಗಿ ಕೂಗಿದನು.

ಸುತ್ತುಗಟ್ಟಿದ್ದ ಕಾವುಸಿಪಾಯಿಗಳು ದಾರಿ ಬಿಟ್ಟರು. ಶಿಕ್ಷೆಗೆ ಗುರಿಯಾಗಿದ್ದವರೆಲ್ಲ ಆ ಕ್ಷಣವೇ ಗುಂಪಿನಲ್ಲಿ ಸೇರಿ ಮರೆಯಾಗಿಬಿಟ್ಟರು.

ಖೋಜಾ ನಸ್ರೆದ್ದೀನನನ್ನು ಅರಮನೆಗೆ ಕರೆದುಕೊಂಡು ಹೋದರು. ಗುಂಪಿನಲ್ಲಿ ಅನೇಕ ಜನ ಬಿಕ್ಕಿ ಬಿಕ್ಕಿ ಅತ್ತರು. ಅಳುತ್ತಾ ಅವನು ಹೋದ ದಿಕ್ಕಿಗೆ ತಿರುಗಿಕೊಂಡು,

" ಹೋಗಿ ಬಾ, ಖೋಜಾ ನಸ್ರೆದ್ದೀನ್! ಉದಾರ ಹೃದಯದ ನಮ್ಮ ಪ್ರೀತಿಯ ಖೋಜಾ ನಸ್ರೆದ್ದೀನ್, ಹೋಗಿ ಬಾ! ನಿನಗೆ ಶುಭವಾಗಲಿ! ನೀನು ನಮ್ಮೆಲ್ಲರ ಹೃದಯಗಳಲ್ಲಿಯೂ ಸದಾ ಜೀವಿಸಿರುತ್ತೀಯೆ! " ಎನ್ನುತ್ತಿದ್ದರು.

ಅವನು ಎತ್ತರಕ್ಕೆ ತಲೆಯೆತ್ತಿಕೊಂಡು ಧೀರ ಹೆಜ್ಜೆಯಿಡುತ್ತಾ ನಡೆಯುತ್ತಿದ್ದನು. ಅವನ ಮುಖಭಾವ ನಿರ್ಭಯವಾಗಿತ್ತು. ಅರಮನೆಯ ಹೆಬ್ಬಾಗಿಲ ಬಳಿ ಅವನು ಹಿಂದಕ್ಕೆ ತಿರುಗಿ ನೋಡಿದನು. ಜನಸಮೂಹ ಬಲವಾಗಿ ಕೂಗು ಹಾಕಿತು.

ಅಮೀರನು ಆತುರಾತುರವಾಗಿ ಪಲ್ಲಕ್ಕಿಯೊಳಕ್ಕೆ ತೂರಿಕೊಂಡನು. ಅರಸನ ಮೆರವಣಿಗೆ ಹಿಂದಿರುಗಿ ಹೊರಟಿತು.

೮

ಖೋಜಾ ನಸ್ರೆದ್ದೀನನನ್ನು ವಿಚಾರಣೆ ಮಾಡಲು ಸಭೆ ನೆರೆಯಿತು.

ಅವನು ಸಭೆಗೆ ಪ್ರವೇಶಿಸಿದಾಗ—ಕೈಗಳನ್ನು ಬಿಗಿದು ಕಟ್ಟಿ ಬಹು ಎಚ್ಚರಿಕೆಯಿಂದ ಸಿಪಾಯಿಗಳು ಕಾಯುತ್ತ ಬರುತ್ತಿರಲು ಅವನು ಸಭೆಗೆ ಪ್ರವೇಶಿಸಿದಾಗ—ಆಸ್ಥಾನಿಕರೆಲ್ಲ ದೃಷ್ಟಿ ತಗ್ಗಿಸಿಕೊಂಡರು. ಒಬ್ಬರನ್ನೊಬ್ಬರು ನೋಡುವುದಕ್ಕೆ, ಒಬ್ಬರೊಬ್ಬರು ಮುಖ ನೋಡುವುದಕ್ಕೆ. ಅವರು ನಾಚಿದರು. ಜ್ಞಾನಿಗಳು ಹುಬ್ಬು ಗಂಟಿಕ್ಕಿ ಗಡ್ಡ ನೇವರಿಸಿಕೊಂಡರು. ಅಮೀರನೂ ಅತ್ತ ತಿರುಗಿದನು; ನಿಟ್ಟುಸುರಿಡುತ್ತಾ, ಕೆಮ್ಮಿ ಗಂಟಲು ಸರಿಮಾಡಿಕೊಳ್ಳುತ್ತಾ ಒಕ್ಕಡೆಗೆ ತಿರುಗಿಕೊಂಡನು.

ಆದರೆ ಖೋಜಾ ನಸ್ರೆದ್ದೀನನ ದೃಷ್ಟಿ ಸುಸ್ಪಷ್ಟವಾಗಿತ್ತು, ನೇರವಾಗಿತ್ತು. ಅವನ ಕೈಗಳನ್ನು ಬೆನ್ನ ಹಿಂದಕ್ಕೆ ಕಟ್ಟದೆ ಸ್ವತಂತ್ರವಾಗಿ ಬಿಟ್ಟಿದ್ದಿದ್ದ ಪಕ್ಷದಲ್ಲಿ, ಅಪರಾಧಿ ಅವನಲ್ಲ, ಅವನೆದುರಿಗೆ ಪೀಠಗಳಲ್ಲಿ ಕುಳಿತಿದ್ದ ಈ ಮನುಷ್ಯರೇ ಅಪರಾಧಿಗಳು ಎಂದು ತೋರಬಹುದಾಗಿತ್ತು.

ನಿಜವಾದ ಮೌಲಾನಾ ಹುಸೇನನು—ಬಾಗ್ದಾದಿನ ಜ್ಞಾನಿ—ಸೆರೆಯಿಂದ ಬಿಡುಗಡೆ ಹೊಂದಿ ಇತರ ಎಲ್ಲಾ ಆಸ್ಥಾನಿಕರೊಡನೆ ಸಭೆಗೆ ಬಂದಿದ್ದನು. ಖೋಜಾ ನಸ್ರೆದ್ದೀನ್ ಅವನ ಕಡೆ ಸ್ನೇಹದಿಂದ ಕಣ್ಣು ಮಿಟುಕಿಸಿದನು; ಆದರೆ ಅದನ್ನು ಕಂಡು ಬಾಗ್ದಾದ್ ಜ್ಞಾನಿ ಪೀಠದ ಮೇಲೆ ಕುಳಿತಿದ್ದಂತೆಯೇ ಬೆಚ್ಚಿದನು. ಕೋಪದಿಂದ ಬುಸುಗುಟ್ಟಿದನು.

ತೀರ್ಪು ಹೇಳಲು ಹೆಚ್ಚು ಹೊತ್ತು ಹಿಡಿಯಲಿಲ್ಲ. ಖೋಜಾ ನಸ್ರೆದ್ದೀನನನ್ನು ಮರಣದಂಡನೆಗೆ ಗುರಿಪಡಿಸಲಾಯಿತು. ಯಾವ ರೀತಿಯ ಮರಣವೆಂದು ಆಯುವುದೊಂದು ಮಾತ್ರ ಉಳಿದಿತ್ತು.

"ಓ, ಮಹಾಪ್ರಭೂ, ನನ್ನ ಅಭಿಪ್ರಾಯದಲ್ಲಿ, ಈ ಅಪರಾಧಿಯನ್ನು ಶೂಲಕ್ಕೆ ಹಾಕಿಸಬೇಕು; ಅತ್ಯಂತ ಕಠೋರ ಯಾತನೆಯಲ್ಲಿ ಇವನ ಅಂತ್ಯವಾಗಬೇಕಾದರೆ ಇದೇ ತಕ್ಕ ಶಿಕ್ಷೆ" ಎಂದನು ಆರ್ಸ್‌ಲಾನ್-ಬೆಕ್.

ಖೋಜಾ ನಸ್ರೆದ್ದೀನ್ ಒಂದು ಕೂದಲನ್ನೂ ಕೊಂಕಿಸಲಿಲ್ಲ. ಅವನು ಸುಖವಾಗಿ ನಸುನಗುತ್ತಾ ನಿಂತಿದ್ದನು. ಮೇಲುಗಡೆಯ ಕಿಟಕಿಯ ಕಂಡಿಯಿಂದ ಬರುತ್ತಿದ್ದ ಬಿಸಿಲುಕೋಲೊಂದನ್ನು ಮುಖವೆತ್ತಿ ನೋಡುತ್ತ ನಿಂತನು.

"ಆಗದು!" ಎಂದನು ಅಮೀರ ನಿರ್ಣಾಯಕ ದನಿಯಲ್ಲಿ. "ಈ ಧರ್ಮದೂಷಕನನ್ನು ಶೂಲಕ್ಕೇರಿಸಲು ತುರ್ಕಿಯ ಸುಲ್ತಾನನು ಹಿಂದೆಯೇ ಪ್ರಯತ್ನಿಸಿದ್ದಾನೆ. ಆ ರೀತಿಯ ಮರಣದಂಡನೆಯಿಂದ ತನಗೆ ಯಾವ ಬಗೆಯ ತೊಂದರೆಯೂ ಆಗದಂತೆ ತಪ್ಪಿಸಿಕೊಂಡು ಬದುಕಿಕೊಳ್ಳುವ ಯಾವುದೋ ಒಂದು ಉಪಾಯ ಇವನಿಗೆ ಗೊತ್ತಿದೆಯೆಂದು ಕಾಣುತ್ತದೆ. ಹಾಗಿಲ್ಲದಿದ್ದರೆ, ಸುಲ್ತಾನನು ಶಿಕ್ಷಿಸಿದರೂ ಇವನು ಜೀವದೊರಸೆ ತಪ್ಪಿಸಿಕೊಂಡು ಬರಲು ಸಾಧ್ಯವಾಗುತ್ತಲೇ ಇರಲಿಲ್ಲ" ಎಂದು ವಿವರಿಸಿದನು.

ಅವನ ತಲೆ ಕತ್ತರಿಸಬೇಕೆಂದು ಬಖ್ತಿಯಾರ್ ಸಲಹೆ ಮಾಡಿದನು.

"ಇದು ಸಾಯಿಸಲು ಅತ್ಯಂತ ಸುಲಭ ಮಾರ್ಗಗಳಲ್ಲೊಂದು ; ನಿಜ. ಆದರೆ, ಇದು ಎಲ್ಲಕ್ಕಿಂತ ಹೆಚ್ಚು ಖಂಡಿತವಾದ್ದೂ, ಹೌದು" ಎಂದು ತನ್ನ ಸಲಹೆಯನ್ನು ಸಮರ್ಥಿಸಿಕೊಂಡನು.

"ಆಗದು!" ಎಂದನು ಅಮೀರ. "ಬಾಗ್ದಾದಿನ ಕಲೀಫ ಅವನ ತಲೆ ತೆಗಸಿದನು. ಆದರೂ ಅವನಿನ್ನೂ ಬದುಕಿಯೇ ಇದ್ದಾನೆ" ಎಂದನು.

ಒಬ್ಬರಾಗುತ್ತಲೊಬ್ಬರು ಆಸ್ಥಾನಿಕರೆಲ್ಲ ಎದ್ದೆದ್ದು ಖೋಜಾ ನಸ್ರೆದ್ದೀನ ನನ್ನು ಸಾಯಿಸಲು ಸಲಹೆ ಕೊಡುತ್ತ ಬಂದರು. ನೇಣು ಹಾಕುವುದು, ಇಲ್ಲವೆ ಜೀವಸಹಿತ ಚರ್ಮ ಸುಲಿಸುವುದು—ಇವೇ ಅವರ ಸಲಹೆಗಳು. ಅಮೀರನು ಈ ಎಲ್ಲಾ ಸಲಹೆಗಳನ್ನೂ ತಿರಸ್ಕರಿಸಿದನು. ಅವನು ಖೋಜಾ ನಸ್ರೆದ್ದೀನ ನನ್ನು ಕಣ್ಣಿಟ್ಟು ನೋಡುತ್ತಲೇ ಇದ್ದನು. ಅವನ ಮುಖದಲ್ಲಿ ಭೀತಿಯ ಗುರುತೇ ಕಾಣಿಸಲಿಲ್ಲ. ಅವರು ಹೇಳಿದ ಸೂಚನೆಗಳಲ್ಲಿ ಹುರುಳಿಲ್ಲ, ಆ ರೀತಿ ಯಿಂದ ಇವನನ್ನು ಸಾಯಿಸಲು ಸಾಧ್ಯವಿಲ್ಲ—ಎಂದು ತೀರ್ಮಾನಿಸಲು ಇದು ಸಮರ್ಪಕವಾದ ಆಧಾರವಾಯಿತು.

ಆಸ್ಥಾನಿಕರಿಗೆ ದಿಕ್ಕು ತೋಚದಾಯಿತು. ಏನು ಹೇಳುವುದಕ್ಕೂ ಸಂಕೋಚ ; ತೆಪ್ಪಗಾಗಿಬಿಟ್ಟರು. ಅಮೀರನಿಗೆ ತಾಳ್ಮೆ ತಪ್ಪಿ ರೋಷ ಕೆರಳುವ ಸ್ಥಿತಿ ಕಾಣಿಸಿತು.

ಆಗ ಬಾಗ್ದಾದ್ ಜ್ಞಾನಿ ಎದ್ದು ನಿಂತನು. ಅವನು ಅಮೀರನ ಮುಂದೆ ಮಾತಾಡುವುದು ಇದೇ ಮೊದಲಾದ್ದರಿಂದ, ಎಲ್ಲರಿಗಿಂತ ತನ್ನ ಬುದ್ಧಿವೈಭವ ಮಿಗಿಲಾದ್ದೆಂದು ತೋರಿಸಲಾಗುವಂತೆ ತನ್ನ ಸಲಹೆ ಸರ್ವೋತ್ಕೃಷ್ಟವಾಗಿರ

ಬೇಕೆಂದು ಅವನು ಬಹಳ ಎಚ್ಚರಿಕೆ ವಹಿಸಿದ್ದನು.

" ವಿಶ್ವದಲ್ಲೆಲ್ಲಾ ಮಹಾಮಹಿಮನಾದ ಪ್ರಭುವೇ ! ಇಲ್ಲಿಯ ವರೆಗೂ ಈ ಅಪರಾಧಿಯು ಎಲ್ಲ ಬಗೆಯ ಶಿಕ್ಷೆಗಳನ್ನೂ ಸ್ವಲ್ಪವೂ ಅಪಾಯವಿಲ್ಲದಂತೆ ತಪ್ಪಿಸಿಕೊಂಡು ಬದುಕಿರುವನಾದ ಪಕ್ಷದಲ್ಲಿ, ದುಷ್ಟ ಶಕ್ತಿಗಳಿಂದ, ಆ ಅಂಧಕಾರ ಮೂರ್ತಿಯಿಂದ—ಇಲ್ಲಿ, ಅಮೀರರ ಎದುರಿಗೆ ಹೆಸರು ಹೇಳಬಾರದಾದ ಆ ನೀಚ ಶಕ್ತಿಯಿಂದ—ಇವನು ಸಹಾಯ ಪಡೆಯುತ್ತಿದ್ದಾನೆಂದು ಸಿದ್ಧವಾಗುವುದಿಲ್ಲವೆ ? " ಎಂದನು.

ಹೀಗೆಂದು ನುಡಿದು ಆ ಜ್ಞಾನಿಯು ತನ್ನ ಭುಜಗಳ ಮೇಲೆ ಉಃಫೆಂದು ಊದಿಕೊಂಡನು ; ಖೋಜಾ ನಸ್ರೆದ್ದೀನ್ ಹೊರತು ಉಳಿದವರೆಲ್ಲರೂ ಹಾಗೆಯೇ ಮಾಡಿದರು.

ಬಾಗ್ದಾದಿನ ಜ್ಞಾನಿ ಮುಂದುವರಿಸಿದನು :

" ಅಪರಾಧಿಯ ವಿಷಯದಲ್ಲಿ ತಿಳಿದುಬಂದಿರುವ ಎಲ್ಲಾ ಸಂಗತಿಗಳನ್ನೂ ಗಮನಕ್ಕೆ ತಂದುಕೊಂಡು ತೂಗಿ ನೋಡಿ ನಮ್ಮ ಘನ ಅಮೀರರು ಈಗ ಅವನನ್ನು ಸಾಯಿಸುವುದಕ್ಕಾಗಿ ತಮಗೆ ಸಲಹೆ ಮಾಡಿರುವ ಎಲ್ಲಾ ಬಗೆಗಳನ್ನೂ ತಿರಸ್ಕರಿಸಿದ್ದಾರೆ. ಪಾಪಶಕ್ತಿಗಳು ಮತ್ತೆ ಅವನ ಸಹಾಯಕ್ಕೆ ಬಂದು ನ್ಯಾಯವಾದ ಶಿಕ್ಷೆಯಿಂದ ತಪ್ಪಿಸಿಕೊಳ್ಳುವಂತೆ ಮಾಡುತ್ತವೆಯೆಂಬ ಭಯದಿಂದ ಅವೆಲ್ಲವನ್ನೂ ಬೇಡವೆಂದು ತಳ್ಳಿಬಿಟ್ಟಿದ್ದಾರೆ. ಇಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಅಪರಾಧಿ ಖೋಜಾ ನಸ್ರೆದ್ದೀನನಿಗೆ, ಇದುವರೆಗೂ ವಿಧಿಸದೆ ಇರುವ ಒಂದು ಮರಣವಿಧಾನ ಉಳಿದಿದೆ. ಅದು ಯಾವುದೆಂದರೆ—ನೀರಿನಲ್ಲಿ ಮುಳುಗಿಸುವುದು."

ಬಾಗ್ದಾದ್ ಜ್ಞಾನಿಯು ತನ್ನ ತಲೆಯನ್ನು ಹಿಂದಕ್ಕೆ ಒಲೆದು ವಿಜಯ ಸಾಧಿಸಿದೆನೆಂಬ ಭಾವನೆಯಿಂದ ಸಭೆಯ ಮೇಲೆಲ್ಲಾ ದೃಷ್ಟಿ ಹರಿಸಿದನು.

ಖೋಜಾ ನಸ್ರೆದ್ದೀನ್ ಸ್ವಲ್ಪವೇ ಸ್ವಲ್ಪ ಬೆಚ್ಚಿದನು. ಈ ಸೂಕ್ಷ್ಮ ಚಲನೆ ಅಮೀರನ ಕಣ್ಣಿಗೆ ಬಿತ್ತು. " ಆಹಾ ! ಇದೇ ಇವನ ಗುಟ್ಟು ! " ಎಂದು ಭಾವಿಸಿದನು.

ಹೀಗಿರುವಲ್ಲಿ ಖೋಜಾ ನಸ್ರೆದ್ದೀನ್ ಹೀಗೆ ಯೋಚಿಸುತ್ತಿದ್ದನು :

" ಅವರು ಪಾಪಶಕ್ತಿಗಳ ವಿಷಯವಾಗಿ ಯೋಚಿಸತೊಡಗಿದ್ದು ಒಳ್ಳೆಯ

ಲಕ್ಷಣವೇ ಸರಿ. ಇನ್ನೂ ಆಸೆ ಮುಗಿದಿಲ್ಲವೆಂದು ಇದರಿಂದ ಅರ್ಥವಾಗುತ್ತದೆ."

ಜ್ಞಾನಿ ತನ್ನ ಮಾತನ್ನು ಮುಂದುವರಿಸಿದನು :

"ನಾನು ಕೇಳಿರುವುದರಲ್ಲಿ ಮತ್ತು ಓದಿರುವುದರಲ್ಲಿ, ಈ ಬುಖಾರ ಪಟ್ಟಣದಲ್ಲಿ 'ಷೇಕ್ ತುರಖಾನನ ಕೊಳ' ಎಂಬ ಹೆಸರಿನ ಒಂದು ಪವಿತ್ರ ಕೊಳ ಇರುವುದೆಂದು ತಿಳಿದಿದ್ದೇನೆ. ಪಾಪಶಕ್ತಿಗಳು ಈ ಕೊಳದ ಬಳಿ ಸುಳಿಯಲಾರವೆಂಬುದು ಸಹಜವೇ ಆಗಿದೆ. ಇದರಿಂದ ಸಿದ್ಧವಾಗುವುದೇನೆಂದರೆ, ಓ, ಪ್ರಭೂ, ಈ ಅಪರಾಧಿಯನ್ನು ಈ ಪವಿತ್ರ ತೀರ್ಥದಲ್ಲಿ ಬಹಳ ಹೊತ್ತು ಮುಳುಗಿಸಿರಬೇಕು ; ಹಾಗೆ ಮುಳುಗಿಸಿದರೆ ಆ ಮೇಲೆ ಅವನು ಸಾಯುತ್ತಾನೆ."

"ಇದು ವಿವೇಕವಾದ ಸಲಹೆ ; ಬಹುಮಾನಕ್ಕೆ ಅರ್ಹವಾದ್ದು !" ಎಂದನು ಅಮೀರ.

ಖೋಜಾ ನಸ್ರೆದ್ದೀನ್ ಜ್ಞಾನಿಯನ್ನು ಕುರಿತು ನಿಂದೆ ತುಂಬಿ ಹೀಗೆಂದನು :

"ಓ, ಮೌಲಾನಾ ಹುಸೇನ್, ನೀನು ನನ್ನ ಕೈಯೊಳಗಿದ್ದಾಗ ನಾನು ನಿನ್ನನ್ನು ಹೀಗೆಯೇ ನಡಸಿಕೊಂಡೆನೆ ? ಇದನ್ನು ಕಂಡ ಮೇಲೆ ಮನುಷ್ಯರ ಕೃತಜ್ಞತೆಯನ್ನು ನಂಬುವುದು ಹೇಗೆ ?" ಎಂದನು.

ಖೋಜಾ ನಸ್ರೆದ್ದೀನನನ್ನು ಷೇಕ್ ತುರಖಾನನ ಪವಿತ್ರ ಕೊಳದಲ್ಲಿ ಸೂರ್ಯಾಸ್ತವಾದ ಮೇಲೆ ಬಹಿರಂಗವಾಗಿ ಮುಳುಗಿಸಿ ಸಾಯಿಸತಕ್ಕದ್ದೆಂದು ತೀರ್ಮಾನವಾಯಿತು. ದಾರಿಯಲ್ಲಿ ಅವನು ತಪ್ಪಿಸಿಕೊಂಡು ಹೋಗಲು ಅವಕಾಶವಿರಬಾರದೆಂಬ ಉದ್ದೇಶದಿಂದ ಅವನನ್ನು ತೊಗಲಿನ ಚೀಲದಲ್ಲಿ ಕಟ್ಟಿ ತೆಗೆದುಕೊಂಡು ಹೋಗಬೇಕೆಂದೂ, ಆ ಚೀಲದಲ್ಲಿಯೇ ಅವನನ್ನು ಮುಳುಗಿಸಬೇಕೆಂದೂ ನಿರ್ಧರಿಸಿದರು.

........ದಿನವೆಲ್ಲ ಕೊಳದ ಬಳಿ ಕೊಡಲಿಯ ಸದ್ದು ಮೊರೆಯುತ್ತಿತ್ತು. ಬಡಗಿಗಳು ಅಲ್ಲಿ ಒಂದು ಅಟ್ಟಣೆಯನ್ನು ಕಟ್ಟುತ್ತಿದ್ದರು. ಅಮೀರನು ಅಲ್ಲಿ ಅಟ್ಟಣೆಯನ್ನು ಏಕೆ ಕಟ್ಟಿಸುತ್ತಿದ್ದನೆಂದು ಅವರಿಗೆ ಗೊತ್ತಿತ್ತು. ಆದರೆ ಒಬ್ಬೊಬ್ಬ ಕೆಲಸಗಾರನ ಹತ್ತಿರವೂ ಒಬ್ಬೊಬ್ಬ ಸಿಪಾಯಿ ನಿಂತಿರುವಾಗ ಅವರು ಮಾಡುವುದಾದರೂ ಏನು ? ಮಾತಾಡದೆ ತೆಪ್ಪಗೆ ಕೆಲಸ ಮಾಡುತ್ತಿದ್ದರು. ಅವರ ಮುಖಗಳು ಜೋಲುಬಿದ್ದಿದ್ದವು ; ಕೋಪದಿಂದ ದುಮುದುಮು

ಗುಟ್ಟುತ್ತಿದ್ದವು. ಕೆಲಸ ಮುಗಿದ ಮೇಲೆ, ತಮ್ಮ ಕೈಗೆ ಕೊಟ್ಟ ಅತ್ಯಲ್ಪ ಕೂಲಿಯನ್ನೂ ತೆಗೆದುಕೊಳ್ಳದೆ ತಿರಸ್ಕರಿಸಿ ಬಿಟ್ಟು ದುಃಖದಿಂದ ತಲೆ ಬಗ್ಗಿಸಿ ಕೊಂಡು ಹೊರಟು ಹೋದರು.

ಅಟ್ಟಣೆಯ ಮೇಲೆ ಮತ್ತು ಅದನ್ನು ನಿರ್ಮಿಸಿದ್ದ ಕೊಳದ ದಡದ ಮೇಲೆ ರತ್ನಗಂಬಳಿಗಳನ್ನು ಹಾಸಿದರು. ಎದುರು ದಡವನ್ನು ಜನಜಂಗುಳಿಗಳಾಗಿ ಹಾಗೆಯೇ ಬಿಟ್ಟರು.

ಊರಿನಲ್ಲೆಲ್ಲ ಗೊಂದಲವೆದ್ದಿತ್ತೆಂದು ಗೂಢಚಾರರು ವರದಿ ಮಾಡಿದರು. ಮುನ್ನೆಚ್ಚರಿಕೆಗಾಗಿ ಅರ್ಸ್‌ಲಾನ್-ಬೆಕ್ ಕೊಳದ ಸುತ್ತಲೂ ಸಿಪಾಯಿಗಳನ್ನು ಕಾವಲಿಟ್ಟು ಫಿರಂಗಿಗಳನ್ನು ಸಜ್ಜುಗೊಳಿಸಿದನು. ಜನಗಳು ದಾರಿಯಲ್ಲಿ ಮೇಲೆ ಬಿದ್ದು ಖೋಜಾ ನಸ್ರೆದ್ದೀನನನ್ನು ಬಿಡಿಸಿಕೊಳ್ಳಬಹುದೆಂದು ಹೆದರಿ, ಅರ್ಸ್‌ಲಾನ್-ಬೆಕ್ ನಾಲ್ಕು ಚೀಲಗಳಿಗೆ ಚಿಂದಿ ತುಂಬಿಸಿಟ್ಟನು. ಈ ಖೋಟಾ ಚೀಲಗಳನ್ನು ಜನರು ಸಾಮಾನ್ಯವಾಗಿ ಓಡಾಡುವ ಬೀದಿಗಳಮೂಲಕ ಬಹಿರಂಗವಾಗಿ ಕೊಳಕ್ಕೆ ಕಳಿಸಬೇಕೆಂದೂ ಖೋಜಾ ನಸ್ರೆದ್ದೀನ್ ಇದ್ದ ಚೀಲವನ್ನು ಜನರಿಲ್ಲದ ಸಂದಿಗೊಂದಿಗಳ ಮೂಲಕ ಸಾಗಿಸಬೇಕೆಂದೂ ಏರ್ಪಾಡು ಮಾಡಿದನು. ಈ ತಂತ್ರದ ಯೋಜನೆಗೆ ಇನ್ನೂ ಹೆಚ್ಚು ಬಲ ಕೊಡುವುದಕ್ಕಾಗಿ ಖೋಟಾ ಚೀಲವೊಂದೊಂದರ ಜೊತೆಯಲ್ಲಿಯೂ ಎಂಟೆಂಟು ಮಂದಿ ಕಾವು ಸಿಪಾಯಿಗಳೂ ನಿಜವಾದ ಚೀಲದ ಜೊತೆ ಮೂರು ಮಂದಿ ಮಾತ್ರವೂ ಹೋಗಬೇಕೆಂದು ಗೊತ್ತುಮಾಡಿದನು.

ಅರ್ಸ್‌ಲಾನ್-ಬೆಕ್ ಸಿಪಾಯಿಗಳನ್ನೆಲ್ಲಾ ಸೇರಿಸಿ ಅವರಿಗೆ ಹೀಗೆ ಹೇಳಿದನು :

" ನಾನು ಕೊಳದ ಬಳಿಯಿಂದ ಒಂದು ಸಂದೇಶ ಕಳಿಸುತ್ತೇನೆ. ಖೋಟಾ ಚೀಲಗಳನ್ನು ಆ ಕೂಡಲೇ ಎಲ್ಲವನ್ನೂ ಒಂದಾದರ ಮೇಲೊಂದರಂತೆ ತಂದು ಬಿಡಬೇಕು. ಅಪರಾಧಿಯನ್ನೊಳಗೊಂಡ ಐದನೇ ಚೀಲವನ್ನು ಸ್ವಲ್ಪ ತಡೆದು ಹೊರಕ್ಕೆ ತರಬೇಕು; ಅರಮನೆಯ ಹೆಬ್ಬಾಗಿಲಲ್ಲಿ ನೆರೆದ ಜನಸಮೂಹ ಖೋಟಾ ಚೀಲಗಳನ್ನು ಹಿಂಬಾಲಿಸಿ ಹೋಗುತ್ತಿರುವಾಗ ಅವರ ಗಮನವನ್ನು ಸೆಳೆಯದ ಹಾಗೆ ನಿಜವಾದ ಚೀಲವನ್ನು ಎಚ್ಚರಿಕೆಯಿಂದ ತರಬೇಕು, ತಿಳಿಯಿತೊ? ತಪ್ಪಿದರೆ ನಿಮ್ಮ ಪ್ರಾಣಗಳನ್ನೇ ತೆರಬೇಕಾಗುತ್ತದೆ, ಎಚ್ಚರ! " ಎಂದನು.

ಸಂಜೆಯಾಗುತ್ತಲೂ ಮಾರ್ಕಟ್ಟೆಯಲ್ಲಿ ನಗಾರಿಯ ಸದ್ದು ಅವತ್ತಿನ ವ್ಯಾಪಾರ ವ್ಯವಹಾರ ಮುಗಿಯಿತೆಂದು ಸೂಚಿಸಿತು. ಎಲ್ಲ ಕಡೆಗಳಿಂದಲೂ ಜನಸಮೂಹ ಕೊಳದ ಕಡೆಗೆ ಪ್ರವಾಹವಾಗಿ ಹರಿಯಿತು. ಬಹು ಬೇಗನೇ ಅಮೀರನು ಪರಿವಾರ ಸಮೇತನಾಗಿ ಅಲ್ಲಿಗೆ ಆಗಮಿಸಿದನು. ಅಟ್ಟಣೆಯ ಮೇಲೂ ಅದರ ಸುತ್ತಲೂ ಪಂಜುಗಳನ್ನು ಹಚ್ಚಿದರು. ಅವುಗಳಿಂದೆದ್ದ ಉರಿಗಳು ಗಾಳಿಯಲ್ಲಿ ಬುಸುಗುಟ್ಟುತ್ತಲೂ ಚಟಗುಟ್ಟುತ್ತಲೂ ಕಿರುದೆರೆಗಳಿಂದ ಕೂಡಿದ ಕೊಳದ ನೀರಿನ ಮೇಲೆ ಕೆಂಪು ಪಟ್ಟಿಗಳನ್ನು ಬೀಳಿಸುತ್ತ ಇದ್ದವು ಎದುರು ದಡ ಕತ್ತಲೆಯಲ್ಲಿ ಮುಳುಗಿತ್ತು. ಬೆಳಕು ಹಚ್ಚಿದ್ದ ಅಟ್ಟಣೆಯಿಂದ ನೋಡಿದರೆ ಎದುರು ದಡದ ಜನಸಮೂಹ ಕಾಣುತ್ತಿರಲಿಲ್ಲ. ಆದರೆ ಅದರ ನೂಕುನುಗ್ಗಲು ಮತ್ತು ಗುಜುಗುಜು ಮತ್ತು ಏನೋ ಒಂದು ಬಗೆಯ ಅಹಿತವಾದ ಸದ್ದು ಕೇಳಬರುತ್ತಿತ್ತು.

ಖೋಜಾ ನಸ್ರೆದ್ದೀನನ ಮರಣದಂಡನೆಯನ್ನು ಕುರಿತ ಅಮೀರನ ಆಜ್ಞಾಪತ್ರವನ್ನು ಬಖ್ತಿಯಾರ್ ಗಟ್ಟಿ ದನಿಯಲ್ಲಿ ಓದಿದನು. ಆ ಕ್ಷಣದಲ್ಲಿ ಗಾಳಿ ಸ್ತಬ್ಧವಾಯಿತು; ಆ ಮುಂದಿನ ಮೌನ ಬಹು ಗಾಢವಾಯಿತು. ಆ ಪೂರ್ಣ ಮೌನದಲ್ಲಿ ಪರಮಪ್ರಶಾಂತ ಅಮೀರರ ಬೆನ್ನುಹುರಿ ಜುಮ್ಮೆಂದು ಅದುರಿತು. ಗಾಳಿ ಸುಯ್ಯೆಂದಿತು; ಅದರ ಸಂಗಡವೇ ಜನಸಮೂಹವು ತನ್ನ ಸಾವಿರಾರು ಎದೆಗಳಿಂದ ಸುಯ್ಯೆಂದು ನಿಟ್ಟುಸಿರು ಬಿಟ್ಟಿತು.

"ಆರ್ಸ್‌ಲಾನ್-ಬೆಕ್, ಅದೇಕಿಷ್ಟು ತಡ?" ಎಂದು ಅಮೀರ ನಡುಗು ದನಿಯಲ್ಲಿ ಪ್ರಶ್ನೆ ಮಾಡಿದನು.

"ನಾನಾಗಲೆ ಹರಿಕಾರರನ್ನು ಕಳಿಸಿದ್ದೇನೆ, ಮಹಾಪ್ರಭೂ."

ಇದ್ದಕ್ಕಿದ್ದಂತೆಯೇ ಕತ್ತಲೆಯೊಳಗಿನಿಂದ ಬಗೆಬಗೆಯ ಕೂಗುಗಳೂ ಆಯುಧಗಳ ಖಣಿಖಣಿಲೂ ಕೇಳಬಂತು. ಎಲ್ಲೋ ಒಂದು ಕಡೆ ಹೊಡೆದಾಟ ಪ್ರಾರಂಭವಾಗಿತ್ತು. ಅಮೀರನು ಭಯದಿಂದ ಬೆಚ್ಚಿದನು. ಒಂದು ಕ್ಷಣ ಕಳೆದ ಮೇಲೆ ಎಂಟು ಮಂದಿ ಕಾಪುಸಿಪಾಯಿಗಳು ಬರಿಗೈಯಲ್ಲಿ ಬಂದು ಅಟ್ಟಣೆಯ ಮುಂದಿನ ಬೆಳಕಿನಲ್ಲಿ ನಿಂತರು.

"ಅಪರಾಧಿಯೆಲ್ಲಿ?" ಎಂದು ಅಮೀರನು ಅಬ್ಬರಿಸಿದನು. "ಅವರು ಸಿಪಾಯಿಗಳ ಕೈಯಿಂದ ಅವನನ್ನು ಬಿಡಿಸಿಕೊಂಡು ಹೋಗಿದ್ದಾರೆ! ಅವನು

ತಪ್ಪಿಸಿಕೊಂಡುಬಿಟ್ಟ! ಹೀಗಾಗುವುದಕ್ಕೆ ಅವಕಾಶ ಕೊಟ್ಟು ಬಿಟ್ಟೆಯಲ್ಲಾ, ಆರ್ಸ್‌ಲಾನ್-ಬೆಕ್!" ಎಂದು ಅಮೀರ ಕೂಗಾಡಿದನು.

"ಓ, ಮಹಾಸ್ವಾಮಿ! ತಮ್ಮ ಈ ಅನರ್ಹ ಸೇವಕನು ಹೀಗಾಗುವುದೆಂದು ಮೊದಲೇ ಊಹಿಸಿದ್ದನು. ಆ ಚೀಲದಲ್ಲಿ ಹಳೆಯ ಹರುಕಲು ಬಟ್ಟೆಯನ್ನು ತುಂಬಿತ್ತು" ಎಂದು ಆರ್ಸ್‌ಲಾನ್-ಬೆಕ್ ಸಮಾಧಾನ ಹೇಳಿದನು.

ಎದುರು ದಡದಿಂದ ಇನ್ನೂ ಅಷ್ಟು ಹೊಡೆದಾಟದ ಸದ್ದು ಕೇಳಿಸಿತು. ಆರ್ಸ್‌ಲಾನ್-ಬೆಕ್ ಅಮೀರನಿಗೆ ಮತ್ತೆ ಸಮಾಧಾನ ಹೇಳಲು ಅವನ ಬಳಿ ಹೋದನು.

"ಮಹಾಸ್ವಾಮೀ, ಆ ಚೀಲವನ್ನು ಅವರು ತೆಗೆದುಕೊಳ್ಳಲಿ. ಇದರಲ್ಲೂ ಹಳೆ ಬಟ್ಟೆ ತುಂಬಿದೆ" ಎಂದನು.

ಮೊದಲನೆಯ ಚೀಲವನ್ನು ಟೀ ಅಂಗಡಿಯ ಯಜಮಾನ ಆಲಿಯೂ ಅವನ ಸ್ನೇಹಿತರೂ ಸಿಪಾಯಿಗಳಿಂದ ಕಿತ್ತುಕೊಂಡರು. ಎರಡನೆಯದನ್ನು ಯೂಸುಫನ ಮುಂದಾಳ್ತನದಲ್ಲಿ ಕಮ್ಮಾರರೆಲ್ಲ ಸೇರಿ ಬಿಡಿಸಿಕೊಂಡರು. ಆ ಮೇಲೆ ಕುಂಬಾರರು ಮೂರನೆಯದನ್ನು ಕಿತ್ತುಕೊಂಡರು. ನಾಲ್ಕನೆಯದನ್ನು ಯಾರೂ ಏನೂ ತಂಟೆ ಮಾಡದೆ ಸುಮ್ಮನೆ ಬಿಟ್ಟುಬಿಟ್ಟರು. ಸಿಪಾಯಿಗಳು ಪಂಜಿನ ಬೆಳಕಿನಲ್ಲಿ ಆ ಚೀಲವನ್ನೆತ್ತಿ ನೀರ ಮೇಲೆ ಸುರಿದರು. ಚಿಂದಿ ಬಟ್ಟೆಗಳು ಕೆಳಕ್ಕೆ ಉದುರಿದವು.

ಜನಸಮೂಹ ಬೆರಗಾಗಿ ಕಂಕುಮಂಕು ಹಿಡಿದು ದಿಕ್ಕು ತೋಚದೆ ನಿಶ್ಚಲವಾಗಿ ನಿಂತುಬಿಟ್ಟಿತು. ಹೀಗಾಗಬೇಕೆಂದೇ ಆರ್ಸ್‌ಲಾನ್-ಬೆಕ್ ತಂತ್ರ ಹೂಡಿದ್ದದ್ದು. ಹಿಂದೆ ಮುಂದೆ ತೋರದೆ ಮಂಕು ಕವಿದ ಸ್ಥಿತಿಯಲ್ಲಿ ಯಾವ ಕೆಲಸವನ್ನೂ ಮಾಡದೆ ಜನ ನಿಷ್ಕ್ರಿಯರಾಗುವರೆಂದು ಆರ್ಸ್‌ಲಾನ್-ಬೆಕ್‌ಗೆ ಚೆನ್ನಾಗಿ ಗೊತ್ತಿತ್ತು.

ಐದನೆಯ ಚೀಲದ ವ್ಯವಸ್ಥೆಗೆ ಸರಿಯಾದ ಕಾಲ ಒದಗಿತ್ತು. ಆದರೆ, ಅದನ್ನು ತರುತ್ತಿದ್ದ ಸಿಪಾಯಿಗಳು ದಾರಿಯಲ್ಲಿ ನಿದಾನಮಾಡಬೇಕಾಗಿ ಬಂತು. ಅದರಿಂದ ಅವರಿನ್ನೂ ಕೊಳದ ಬಳಿ ಬಂದಿರಲಿಲ್ಲ.

೯

ಸಿಪಾಯಿಗಳು ನೆಲಮಾಳಿಗೆಯ ಕತ್ತಲೆಗವಿಯಿಂದ ಅವನನ್ನು ಹೊರಕ್ಕೆ ಕರೆತಂದಾಗ ಖೋಜಾ ನಸ್ರೆದ್ದೀನನು ಅವರನ್ನು ಕುರಿತು,

"ಸರಿ, ನನ್ನನ್ನು ನಿಮ್ಮ ಬೆನ್ನ ಮೇಲೆ ಹೊತ್ತುಕೊಂಡು ಹೋಗುತ್ತೀರೊ? ಪಾಪ, ನನ್ನ ಕತ್ತೆ ಇಲ್ಲಿಲ್ಲವಲ್ಲ! ಇದ್ದಿದ್ದರೆ ಅದು ನಕ್ಕು ನಕ್ಕು ಸತ್ತುಹೋಗಿಬಿಡುತ್ತಿತ್ತು" ಎಂದನು.

"ಮುಚ್ಚು ಬಾಯಿ! ನಾಲಿಗೆ ಹರಿಯಬಿಡಬೇಡ, ಜೋಕೆ! ಇನ್ನೇನು ಸ್ವಲ್ಪ ಹೊತ್ತಿನೊಳಗಾಗಿ ನೀನೇ ಅಳುತ್ತಿರುತ್ತೀಯ!" ಎಂದು ಆ ಸಿಪಾಯಿಗಳು ಚುಚ್ಚಿ ನುಡಿದು ಗದರಿಸಿದರು. ತಾನಾಗಿಯೇ ಅಮೀರನಿಗೆ ವಶವಾಗಿ ಆ ಮೂಲಕ ಅವರಿಗೆ ಸಿಕ್ಕಬಹುದಾಗಿದ್ದ ಬಹುಮಾನ ಸಿಕ್ಕದಂತೆ ಮಾಡಿದನೆಂದು ಅವನ ಮೇಲೆ ಅವರಿಗೆ ಬಹಳ ಅಸಮಾಧಾನವಿತ್ತು.

ಅಗಲ ಕಿರಿದಾದ ಚೀಲವನ್ನು ಎಳೆದು ಹಿಡಿದುಕೊಂಡು ಅದರೊಳಕ್ಕೆ ಖೋಜಾ ನಸ್ರೆದ್ದೀನನನ್ನು ನೂಕತೊಡಗಿದರು.

"ಅಯ್ಯೋ, ಪಿಶಾಚಿಯ ಮಕ್ಕಳಾ! ಇನ್ನೂ ಸ್ವಲ್ಪ ದೊಡ್ಡ ಚೀಲ ನಿಮಗೆ ಸಿಕ್ಕುತ್ತಿರಲಿಲ್ಲವೇ?" ಎಂದು ಕೂಗುತ್ತಿದ್ದನು ಖೋಜಾ ನಸ್ರೆದ್ದೀನ್. ಆ ಚೀಲದೊಳಗೆ ಮೂರು ಸಲ ಮೈ ಮುದುರುವಂತೆ ಗಿಡಿದು ತುಂಬಿದ್ದರು ಅವನನ್ನು.

"ತೆಪ್ಪಗಿರು!" ಎಂದು ಹಲ್ಲುಕಚ್ಚಿಕೊಂಡು ನುಡಿದರು ಸಿಪಾಯಿಗಳು; ಅವರ ಮೈಮೇಲೆ ಬೆವರಿಳಿಯುತ್ತಿತ್ತು. "ತೆಪ್ಪಗಿರು. ಬಹಳ ಹೊತ್ತು ಹಿಡಿಯುವುದಿಲ್ಲ. ಮೈಯನ್ನು ಅಷ್ಟೊಂದು ಹಿಗ್ಗಿಸಬೇಡ. ಅಯ್ಯೋ ಪಾಪದ ಮಗನೇ! ಹಾಗೆ ಮೈ ಹಿಗ್ಗಿಸಬೇಡ. ಇಲ್ಲವಾದರೆ, ನಿನ್ನ ಮೊಳಕಾಲುಗಳನ್ನು ಹೊಟ್ಟೆಯೊಳಗೆ ಹೂತುಬಿಡುತ್ತೇವೆ" ಎಂದು ಬೆದರಿಸಿದರು.

ಒಂದು ಸಣ್ಣ ಬಡಿದಾಟ ಪ್ರಾರಂಭವಾಯಿತು. ಅಲ್ಲಿಗೆ ಅರಮನೆಯ ಸೇವಕರು ಓಡಿ ಬರಬೇಕಾಯಿತು. ಕಡೆಗೆ ಬಹಳ ಕಷ್ಟಪಟ್ಟ ಮೇಲೆ ಸಿಪಾಯಿಗಳು ಹಾಗೂ ಹೀಗೂ ಖೋಜಾ ನಸ್ರೆದ್ದೀನನನ್ನು ಆ ಚೀಲದೊಳಕ್ಕೆ ತುಂಬಿ ಒಂದು ಹಗ್ಗದಿಂದ ಬಿಗಿದು ಕಟ್ಟಿದರು. ಚೀಲದೊಳಗೆ, ಬಹು ಇಕ್ಕಟ್ಟಾಗಿ, ಕತ್ತಲೆಯಾಗಿ, ವಾಸನೆ ತುಂಬಿಕೊಂಡಿತ್ತು. ಖೋಜಾ ನಸ್ರೆದ್ದೀನನ ಆತ್ಮ

ವನ್ನು ಒಂದು ಕಪ್ಪು ಮಂಜು ಆವರಿಸಿಕೊಂಡುಬಿಟ್ಟಿತು. ಬಿಡುಗಡೆಗೆ ಆಸೆಯೇ ಇಲ್ಲವೆನ್ನಿಸಿತು. ಅವನು ಅದೃಷ್ಟಕ್ಕೂ ಸರ್ವಶಕ್ತವಾದ ಸುಸಂದರ್ಭಕ್ಕೂ ಮೊರೆಯಿಟ್ಟನು :

"ಓ, ಅದೃಷ್ಟವೇ, ನೀನು ನನಗೆ ತಾಯಿಯಂತಾಗಿ ಬಿಟ್ಟಿದ್ದೀಯೆ. ಓ, ಸರ್ವಶಕ್ತವಾದ ಸುಸಂದರ್ಭವೇ, ಇಲ್ಲಿಯ ವರೆಗೂ ನನ್ನನ್ನು ತಂದೆ ಮಗ ನನ್ನು ಹೇಗೋ ಹಾಗೆ ಕಾಪಾಡಿಕೊಂಡು ಬಂದಿದ್ದೀಯೆ. ಈಗ ಎಲ್ಲಿ ಹೋಗಿ ದ್ದೀಯ? ಖೋಜಾ ನಸ್ರೆದ್ದೀನನ ಸಹಾಯಕ್ಕೆ ನೀನೇಕೆ ಓಡಿ ಬರುವುದಿಲ್ಲ? ಅವರು ನನ್ನನ್ನು ಈ ಹಾಳು ವಾಸನೆಯ ಚೀಲದಲ್ಲಿ ಕಟ್ಟಿಹಾಕಿಬಿಟ್ಟಿದ್ದಾರೆ. ಲೋಳೆ ನೀರಿನ ಕೊಳದಲ್ಲಿ ಮುಳುಗಿಸಿ ಸಾಯಿಸಲು ತೆಗೆದುಕೊಂಡು ಹೋಗು ತ್ತಾರೆ! ಪ್ರಪಂಚವೆಲ್ಲಾ ಕಂಡಿರುವ ನನ್ನನ್ನು! ಯಾರಿಗೆ ಸಮುದ್ರವೇ ಸರಿಯಾದ ಗೋರಿಯೋ ಆ ನನ್ನನ್ನು! ನ್ಯಾಯವೆಲ್ಲಿದೆ? ಸತ್ಯ ಎಲ್ಲಿದೆ? ಇಲ್ಲ, ಇದು ನಿಜವಾಗಿರಲಾರದು! ನಾನು ನಂಬುವುದಿಲ್ಲ! ಏನೋ ಒಂದು ಆಗಲೇ ಬೇಕು! ಒಂದು ಬೆಂಕಿ ಅನಾಹುತ, ಭೂಕಂಪ, ದಂಗೆ, ಏನೋ ಒಂದು ಆಗಲೇ ಬೇಕು! ಓ ಅದೃಷ್ಟವೇ! ಓ, ಸಂಭವನೀಯ ಸುಸಂದರ್ಭವೇ! ನನ್ನ ರಕ್ಷಣೆಗೆ ಬಾ!"

ಕಾವುಸಿಪಾಯಿಗಳು ಕೊಳದ ದಾರಿಯಲ್ಲಿ ಅರ್ಧ ಭಾಗವನ್ನು ನಡೆದು ಮುಗಿಸಿದ್ದರು. ಆದರೂ ಏನೂ ಆಗಿರಲಿಲ್ಲ. ಚೀಲ ಹೊರುವುದರಲ್ಲಿ ಅವರು ಒಂದು ಕ್ರಮ ಅನುಸರಿಸುತ್ತಿದ್ದರು; ಪ್ರತಿ ಇನ್ನೂರು ಹೆಜ್ಜೆಗೆ ಒಂದೊಂದು ಸಲದಂತೆ ಒಬ್ಬರಿಂದೊಬ್ಬರು ಹೊರೆ ಬದಲಾಯಿಸಿಕೊಂಡು ಸರದಿಯ ಪ್ರಕಾರ ಹೊರುತ್ತಿದ್ದರು. ಖೋಜಾ ನಸ್ರೆದ್ದೀನ್ ಈ ಸಣ್ಣ ಸಣ್ಣ ನಿಲುಗಡೆಗಳನ್ನು ಎಣಿಸಿಕೊಳ್ಳುತ್ತಿದ್ದನು. ಇದರಿಂದ ಎಷ್ಟು ದೂರ ನಡೆದಾಯಿತು, ಇನ್ನು ಎಷ್ಟು ದೂರ ಉಳಿದಿದೆ ಎಂದು ಅವನಿಗೆ ತಿಳಿಯುತ್ತಿತ್ತು.

ಅದೃಷ್ಟವಾಗಲಿ ಸುಸಂದರ್ಭವಾಗಲಿ ಕಾರ್ಯಮಾಡದೆ ಸುಮ್ಮನೆ ನರಳಿ ಗೋಳಾಡುವವರಿಗೆ ನೆರವಾಗಿ ಬರುವುದೇ ಇಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಯಾವನು ನಿಲ್ಲದೆ ಮುಂದೆ ಮುಂದೆ ಹೋಗುತ್ತಲೇ ಇರುತ್ತಾನೋ ಅವನೇ ಗುರಿ ಮುಟ್ಟುವವನು. ಕಾಲು ಸೋತು ಅಡಿಯಿಡಲಾರದೆ ಹೋದರೆ, ಆಗ ಮೊಳಕಾಲುಗಳನ್ನೂ ಕೈಗಳನ್ನೂ ಊರಿಕೊಂಡು ಅಂಬೆಗಾಲಿಟ್ಟು

ಮುಂದುವರಿಯಬೇಕು. ಹಾಗೆ ಮಾಡಿದರೆ ಮುಂದುಗಡೆ ದೂರದಲ್ಲಿ ರಾತ್ರಿಯ ಕತ್ತಲೆಯಲ್ಲಿ ಬೆಳಕು ಚೆಲ್ಲಿ ಹೊಳೆಯುತ್ತಿರುವ ಶಿಬಿರಾಗ್ನಿಯ ಪ್ರಕಾಶ ಅವನಿಗೆ ಕಂಡೇ ಕಾಣುತ್ತದೆ; ಅಲ್ಲಿ ಆ ಕಾರವಾನ್, ಅವನು ಹೋಗಬೇಕಾದ ದಾರಿಯಲ್ಲೇ ಪ್ರಯಾಣ ಮಾಡುತ್ತಿರುತ್ತದೆ; ಆ ಕಾರವಾನಿನಲ್ಲಿ ಹೊರೆಯಿಲ್ಲದ ಬಿಡಿ ಒಂಟೆಯೊಂದು ಸಿಕ್ಕಿ ಅದರ ಮೇಲೆ ಈ ಪ್ರಯಾಣಿಕ ತನ್ನ ಗುರಿಗೆ ಹೋಗಿ ಸೇರಲು ಸಾಧ್ಯವಾಗುತ್ತದೆ. ಅದಕ್ಕೆ ಬದಲಾಗಿ ಯಾವನು ದಾರಿಯ ಪಕ್ಕದಲ್ಲಿ ಕೂತು ನಿರಾಸೆಗೆ ಬಲಿಯಾಗಿ ನವೆಯುತ್ತಾನೋ ಅವನು ಎಷ್ಟು ಅತ್ತು ಗೋಳಾಡಿ ಹಂಬಲಿಸಿದರೂ ಹೃದಯಹೀನವಾದ ಕಲ್ಲುಗಳಿಗೆ ಅವನಲ್ಲಿ ಮರುಕ ವುಕ್ಕುವುದಿಲ್ಲ. ಅವನು ಮರುಭೂಮಿಯಲ್ಲಿ ಬಾಯಾರಿ ಸಾಯುತ್ತಾನೆ; ಅವನ ಹೆಣ ಕಟುವಾಸನೆಯ ಕಿರುಬಗಳಿಗೆ ಆಹಾರವಾಗುತ್ತದೆ; ಅವನ ಮೂಳೆಗಳು ಮರಳಿನಲ್ಲಿ ಹೂತು ಹೋಗುತ್ತವೆ. ಎಷ್ಟು ಮಂದಿ ತಮ್ಮ ಕಾಲ ಬರುವುದಕ್ಕೆ ಮುಂಚೆಯೇ ಸತ್ತುಹೋಗಿದ್ದಾರೆ! ಜೀವಿಸಬೇಕೆಂಬ ಬಾಳಿನಾಸೆ ಅವರ ಹೃದಯದಲ್ಲಿ ತಕ್ಕಷ್ಟು ಗಟ್ಟಿಯಾಗಿಲ್ಲದಿದ್ದ ಒಂದೇ ಒಂದು ಕಾರಣದಿಂದ ಎಷ್ಟು ಮಂದಿ ಅಕಾಲಿಕ ಮರಣಕ್ಕೆ ತುತ್ತಾಗಿಬಿಟ್ಟಿದ್ದಾರೆ! ನಿಜವಾದ ಮನುಷ್ಯ ಎನ್ನಿಸಿಕೊಳ್ಳುವವನಿಗೆ ಅಂಥ ಸಾವು ಬಹಳ ಅವಮಾನಕರ ಎಂದು ಖೋಜಾ ನಸ್ರೆದ್ದೀನ್ ಭಾವಿಸಿದ್ದನು.

"ಕೂಡದು!" ಎಂದುಕೊಂಡನವನು ತನ್ನಷ್ಟಕ್ಕೆ ತಾನೇ. ಹಲ್ಲುಮುಡಿ ಕಚ್ಚಿಕೊಂಡು ಒಂದೇ ಸಮನೆ ಹೀಗಂದುಕೊಳ್ಳುತ್ತಿದ್ದನು: "ಇಲ್ಲ. ನಾನಿವತ್ತು ಸಾಯುವುದಿಲ್ಲ! ಸಾಯುವ ಉದ್ದೇಶವಿಲ್ಲ, ನನಗೆ!"

ಆದರೆ ಅವನೇನು ಮಾಡಬಲ್ಲ? ಮೈಯನ್ನು ಮೂರು ಸಲ ಮುರಿದು ಬಗ್ಗಿಸಿ ಇಕ್ಕಟ್ಟು ಚೀಲದೊಳಕ್ಕೆ ತುಂಬಿ ಅಲುಗಾಡದಂತೆ ಬಿಗಿದು ಕಟ್ಟಿರುವಾಗ ಅವನೇನು ತಾನೆ ಮಾಡಿಯಾನು? ಅವನ ಮೊಳಕೈಗಳನ್ನೂ ಮೊಳಕಾಲುಗಳನ್ನೂ ಮೈಗೆ ಒತ್ತಿ ಬಿಗಿದಿದ್ದರು. ಅವನ ನಾಲಿಗೆಯೊಂದು ಸ್ವತಂತ್ರವಾಗಿತ್ತು.

"ಓ, ಶೂರ ಸಿಪಾಯಿಗಳೇ!" ಎಂದನು ಚೀಲದ ಆಳದೊಳಗಿನಿಂದ. "ಓ, ಶೂರ ಸಿಪಾಯಿಗಳೇ, ಒಂದು ಕ್ಷಣ ನಿಲ್ಲಿ. ನಾನು ಸಾಯುವುದಕ್ಕೆ ಮುಂಚೆ ಒಂದು ಪ್ರಾರ್ಥನೆ ಹೇಳಬೇಕೆಂದಿದ್ದೇನೆ. ಅಲ್ಲಾ ತನ್ನ ಪ್ರಶಾಂತ

ಮಂದಿರದಲ್ಲಿ ನನ್ನ ಆತ್ಮವನ್ನು ಸ್ವೀಕರಿಸುವಂತಾಗಲೆಂದು ಪ್ರಾರ್ಥನೆ ಮಾಡಬೇಕೆಂದಿದ್ದೇನೆ" ಎಂದನು.

ಕಾಪುಸಿಪಾಯಿಗಳು ಚೀಲವನ್ನು ನೆಲದ ಮೇಲಿಟ್ಟರು.

"ಹೂಂ; ಹೇಳು ನಿನ್ನ ಪ್ರಾರ್ಥನೆಯನ್ನು. ಆದರೆ, ನಿನ್ನನ್ನೇನು ನಾವು ಹೊರಕ್ಕೆ ಬಿಡುವುದಿಲ್ಲ. ಚೀಲದೊಳಗಿನಿಂದಲೇ ನೀನು ಪ್ರಾರ್ಥನೆ ಹೇಳಬೇಕು."

"ನಾವು ಎಲ್ಲಿದ್ದೇವೆ?" ಎಂದು ಖೋಜಾ ನಸ್ರೆದ್ದೀನ್ ಕೇಳಿದನು. "ನಾವು ಇರುವ ಸ್ಥಳ ನನಗೆ ಗೊತ್ತಾಗಬೇಕು ಏಕೆಂದರೆ, ನೀವು ತೀರ ಹತ್ತಿರ ಇರುವ ಮಸೀದಿಯ ಕಡೆಗೆ ನನ್ನನ್ನು ತಿರುಗಿಸಿಡಬೇಕಾಗುತ್ತದೆ" ಎಂದನು.

"ನಾವು ಈ 'ಕರ್ಷಿ' ಹೆಬ್ಬಾಗಿಲ ಬಳಿ ಇದ್ದೇವೆ. ಇಲ್ಲಿ ಸುತ್ತಮುತ್ತ ಎಲ್ಲಾ ಕಡೆಗಳಲ್ಲೂ ಮಸೀತಿಗಳಿವೆ. ಬೇಗ ಮಾಡು, ಬೇಗ ನಿನ್ನ ಪ್ರಾರ್ಥನೆಯನ್ನು ಮುಗಿಸಿಬಿಡು. ನಾವು ಬಹಳ ಹೊತ್ತು ನಿಲ್ಲಲಾಗುವುದಿಲ್ಲ."

"ಬಹಳ ಉಪಕಾರವಾಯಿತು; ಧರ್ಮಾತ್ಮರಾದ ಸಿಪಾಯಿಗಳೇ! ನಿಮಗೆ ವಂದನೆ!" ಎಂದು ದೀನ ಸ್ವರದಿಂದ ಉತ್ತರ ಕೊಟ್ಟನು ಖೋಜಾ ನಸ್ರೆದ್ದೀನ್.

ಅವನ ನಿರೀಕ್ಷಣೆಯೇನು? ಅವನಿಗೇ ಗೊತ್ತಿರಲಿಲ್ಲ: "ಒಂದೆರಡು ನಿಮಿಷ ಅವಕಾಶ ಸಿಕ್ಕಲಿ, ಆ ಮೇಲೆ ಏನಾಗುತ್ತೋ ನೋಡೋಣ. ಏನೋ ಒಂದು ಒದಗಿಬರಬಹುದು—" ಎಂದು ಯೋಚಿಸುತ್ತಿದ್ದನು.

ಅವನು ಗಟ್ಟಿಯಾಗಿ ಪ್ರಾರ್ಥಿಸುತ್ತಿದ್ದನು. ಅದೇ ಸಮಯದಲ್ಲಿ ಸಿಪಾಯಿಗಳು ಮಾತಾಡುವುದನ್ನು ಲಕ್ಷ್ಯ ಕೊಟ್ಟು ಕೇಳುತ್ತಿದ್ದನು.

"ಇದೇನಿದು, ನಮಗೆ ಗೊತ್ತಾಗಲೇ ಇಲ್ಲವಲ್ಲ? ಹೊಸ ಜ್ಯೋತಿಷಿ ಖೋಜಾ ನಸ್ರೆದ್ದೀನನೇ ಎಂದು ನಮಗೆ ತಕ್ಷಣ ತಿಳಿಯಲೇ ಇಲ್ಲವಲ್ಲ! ತಿಳಿದಿದ್ದರೆ, ತಿಳಿದು ಅವನನ್ನು ನಾವೇ ಹಿಡಿದುಬಿಟ್ಟಿದ್ದರೆ, ಅಮೀರರಿಂದ ನಮಗೆ ದೊಡ್ಡ ಬಹುಮಾನ ಸಿಕ್ಕುತ್ತಿತ್ತು" ಎಂದು ಸಿಪಾಯಿಗಳು ಪೇಚಾಡುತ್ತಿದ್ದರು.

ಅವರ ಯೋಚನೆ ರೂಢಿಯ ದಾರಿಯಲ್ಲೇ ಹರಿಯುತ್ತಿತ್ತು. ದುರಾಸೆಯೇ ಅವರ ಜೀವನದ ತಳಹದಿ.

ಖೋಜಾ ನಸ್ರೆದ್ದೀನ್ ಈ ಸನ್ನಿವೇಶವನ್ನು ಬಹು ಚಾತುರ್ಯದಿಂದ

ತನ್ನ ಅನುಕೂಲಕ್ಕೆ ಉಪಯೋಗಿಸಿಕೊಂಡನು. "ಒಂದೇ ಒಂದು ಗಳಿಗೆ ವರೆಗಾದರೂ ಅವರು ಈ ಚೀಲವನ್ನು ಬಿಟ್ಟುಹೋಗುವಂತೆ ಮಾಡಬೇಕು.... ಆಗ ಹಗ್ಗ ಕತ್ತರಿಸುವುದಕ್ಕೆ, ಬಿಚ್ಚಿಕೊಳ್ಳುವುದಕ್ಕೆ ಸಾಧ್ಯವಾದರೂ ಆದೀತು! ಅಥವಾ ಯಾರಾದರೂ ಈ ದಾರಿಯಲ್ಲಿ ಬಂದು ನನ್ನನ್ನು ಬಿಡಿಸಿದರೂ ಬಿಡಿಸ ಬಹುದು" ಎಂದು ಯೋಚಿಸಿದನು.

ಒಬ್ಬ ಸಿಪಾಯಿ ಚೀಲವನ್ನೊದೆದು, "ಬೇಗ, ಬೇಗ ಮುಗಿಸು, ನಿನ್ನ ಪ್ರಾರ್ಥನೆಯನ್ನು. ಕೇಳಿಸಿತೋ ಕಿವಿಗೆ? ಇನ್ನು ನಾವು ಕಾಯುವುದಕ್ಕಾ ಗುವುದಿಲ್ಲ" ಎಂದನು.

"ಒಂದೇ ಒಂದು ನಿಮಿಷ, ಶೂರ ಸಿಪಾಯಿಗಳೇ! ನಾನು ಅಲ್ಲಾಗೆ ಇನ್ನು ಒಂದೇ ಒಂದು ವಿಷಯ ಬೇಡಿಕೊಳ್ಳಬೇಕಾಗಿದೆ. ಓ, ಸರ್ವಶಕ್ತ ದಯಾಮಯ ಅಲ್ಲಾ! ನಾನು ಹೂತಿಟ್ಟಿರುವ ಹತ್ತು ಸಾವಿರ ಟಂಗ ಹಣ ಯಾರಿಗೆ ಸಿಕ್ಕುತ್ತದೆಯೋ ಅವನು, ಅದರಲ್ಲಿ ಒಂದು ಸಾವಿರವನ್ನು ಮಸೀತಿಗೆ ತೆಗೆದುಕೊಂಡು ಹೋಗಿ ಮುಲ್ಲನಿಗೆ ಕೊಡುವಂತೆಯೂ, ಕೊಟ್ಟು ಒಂದು ವರ್ಷದ ವರೆಗೂ ನಿರಂತರವಾಗಿ ನನ್ನ ಬಗ್ಗೆ ಪ್ರಾರ್ಥನೆ ಮಾಡುತ್ತಿರುವ ಹಾಗೆ ಅವನಿಗೆ ತಿಳಿಸುವಂತೆಯೂ ಅನುಗ್ರಹಿಸು."

ಹತ್ತು ಸಾವಿರ ಟಂಗದ ಮಾತು ಬಂದ ಕೂಡಲೆ ಸಿಪಾಯಿಗಳು ಸುಮ್ಮ ನಾದರು; ಸದ್ದು ಮಾಡದೆ ತೆಪ್ಪಗೆ ನಿಂತರು. ಖೋಜಾ ನಸ್ರೆದ್ದೀನ್ ಚೀಲ ದೊಳಗಿನಿಂದ ಹೊರಗಿನದನ್ನು ನೋಡಲಾರದವನಾಗಿದ್ದರೂ, ಅವರ ಮುಖ ಭಾವ ಹೇಗಿತ್ತು, ಅವರು ಒಬ್ಬರಿಗೊಬ್ಬರು ಹೇಗೆ ಕಣ್ಣು ಮಿಟುಕಿಸುತ್ತಿದ್ದರು, ಹೇಗೆ ಮೊಳಕೈಗಳಿಂದ ತಿವಿದು ಎಚ್ಚರಿಸುತ್ತಿದ್ದರು—ಎಂಬುದನ್ನೆಲ್ಲಾ ಯಥಾ ವತ್ತಾಗಿ ಹೇಳಬಲ್ಲವನಾಗಿದ್ದನು.

"ಇನ್ನು ನನ್ನನ್ನು ಹೊತ್ತುಕೊಳ್ಳಬಹುದು. ನನ್ನ ಆತ್ಮವನ್ನು ಅಲ್ಲಾನ ಕೈಗೆ ಒಪ್ಪಿಸಿಕೊಳ್ಳುತ್ತೇನೆ" ಎಂದು ನಮ್ರವಾಗಿ ನುಡಿದನು.

ಸಿಪಾಯಿಗಳು ಹಿಂದು ಮುಂದು ನೋಡಿದರು.

"ನಾವು ಇನ್ನೂ ಸ್ವಲ್ಪ ಸುಧಾರಿಸಿಕೊಳ್ಳೋಣ" ಎಂದನು ಒಬ್ಬ ಸಿಪಾಯಿ, ಅರ್ಥಪೂರ್ಣವಾಗಿ. "ಓ, ಖೋಜಾ ನಸ್ರೆದ್ದೀನ್, ನಾವು ಹೃದಯಹೀನರೆಂದೂ ನೀಚ ಮನುಷ್ಯರೆಂದೂ ತಿಳಿದುಕೊಳ್ಳಬೇಡ. ನಿನ್ನನ್ನು

ಹೀಗೆ ಕಠಿನವಾಗಿ ಕಾಣುವುದಕ್ಕೆ ನಮ್ಮ ಕರ್ತವ್ಯದ ನಿರ್ಬಂಧವೇ ಕಾರಣ. ಅಮೀರರ ಸಂಬಳದ ಹಂಗಿಲ್ಲದೆ ನಮ್ಮ ಹೆಂಡರು ಮಕ್ಕಳೊಡನೆ ಜೀವನ ಮಾಡಿಕೊಂಡಿರಲು ನಮಗೆ ಸಾಧ್ಯವಿದ್ದಿದ್ದರೆ, ನಾವು ನಿನ್ನನ್ನು ಚೀಲದಿಂದ ಹೊರಕ್ಕೇ ಬಿಡಬಹುದಾಗಿತ್ತು—"

ಇನ್ನೊಬ್ಬ ಸಿಪಾಯಿಗೆ ಗಾಬರಿಯಾಯಿತು. "ಏನಿದು, ನೀನನ್ನುವ ಮಾತು? ಅವನನ್ನು ಚೀಲದಿಂದ ಹೊರಕ್ಕೆ ಬಿಟ್ಟರೆ, ಅಮೀರರು ನಮ್ಮ ತಲೆ ತೆಗೆಸಿಬಿಡುತ್ತಾರೆ!" ಎಂದು ಪಿಸುಗುಟ್ಟಿದನು.

"ಬಾಯಿ ಮುಚ್ಚು!" ಎಂದನು ಮೊದಲಿನ ಸಿಪಾಯಿ. "ನಮಗೆ ಬೇಕಾಗಿರುವುದೆಂದರೆ, ಹಣ ಗಿಟ್ಟಿಸುವುದು ಮಾತ್ರ. ಬೇರೆ ಏನೂ ಅಲ್ಲ" ಎಂದು ಗುಸುಗುಟ್ಟಿದನು.

ಖೋಜಾ ನಸ್ರೆದ್ದೀನನಿಗೆ ಅವರ ಗುಸುಗುಸು ಸರಿಯಾಗಿ ಅರ್ಥವಾಗಲಿಲ್ಲ. ಆದರೆ ಅದರ ವಿಷಯ ಏನೆಂದು ಅವನಿಗೆ ಅರಿವಾಗಿತ್ತು.

ಆಷಾಢಭೂತಿತನದಲ್ಲಿ ನಿಟ್ಟುಸುರು ಬಿಟ್ಟು ಅವನು ಹೀಗೆಂದನು: "ಓ, ಸಿಪಾಯಿಗಳೇ, ನನಗೆ ನಿಮ್ಮ ಮೇಲೆ ಅಸಮಾಧಾನವೇನೂ ಇಲ್ಲ. ನಾನು ತುಂಬಾ ಪಾಪಿ; ಇತರರನ್ನು ಆಕ್ಷೇಪಿಸಲು ನನಗೇನಧಿಕಾರ? ಪರಲೋಕದಲ್ಲಿ ಅಲ್ಲಾ ನನಗೆ ಕ್ಷಮೆ ನೀಡಿದರೆ, ಅವನ ಸಿಂಹಾಸನದ ಮೆಟ್ಟಿಲ ಬಳಿ ನಿಮ್ಮ ಪರವಾಗಿ ಪ್ರಾರ್ಥನೆ ಸಲ್ಲಿಸುತ್ತೇನೆಂದು ಮಾತು ಕೊಡುತ್ತೇನೆ. ಅಮೀರರ ಹೆದರಿಕೆಯಿಲ್ಲದಿದ್ದರೆ, ನೀವು ನನ್ನನ್ನು ಚೀಲದಿಂದ ಹೊರಕ್ಕೆ ಬಿಡುತ್ತಿದ್ದದ್ದಾಗಿ ಹೇಳಿದಿರಲ್ಲವೆ? ನೀವಾಡುವುದೇನು, ಸ್ವಲ್ಪ ಯೋಚಿಸಿ ನೋಡಿ! ನೀವು ಅಮೀರರ ಅಪ್ಪಣೆಗೆ ವಿರೋಧವಾಗಿ ನಡೆದುಕೊಂಡಂತಾಗುತ್ತದೆ. ಅದೊಂದು ದೊಡ್ಡ ಪಾಪ! ಒಲ್ಲೆ, ಒಲ್ಲೆ! ನನಗೋಸ್ಕರ ನಿಮ್ಮ ಆತ್ಮಗಳಿಗೆ ನೀವು ಪಾಪದ ಭಾರ ಹೊರಿಸುವುದು ನಮಗೆ ಸಮ್ಮತವಿಲ್ಲ. ಅದನ್ನು ನಾನೊಪ್ಪಲಾರೆ! ಚೀಲವನ್ನು ಹೊತ್ತುಕೊಂಡು ನಡೆಯಿರಿ; ಕೊಳಕ್ಕೆ ಹೊರಡಿ. ಅಮೀರರ ಅಪ್ಪಣೆಯೂ ಅಲ್ಲಾನ ಆಜ್ಞೆಯೂ ನೆರವೇರಲಿ!" ಎಂದು ಉಪದೇಶ ಮಾಡಿದನು.

ಸಿಪಾಯಿಗಳು ತಬ್ಬಿಬ್ಬಾಗಿ ಒಬ್ಬರ ಮುಖವನ್ನೊಬ್ಬರು ನೋಡಿದರು. ಇಷ್ಟು ಅಕಾಲಿಕವಾಗಿ, ಇಷ್ಟು ಅಕಸ್ಮಾತ್ತಾಗಿ ಖೋಜಾ ನಸ್ರೆದ್ದೀನ್ ಪಶ್ಚಾ

ತ್ತಾಪ ಪಡುತ್ತಿರುವುದಕ್ಕಾಗಿ ಅಸಮಾಧಾನಗೊಂಡು ಮನಸ್ಸಿನಲ್ಲೇ ಅವನನ್ನು ಶಪಿಸತೊಡಗಿದರು.

ಆಗ ಮೂರನೆಯ ಸಿಪಾಯಿ ಅವರ ಸಂಭಾಷಣೆಯಲ್ಲಿ ಸೇರಿಕೊಂಡನು. ಅದುವರೆಗೂ ಅವನು ಮನಸ್ಸಿನಲ್ಲೇ ಒಂದು ಜಾಣತನದ ಹಂಚಿಕೆಯನ್ನು ಯೋಚಿಸುತ್ತಾ ತೆಪ್ಪಗಿದ್ದನು.

"ಯಾರಾದರೂ ಆಗಿರಲಿ, ಸಾಯುವ ಗಳಿಗೆ ಬಂದಾಗ ಮಾತ್ರ ತನ್ನ ಪಾಪಗಳನ್ನೂ ತಪ್ಪುಗಳನ್ನೂ ನೆನೆದು ಪಶ್ಚಾತ್ತಾಪ ಪಡುವುದನ್ನು ನೋಡಿದರೆ ತುಂಬ ಸಂಕಟವಾಗುತ್ತದೆ" ಎಂದು ಅವನು ಬಾಯಿ ಹಾಕಿದನು. ಹೀಗೆಂದು ತನ್ನ ಸಂಗತಿಗಳ ಕಡೆಗೆ ಕಣ್ಣು ಮಿಟುಕಿಸಿ ಮುಂದುವರಿಸಿದನು. "ಇಲ್ಲ. ನಾನು ಅಂಥವನಲ್ಲ. ಬಹಳ ಹಿಂದೆಯೇ ನನ್ನ ತಪ್ಪುಗಳಿಗಾಗಿ ಪಶ್ಚಾತ್ತಾಪ ಪಟ್ಟುಬಿಟ್ಟೆ. ಅಲ್ಲಿಂದೀಚೆಗೆ ನಾನು ಧರ್ಮಿಷ್ಠನಾಗಿ ಬಾಳು ಸಾಗಿಸುತ್ತಿದ್ದೇನೆ. ಆದರೂ ಅಲ್ಲಾನಿಗೆ ಹಿತವಾಗುವ ಕೆಲಸಗಳನ್ನು ಮಾಡದೆ ಸುಮ್ಮನೆ ಧರ್ಮ ನಿಷ್ಠನಾಗಿರುವುದರಿಂದ ಏನೂ ಪ್ರಯೋಜನವಿಲ್ಲ" ಈ ಮಾತುಗಳನ್ನು ಕೇಳಿ ಉಳಿದಿಬ್ಬರು ಸಿಪಾಯಿಗಳು ನಗು ತಡೆಯಲಾರದೆ ಬಾಯನ್ನು ಭದ್ರವಾಗಿ ಅಮುಕಿಕೊಂಡರು; ಏಕೆಂದರೆ, ಅವನೊಬ್ಬ ಭಾರಿ ಜೂಜುಗಾರ, ಕುಡುಕ, ಲಂಪಟ ಮೂರನೆಯ ಸಿಪಾಯಿ ಮಾತನ್ನು ಮುಂದುವರಿಸಿದನು: "ಆದ್ದರಿಂದ ನನ್ನ ಧರ್ಮನಿಷ್ಠೆಗೆ ಬೆಂಬಲವಾಗಿ ನಾನು ಪುಣ್ಯಕೆಲಸ ಮಾಡುತ್ತಿದ್ದೇನೆ. ನಮ್ಮ ಹಳ್ಳಿಯಲ್ಲಿ, ನನ್ನ ಹುಟ್ಟೂರಿನಲ್ಲಿ, ನಾನೊಂದು ದೊಡ್ಡ ಮಸೀತಿಯನ್ನು ಕಟ್ಟಿಸುತ್ತಿದ್ದೇನೆ. ಅದಕ್ಕೋಸ್ಕರ ನಾನೂ ನನ್ನ ಕುಟುಂಬದವರೂ ಹೊಟ್ಟೆ ತುಂಬ ಊಟ ಕೂಡಾ ಮಾಡುತ್ತಿಲ್ಲ. ಹಣ ಉಳಿಸುತ್ತಿದ್ದೇನೆ" ಎಂದನು.

ಉಳಿದಿಬ್ಬರಲ್ಲಿ ಒಬ್ಬ ಸಿಪಾಯಿಗೆ ಇನ್ನು ತಡೆಯಲಾಗಲಿಲ್ಲ. ನಗು ತಡೆಯಲಾರದೆ ಅವನು ಸ್ವಲ್ಪ ದೂರ ಹೊರಟುಹೋದನು.

ಆ ಮನುಷ್ಯ ಮತ್ತೆ ಹೇಳತೊಡಗಿದನು: "ಕಾಸು ಕಾಸನ್ನೂ ಕೂಡಿಸುತ್ತಿದ್ದೇನೆ. ಆದರೂ ಮಸೀತಿಯ ಕಟ್ಟಡ ಬಹಳ ನಿಧಾನವಾಗುತ್ತಿದೆ. ಇದರಿಂದ ನನಗೆ ತುಂಬ ವ್ಯಥೆಯಾಗಿದೆ. ಈಗ ಸ್ವಲ್ಪ ದಿನದ ಹಿಂದೆ ನನ್ನ ಹಸುವನ್ನು ಮಾರಿದೆ. ನನ್ನಲ್ಲಿ ಉಳಿದಿರುವ ಕೊನೆಯ ಜೊತೆ ಬೂಟು

ಗಳನ್ನೂ ಮಾರಬೇಕಾಗಿ ಬರಬಹುದು—ನಾನು ಕೈಕೊಂಡಿರುವ ಕಾರ್ಯ ನೆರವೇರುವ ಹಾಗಿದ್ದರೆ, ಬರಿಗಾಲಿನಲ್ಲಿ ನಡೆಯುವುದಕ್ಕೂ ಸಿದ್ಧ."

ಖೋಜಾ ನಸ್ರೆದ್ದೀನ್ ಚೀಲದೊಳಗೆ ಬಿಕ್ಕಿ ಅಳುತ್ತಿರುವಂತೆ ತೋರಿಸಿಕೊಂಡನು. ಅರ್ಥವಾಯಿತೆಂಬಂತೆ ಸಿಪಾಯಿಗಳು ಒಬ್ಬರನ್ನೊಬ್ಬರು ನೋಡಿದರು. ಹಂಚಿಕೆ ಸರಿಯಾಗಿ ಸಾಗುತ್ತಿತ್ತು. ತಮ್ಮ ಜಾಣ ಸಂಗಾತಿ ಬೇಗ ಬೇಗ ಹೇಳಿ ಮುಗಿಸುವಂತೆ ಮೊಳಕೈಯಿಂದ ತಿವಿದು ಪ್ರೇರಿಸುತ್ತಿದ್ದರು.

"ಈ ಮಸೀತಿಯನ್ನು ಕಟ್ಟಿ ಮುಗಿಸುವುದಕ್ಕೆ ಸಹಾಯವಾಗುವಂತೆ ಯಾರಾದರೂ ಎಂಟೋ ಹತ್ತೋ ಸಾವಿರ ಟಂಗ ಕೊಟ್ಟಿದ್ದರೆ! ಅಂಥವರಿಗೆ ನಾನು ಪ್ರಮಾಣ ಮಾಡಿ ಹೇಳುತ್ತೇನೆ: ಐದು, ಅಷ್ಟೇ ಏಕೆ, ಹತ್ತು ವರ್ಷಗಳ ವರೆಗೂ ಪ್ರತಿದಿನವೂ ಅವನ ಹೆಸರು ನಮ್ಮ ಮಸೀತಿಯಿಂದ ಪ್ರಾರ್ಥನೆಯ ಮೋಡಗಳ ಮೇಲೆ ಕುಳಿತು ಅಲ್ಲಾನ ದಿವ್ಯ ಸಿಂಹಾಸನದ ಬಳಿಗೆ ಏರಿ ಹೋಗುತ್ತಿರುತ್ತದೆ! ಹೀಗೆಂದು ಪ್ರಮಾಣ ಮಾಡಿ ಹೇಳುತ್ತೇನೆ."

ಎರಡನೆಯ ಸಿಪಾಯಿ, "ಓ, ನನ್ನ ಧರ್ಮಾತ್ಮ ಗೆಳೆಯಾ! ನನ್ನ ಹತ್ತಿರ ಹತ್ತು ಸಾವಿರ ಟಂಗ ಹಣವಿಲ್ಲ. ಆದರೆ ನಾನು ಉಳಿಸಿರುವುದು ಐನೂರು ಟಂಗ ಮಾತ್ರ—ಇದನ್ನು ತೆಗೆದುಕೊಳ್ಳುತ್ತೀಯೋ? ನನ್ನ ಈ ಅಲ್ಪ ಕಾಣಿಕೆಯನ್ನು ನಿರಾಕರಿಸಬೇಡ. ಈ ಧರ್ಮಕಾರ್ಯದಲ್ಲಿ ಭಾಗವಹಿಸಬೇಕೆಂದು ನನಗೂ ಆಸೆಯಿದೆ" ಎಂದನು.

ಮೂರನೆಯವನು ನಗುವನ್ನದುಮಿಕೊಂಡು ವಿನೋದದಿಂದ ಉಗ್ಗುತ್ತಾ "ನಾನು ಕೂಡ ಕಾಣಿಕೆ ಸಲ್ಲಿಸುತ್ತೇನೆ. ಮುನ್ನೂರು ಟಂಗ ಇದೆ ನನ್ನಲ್ಲಿ...." ಎಂದನು.

"ಓ, ಧರ್ಮಾತ್ಮಾ! ಓ, ಪುಣ್ಯಾತ್ಮಾ!" ಎಂದು ಪ್ರಾರಂಭಿಸಿದನು ಖೋಜಾ ನಸ್ರೆದ್ದೀನ್. ಅವನ ದನಿಯಲ್ಲೇ ಕಣ್ಣೀರು ಸುರಿಯುತ್ತಿರುವಂತೆ ಕಾಣುತ್ತಿತ್ತು. "ನಿನ್ನ ಉಡುಪಿನ ಅಂಚನ್ನು ನನ್ನ ತುಟಿಗೆ ಸೋಕಿಸುವುದಕ್ಕಾದರೂ ಸಾಧ್ಯವಾಗಿದ್ದಿದ್ದರೆ! ನಾನು ಕಡು ಪಾಪಿ. ಆದರೆ, ನನ್ನ ಮೇಲೆ ದಯವಿಟ್ಟು ಅನುಗ್ರಹ ತೋರಿಸು. ನಾನು ಕೊಡುವ ದಾನವನ್ನು ಬೇಡವೆಂದು ತಿರಸ್ಕರಿಸಬೇಡ. ನನ್ನ ಹತ್ತಿರ ಹತ್ತು ಸಾವಿರ ಟಂಗ ಹಣವಿದೆ. ಧರ್ಮ ವಿರುದ್ಧವಾದ ವಂಚನೆಗಳ ಮೂಲಕ ಆಮೀರರ ವಿಶ್ವಾಸವನ್ನು ಸಂಪಾದಿಸಿ

ಅವರಿಂಗೆ ಆಪ್ತನಾಗಿದ್ದಾಗ, ನನಗೆ ಅನೇಕ ವೇಳೆ ಅವರು ಚಿನ್ನ-ಬೆಳ್ಳಿಗಳ ಥೈಲಿಗಳನ್ನು ಕೊಟ್ಟಿದ್ದಾರೆ. ಹತ್ತು ಸಾವಿರ ಟಂಗ ಹಣವನ್ನು ಉಳಿಸಿ ಮುಚ್ಚಿಟ್ಟಿದ್ದೇನೆ. ಇಲ್ಲಿಂದ ತಪ್ಪಿಸಿಕೊಂಡು ಹೋಗುವಾಗ ಅದನ್ನು ಜೊತೆ ಯಲ್ಲಿ ತೆಗೆದುಕೊಂಡು ಹೋಗಬೇಕೆಂದು ಯೋಚಿಸಿದ್ದೆ. 'ಕರ್ಷಿ' ಹೆಬ್ಬಾಗಿಲ ಮಾರ್ಗವಾಗಿ ಹೋಗಬೇಕೆಂದು ಯೋಚಿಸಿದ್ದದ್ದರಿಂದ ಈ ಹಣವನ್ನೆಲ್ಲಾ ಕರ್ಷಿ ಸಮಾಧಿಭೂಮಿಯಲ್ಲಿ ಒಂದು ಹಳೆಯ ಗೋರಿಗಲ್ಲಿನ ಹತ್ತಿರ ಹೂಳಿಟ್ಟಿದ್ದೇನೆ" ಎಂದು ತಿಳಿಸಿದನು.

"ಕರ್ಷಿ ಸಮಾಧಿಭೂಮಿಯಲ್ಲಿ! ಹಾಗಾದರೆ, ಅದು ಇಲ್ಲೇ ಎಲ್ಲೋ ಹತ್ತಿರದಲ್ಲೆ ಇರಬೇಕು" ಎಂದು ಉದ್ವೇಗದಿಂದ ನುಡಿದರು ಸಿಪಾಯಿಗಳು.

"ಹೌದು. ನಾವು ಈಗ ಸಮಾಧಿಭೂಮಿಯ ಉತ್ತರದ ಕೊನೆಯಲ್ಲಿ ಇದ್ದೇವೆ. ಇಲ್ಲಿಂದ...."

"ನಾವು ಪೂರ್ವದ ತುದಿಯಲ್ಲಿದ್ದೇವೆ! ಎಲ್ಲಿ....ಎಲ್ಲಿ ಹೂತಿಟ್ಟಿದ್ದೀಯ, ನಿನ್ನ ಹಣವನ್ನು?"

"ಅದನ್ನು ಸಮಾಧಿಭೂಮಿಯ ಪಶ್ಚಿಮದ ತುದಿಯಲ್ಲಿ ಹೂಳಿದ್ದೇನೆ" ಎಂದನು ಖೋಜಾ ನಸ್ರೆದ್ದೀನ್. ಹೀಗೆಂದು ಸಿಪಾಯಿಗಳನ್ನು ಕುರಿತು ಮತ್ತೆ ಮುಂದುವರಿಸಿದನು: "ಆದರೆ, ಓ, ಧರ್ಮನಿಷ್ಠ ಸಿಪಾಯಿಯಾ, ನೀನು ಕಟ್ಟಿಸುವ ಮಸೀತಿಯಲ್ಲಿ ದಿನದಿನವೂ ಹತ್ತು ವರ್ಷದ ವರೆಗೆ ನನ್ನ ಹೆಸರನ್ನು ಹೇಳಿ ಪ್ರಾರ್ಥನೆ ಸಲ್ಲಿಸಲಾಗುವುದೆಂದು ನೀನು ಮೊದಲು ಪ್ರಮಾಣ ಮಾಡಬೇಕು" ಎಂದನು.

ತವಕದಿಂದ ಚಡಪಡಿಸುತ್ತಿದ್ದ ಸಿಪಾಯಿ, "ನಾನು ಆಣೆಯಿಟ್ಟು ಪ್ರಮಾಣ ಮಾಡುತ್ತೇನೆ" ಎಂದನು. "ಅಲ್ಲಾ ಮತ್ತು ಅಲ್ಲಾನ ಪ್ರವಾದಿಯ ಆಣೆಯಿಟ್ಟು ಪ್ರಮಾಣ ಮಾಡುತ್ತೇನೆ. ಈಗ ಹೇಳು, ನಿನ್ನ ಹಣವನ್ನು ಎಲ್ಲಿ ಬಚ್ಚಿಟ್ಟಿದ್ದೀಯೆ?" ಎಂದು ಕೇಳಿದನು.

ಖೋಜಾ ನಸ್ರೆದ್ದೀನ್ ಉತ್ತರ ಕೊಡಲು ಸ್ವಲ್ಪ ನಿದಾನ ಮಾಡಿದನು. "ಅವರು ಮೊದಲು ನನ್ನನ್ನು ಕೊಳಕ್ಕೆ ಹೊತ್ತುಕೊಂಡು ಹೋಗಿ, ಹಣ ಹುಡುಕುವುದನ್ನು ನಾಳೆಗಿಟ್ಟುಕೊಂಡರೆ ಮಾಡುವುದೇನು?" ಎಂದು ಯೋಚಿಸಿದನು. "ಇಲ್ಲ, ಹೀಗಾಗುವುದಿಲ್ಲ. ಇವರನ್ನು ದುರಾಸೆಯ ಪಿಶಾಚಿ ಹಿಡಿದು

ಬಿಟ್ಟದೆ ; ನಾಳೆಯ ವರೆಗೆ ಸುಮ್ಮನಿರಲು ಇವರಿಗೆ ತಾಳ್ಮೆಯೆಲ್ಲಿ ಬರಬೇಕು ? ಬೇರೆ ಯಾರಾದರೂ ಮೊದಲೇ ಬಂದು ಅದನ್ನು ಹಾರಿಸಿಕೊಂಡು ಹೋದಾ ರೆಂದು ಹೆದರಿಕೆ ಬೇರೆ ಪೀಡಿಸುತ್ತದೆ ಅವರನ್ನು. ಕಟ್ಟಕಡೆಯದಾಗಿ ಇವರಲ್ಲೇ ಪರಸ್ಪರ ನಂಬಿಕೆಯಿಲ್ಲ. ಆದ್ದರಿಂದ ಇವರು ಮೊದಲು ಹಣ ಹುಡುಕಹೋಗು ವುದು ಖಂಡಿತ. ಯಾವ ಕಡೆ ಹೂಳಿದ್ದೇನೆಂದು ಹೇಳಲಿ ? ಸಾಧ್ಯವಾದಷ್ಟು ಹೆಚ್ಚು ಹೊತ್ತಿನ ವರೆಗೂ ಅವರು ನೆಲ ಅಗೆಯುತ್ತಿರುವಂತೆ ಮಾಡಬೇಕಾದರೆ ಯಾವ ಕಡೆಯೆಂದು ಹೇಳಬೇಕು ? " ಎಂದು ಯೋಚಿಸುತ್ತಿದ್ದನು.

ಸಿಪಾಯಿಗಳು ಕಾಯುತ್ತಿದ್ದರು ; ಚೀಲದ ಮೇಲೆ ಬಗ್ಗಿಕೊಂಡು ಏನು ಹೇಳುತ್ತಾನೋ ಎಂದು ಕಾತರತೆಯಿಂದ ನಿರೀಕ್ಷಿಸುತ್ತಿದ್ದರು. ಬಹು ದೂರ ದಿಂದ ಓಡಿ ಬಂದಿದ್ದರೆ ಹೇಗೋ ಹಾಗೆ ಅವರು ಬುಸುಬುಸನೆ ಉಸುರು ಬಿಡು ತ್ತಿದ್ದ ಸದ್ದು ಖೋಜಾ ನಸ್ರೆದ್ದೀನನಿಗೆ ಕೇಳಿಸುತ್ತಿತ್ತು.

" ಸಮಾಧಿಭೂಮಿಯ ಉತ್ತರದ ಕೊನೆಯಲ್ಲಿ ತ್ರಿಕೋಣಾಕಾರದಲ್ಲಿ ರಚಿಸಿರುವ ಮೂರು ಗೋರಿಗಂಬಗಳಿವೆ. ಆ ಒಂದೊಂದರ ಕೆಳಗೂ ಮೂರು ಸಾವಿರದ ಮುನ್ನೂರ ಮೂವತ್ತಮೂರು ಮತ್ತು ಮೂರನೆಯ ಒಂದು ಟಂಗ ದಂತೆ ಹೂಳಿಟ್ಟದ್ದೇನೆ " ಎಂದು ಹೇಳಿದನು ಖೋಜಾ ನಸ್ರೆದ್ದೀನ್.

" ತ್ರಿಕೋಣಾಕಾರದಲ್ಲಿ ರಚಿಸಿರುವ " ಎಂದು ಮೂರು ಮಂದಿ ಸಿಪಾಯಿ ಗಳೂ ಒಟ್ಟಿಗೆ ಹೇಳಿದರು. ಕೊರಾನಿನ ಮಾತುಗಳನ್ನು ಉಪಾಧ್ಯಾಯ ಹೇಳಿಕೊಟ್ಟ ಮೇಲೆ ಒಳ್ಳೆಯ ಶಿಷ್ಯರು ಅದನ್ನೇ ಅನುಕರಿಸಿ ಅನುಕರಿಸಿ ಹೇಳು ವಂತೆ ಅವರು ಅವೇ ಮಾತುಗಳನ್ನು ನುಡಿದರು. " ಪ್ರತಿಯೊಂದರ ಕೆಳಗೂ ಮೂರು ಸಾವಿರದ ಮುನ್ನೂರ ಮೂವತ್ತಮೂರು ಮತ್ತು ಮೂರನೆಯ ಒಂದು " ಎಂದು ಅವೇ ಮಾತುಗಳನ್ನು ಪುನಃಪುನಃ ಹೇಳಿದರು.

ತಮ್ಮಲ್ಲಿಬ್ಬರು ಹಣವನ್ನು ಹುಡುಕಿಕೊಂಡು ಬರುವುದಕ್ಕೆ ಹೋಗ ಬೇಕೆಂದೂ ಮೂರನೆಯವನು ಕಾವಲು ಕಾಯುತ್ತಿರಬೇಕೆಂದೂ ನಿರ್ಧರ ವಾಯಿತು. ಖೋಜಾ ನಸ್ರೆದ್ದೀನನಿಗೆ ಮನುಷ್ಯರ ನಡವಳಿಕೆಗಳನ್ನು ಮುಂದಾಗಿ ಊಹಿಸಿ ಅರಿಯುವ ಶಕ್ತಿ ಇಲ್ಲದಿದ್ದ ಪಕ್ಷದಲ್ಲಿ ಆ ಮಾತು ಕೇಳಿದ ಕೂಡಲೆ ಅವನು ಎದೆಗೆಟ್ಟುಬಿಡುತ್ತಿದ್ದನು. ಮೂರನೆಯ ಸಿಪಾಯಿ ತನ್ನ ಸ್ಥಳದಲ್ಲಿ ಬಹಳ ಹೊತ್ತಿನ ವರೆಗೆ ನಿಲ್ಲುವುದಿಲ್ಲವೆಂದು ಅವನಿಗೆ ಖಂಡಿತವಾಗಿ

ಗೊತ್ತಿತ್ತು. ಅವನ ಊಹೆ ತಪ್ಪಾಗಲಿಲ್ಲ. ತಾನೊಬ್ಬನೇ ಉಳಿದ ಮೇಲೆ ಆ ಸಿಪಾಯಿ ಸ್ತಿಮಿತವಿಲ್ಲದೆ ಉಸಿರುಗರೆಯುತ್ತಿದ್ದನು ; ಕೆಮ್ಮಿದನು, ಆಯುಧ ಗಳನ್ನು ಝಣಝಣಿಸುತ್ತ ತಪತಪನೆ ಕಾಲಿಟ್ಟುಕೊಂಡು ದಾರಿಯಲ್ಲಿ ಅತ್ತಿಂದ ಇತ್ತ ಇತ್ತಿಂದತ್ತ ಸುತ್ತತೊಡಗಿದನು. ಈ ಸದ್ದಿನಿಂದ ಅವನ ಯೋಚನೆ ಏನಾಗಿರಬಹುದೆಂದು ಖೋಜಾ ನಸ್ರೆದ್ದೀನ್ ತಿಳಿದುಕೊಳ್ಳಲು ಸಾಧನ ವಾಯಿತು. ಆ ಸಿಪಾಯಿಗೆ ತನ್ನ ಪಾಲಿಗೆ ಬರಬೇಕಾದ ಮೂರು ಸಾವಿರದ ಮುನ್ನೂರ ಮೂವತ್ತಮೂರು ಮೂರನೆಯ ಒಂದು ಟಂಗದ ವಿಚಾರವಾಗಿ ಬಹಳ ಯೋಚನೆಯಾಯಿತು. ಖೋಜಾ ನಸ್ರೆದ್ದೀನ್ ತಾಳ್ಮೆಯಿಂದ ಕಾಯು ತ್ತಿದ್ದನು.

" ಅವರು ಬಹಳ ಹೊತ್ತು ತೆಗೆದುಕೊಳ್ಳುತ್ತಿದ್ದಾರೆ " ಎಂದು ಗೊಣಗಿ ದನು ಸಿಪಾಯಿ.

" ಬಹುಶಃ ಹಣವನ್ನು ಬೇರೊಂದು ಕಡೆ ಹೂಳಿಡುತ್ತಿರಬಹುದು. ನಾಳೆ ನೀವು ಮೂವರೂ ಜೊತೆಯಾಗಿ ಬಂದು ತೆಗೆದುಕೊಂಡುಹೋಗಬಹುದು " ಎಂದನು ಖೋಜಾ ನಸ್ರೆದ್ದೀನ್.

ಈ ಮಾತು ನೇರವಾಗಿ ಗುರಿ ಮುಟ್ಟಿತು. ಸಿಪಾಯಿ ಸದ್ದಾಗುವಂತೆ ಉಸಿರು ಬಿಡುತ್ತಿದ್ದನು. ಸ್ವಲ್ಪ ತಡೆದು ಆಕಳಿಸುವಂತೆ ನಟಿಸಿದನು.

" ಸಾಯುವುದಕ್ಕೆ ಮುಂಚೆ ಆತ್ಮೋನ್ನತಿಗೆ ಸಾಧಕವಾದ ನೀತಿಭೋಧಕ ವಾದ ಕಥೆಯೊಂದನ್ನು ಕೇಳಬೇಕೆಂದು ನನಗೆ ತುಂಬ ಆಸೆ. ಓ, ದಯಾಶಾಲಿ ಸಿಪಾಯೀ, ನಿನಗೆ ಅಂಥ ಯಾವುದಾದರೂ ಕಥೆ ಗೊತ್ತಿರಬಹುದು. ಅದನ್ನು ನನಗೆ ಹೇಳುತ್ತೀಯಾ ? " ಎಂದು ಚೀಲದೊಳಗಿನಿಂದ ಖೋಜಾ ನಸ್ರೆದ್ದೀನ್ ಅವನನ್ನು ಕೇಳಿದನು.

ಸಿಪಾಯಿ ಕೋಪದಿಂದ ಉತ್ತರ ಕೊಟ್ಟನು : " ಇಲ್ಲ ! ನೀತಿಬೋಧಕ ವಾದ ಕಥೆ ಒಂದೂ ನನಗೆ ಗೊತ್ತಿಲ್ಲ. ಇದರ ಜೊತೆಗೆ, ನನಗೆ ತುಂಬ ಆಯಾಸ ವಾಗಿದೆ. ಅತ್ತತ್ತ ಹೋಗಿ ಹುಲ್ಲ ಮೇಲೆ ಕೈಕಾಲು ನೀಡಿಕೊಂಡು ಮಲಗು ತ್ತೇನೆ " ಎಂದನು.

ಆದರೆ ಆ ಗಟ್ಟಿ ನೆಲದ ಮೇಲೆ ಅವನ ಹೆಜ್ಜೆಯ ಸದ್ದು ಗಟ್ಟಿಯಾಗಿ ಬಹು ದೂರದ ವರೆಗೂ ಕೇಳಿಸುವುದೆಂಬ ಸಂಗತಿಯನ್ನು ಅವನು ಮರೆತು

ಬಿಟ್ಟನು. ಮೊದಲು ಅವನು ನಿದಾನವಾಗಿ ನಡೆಯುತ್ತಿದ್ದನು. ಆ ಮೇಲೆ ಬಲವಾಗಿ ನೆಲವನ್ನೊದೆಯುತ್ತಿದ್ದಂತೆ ಸದ್ದು ಕೇಳಿತು ಖೋಜಾ ನಸ್ರೆದ್ದೀನನಿಗೆ —ಸಿಪಾಯಿ ಓಟ ಕಿತ್ತಿದ್ದನು.

ಕಾರ್ಯ ಮಾಡುವ ಕಾಲ ಒದಗಿ ಬಂದಿತ್ತು. ಆದರೆ ಖೋಜಾ ನಸ್ರೆದ್ದೀನ್ ಉರುಳಿ ಹೊರಳಿ ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಯಿತು—ಹಗ್ಗ ಹರಿಯಲಿಲ್ಲ, ಬಿಚ್ಚಿಕೊಳ್ಳಲಿಲ್ಲ.

"ಯಾರಾದರೊಬ್ಬ ದಾರಿಹೋಕ ಇತ್ತ ಬರಬಾರದೆ! ಓ, ಅದೃಷ್ಟವೇ, ನನಗೊಬ್ಬ ದಾರಿಹೋಕನನ್ನು ಕಳಿಸಿಕೊಡು!" ಎಂದು ಖೋಜಾ ನಸ್ರೆದ್ದೀನ್ ಪ್ರಾರ್ಥಿಸಿದನು.

ಅದೃಷ್ಟ ಒಬ್ಬ ದಾರಿಹೋಕನನ್ನು ಕಳಿಸಿಕೊಟ್ಟಿತು.

ಯಾವನು ದೃಢ ಸಂಕಲ್ಪ ಮಾಡಿಕೊಂಡು ಕೊನೆಯ ವರೆಗೂ ಸಾಹಸ ಮಾಡಿ ಹೋರಾಡುವನೋ ಅವನಿಗೆ ಮಾತ್ರ ಅದೃಷ್ಟವೂ ಸುಸಂದರ್ಭವೂ ನೆರವಾಗಿ ಬರುತ್ತವೆ (ಈ ಸಂಗತಿಯನ್ನು ಹಿಂದೆಯೇ ನಾವು ಹೇಳಿದ್ದೇವೆ. ಆದರೆ ಮತ್ತೆ ಮತ್ತೆ ಹೇಳಿದರೆ ಸತ್ಯ ಕೆಟ್ಟುಹೋಗುವುದಿಲ್ಲ). ಖೋಜಾ ನಸ್ರೆದ್ದೀನನು ತನ್ನ ಪ್ರಾಣವನ್ನುಳಿಸಿಕೊಳ್ಳಬೇಕೆಂದು ಸರ್ವ ಸಾಹಸವನ್ನೂ ಪ್ರಯೋಗಿಸಿ ಹೋರಾಡುತ್ತಿದ್ದನು. ಅವನಿಗೆ ಅದೃಷ್ಟವು ಸಹಾಯ ಕೊಡದೆ ಇರಲು ಸಾಧ್ಯವಿಲ್ಲವಾಯಿತು.

ದಾರಿಹೋಕನು ನಿದಾನವಾಗಿ ನಡೆಯುತ್ತಿದ್ದನು. ಅವನು ಕುಂಟ; ಅವನ ನಡಗೆಯ ಸದ್ದಿನಿಂದಲೇ ಅದನ್ನು ಖೋಜಾ ನಸ್ರೆದ್ದೀನ್ ಗೊತ್ತು ಮಾಡಿಕೊಂಡನು. ಅವನು ವಯಸ್ಸಾದವನು; ಏಕೆಂದರೆ, ಅವನ ಉಸುರು ಮೆತ್ತಗಾಗಿತ್ತು.

ಚೀಲ ದಾರಿಯ ಮಧ್ಯದಲ್ಲಿತ್ತು. ದಾರಿಹೋಕ ಅಲ್ಲಿ ನಿಂತನು. ಸ್ವಲ್ಪ ಹೊತ್ತು ಅದರ ಕಡೆ ನೋಡಿ, ತನ್ನ ಕಾಲಿನಿಂದ ಕೆಲವು ಸಲ ಅದನ್ನು ತಿವಿದು ನೋಡಿದನು.

"ಈ ಚೀಲದಲ್ಲೇನಿರಬಹುದು? ಇದು ಎಲ್ಲಿಂದ ಬಂತು?" ಎಂದು ಕೀರಲು ದನಿಯಲ್ಲಿ ದಾರಿಹೋಕ ಗೊಣಗಿದನು.

ಆನಂದವೋ ಆನಂದ! ಖೋಜಾ ನಸ್ರೆದ್ದೀನ್ ದುಬಾರಿ ಬಡ್ಡಿಗಾರ

ಜಾಫರನ ದನಿಯನ್ನು ಗುರುತಿಸಿದನು. ತಾನು ಬದುಕಿಕೊಳ್ಳುವ ವಿಷಯದಲ್ಲಿ ಈಗ ಅವನಿಗೆ ಸಂಶಯ ಉಳಿಯಲಿಲ್ಲ. "ಸಿಪಾಯಿಗಳು ಮಾತ್ರ ಬೇಗ ಬಂದು ಬಿಡದೆ ತಕ್ಕಷ್ಟು ತಡ ಮಾಡಿದರೆ ಸಾಕು!" ಎಂದುಕೊಳ್ಳುತ್ತಿದ್ದನು.

ದುಬಾರಿ ಬಡ್ಡಿಗಾರನಿಗೆ ಕೇಳಿಸುವಂತೆ, ಆದರೆ ಅವನಿಗೆ ದಿಗಿಲಾಗದ ಹಾಗೆ ಮೆತ್ತಗೆ ಕೆಮ್ಮಿದನು.

ಜಾಫರ್ ಹಿಂದಕ್ಕೆ ನಾಲ್ಕು ಹೆಜ್ಜೆ ಇಟ್ಟು, "ಓಹೋ! ಒಳಗಡೆ ಒಬ್ಬ ಮನುಷ್ಯನಿದ್ದಾನೆ!" ಎಂದನು.

"ಹೌದು, ಒಳಗಡೆ ಒಬ್ಬ ಮನುಷ್ಯನಿದ್ದಾನೆ!" ಎಂದು ಖೋಜಾ ನಸ್ರೆದ್ದೀನ್ ಶಾಂತವಾಗಿ, ದನಿ ಬದಲಾಯಿಸಿಕೊಂಡು ಉತ್ತರ ಕೊಟ್ಟನು. "ಇದೇನು ಅಂಥ ಆಶ್ಚರ್ಯವೆ?" ಎಂದು ಕೇಳಿದನು.

"ಆಶ್ಚರ್ಯವಲ್ಲವೆ? ಅದೇಕೆ ನೀನು ಚೀಲದೊಳಗೆ ಸಿಕ್ಕಿಹಾಕಿ ಕೊಂಡೆ?"

"ಅದು ನನ್ನ ವಿಷಯ. ನಿನ್ನ ದಾರಿ ಹಿಡಿದು ನೀನು ಹೋಗು. ಪ್ರಶ್ನೆ ಗಿಶ್ನೆ ಕೇಳಿ ನನ್ನ ತಂಟೆಗೆ ಬರಬೇಡ."

ದುಬಾರಿ ಬಡ್ಡಿಗಾರನಿಗೆ ಕುತೂಹಲ ಕೆರಳಿತ್ತೆಂದೂ ಅವನು ತನ್ನ ದಾರಿ ಹಿಡಿದು ಹೋಗುವುದಿಲ್ಲವೆಂದೂ ಖೋಜಾ ನಸ್ರೆದ್ದೀನ್ ಅರಿತಿದ್ದನು.

ದುಬಾರಿ ಬಡ್ಡಿಗಾರನೆಂದನು: "ಇದೇನಯ್ಯಾ, ಇದು, ತೀರ ವಿಚಿತ್ರ! ಒಬ್ಬ ಮನುಷ್ಯನನ್ನು ಚೀಲದೊಳಗೆ ಕೂಡಿ ಬಾಯಿ ಕಟ್ಟಿ ನಡು ದಾರಿಯಲ್ಲಿ ಹಾಕಿರುವುದು, ಇದು ತೀರಾ ಅಸಾಧಾರಣ ಸಂಗತಿ. ಯಾರಾದರೂ ಬಲವಂತ ವಾಗಿ ನಿನ್ನನ್ನು ಈ ಚೀಲದೊಳಕ್ಕೆ ತುರುಕಿದರೆ?"

"ಬಲವಂತವಾಗಿ? ಹಾಗಂದರೇನು? ಬಲವಂತವಾಗಿದ್ದಿದ್ದರೆ, ಈ ಚೀಲದೊಳಗೆ ಬರುವುದಕ್ಕೆ ಆರುನೂರು ಟಂಗ ತೆರುತ್ತಿದ್ದೆನೇ ನಾನು?" ಎಂದು ತಿರಸ್ಕಾರ ಸೂಚಿಸುವ ದನಿಯಲ್ಲಿ ಖೋಜಾ ನಸ್ರೆದ್ದೀನ್ ಮರುನುಡಿದನು.

"ಆರು ನೂರು ಟಂಗ? ಅಷ್ಟೊಂದು ಹಣವನ್ನು ಏಕೆ ಕೊಟ್ಟೆ?"

"ಅಯ್ಯಾ, ದಾರಿಹೋಕಾ! ನನ್ನ ಕಥೆಯನ್ನು ಕೇಳಿಬಿಟ್ಟು ನೀನು ಸುಮ್ಮನೆ ಹೊರಟುಹೋಗುವುದಾದರೆ, ಮತ್ತೆ ನನ್ನ ಶಾಂತಿಗೆ ಭಂಗ ಬರುವಂತೆ ಪೀಡಿಸದೆ ತೆಪ್ಪಗೆ ಹೊರಟುಹೋಗುವುದಾಗಿ ಮಾತುಕೊಡುವುದಾದರೆ, ನಿನಗೆ

ಎಲ್ಲಾ ವಿಷಯವನ್ನೂ ಹೇಳುತ್ತೇನೆ. ಈ ಚೀಲ ಒಬ್ಬ ಅರಬನಿಗೆ ಸೇರಿದ್ದು; ಅವನು ಇಲ್ಲೀ ಈ ಬುಖಾರ ಪಟ್ಟಣದಲ್ಲೀ ವಾಸ ಮಾಡುತ್ತಿದ್ದಾನೆ. ಕಾಯಿಲೆಗಳನ್ನೂ ಅಂಗವಿಕಾರಗಳನ್ನೂ ವಾಸಿ ಮಾಡುವ ಅದ್ಭುತಶಕ್ತಿ ಈ ಚೀಲಕ್ಕಿದೆ. ಇದರ ಮಾಲೀಕ ಇದನ್ನು ಬಾಡಿಗೆಗೆ ಕೊಡುತ್ತಾನೆ. ಆದರೆ ಬಹು ಭಾರಿ ಮೊತ್ತಕ್ಕೆ ಮಾತ್ರ; ಅದೂ ಅಲ್ಲದೆ, ಸಿಕ್ಕಿದವರಿಗೆಲ್ಲಾ ಕೊಡುವುದೂ ಇಲ್ಲ. ನಾನು ಕುಂಟ, ಗೂನ ಬೆನ್ನಿನವನು; ಒಂಟಿಗಣ್ಣ. ನನಗೆ ಮದುವೆಯಾಗಬೇಕೆಂದು ಆಸೆ. ನನ್ನ ವಧುವಿನ ತಂದೆ, ನನ್ನ ಈ ವಿಕಾರ ರೂಪನ್ನು ನೋಡಿ ಮಗಳ ಕಣ್ಣಿಗೆ ನೋವಾಗದಿರಲೆಂಬ ಅಭಿಪ್ರಾಯದಿಂದ ನನ್ನನ್ನು ಈ ಊರ ಅರಬನ ಬಳಿ ಕರೆದುಕೊಂಡು ಹೋದನು. ಅವನಿಂದ ನಾನು ಈ ಚೀಲವನ್ನು ಎರವಲು ತೆಗೆದುಕೊಂಡೆ; ನಾಲ್ಕು ಗಂಟೆಗೆ ಆರುನೂರು ಟಂಗ ಹಣ ಕೊಟ್ಟು ಎರವಲು ತೆಗೆದುಕೊಂಡೆ.

"ಈ ಚೀಲದ ಅದ್ಭುತಶಕ್ತಿ ಸಿದ್ಧಿಯಾಗಿ ರೋಗವಿಕಾರಗಳು ವಾಸಿಯಾಗಬೇಕಾದರೆ, ಸಮಾಧಿಭೂಮಿಗಳ ಹತ್ತಿರವೇ ಅದನ್ನು ಉಪಯೋಗಿಸಬೇಕಂತೆ. ಆದರಿಂದ ಸೂರ್ಯಾಸ್ತವಾದ ಮೇಲೆ ನಾನು ಚೀಲವನ್ನು ತೆಗೆದುಕೊಂಡು ಈ ಕರ್ಷಿ ಸಮಾಧಿಭೂಮಿಯ ಹತ್ತಿರ ಬಂದೆ. ನನ್ನ ವಧುವಿನ ತಂದೆ ಜೊತೆಯಲ್ಲೀ ಬಂದು ನನ್ನನ್ನು ಚೀಲದೊಳಕ್ಕೆ ಸೇರಿಸಿ ಬಾಯಿ ಕಟ್ಟಿ ಹೊರಟು ಹೋದರು; ಏಕೆಂದರೆ, ಬೇರೆ ಯಾರೇ ಆದರೂ ಜೊತೆಯಲ್ಲಿದ್ದರೆ ವಾಸಿಯಾಗುವುದಕ್ಕೆ ಅಡ್ಡಿಯಾಗುತ್ತದೆಯಂತೆ. ಈ ಚೀಲದ ಮಾಲಿಕ ಆ ಅರಬ ನನಗೆ ಮುನ್ನೆಚ್ಚರಿಕೆ ಹೇಳಿದ್ದಾನೆ: ನೀನು ಚೀಲದೊಳಗೆ ಸೇರಿ ಒಂಟಿಯಾಗಿ ಉಳಿದ ಕೂಡಲೆ ಮೂರು ಜಿನ್ನುಗಳು (ಭೂತಗಳು) ಬಹು ಗದ್ದಲ ಮಾಡಿಕೊಂಡು, ತಮ್ಮ ಹಿತ್ತಾಳೆಯ ರೆಕ್ಕೆಗಳನ್ನು ಬಡಿದು ಸದ್ದುಮಾಡುತ್ತಾ ಬರುತ್ತವೆ. ಅವು ಮನುಷ್ಯರ ಮಾತಿನಲ್ಲಿ, 'ಸಮಾಧಿಭೂಮಿಯಲ್ಲಿ ಯಾವ ಕಡೆ ಹತ್ತು ಸಾವಿರ ಟಂಗಗಳನ್ನು ಹೂಳಿದೆ' ಎಂದು ಪ್ರಶ್ನೆ ಮಾಡುತ್ತವೆ. ಅವಕ್ಕುತ್ತರವಾಗಿ ನೀನು ಈ ಮಾತುಗಳನ್ನು—ಇದೊಂದು ಮಾಯದ ಮಂತ್ರ—ಹೇಳುತ್ತಿರಬೇಕು: 'ಯಾರಿಗೆ ತಾಮ್ರದ ಗುರಾಣಿಯಿದೆಯೋ ಅವನಿಗೆ ತಾಮ್ರದ ಹಣೆಯಿದೆ. ಡೇಗೆಯ ಜಾಗದಲ್ಲಿ ಗೂಬೆ ಕೂತಿದೆ. ಓ ಜಿನ್ನುಗಳೇ, ನೀವು ಯಾವುದನ್ನು ಮುಚ್ಚಿಟ್ಟಿಲ್ಲವೋ ಅದನ್ನು ನೀವು ಹುಡುಕುತ್ತಿದ್ದೀರಿ.

ಆದ್ದರಿಂದ ನನ್ನ ಕತ್ತೆಯ ಬಾಲಕ್ಕೆ ಮುತ್ತು ಕೊಡಿ.' ಈ ಮಂತ್ರವನ್ನು ನೀನು ಹೇಳುತ್ತಿರಬೇಕು—ಎಂದನು.

"ಎಲ್ಲಾ ಅವನು ಹೇಳಿದ್ದ ಹಾಗೆಯೇ ನಡೆಯಿತು. ಜಿನ್ನುಗಳು ಬಂದು ಹತ್ತು ಸಾವಿರ ಟಂಗಗಳನ್ನು ಎಲ್ಲಿ ಮುಚ್ಚಿಟ್ಟಿದೆಯೆಂದು ಕೇಳಿದವು. ನಾನು ಹೇಳಿದ ಉತ್ತರವನ್ನು ಕೇಳಿ ರೇಗಿ ನನ್ನನ್ನು ಚೆನ್ನಾಗಿ ಚಚ್ಚಿಬಿಟ್ಟವು. ನಾನು ಅರಬನ ಮಾತುಗಳನ್ನು ನೆನಪಿಟ್ಟುಕೊಂಡು, 'ಯಾಂಗೆ ತಾಮ್ರದ ಗುರಾಣಿ ಯಿದೆಯೋ ಅವನಿಗೆ ತಾಮ್ರದ ಹಣೆಯಿದೆ ನನ್ನ ಕತ್ತೆಯ ಬಾಲಕ್ಕೆ ಮುತ್ತು ಕೊಡಿ' ಎಂದು ಕೂಗುತ್ತಲೇ ಇದ್ದೆ. ಆ ಮೇಲೆ ಜಿನ್ನುಗಳು ಚೀಲವನ್ನು ಹೊತ್ತುಕೊಂಡು ಹೊರಟವು........ಅಲ್ಲಿಂದ ಮುಂದೆ ಏನಾಯಿತೋ ನೆನಪಿಲ್ಲ. ಎರಡು ಗಂಟೆ ಕಳೆದ ಮೇಲೆ ನನಗೆ ಎಚ್ಚರವಾಯಿತು; ಆಗ ನಾನು ಮೊದಲಿದ್ದ ಕಡೆಯೇ ಇದ್ದೆ; ನನಗೆ ಪೂರ್ತಿಯಾಗಿ ವಾಸಿಯಾಗಿತ್ತು. ನನ್ನ ಬೆನ್ನ ಡುಬ್ಬ ಮಾಯವಾಗಿದೆ; ನನ್ನ ಕಾಲು ಈಗ ನೆಟ್ಟಗಿದೆ; ನನ್ನ ಕಣ್ಣು ಕಾಣುತ್ತಿದೆ. ನನಗೆ ಮುಂಚೆ ಇವರೊಳಕ್ಕೆ ಜೋಕ್ಕಿದ್ದ ಯಾರೋ ಒಬ್ಬರು ಮಾಡಿದ್ದ ತೂತಿ ನಿಂದ ನೋಡಿ ಈ ವಿಷಯವನ್ನು ಪರೀಕ್ಷೆ ಮಾಡಿ ನಿರ್ಧರಿಸಿಕೊಂಡಿದ್ದೇನೆ. ಈಗ ನಾನಿಲ್ಲಿರುವುದಕ್ಕೆ ಇಷ್ಟೇ ಕಾರಣ; ಪೂರ್ತಿ ಬಾಡಿಗೆ ಕೊಟ್ಟಾಗಿದೆ; ಅದನ್ನು ವ್ಯರ್ಥಮಾಡುವುದಕ್ಕೆ ವ್ಯಥೆಯಾಗುತ್ತದೆ. ನಾನು ಒಂದು ತಪ್ಪು ಮಾಡಿಬಿಟ್ಟೆ, ಅದೇನೋ ನಿಜ. ನನ್ನಂತೆಯೇ ಅಂಗನಿಕಾರವಿದ್ದ ಬೇರೊಬ್ಬ ನೊಡನೆ ನಾನು ಮೊದಲೇ ಒಪ್ಪಂದ ಮಾಡಿಕೊಂಡಿರಬೇಕಾಗಿತ್ತು. ಆಗ ನಾವಿಬ್ಬರೂ ಅರ್ಧರ್ಧ ಬಾಡಿಗೆ ಕೊಟ್ಟು ಈ ಚೀಲವನ್ನು ಎರವಲು ತೆಗೆದು ಕೊಳ್ಳಬಹುದಾಗಿತ್ತು; ಒಬ್ಬೊಬ್ಬರೂ ಎರಡೆರಡು ಗಂಟೆ ಹೊತ್ತು ಚೀಲದೊಳ ಗಿದ್ದು ಕೇವಲ ಮುನ್ನೂರು ಮುನ್ನೂರು ಟಂಗಗಳಿಗೆ ಇಬ್ಬರೂ ಗುಣ ಮಾಡಿ ಕೊಂಡುಬಿಡಬಹುದಾಗಿತ್ತು. ಆದರೆ ಈಗ ಮಾಡುವುದೇನು! ಕಾಲ ಮಿಂಚಿ ಹೋಯಿತು. ನನ್ನ ಹಣ ವ್ಯರ್ಥವಾದರಾಗಲಿ. ಮುಖ್ಯ ವಿಷಯ ಇಷ್ಟು: ನನಗೆ ವಾಸಿಯಾಯಿತು.

"ಈಗ, ಅಯ್ಯಾ ದಾರಿಹೋಕಾ, ನಿನಗೆ ಕಥೆಯೆಲ್ಲಾ ಗೊತ್ತಾಯಿತು. ನೀನು ಕೊಟ್ಟ ಮಾತಿನಂತೆ ನಡೆದುಕೊ; ನಿನ್ನ ದಾರಿ ಹಿಡಿದು ನೀನು ಹೋಗು. ಈ ಚಿಕಿತ್ಸೆಯಾದ ಮೇಲೆ ನನಗೆ ತುಂಬ ಆಯಾಸವಾಗಿದೆ;

ಮಾತಾಡುವುದಕ್ಕೆ ಕಷ್ಟವಾಗುತ್ತಿದೆ. ನಿನಗಿಂತ ಮುಂಚೆ ಒಂಬತ್ತು ಮಂದಿ ಬಂದು ಇವೇ ಪ್ರಶ್ನೆಗಳನ್ನು ಕೇಳಿದರು, ಅದೇ ಉತ್ತರವನ್ನು ಮತ್ತೆ ಮತ್ತೆ ಹೇಳಿ ಹೇಳಿ ನನಗೆ ಸಾಕಾಗಿಹೋಗಿದೆ."—ಹೀಗೆಂದು ಖೋಜಾ ನಸ್ರೆದ್ದೀನ್ ಮಾತು ಮುಗಿಸಿದನು.

ದುಬಾರಿ ಬಡ್ಡಿಗಾರನು ಪೂರ್ಣವಾಗಿ ಲಕ್ಷ್ಯ ಕೊಟ್ಟು ಎಲ್ಲವನ್ನೂ ಕೇಳುತ್ತಿದ್ದನು. ಕಥೆಯ ಮಧ್ಯೆ ಮಧ್ಯೆ ಆಶ್ಚರ್ಯೋದ್ಗಾರವೆತ್ತುತ್ತಿದ್ದನು; ಅಷ್ಟೆ. ಬೇರೆ ಯಾವ ರೀತಿಯಲ್ಲೂ ಮಧ್ಯೆ ಪ್ರವೇಶಿಸಲಿಲ್ಲ.

ಕಡೆಗೆ ಅವನು ಹೀಗೆಂದನು: "ಕೇಳು, ಚೀಲದೊಳಗಿರುವಾತನೇ, ಕೇಳು. ನಾವು ಇಲ್ಲಿ ಸಂಧಿಸಿದ್ದರಿಂದ ಇಬ್ಬರೂ ಪ್ರಯೋಜನ ಪಡೆದುಕೊಳ್ಳಬಹುದು. ನಿನ್ನಂತೆಯೇ ಇರುವ ಬೇರೊಬ್ಬನೊಡನೆ ಮಾತಾಡಿ ಬಾಡಿಗೆಯನ್ನು ಹಂಚಿಕೊಳ್ಳುವಂತೆ ಮಾಡುವ ದೂರದೃಷ್ಟಿಯಿರಲಿಲ್ಲವೆಂದು ನೀನು ವ್ಯಥೆಪಡುತ್ತಿದ್ದೀಯಲ್ಲವೆ. ಆದರೆ, ಈಗಲೂ ಕಾಲವೇನು ಮಿಂಚಿಹೋಗಿಲ್ಲ. ನಿನಗೆ ಅವಶ್ಯವಾಗಿರುವಂಥ ಮನುಷ್ಯ ನಾನು. ಎಲ್ಲ ಬಗೆಯಲ್ಲೂ ನೀನು ಹೇಳುವಂತೆಯೇ ಇದ್ದೇನೆ. ನನಗೂ ಗೂನು ಬೆನ್ನು; ಬಲಗಾಲು ಕುಂಟು, ಒಂದು ಕಣ್ಣು ಕುರುಡು. ಇನ್ನು ಉಳಿದಿರುವ ಎರಡು ಗಂಟೆ ಹೊತ್ತು ಈ ಚೀಲದೊಳಗಿರುವುದಕ್ಕಾಗಿ ನಿನಗೆ ಮುನ್ನೂರು ಟಂಗ ಬಾಡಿಗೆ ಕೊಡಲು ನಾನು ಸಿದ್ಧವಾಗಿದ್ದೇನೆ; ಸಂತೋಷವಾಗಿ ಕೊಡುತ್ತೇನೆ" ಎಂದು ಜಾಫರ್ ಕೇಳಿಕೊಂಡನು.

"ಖಂಡಿತವಾಗಿಯೂ ನೀನು ನನ್ನನ್ನು ಹಾಸ್ಯಮಾಡುತ್ತಿದ್ದಿಯೆಂದು ಕಾಣುತ್ತದೆ! ಅಷ್ಟು ಅತ್ಯಾಶ್ಚರ್ಯಕರವಾದ ಕಾಕತಾಳೀಯವಾದ ಹೊಂದಿಕೆ ಇರುವುದು ಅಸಾಧ್ಯ! ನಂಬಲಾಗುವುದಿಲ್ಲ! ನೀನು ಹೇಳುತ್ತಿರುವುದು ನಿಜವೇ ಆಗಿರುವ ಪಕ್ಷದಲ್ಲಿ, ಇಂಥ ಒಂದು ಸುಯೋಗವನ್ನು ನಿನಗೆ ದೊರಕಿಸಿಕೊಟ್ಟಿದ್ದಕ್ಕಾಗಿ ಅಲ್ಲಾಗೆ ವಂದನೆ ಸಲ್ಲಿಸು. ನನಗೇನೊ ಒಪ್ಪಿಗೆ. ಆದರೆ, ಓ, ದಾರಿಹೋಕಾ, ಮೊದಲೇ ಹೇಳಿಬಿಡುತ್ತೇನೆ, ಬಾಡಿಗೆ ಹಣವನ್ನು ನಾನು ಮುಂಗಡವಾಗಿ ಕೊಟ್ಟಿದ್ದೇನೆ; ನೀನು ಕೂಡ ಮುಂಗಡವಾಗಿಯೇ ಕೊಡಬೇಕು. ನಾನು ಕಡ ಕೊಡಲಾರೆ" ಎಂದು ಖೋಜಾ ನಸ್ರೆದ್ದೀನ್ ಉತ್ತರ ಕೊಟ್ಟನು.

ದುಬಾರಿ ಬಡ್ಡಿಗಾರ ಹಣದ ಚೀಲದ ಗಂಟು ಬಿಚ್ಚುತ್ತಾ, "ನಾನು

ಮುಂಗಡವಾಗಿಯೇ ಕೊಡುತ್ತೇನೆ. ಆದರೆ ಕಾಲ ಕಳೆಯಬಾರದು ; ನಿಮಿಷಗಳು ಬೇಗ ಬೇಗ ಓಡುತ್ತಿವೆ ; ಅವು ನನಗೆ ಸೇರಿದ್ದು " ಎಂದು ಆತುರಪಡಿಸಿದನು.

ಖೋಜಾ ನಸ್ರೆದ್ದೀನ್ ಚೀಲದಿಂದ ಹೊರಕ್ಕೆ ಬರುವಾಗ ಖಲತ್ತಿನ ತೋಳಿನಿಂದ ಮುಖ ಮುಚ್ಚಿಕೊಂಡಿದ್ದನು ಆದರೆ, ದುಬಾರಿ ಬಡ್ಡಿಗಾರನು ಅತ್ತ ಕಡೆ ನೋಡಲೇ ಇಲ್ಲ; ಅವನು ಬೇಗಬೇಗ ಹಣ ಎಣಿಸಿಕೊಡುತ್ತಿದ್ದನು. ಓಡಿಹೋಗುತ್ತಿರುವ ನಿಮಿಷಗಳ ಬಗ್ಗೆ ಅವನಿಗೆ ಅಷ್ಟೊಂದು ಆತಂಕ! ಅನೇಕ ಸಲ ನರಳಿಕೊಳ್ಳುತ್ತಾ ಆ ಚೀಲದೊಳಕ್ಕೆ ತುರುಕಿಕೊಂಡು ಕೊನೆಗೆ ತಲೆಯನ್ನೂ ಒಳಕ್ಕೆ ಎಳೆದುಕೊಂಡನು.

ಖೋಜಾ ನಸ್ರೆದ್ದೀನನು ಹಗ್ಗವನ್ನು ಬಿಗಿಯಾಗಿ ಕಟ್ಟಿದನು. ಕಟ್ಟಿದ ಮೇಲೆ ಸ್ವಲ್ಪ ದೂರ ಹೋಗಿ ಒಂದು ಮರದ ಮರೆಯಲ್ಲಿ ಅಡಗಿಕೊಂಡನು. ಅವನು ಹೋದದ್ದು ಸಕಾಲವಾಗಿತ್ತು. ಏಕೆಂದರೆ, ಸಮಾಧಿಭೂಮಿಯ ಕಡೆಯಿಂದ ಕಾಪುಸಿಪಾಯಿಗಳ ಆಣಿಬೈಗುಳಗಳ ದನಿ ಗಟ್ಟಿಯಾಗಿ ಕೇಳಬರುತ್ತಿತ್ತು. ಗೋಡೆಯಲ್ಲಿದ್ದ ಒಂದು ಕಂಡಿಯಿಂದ ಮೊದಲು ಅವರ ಉದ್ದನೆಯ ನೆರಳುಗಳು ಕಾಣಬಂದವು; ಆ ಮೇಲೆ ಅವರೇ ಹೊರಬಂದರು; ಅವರ ತಾಮ್ರದ ಭಲ್ಲೆಯಗಳು ಬೆಳದಿಂಗಳಿನಲ್ಲಿ ಥಳಥಳಿಸುತ್ತಿದ್ದವು.

## ೧೦

"ಹೇಯ್, ಎಲಾ ಮೋಸಗಾರಾ!" ಎಂದು ಅಬ್ಬರಿಸಿದರು ಸಿಪಾಯಿಗಳು. ಆಯುಧಗಳು ಖಣಖಣಗುಟ್ಟುತ್ತಿರಲು ಚೀಲವನ್ನು ಕಾಲಿನಿಂದ ಒದೆಯತೊಡಗಿದರು. ಆ ಸದ್ದು ತಾಮ್ರದ ರೆಕ್ಕೆಗಳಿಂದ ಆಗಬಹುದಾದ ಸದ್ದಿನಂತೆಯೇ ಕೇಳಿಸಿತು. "ಸಮಾಧಿಭೂಮಿಯಲ್ಲೆಲ್ಲಾ ಹುಡುಕಿ ನೋಡಿದೆವು. ಏನೂ ಸಿಕ್ಕಲಿಲ್ಲ. ಹೇಳು, ಹೇಳು, ಓ, ಪಾಪದ ಮಗನೇ, ಹೇಳು! ಹತ್ತು ಸಾವಿರ ಟಂಗವನ್ನು ಎಲ್ಲಿಟ್ಟಿದೆ?"

ದುಬಾರಿ ಬಡ್ಡಿಗಾರನು ಪಾಠವನ್ನು ಚೆನ್ನಾಗಿ ಕಲಿತುಕೊಂಡಿದ್ದನು.

"ಯಾರಿಗೆ ತಾಮ್ರದ ಗುರಾಣಿಯಿದೆಯೋ ಅವನಿಗೆ ತಾಮ್ರದ ಹಣ ಇದೆ" ಎಂದು ಚೀಲದೊಳಗಿನಿಂದ ಉತ್ತರ ಕೊಡಲು ಪ್ರಾರಂಭಿಸಿದನು.

"ಡೇಗೆಯ ಜಾಗದಲ್ಲಿ ಗೂಬೆ ಕೂತಿದೆ. ಓ, ಜಿನ್ನುಗಳೇ, ನೀವು ಎಲ್ಲಿ ಮುಚ್ಚಿಟ್ಟಿಲ್ಲವೊ ಅಲ್ಲಿ ಹುಡುಕುತ್ತೀರಿ. ಆದ್ದರಿಂದ ನನ್ನ ಕತ್ತಿಯ ಬಾಲಕ್ಕೆ ಮುತ್ತು ಕೊಡಿ" ಎಂದನು.

ಅಂಥ ಮಾತುಗಳನ್ನು ಕೇಳಿ ಸಿಪಾಯಿಗಳ ಕೋಪ ಮಿತಿಮೀರಿತು.

"ಆ! ನೀನು ನಮಗೆ ಮೋಸ ಮಾಡಿದ್ದೀಯ! ಓ, ಕೊಳೆತು ನಾರುವ ನಾಯೀ! ಈಗ ಬೇರೆ ನೀನು ನಮ್ಮನ್ನು ಬೆಪ್ಪುತಕಡಿಗಳೆಂದು ಕರೆಯುತ್ತಿದ್ದೀಯ! ನೋಡು, ನೋಡು—ಚೀಲದ ಮೇಲೆಲ್ಲಾ ಧೂಳು ತುಂಬಿದೆ. ಇವನು ಬಿಡಿಸಿಕೊಳ್ಳಬಹುದೇನೋ ಎಂಬ ಆಸೆಯಿಂದ ದಾರಿಯ ಮೇಲೆ ಉರುಳಿ ಹೊರಳಾಡಿದ್ದಾನೆಂದು ಕಾಣುತ್ತದೆ. ನಾವು ಸಮಾಧಿಭೂಮಿಯಲ್ಲಿ ಕೈಗೆ ರಕ್ತ ಬರುವ ವರೆಗೂ ಅಗೆಯುತ್ತಿರುವಾಗ ಇವನಿಲ್ಲಿ ಈ ಉಪಾಯ ಮಾಡುತ್ತಿದ್ದಿರಬೇಕು. ಈ ರಕ್ಕತನಕ್ಕೆ ತಕ್ಕದ್ದಾಗುತ್ತದೆ ನಿನಗೆ, ಓ, ಹಾಳು ನೀಚ ನರಿಯ ಸಂತಾನವೇ!" ಎಂದು ಅವನನ್ನು ಸಿಕ್ಕಾಬಟ್ಟೆ ಬೈದರು.

ತಮ್ಮ ಮುಷ್ಟಿಗಳಿಂದ ಚೀಲವನ್ನು ಚೆನ್ನಾಗಿ ಗುದ್ದಿದರು. ಆ ಮೇಲೆ ಕಬ್ಬಿಣ ಕಟ್ಟಿದ ಬೂಟು ತೊಟ್ಟ ಕಾಲುಗಳಿಂದ ತುಳಿದುಹಾಕಿದರು. ಹೀಗಾಗುತ್ತಿರುವಾಗ ದುಬಾರಿ ಬಡ್ಡಿಗಾರನು ಖೋಜಾ ನಸ್ರೆದ್ದೀನನ ಬೋಧನೆಯನ್ನು ಅಕ್ಷರಶಃ ಅನುಸರಿಸಿ, "ಯಾರಿಗೆ ತಾಮ್ರದ ಗುರಾಣಿಯಿದೆಯೋ ಅವನಿಗೆ ತಾಮ್ರದ ಹಣೆ!" ಎಂದು ಗಟ್ಟಿಯಾಗಿ ಕೂಗುತ್ತಿದ್ದನು. ಇದನ್ನು ಕೇಳಿ ಸಿಪಾಯಿಗಳಿಗೆ ಇನ್ನೂ ರೇಗಿ ಹೋಯಿತು. ಆ ಅಪರಾಧಿಯನ್ನು ತಮಗೆ ತೋರಿದ ರೀತಿಯಲ್ಲೇ ಮುಗಿಸಿಬಿಡಬೇಕೆಂದು ಅವರಿಗೆ ಮನಸ್ಸಾಯಿತು. ಆದರೆ ಮಾಡುವುದೇನು? ತಮ್ಮ ಮನಬಂದಂತೆ ಮಾಡಲಾಗುವುದಿಲ್ಲವಲ್ಲಾ ಎಂದು ತುಂಬ ಸಂಕಟಪಟ್ಟರು. ಆ ಮೇಲೆ ಚೀಲವನ್ನೆತ್ತಿ ಹೊತ್ತುಕೊಂಡು ಕೊಳದ ಕಡೆಗೆ ನಡೆದರು.

ಖೋಜಾ ನಸ್ರೆದ್ದೀನ್ ತಾನು ಅಡಗಿಕೊಂಡಿದ್ದ ಬಳಿಯಿಂದ ಹೊರ ಬಂದು ಕಾಲುವೆ ನೀರಿನಲ್ಲಿ ಮುಖ ತೊಳೆದುಕೊಂಡು, ತೊಟ್ಟಿದ್ದ ಖಲತ್ತನ್ನು ಬಿಚ್ಚಿ ರಾತ್ರಿಯ ತಂಗಾಳಿಗೆ ಬರಿಯೆದೆ ಬಿಟ್ಟುಕೊಂಡು ನಡೆದನು. ಮೃತ್ಯುವಿನ ಕರಿಯುಸಿರು ತನ್ನ ಮೇಲೆ ಬೀಸಿದರೂ ಅದು ತನ್ನನ್ನು ಸುಡದೆ ಹಾಗೆಯೇ ಹರಿದು ಹೋದದ್ದರಿಂದ ಅವನಿಗೆ ಹಿಡಿಸಲಾರದಷ್ಟು ಸುಖವಾಗಿತ್ತು; ಹೃದಯ

ಹಗುರವಾಗಿ ಉಲ್ಲಾಸಪೂರ್ಣವಾಗಿತ್ತು. ಒಂದು ಸುರಕ್ಷಿತವಾದ ಸ್ಥಳವನ್ನು ಹುಡುಕಿ ಅಲ್ಲಿ ತನ್ನ ಖಲತ್ತನ್ನು ಹಾಸಿ ತಲೆಕೆಳಗೆ ಒಂದು ಕಲ್ಲಿಟ್ಟುಕೊಂಡು ಮಲಗಿಬಿಟ್ಟನು. ಬಲು ಗುತ್ತನಾದ ಮತ್ತು ಗಾಳಿಯಿಲ್ಲದ ಚೀಲದಲ್ಲಿ ಅದು ವರೆಗೂ ಅಡಗಿದ್ದು ಅವನಿಗೆ ಅತಿ ಆಯಾಸವಾಗಿತ್ತು; ವಿಶ್ರಾಂತಿ ಅವಶ್ಯ ವಾಗಿತ್ತು. ಎಲೆ ತುಂಬಿದ ಮರತುದಿಗಳಲ್ಲಿ ಗಾಳಿ ಮುರಮುರನೆ ಸದ್ದುಮಾಡು ತ್ತಿತ್ತು. ಗಗನಸಮುದ್ರದಲ್ಲಿ ಸ್ವರ್ಣಮಯ ನಕ್ಷತ್ರಪುಂಜಗಳು ಈಜಿಹೋಗು ತ್ತಿದ್ದವು. ಕಾಲುವೆಯಲ್ಲಿ ನೀರು ಜುಳುಜುಳನೆ ಹರಿಯುತ್ತಿತ್ತು ಇವೆಲ್ಲ ಖೋಜಾ ನಸ್ರೆದ್ದೀನನಿಗೆ ಹಿಂದಿಗಿಂತಲೂ ಇಂದು ಹತ್ತರಷ್ಟು ಹೆಚ್ಚು ಪ್ರಶಸ್ತ ವಾಗಿ ಕಾಣಿಸಿದವು.

"ಹೌದು, ಈ ಪ್ರಪಂಚದಲ್ಲಿ ಒಳ್ಳೆಯದು ಬೇಕಾದಷ್ಟಿದೆ. ಸ್ವರ್ಗದಲ್ಲಿ ನನಗೆ ಒಂದು ಸ್ಥಾನ ಖಂಡಿತವಾಗಿ ದೊರಕಿಯೇ ದೊರಕುವುದೆಂದು ಮಾತು ಕೊಟ್ಟರೂ ಕೂಡ, ಇಲ್ಲಿನ ಶುಭವನ್ನು ಬಿಟ್ಟು ಸಾಯಲು ಒಪ್ಪಲಾರದಷ್ಟು ಶುಭ ತುಂಬಿದೆ ಈ ಪ್ರಪಂಚದಲ್ಲಿ. ಅದೇ ಮರದ ಕೆಳಗೆ ಅದೇ ಹೌರಿಯರಿಂದ* ಸುತ್ತುವರಿಯಲ್ಪಟ್ಟು ಸದಾಕಾಲವೂ ಕೂತಿರುವುದೆಂದರೆ, ಆ ಸ್ವರ್ಗದಲ್ಲಿ ಬೇಜಾರು ಹಿಡಿದುಬಿಡುತ್ತದೆ" ಎಂದು ಅವನು ಭಾವಿಸುತ್ತಿದ್ದನು.

ಸದಾ ಹರಿಯುತ್ತಿರುವ ಮತ್ತು ಎಂದೂ ನಿಲ್ಲದಿರುವ ಜೀವನದ ಕರೆಗೆ ಕಿವಿಗೊಟ್ಟು ಆಲಿಸುತ್ತಾ ಬೆಚ್ಚನೆಯ ನೆಲದಮೇಲೆ ನಕ್ಷತ್ರಗಳ ಬೆಳಕಿನಲ್ಲಿ ಮಲಗಿದ್ದಾಗ ಅವನ ಭಾವನಾಲಹರಿ ಹೀಗೆ ಹರಿಯುತ್ತಿತ್ತು. ಅವನೆದೆಯಲ್ಲಿ ಹೃದಯ ಉತ್ಸಾಹದಿಂದ ಮಿಡಿಯುತ್ತಿತ್ತು; ಸಮಾಧಿಭೂಮಿಯಿಂದ ಗೂಬೆ ತನ್ನ ನಿತ್ಯಕ್ರಮದಂತೆ ಕೂಗೆಬ್ಬಿಸಿತು; ಪೊದೆಗಳ ಮೂಲಕ ಯಾವುದೋ ಒಂದು ಸಣ್ಣ ಪ್ರಾಣಿ—ಸುಮಾರು ಮುಳ್ಳುಹಂದಿಯಿರಬಹುದು—ಕಳ್ಳ ಹೆಜ್ಜೆ ಯಿಂದ ಮುಂದುವರಿಯುತ್ತಿತ್ತು. ಒಣಗಿ ಬಾಡುತ್ತಿರುವ ಹುಲ್ಲಿನಿಂದ ಒಂದು ಬಗೆಯ ಪರಿಮಳ ಎದ್ದು ಹರಡುತ್ತಿತ್ತು; ಹುಲ್ಲಿನಲ್ಲಿ ನಾನಾ ಬಗೆಯ ರಹಸ್ಯ ಚಲನೆಗಳು ತೋರಿಬರುತ್ತಿದ್ದವು: ವಿಚಿತ್ರ ಮರ್ಮರ, ಹರಿದಾಟ, ಚಟಪಟಗಳು ಕೇಳಬರುತ್ತಿದ್ದವು.

---

* ಹೌರಿ: ಮಹಮದೀಯ ಸ್ವರ್ಗದ ಅಪ್ಸರೆ.

ಪ್ರಪಂಚ ಜೀವದುಂಬಿ ಉಸಿರಾಡುತ್ತಿತ್ತು ; ಎಲ್ಲರಿಗೂ ಎಲ್ಲಕ್ಕೂ ಒಂದೇ ರೀತಿಯಾಗಿ ಬಾಗಿಲು ತೆರೆದಿರುವ, ಇರುವೆ, ಹಕ್ಕಿ, ಮನುಷ್ಯ ಮೊದಲಾದ ಎಲ್ಲರಿಗೂ ಒಂದೇ ಒಗೆಯ ಆದರದಿಂದ ತನ್ನ ಅನಂತ ವಿಶಾಲ ಕ್ಷೇತ್ರಗಳಲ್ಲಿ ಸ್ಥಳವಿತ್ತು ಆತಿಥ್ಯ ನೀಡುವ, ಅದಕ್ಕೆ ಪ್ರತಿಯಾಗಿ ಯಾರೂ ತಮಗೆ ದೊರೆತ ಆದರವಿಶ್ವಾಸಗಳನ್ನು ದುರುಪಯೋಗಪಡಿಸಿಕೊಳ್ಳಬಾರದೆಂಬ ಒಂದೇ ಒಂದು ನಿರೀಕ್ಷಣೆಯಿಟ್ಟುಕೊಂಡಿರುವ ಈ ಪ್ರಪಂಚವು ಜೀವಂತವಾಗಿ ಉಸಿರಾಡುತ್ತಿತ್ತು. ಔತಣ ನಡೆಯುತ್ತಿರುವಾಗ ಯಾವನಾದರೊಬ್ಬ ಅತಿಥಿಯು ಆಗಿನ ಉತ್ಸವ ಸಂಭ್ರಮಗಳಲ್ಲಿ ಮೈಮರೆತಿರುವ ಇತರ ಆತಿಥಿಗಳ ಜೇಬಿನಲ್ಲಿರುವ ವಸ್ತುಗಳನ್ನು ಕದ್ದು ದೋಚಿದ ಪಕ್ಷದಲ್ಲಿ ಅಂಥ ಅತಿಥಿಯನ್ನು ಆಹ್ವಾನ ಕೊಟ್ಟು ಕರಸಿಕೊಂಡಿರುವ ಆತಿಥೇಯನು ಅವಮರ್ಯಾದೆಮಾಡಿ ಹೊರದೂಡಿ ಓಡಿಸಿಬಿಡುತ್ತಾನೆ. ಇದು ಸಹಜವೇ. ದುಷ್ಪ್ರಸಿದ್ಧನಾದ ದುಬಾರಿ ಬಡ್ಡಿಗಾರನು ಅಂಥ ಒಬ್ಬ ಕಳ್ಳ ; ಹರ್ಷಪೂರ್ಣವಾದ ಸುಖಮಯವಾದ ಈ ಪ್ರಪಂಚದಿಂದ ಅವನನ್ನು ಹೊರದೂಡಲಾಗುತ್ತಿತ್ತು.

ಖೋಜಾ ನಸ್ರೆದ್ದೀನ್ ಆ ದುಬಾರಿ ಬಡ್ಡಿಗಾರನಿಗಾಗಿ ಸ್ವಲ್ಪವೂ ವ್ಯಥೆ ಪಡಲಿಲ್ಲ ; ಏಕೆಂದರೆ, ಅವನು ಕಣ್ಮರೆಯಾಗಿ ಹೋಗುವುದರಿಂದ ಬೇರೆಯ ಸಾವಿರಾರು ಮಂದಿಯ ಬಾಳು ಹಗುರವಾಗುತ್ತಿತ್ತು. ಖೋಜಾ ನಸ್ರೆದ್ದೀನ್ ನಿಜವಾಗಿ ವಿಷಾದಪಡುತ್ತಿದ್ದದ್ದೇಕೆಂದರೆ, ಈ ಪ್ರಪಂಚದ ಮೇಲಿರುವ ಭ್ರಷ್ಟ ಆ ದುಬಾರಿ ಬಡ್ಡಿಗಾರನೊಬ್ಬನೇ ಅಲ್ಲ ಮತ್ತು ಅವನು ಕೊನೆಯವನೂ ಅಲ್ಲ ಎಂದು. ಎಲ್ಲಾ ಅಮೀರರು, ಅಧಿಕಾರಿಗಳು, ಮುಲ್ಲರು ಮತ್ತು ದುಬಾರಿ ಬಡ್ಡಿಗಾರರು—ಇವರನ್ನೆಲ್ಲಾ ಒಂದು ಚೀಲದೊಳಗೆ ಹಾಕಿ ಬಾಯಿ ಕಟ್ಟಿ ಎಲ್ಲರನ್ನೂ ಒಟ್ಟಿಗೆ ಶೇಕ್ ತುರಖಾನನ ಕೊಳದಲ್ಲಿ ಮುಳುಗಿಸಿಬಿಡುವುದಕ್ಕೆ ಸಾಧ್ಯವಾಗುವ ಹಾಗಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ! ಹಾಗಾಗಿದ್ದಿದ್ದರೆ, ಆಗ ಅವರ ಪಾಪದುಸಿರು ತಗುಲಿ ಮರಗಳ ಮೇಲಿನ ವಸಂತಕುಸುಮಗಳು ಬಾಡಿ ಹೋಗುತ್ತಿರಲಿಲ್ಲ ; ಅವರ ಹಣದ ಝಣತ್ಕಾರವಾಗಲಿ, ಅವರ ಸುಳ್ಳು ಸುಳ್ಳು ಉಪದೇಶ ಭಾಷಣಗಳಾಗಲಿ, ಅವರ ಕತ್ತಿಯ ಖಣಿಖಣಿ ನಿನಾದವಾಗಲಿ ಹಕ್ಕಿಗಳ ಕಲಕಲವನ್ನು ಮುಳುಗಿಸಿಬಿಡುತ್ತಿರಲಿಲ್ಲ. ಈ ಪ್ರಪಂಚದ ಸೌಂದರ್ಯವನ್ನು ನೋಡಿ ಆನಂದಿಸುವುದಕ್ಕೆ ಜನಕ್ಕೆ ಸ್ವಾತಂತ್ರ್ಯವಿರುತ್ತಿತ್ತು ; ಅತ್ಯಂತ

ಮುಖ್ಯವಾದ ತಮ್ಮ ಕರ್ತವ್ಯವನ್ನು—ಎಲ್ಲಾ ಕಾಲದಲ್ಲಿಯೂ ಎಲ್ಲಾ ವಿಷಯ ಗಳಲ್ಲಿಯೂ ಸೌಖ್ಯ ಅನುಭವಿಸುತ್ತಿರಬೇಕಾದ ಕರ್ತವ್ಯವನ್ನು—ನೆರವೇರಿಸಲು ಅನುಕೂಲವಾಗುತ್ತಿತ್ತು.

ಇತ್ತ ಕಡೆ ಕಾಪುಸಿಪಾಯಿಗಳು ಕಳೆದು ಹೋದ ಕಾಲವನ್ನು ಕೂಡಿಸಿ ಕೊಳ್ಳಬೇಕೆಂದು ವೇಗವಾಗಿ ಹೆಜ್ಜೆ ಹಾಕತೊಡಗಿದರು; ಕ್ರಮಕ್ರಮವಾಗಿ ವೇಗವನ್ನು ಹೆಚ್ಚಿಸುತ್ತ ಕೊನೆಗೆ ಓಡಲು ಮೊದಲುಮಾಡಿದರು. ಚೀಲದೊಳಗೆ ಸಿಕ್ಕಿ ಅಳ್ಳಾಡಿ ಕುಲುಕಾಡುತ್ತಿದ್ದ ದುಬಾರಿ ಬಡ್ಡಿಗಾರನು, ಈ ಅಸಾಮಾನ್ಯ ಪ್ರಯಾಣದ ಕೊನೆಯ ಹಂತವನ್ನು ಬಹು ತಾಳ್ಮೆಯಿಂದ ನಿರೀಕ್ಷಿಸುತ್ತಿದ್ದನು. ಆಯುಧಗಳು ಒಂದಕ್ಕೊಂದು ಬಡಿದು ಖಣಿಖಣಿಲೆಂಬ ಸದ್ದಾಯಿತು; ಸಿಪಾಯಿಗಳ ಕಾಲ್ತುಳಿತಕ್ಕೆ ಸಿಕ್ಕಿದ ಕಲ್ಲುಗಳು ಚಟಕಚಟಗುಟ್ಟಿದವು. ಈ ಸದ್ದುಗಳನ್ನು ಕೇಳಿ, ಮಹಾ ಬಲಶಾಲಿಗಳಾದ ಜಿನ್ನುಗಳು ಇನ್ನೂ ಏಕೆ ಆಕಾಶಕ್ಕೇರಲಿಲ್ಲವೆಂದೂ, ಅದಕ್ಕೆ ಬದಲಾಗಿ, ಹೇಂಟೆಯನ್ನು ಓಡಿಸಿಕೊಂಡು ಹೋಗುತ್ತಿರುವ ತರುಣ ಹುಂಜಗಳಂತೆ ನೆಲದ ಮೇಲೆಯೇ ಓಡುತ್ತಾ ತಮ್ಮ ತಾಮ್ರದ ರೆಕ್ಕೆಗಳಿಂದ ನೆಲವನ್ನೇಕೆ ಕೆರೆಯುತ್ತಿವೆಯೆಂದೂ ಅವನು ಆಶ್ಚರ್ಯ ಪಡುತ್ತಿದ್ದನು.

ಕಟ್ಟಕಡೆಗೆ ದೂರದಲ್ಲಿ ಒಂದು ವಿಚಿತ್ರ ಆರ್ಭಟೆ, ಪರ್ವತದ ಝರಿ ಹರಿಯುವ ಸದ್ದಿನಂಥ ಮೊರೆತ, ಕೇಳಬಂತು. ಇದನ್ನು ಕೇಳಿದ ದುಬಾರಿ ಬಡ್ಡಿಗಾರನು ತನ್ನನ್ನು ಜಿನ್ನುಗಳು ಯಾವುದೋ ಒಂದು ಪರ್ವತಕ್ಕೆ—ಬಹುಶಃ ತಮ್ಮ ವಿಹಾರಸ್ಥಾನವಾದ ಖಾನ್-ಟೆಂಗ್ರಿಯೆಂಬ ಭೂತಶಿಖರಕ್ಕೆ—ತಂದಿರಬೇಕೆಂದು ಮೊದಲು ಯೋಚಿಸಿದನು. ಆದರೆ ಬಹು ಬೇಗ ಬೇರೆ ಬೇರೆ ದನಿಗಳನ್ನು ಅವನು ಗುರುತಿಸುವಂತಾಯಿತು; ಅಲ್ಲಿ ಬಹು ಮಂದಿ ಗುಂಪಾಗಿ ನೆರೆದಿರಬೇಕೆಂದು ತೋರಿತು. ಸದ್ದಿನಿಂದ ತೂಗಿ ನೋಡುವುದಾದರೆ, ಇಲ್ಲಿ ಎಷ್ಟೋ ಸಾವಿರ ಜನ ಸೇರಿರಬೇಕೆನ್ನಿಸಿತು—ಜಾತ್ರೆಯ ಮಾರುಕಟ್ಟೆ ಯಂತೆ—ಆದರೆ, ಬುಖಾರದಲ್ಲಿ ರಾತ್ರಿ ಹೊತ್ತು ವ್ಯಾಪಾರ ಮಾಡುವುದನ್ನು ಎಂದಿನಿಂದ ಪ್ರಾರಂಭಿಸಿದರು!

ಇದ್ದಕ್ಕಿದ್ದಂತೆಯೇ ತನ್ನನ್ನು ಮೇಲಕ್ಕೆತ್ತಿದಂತೆ ತೋರಿತು. "ಆಹಾ! ಕಡೆಗೂ ಜಿನ್ನುಗಳು ಆಕಾಶಕ್ಕೇರಲು ಮನಸ್ಸು ಮಾಡಿದವು" ಎಂದು ಅರ್ಥ

ಮಾಡಿಕೊಂಡನು. ಸಿಪಾಯಿಗಳು ಚೀಲವನ್ನು ಅಟ್ಟಣೆಯ ಮೇಲಕ್ಕೆ ತರಲು ಮೆಟ್ಟಿಲು ಹತ್ತಿ ಬರುತ್ತಿದ್ದರೆಂದು ಅವನಿಗೆ ಹೇಗೆ ಗೊತ್ತಾಗಬೇಕು? ತುದಿಯನ್ನು ತಲುಪಿದ ಮೇಲೆ ಸಿಪಾಯಿಗಳು ಚೀಲವನ್ನು ಎತ್ತಿಹಾಕಿದರು. ಅದು ಹಲಗೆಗಳ ಮೇಲೆ ಧೊಪ್ಪನೆ ಬಿತ್ತು. ಬಿದ್ದ ರಭಸಕ್ಕೆ ಅಟ್ಟಣೆಯೆಲ್ಲಾ ಅಳ್ಳಾಡಿತು; ಹಲಗೆಗಳು ದಡಬಡನೆ ಸದ್ದು ಮಾಡಿದವು.

ದುಬಾರಿ ಬಡ್ಡಿಗಾರನು, "ಹೇಯ್, ಜಿನ್ನುಗಳೇ! ಈ ಚೀಲವನ್ನು ನೀವು ಹೀಗೆ ಎತ್ತೆತ್ತಿ ಹಾಕುತ್ತಿದ್ದರೆ, ನನಗೆ ವಾಸಿಮಾಡುವುದಕ್ಕೆ ಬದಲಾಗಿ ನನ್ನನ್ನು ಕೈಯೋ ಕಾಲೋ ಊನ ಮಾಡಿಬಿಡುತ್ತೀರಿ, ಅಷ್ಟೇ!" ಎಂದು ಗಟ್ಟಿಯಾಗಿ ಕೂಗಿದನು.

ಒರಟುತನದ ಬಲವಾದ ಒದೆತವೇ ಅವನಿಗೆ ಉತ್ತರವಾಯಿತು.

"ಬಹು ಬೇಗನೆ ವಾಸಿಮಾಡಿಕೊಳ್ಳುವೆಯಂತೆ! ಓ ಪಾಪದ ಮಗನೇ, ನಿನಗೆ ಚೆನ್ನಾಗಿ ವಾಸಿಯಾಗುತ್ತದೆ, ಪವಿತ್ರ ತುರಖಾನನ ಕೊಳದ ತಳದಲ್ಲಿ!"

ತಟ್ಟನೆ ದುಬಾರಿ ಬಡ್ಡಿಗಾರನ ಮನಸ್ಸಿನಲ್ಲಿ ಭಯ ಸಂಚಾರವಾಯಿತು. ಈ ವ್ಯವಹಾರಕ್ಕೂ ಪವಿತ್ರ ತುರಖಾನನ ಕೊಳಕ್ಕೂ ಏನು ಸಂಬಂಧ? ಹತ್ತಿರದಲ್ಲೇ ಆರ್ಸ್‌ಲಾನ್-ಬೆಕ್‌ನ ದನಿ ಕೇಳಿ—ಅದು ಅವನ ದನಿಯೇ ಎಂದು ಪ್ರಮಾಣ ಮಾಡಿ ಹೇಳುವುದಕ್ಕೂ ಸಿದ್ಧನಾಗಿದ್ದನು—ತನ್ನ ಸ್ನೇಹಿತನೂ ಅರಮನೆಯ ಕಾವುದಳಕ್ಕೂ ಸಮಸ್ತ ಸೈನ್ಯಕ್ಕೂ ಮುಖ್ಯಾಧಿಕಾರಿಯೂ ಆದ ಆರ್ಸ್‌ಲಾನ್-ಬೆಕ್‌ನ ದನಿ ಕೇಳಿ, ಈ ಭಯ ಬೆರಗಾಗಿ ಪರಿಣಮಿಸಿತು. ಅವನ ಮನಸ್ಸು ಸುಳಿಯಲ್ಲಿ ಸಿಕ್ಕಿ ಸುತ್ತತೊಡಗಿತು. ಇದ್ದಕ್ಕಿದ್ದಂತೆ ಆರ್ಸ್‌ಲಾನ್-ಬೆಕ್ ಎಲ್ಲಿಂದ ಬಂದ? ದಾರಿಯಲ್ಲಿ ಅಡ್ಡಾಡುತ್ತಾ ಕಾಲ ಕಳೆದಿರೆಂದು ಜಿನ್ನುಗಳನ್ನು ಅವನೇಕೆ ಹಾಗೆ ಶಪಿಸುತ್ತಿದ್ದ? ಅವನಿಗೆ ಉತ್ತರ ಕೊಡುವಾಗ ಆ ಜಿನ್ನುಗಳು ಅದೇಕೆ ಭಯದಿಂದ ಗಡಗಡನೆ ನಡುಗುತ್ತ ಗುಲಾಮರಂತೆ ವರ್ತಿಸುತ್ತಿದ್ದವು? ಆರ್ಸ್‌ಲಾನ್-ಬೆಕ್ ಜಿನ್ನುಗಳಿಗೂ ಯಜಮಾನನಾಗಿರುವುದಂತೂ ಅಸಾಧ್ಯ ಸಂಗತಿ. ತಾನೇನು ಮಾಡಬೇಕು? ತೆಪ್ಪಗೆ ಮೌನವಾಗಿರಬೇಕೋ ಅಥವಾ ಗಟ್ಟಿಯಾಗಿ ಕೂಗಿ ಕರೆದು ಮಾತಾಡಿಸಬೇಕೋ? ಈ ವಿಷಯದಲ್ಲಿ ಅವನಿಗೆ ಯಾವ ಸೂಚನೆಯನ್ನೂ ಕೊಟ್ಟಿರಲಿಲ್ಲವಾದ್ದರಿಂದ, ತನಗೆ ತೋರಿದಂತೆ ಮಾಡುವುದೇ ಸರಿಯೆಂದು ತೆಪ್ಪಗಿದ್ದುಬಿಟ್ಟನು.

ಇಷ್ಟರಲ್ಲಿ ಗುಂಪಿನ ಗದ್ದಲ ಹೆಚ್ಚು ಹೆಚ್ಚಾಯಿತು. ಗುಂಪಿನ ಅಸ್ಪಷ್ಟ ಮೊರೆತದ ಸದ್ದನ್ನು ಮೀರಿ ಒಂದು ಮಾತು ಗಳಿಗೆ ಗಳಿಗೆಗೂ ಹೆಚ್ಚುಹೆಚ್ಚು ಗಟ್ಟಿಯಾಗಿ ಕೇಳಿಸಲು ಮೊದಲಾಯಿತು; ಮತ್ತು ಆ ಹೆಸರು ಬಹು ಬೇಗ ಬೇಗ ಮತ್ತೆ ಮತ್ತೆ ಕೇಳತೊಡಗಿತು. ಭೂಮಿ, ಆಕಾಶ, ಗಾಳಿ—ಎಲ್ಲಾ ಕಡೆಯೂ ಅದೊಂದೇ ಹೆಸರು ವ್ಯಾಪಿಸಿದ್ದಂತೆ ತೋರಿತು. ಅವನ ಕಿವಿಯಲ್ಲಿ ಆ ಸದ್ದು ಮೊರೆದು, ಅಬ್ಬರಿಸಿ, ಸಿಡಿಲಿನಂತೆ ಗರ್ಜಿಸಿತು ; ದೂರದಲ್ಲಿ ಹೊಳಲುಗೊಟ್ಟು ಮಾಯವಾಗುತ್ತಿತ್ತು. ದುಬಾರಿ ಬಡ್ಡಿಗಾರನು ಉಸಿರು ಬಿಗಿಹಿಡಿದುಕೊಂಡು ಆಲಿಸಿದನು. ಕಡೆಗೆ ಅದೇನೆಂದು ಚೆನ್ನಾಗಿ ಗೊತ್ತಾಯಿತು.

" ಖೋಜಾ ನಸ್ರೆದ್ದೀನ್ ! " ಎಂದು ಸಹಸ್ರ ಕಂಠಗಳ ಜನಸಮೂಹ ಕೂಗು ಹಾಕುತ್ತಿತ್ತು : " ಖೋಜಾ ನಸ್ರೆದ್ದೀನ್ ! ಖೋಜಾ ನಸ್ರೆದ್ದೀನ್ ! ಖೋಜಾ ನಸ್ರೆದ್ದೀನ್ ! "

ತಟಕ್ಕನೆ ನಿಶ್ಶಬ್ದವಾಯಿತು. ಆ ಶ್ಮಶಾನಮೌನದಲ್ಲಿ ದುಬಾರಿ ಬಡ್ಡಿಗಾರನಿಗೆ ಉರಿಯುವ ಪಂಜುಗಳ ಬುಸ್ ಎಂಬ ಶಬ್ದ, ಗಾಳಿಯ ಸುಳಿದಾಟದ ಶಬ್ದ, ನೀರು ಅಪ್ಪಳಿಸುವ ಸದ್ದು—ಎಲ್ಲ ಕೇಳಿಸಿತು. ಅವನ ಡೊಂಕು ಡೊಂಕಾದ ಬೆನ್ನುಹುರಿಯಲ್ಲಿ ಉದ್ವೇಗದ ಕಂಪನಗಳು ತಲೆದೋರಿದವು; ಘೋರಭೀತಿ ಅವನನ್ನಾಕ್ರಮಿಸಿತು , ಅವನ ಮೈ ತಣ್ಣಗೆ ಕೊರೆಯತೊಡಗಿತು.

ಆಗ ಮತ್ತೊಂದು ದನಿ ಕೇಳಿಸಿತು. ಅದು ಪ್ರಧಾನ ವಜೀರ ಬಖ್ತಿಯಾರನಿಗೆ ಸೇರಿದ್ದೆಂದು ದುಬಾರಿ ಬಡ್ಡಿಗಾರನು ಪ್ರಮಾಣ ಮಾಡಿಬಿಡಬಹುದಾಗಿತ್ತು.

ಬಖ್ತಿಯಾರ್ ಹೇಳುತ್ತಿದ್ದನು :

" ದಯಾಮಯನೂ ಪರಮಕಾರುಣಿಕನೂ ಆದ ಅಲ್ಲಾನ ಹೆಸರಿನಲ್ಲಿ, ಮಹಾ ಘನಹೊಂದಿದ ಸೂರ್ಯಸದೃಶರಾದ ಬುಖಾರ ಅಮೀರರ ಆಜ್ಞೆಯ ಪ್ರಕಾರ ಧರ್ಮಕ್ಕೆ ಕಳಂಕ ಹಚ್ಚುವ ಮಹಾ ನೀಚನೂ ಶಾಂತಿಭಂಗಕಾರಿಯೂ ಜಗಳಗಳನ್ನು ಬಿತ್ತುವವನೂ ಆದ ಖೋಜಾ ನಸ್ರೆದ್ದೀನನನ್ನು ಚೀಲದೊಳಗೆ ಕೂಡಿ ನೀರಿನಲ್ಲಿ ಮುಳುಗಿಸುವುದರ ಮೂಲಕ ಈಗ ಸಾಯಿಸಲಾಗುತ್ತದೆ."

ಬಖ್ತಿಯಾರ್ ಹೀಗೆ ಹೇಳಿ ಮುಗಿಸಿದ ಕೂಡಲೆ ಸಿಪಾಯಿಗಳು ಕೈ ಹಾಕಿ ಚೀಲವನ್ನು ಹಿಡಿದು ಮೇಲಕ್ಕೆತ್ತಿದರು. ಈಗ, ಕಟ್ಟಕಡೆಯ ಸಮಯ

ದಲ್ಲಿ ದುಬಾರಿ ಬಡ್ಡಿಗಾರನಿಗೆ ಚೆನ್ನಾಗಿ ಅರಿವಾಯಿತು, ತಾನೆಂಥ ಅಪಾಯಕ್ಕೆ ಸಿಕ್ಕಿಕೊಂಡಿರುವೆನೆಂದು !

" ತಡೆಯಿರಿ ! ತಡೆಯಿರಿ ! " ಎಂದು ಅವನು ಕಿರಿಚಿದನು. " ನನ್ನನ್ನೇನು ಮಾಡುತ್ತಿದ್ದೀರಿ ? ನಿಲ್ಲಿ ! ತಡೆಯಿರಿ ! ನಾನು ಖೋಜಾ ನಸ್ರೆದ್ದೀನ್ ಅಲ್ಲ ; ನಾನು ಜಾಫರ್, ದುಬಾರಿ ಬಡ್ಡಿಗಾರ ! ನನ್ನನ್ನು ಬಿಟ್ಟುಬಿಡಿ ! ನಾನು ದುಬಾರಿ ಬಡ್ಡಿಗಾರ, ಜಾಫರ್ ! ಖೋಜಾ ನಸ್ರೆದ್ದೀನ್ ಅಲ್ಲ ನಾನು ! ಎಲ್ಲಿಗೆ ತೆಗೆದುಕೊಂಡು ಹೋಗುತ್ತಿದ್ದೀರಿ ನನ್ನನ್ನು ? ನಾನು ಖಂಡಿತವಾಗಿ ಹೇಳು ತ್ತಿದ್ದೇನಲ್ಲ, ನಾನು ಜಾಫರ್ ಎಂದು ! ನಾನು ದುಬಾರಿಬಡ್ಡಿಗಾರ ಜಾಫರ್ !"

ಅಮೀರನೂ ಅವನ ಪರಿವಾರದವರೂ ಈ ಗೋಳಾಟವನ್ನು ಮೌನವಾಗಿ ಆಲಿಸುತ್ತಿದ್ದರು. ಅಮೀರನಿಗೆ ಅತಿ ಸಮೀಪದಲ್ಲಿ ಪೀಠದ ಮೇಲೆ ಕುಳಿತಿದ್ದ ಬಾಗ್ದಾದಿನ ಜ್ಞಾನಿ ಮೌಲಾನಾ ಹುಸೇನನು ವಿಷಾದದಿಂದ ತಲೆ ಅಳ್ಳಾಡಿ ಸುತ್ತಾ ಹೀಗೆಂದನು :

" ಈ ಅಪರಾಧಿಯ ನಾಚಿಕೆಗೇಡಿತನ ಅಳತೆ ಮೀರಿದೆ. ಒಂದು ಸಲ ಇವನು ತಾನು ಬಾಗ್ದಾದಿನ ಜ್ಞಾನಿ ಮೌಲಾನಾ ಹುಸೇನ್ ಎಂದು ಹೇಳಿ ಕೊಂಡಿದ್ದ. ಈಗ ತಾನು ದುಬಾರಿ ಬಡ್ಡಿಗಾರ ಜಾಫರ್ ಎಂದುಕೊಂಡು ನಾವು ಆ ಮಾತನ್ನು ನಂಬುವಂತೆ ಮಾಡಲು ಪ್ರಯತ್ನಿಸುತ್ತಿದ್ದಾನೆ ! "

" ಇಲ್ಲಿರುವವರೆಲ್ಲಾ ತನ್ನ ಮಾತನ್ನು ನಂಬಿಬಿಡುವಂಥ ಬೆಪ್ಪುತಕಡಿ ಗಳೆಂದು ತಿಳಿದುಕೊಂಡಿದ್ದಾನೋ ಏನೊ ! ಕೇಳಿ ; ಕೇಳಿ ! ಎಷ್ಟು ಚೆನ್ನಾಗಿ ಅವನು ತನ್ನ ದನಿಯನ್ನು ಬದಲಾಯಿಸಿಕೊಂಡುಬಿಟ್ಟಿದ್ದಾನೆ ! " ಎಂದು ಆರ್ಸ್‌ಲಾನ್-ಬೆಕ್ ನುಡಿದನು.

" ನನ್ನನ್ನು ಬಿಟ್ಟು ಕಳಿಸಿಬಿಡಿ ! ನಾನು ಖೋಜಾ ನಸ್ರೆದ್ದೀನ್ ಅಲ್ಲ ! ನಾನು ಜಾಫರ್ ! " ಎಂದು ದುಬಾರಿ ಬಡ್ಡಿಗಾರನು ಗೋಳಿಟ್ಟು ಕೂಗುತ್ತಲೇ ಇದ್ದನು. ಅಟ್ಟಣೆಯ ಅಂಚಿನಲ್ಲಿ ನಿಂತಿದ್ದ ಇಬ್ಬರು ಸಿಪಾಯಿಗಳು ಚೀಲವ ನ್ನೆತ್ತಿಕೊಂಡು, ಲಯಬದ್ಧವಾದ ಗತಿಯಲ್ಲಿ ಹಿಂದಕ್ಕೂ ಮುಂದಕ್ಕೂ ತೂಗ ತೊಡಗಿದರು. ಚೀಲದೊಳಗಿನಿಂದ ದನಿ ಕೇಳುತ್ತಲೇ ಇತ್ತು : " ನಾನು ಖೋಜಾ ನಸ್ರೆದ್ದೀನ್ ಅಲ್ಲ ! ನಾನು ಅಲ್ಲ...."

ಆರ್ಸ್‌ಲಾನ್-ಬೆಕ್ ಸನ್ನೆಮಾಡಿದನು. ತಕ್ಷಣವೇ ಚೀಲವನ್ನು ಬೀಸಿ

ಎಸೆದುಬಿಟ್ಟರು. ಅದು ಗಾಳಿಯಲ್ಲಿ ವಕ್ರವಕ್ರವಾಗಿ ಉರುಳಿ ನಡೆಯಿತು. ಉತ್ತರ ಕ್ಷಣದಲ್ಲೇ ಅದು ನೀರಿನಲ್ಲಿ ಬಿದ್ದು ದೊಡ್ಡ ಸದ್ದಾಯಿತು; ನೀರು ಚಿಲ್ಲೆಂದು ಸುತ್ತಲೂ ಚಿಮ್ಮಿತು; ಮೇಲಕ್ಕೆ ಚಿಮ್ಮಿದ ತುಂತುರು ಹನಿಗಳು ಉರಿಯುವ ಪಂಜುಗಳ ಬೆಳಕಿನಲ್ಲಿ ಕೆಂಪಗೆ ಹೊಳೆದುವು; ಆ ಮೇಲೆ ಇಬ್ಭಾಗವಾದ ಕೊಳದ ನೀರು ದುಬಾರಿ ಬಡ್ಡಿಗಾರ ಜಾಫರನ ಪಾಪಮಯ ದೇಹ, ಪಾಪಮಯ ಮನಸ್ಸು ಎರಡನ್ನೂ ಮುಚ್ಚಿ ಮರೆಮಾಡುವಂತೆ ಮತ್ತೆ ಒಂದುಗೂಡಿ ಮೊದಲಿನಂತೆಯೇ ಆಯಿತು.

ಗುಂಪಿನಿಂದ ದೊಡ್ಡದೊಂದು ನಿಟ್ಟುಸುರು ಹೊರಟಿತು; ಕತ್ತಲೆಯ ರಾತ್ರಿಯಲ್ಲಿ ಆ ಸುಯ್ಲು ಅಳಿಸಿಹೋಗದೆ ತಡೆದು ನಿಂತಂತೆ ತೋರಿತು. ಕೆಲವು ಕ್ಷಣಗಳ ವರೆಗೆ ಭಯಭಕ್ತಿ ಹುಟ್ಟಿಸುವ ಗಂಭೀರ ಮೌನ ಎಲ್ಲೆಡೆಯಲ್ಲೂ ನೆಲಸಿತ್ತು. ಅಷ್ಟರಲ್ಲಿ ಇದ್ದಕ್ಕಿದ್ದಂತೆ ಮರ್ಮಭೇದಕವಾದ ಒಂದು ಚೀತ್ಕಾರ ಆ ಮೌನವನ್ನು ಭಂಗಮಾಡಿಬಿಟ್ಟಿತು. ಚೀತ್ಕಾರ ಮಾಡಿ ಕಿರಿಚಿದ್ದು ಗುಲ್ಜಾನ್; ತಂದೆಯ ತೋಳುಗಳಲ್ಲಿ ತೊಡಕಿ ಒದ್ದಾಡುತ್ತಿದ್ದಳು.

ಟೀ ಅಂಗಡಿಯ ಯಜಮಾನ ಅಲಿ ಮುಖ ಮುಚ್ಚಿಕೊಂಡು ಅತ್ತನು. ಕಮ್ಮಾರ ಯೂಸುಫ್ ಚಳಿಜ್ವರ ಬಂದವನಂತೆ ಗಡಗಡನೆ ನಡುಗುತ್ತಿದ್ದನು.

## ೧೧

ಮರಣದಂಡನೆಯನ್ನು ಆಚರಣೆಗೆ ಕೊಟ್ಟ ಮೇಲೆ ಅಮೀರನು ಪರಿವಾರದೊಡನೆ ಅರಮನೆಗೆ ಹಿಂದಿರುಗಿದನು.

ಅಪರಾಧಿ ಸಾಯುವುದಕ್ಕೆ ಮೊದಲೇ ಜನ ಅವನನ್ನು ಎತ್ತಿ ಬದುಕಿಸಿಬಿಡಬಹುದೆಂದು ಹೆದರಿ, ಅರ್ಸ್‌ಲಾನ್-ಬೆಕ್ ಕೊಳದ ಸುತ್ತಲೂ ಕಾವು ಸಿಪಾಯಿಗಳನ್ನು ನಿಲ್ಲಿಸಿದನು; ಯಾರನ್ನೂ ಕೊಳದ ಹತ್ತಿರಕ್ಕೆ ಬರಗೊಳಿಸಬಾರದೆಂದು ಕಟ್ಟಪ್ಪಣೆ ಮಾಡಿದನು. ಮುಂದು ಮುಂದಕ್ಕೆ ನುಗ್ಗಿ ಬರುವ ಜನ ಸಮೂಹ ಕಾವುಸಿಪಾಯಿಗಳೆದುರಿಗೆ ತತ್ತರಿಸಿತು, ಸೋತು ಹಿಂಜರಿಯಿತು; ಆ ಮೇಲೆ ಒಟ್ಟಿಗೆ ಗುಂಪಾಗಿ ನಿಶ್ಶಬ್ದವಾಗಿ ನಿಂತಿತು. ಅರ್ಸ್‌ಲಾನ್-ಬೆಕ್ ಜನವನ್ನು ಚೆದರಿಸುವುದಕ್ಕೆ ಬಹಳ ಪ್ರಯತ್ನ ಮಾಡಿದನು; ಆದರೆ ಸಾಧ್ಯವಾಗಲಿಲ್ಲ. ಅವರು ಆ ಕ್ಷಣದಲ್ಲೇನೊ ಸ್ವಲ್ಪ ದೂರ ಅತ್ತಿತ್ತ

ಬೇರೆ ಕಡೆ ಹೋಗುತ್ತಿದ್ದರು ; ಅಥವಾ ಕತ್ತಲೆಯಲ್ಲಿ ಅಡಗಿಕೊಳ್ಳುತ್ತಿದ್ದರು ; ಆದರೆ ಸ್ವಲ್ಪ ಹೊತ್ತಿನೊಳಗಾಗಿ ಮತ್ತೆ ಅದೇ ಸ್ಥಳಕ್ಕೆ ಬಂದು ನೆರೆಯುತ್ತಿದ್ದರು.

ಅರಮನೆಯಲ್ಲಿ ಆನಂದೋತ್ಸವ ಪ್ರಾರಂಭವಾಯಿತು. ಅಮೀರನು ತನ್ನ ಶತ್ರುವಿನ ಮೇಲೆ ಸಾಧಿಸಿದ ಮಹಾ ವಿಜಯಕ್ಕಾಗಿ ಉತ್ಸವಗಳನ್ನೇರ್ಪಡಿಸಿದನು. ಚಿನ್ನ ಬೆಳ್ಳಿಗಳು ಥಳಥಳನೆ ಹೊಳೆಯುತ್ತಿದ್ದವು ; ದೊಡ್ಡ ದೊಡ್ಡ ತಪ್ಪಲೆಗಳೂ ಕೆಟಲುಗಳೂ ಕುದಿಯುತ್ತಿದ್ದವು, ಅಗ್ಗಿಷ್ಟಿಕೆಗಳು ಹೊಗೆ ಸೂಸುತ್ತಿದ್ದವು, ತಂಬೂರಿಗಳು ಮಿಡಿಯುತ್ತಿದ್ದವು, ತುತ್ತೂರಿಗಳು ಊದುತ್ತಿದ್ದವು, ಭೇರಿಗಳು ಗಾಳಿಯನ್ನು ಸೀಳಿ ಭೋರ್ಗರೆಯುತ್ತಿದ್ದವು. ಅರಮನೆಯ ಆವರಣದಲ್ಲಿ ಅಸಂಖ್ಯಾತ ಶಿಬಿರಾಗ್ನಿಗಳು ಧಗಧಗಿಸುತ್ತಿದ್ದವು. ಆ ಶಿಬಿರಾಗ್ನಿಗಳ ಕೆಂಬೆಳಕು ಹರಡಿ ಅರಮನೆಯೆಲ್ಲಾ ಉರಿಯಲ್ಲಿ ಮುಳುಗಿದೆಯೇನೋ ಎಂದು ಭ್ರಾಂತಿಯುಂಟುಮಾಡುತ್ತಿತ್ತು.

ಆದರೆ ಅರಮನೆಯ ಸುತ್ತಲೂ ವ್ಯಾಪಿಸಿದ್ದ ಪಟ್ಟಣದಲ್ಲಿ ಮಾತ್ರ ಎಲ್ಲೆಲ್ಲಿಯೂ ನಿಶ್ಚಲತೆ, ಗಾಢ ಮೌನ, ಗಾಢಾಂಧಕಾರ, ದುಃಖದ ಸಾಮ್ರಾಜ್ಯ.

ಬಹು ಉದಾರಹಸ್ತದಿಂದ ಅಮೀರನು ಅಂದು ಬಹುಮಾನಗಳನ್ನು ನೀಡಿದನು. ಆ ದಿನ ಎಷ್ಟೋ ಜನ ಅವನ ಅನುಗ್ರಹಕ್ಕೆ ಪಾತ್ರರಾದರು. ನಿರಂತರ ಸ್ತುತಿಪಾಠಗಳನ್ನು ಹಾಡಿ ಹಾಡಿ ಕವಿಗಳಿಗೆ ಗಂಟಲು ಗಾರಾಯಿತು. ಅಮೀರನು ಎರಚಿದ ಚಿನ್ನ ಬೆಳ್ಳಿ ನಾಣ್ಯಗಳನ್ನು ಆಯ್ದುಕೊಳ್ಳುವುದಕ್ಕೆ ಬಗ್ಗಿ ಬಗ್ಗಿ ಅವರ ಬೆನ್ನುಗಳು ನೋಯುತ್ತಿದ್ದವು ; ನೋಯುತ್ತಿದ್ದರೂ ಆ ನೋವು ಅವರಿಗೆ ಹಿತವಾಗಿಯೇ ಇತ್ತು.

" ಲೇಖಕನನ್ನು ಕರೆ ! " ಎಂದು ಅಮೀರನ ಅಪ್ಪಣೆಯಾಯಿತು.

ಲೇಖಕ ಓಡುತ್ತ ಬಂದು ಜೊಂಡು ಲೇಖಣಿಯಿಂದ ಕರಕರನೆ ಬರೆಯತೊಡಗಿದನು :

" ಮಹಾ ಮಹಿಮನಾದ ಮಹಾ ಘನವಂತನಾದ ಸೂರ್ಯನನ್ನು ಮುಚ್ಚಿ ಮರೆ ಮಾಡುವ ತೇಜಶ್ಯಾಲಿಗಳಾದ ಬುಖಾರದ ನ್ಯಾಯನಿರ್ಮಾಪಕನೂ ಶಾಸಕನೂ ಆದ ಬುಖಾರದ ಅಮೀರರಿಂದ, ಮಹಾಮಹಿಮರಾದ, ಮಹಾ ಘನವಂತರಾದ, ಸೂರ್ಯನನ್ನು ಮುಚ್ಚಿ ಮರೆಮಾಡುವ ತೇಜಶ್ಯಾಲಿಗಳಾದ ಖೀವದ ನ್ಯಾಯನಿರ್ಮಾಪಕರೂ ಶಾಸಕರೂ ಆದ ಖೀವದ ಖಾನರಿಗೆ,

ವಂದನೆಯ ಗುಲಾಬಿಗಳು ಮತ್ತು ಶುಭಾಶಯದ ಕಮಲಗಳು. ನಮ್ಮ ಪ್ರೇಮ ಪಾತ್ರರೂ ವೃತ್ತಿಸೋದರರೂ ಆದ ನಿಮಗೆ, ಆನಂದಾಗ್ನಿಯನ್ನು ಪುಟಗೊಳಿಸಿ ನಿಮ್ಮ ಹೃದಯವನ್ನು ಬೆಚ್ಚಗೆ ಮಾಡುವಂಥ ಮತ್ತು ನಿಮ್ಮ ಚಿಂತಾತಂಕಗಳನ್ನು ಕಡಮೆ ಮಾಡಿ ಹಾಯೆನಿಸುವಂತೆ ಮಾಡುವ ಒಂದು ಸುದ್ದಿಯನ್ನು ತಿಳಿಸುತ್ತಿದ್ದೇವೆ.

"ಅದು ಏನೆಂದರೆ—ಇವತ್ತು, ಎಂದರೆ, ಸಫಾರ್ ತಿಂಗಳಿನ ಹದಿನೇಳನೆಯ ದಿನ, ಬುಖಾರದ ಮಹಾಮಹಿಮ ಅಮೀರರಾದ ನಾವು, ಖೋಜಾ ನಸ್ರೆದ್ದೀನನನ್ನು, ತನ್ನ ಧರ್ಮವಿರುದ್ಧವಾದ ಮತ್ತು ದೈವದ್ರೋಹಕರವಾದ ಕಾರ್ಯಗಳಿಂದ ಲೋಕದಲ್ಲೆಲ್ಲಾ ಪ್ರಸಿದ್ಧನಾಗಿರುವ ಆ ಪಾಪಿ ಅಪರಾಧಿಯನ್ನು—ಅಲ್ಲಾನ ಶಾಪ ಅವನ ಮೇಲೆ ಶಾಶ್ವತವಾಗಿರಲಿ—ಆ ನಾಸ್ತಿಕ ಖೋಜಾ ನಸ್ರೆದ್ದೀನನನ್ನು, ಚೀಲವೊಂದರಲ್ಲಿ ಕೂಡಿಹಾಕಿ ನೀರಿನಲ್ಲಿ ಮುಳುಗಿಸುವ ಮೂಲಕ ಬಹಿರಂಗವಾಗಿ ಮರಣದಂಡನೆಗೆ ಗುರಿಪಡಿಸಿ ಸಾಯಿಸಿದ್ದೇವೆ; ಈ ರೀತಿ ನೀರಿನಲ್ಲಿ ಮುಳುಗಿಸುವ ಕಾರ್ಯ ನಮ್ಮ ಸಮ್ಮುಖದಲ್ಲೇ, ನಮ್ಮ ಕಣ್ಣೆದುರಿಗೇ ನಡೆದಿದೆ; ಈ ಕಾರ್ಯಕ್ಕೆ ನಾವೇ ಪ್ರತ್ಯಕ್ಷ ಸಾಕ್ಷಿಯಾಗಿದ್ದೇವೆ; ಆದ್ದರಿಂದಲೇ ನಾವು ಈ ಪ್ರಕಾರ ನಮ್ಮ ರಾಜವಾಕ್ಯಗಳಿಂದ ನಿಮಗೆ ಆಶ್ವಾಸನೆ ಕೊಡುತ್ತೇವೆ: ಮೇಲೆ ಹೇಳಿದ ಪೋಕರಿ, ಶಾಂತಿಭಂಗಕಾರಿಯೂ ಧರ್ಮಕಳಂಕಕಾರಿಯೂ ಮತ್ತು ಕಲಹಪ್ರಸಾರಕನೂ ಆದ ಆ ಭಂಡನು ಈಗ ಈ ಜೀವಲೋಕದಲ್ಲಿ ಇಲ್ಲ; ಅವನು ತನ್ನ ನಿರ್ದೈವ ನಾಸ್ತಿಕ ಕೃತ್ಯಗಳಿಂದ ಇನ್ನೆಂದೂ ನಿಮಗೆ, ನಮ್ಮ ಪ್ರೀತಿಪಾತ್ರ ಸೋದರರಿಗೆ ಯಾವ ಬಗೆಯ ತೊಂದರೆಯನ್ನೂ ಕೊಡಲಾರ; ಖಂಡಿತ ಕೊಡಲಾರ."

ಇದೇ ರೀತಿಯ ಪತ್ರಗಳನ್ನು ಬಾಗ್ದಾದಿನ ಕಲೀಫನಿಗೆ, ತುರ್ಕಿಯ ಸುಲ್ತಾನನಿಗೆ, ಪರ್ಷಿಯಾದ ಷಾಗೆ, ಖೋಕಂಡಿನ ಖಾನನಿಗೆ, ಆಫ್ಘಾನಿಸ್ಥಾನದ ಅಮೀರನಿಗೆ—ಇತರ ನೆರೆಹೊರೆಯ ಮತ್ತು ದೂರದ ಅನೇಕ ದೇಶಾಧಿಪತಿಗಳಿಗೆ ಹೇಳಿ ಬರೆಸಲಾಯಿತು. ಬಖ್ತಿಯಾರ್ ಆ ಪತ್ರಗಳನ್ನು ಸುರುಳಿ ಸುತ್ತಿ ರಾಜಮುದ್ರೆ ಒತ್ತಿ ಹರಿಕಾರರ ಕೈಗೆ ಕೊಟ್ಟು, ತಕ್ಷಣ ಆಯಾ ಸ್ಥಳಗಳಿಗೆ ಪ್ರಯಾಣ ಹೊರಡಬೇಕೆಂದು ಅಪ್ಪಣೆ ಮಾಡಿದನು. ರಾತ್ರೆ ಬುಖಾರ ಪಟ್ಟಣದ ಹನ್ನೊಂದು ಹೆಬ್ಬಾಗಿಲುಗಳೂ ತೆರೆದವು; ಕದಗಳ ಕೀಲು ಕಿರುಗುಟ್ಟುತ್ತಾ

ತೆರೆದ ಬಾಗಿಲಿನಲ್ಲಿ ಹಾದು ಹರಿಕಾರರು ರಾಜಮಾರ್ಗಗಳಲ್ಲಿ ದಿಕ್ಕುದಿಕ್ಕಿಗೂ ರಭಸದಿಂದ ಪ್ರಯಾಣ ಮಾಡಿದರು; ತಮ್ಮ ಕುದುರೆಗಳ ಗೊರಸುಗಳ ಘಟ್ಟಣೆ ಯಿಂದ ಕಿಡಿಯೆಬ್ಬಿಸುತ್ತಲೂ, ಠಂಠಣಿಸುವ ಕಲ್ಲುಗಳನ್ನು ಸುತ್ತಮುತ್ತ ಎರಚಾಡುತ್ತಲೂ ಖೀವ, ಟೆಹರಾನ್, ಸ್ತಾಂಬೂಲ್, ಬಾಗ್ದಾದ್, ಕಾಬೂಲ್ ಮತ್ತು ಇತರ ಅನೇಕ ಕಡೆಗಳಿಗೆ ಹರಿಕಾರರು ವೇಗವಾಗಿ ಹರಿದೋಡಿದರು.

....ಮರಣದಂಡನೆಯನ್ನು ಆಚರಣೆಗೆ ಕೊಟ್ಟು ನಾಲ್ಕು ಗಂಟೆ ಕಳೆದ ಮೇಲೆ, ನಿಶ್ಶಬ್ದದ ನಿಶಿಯಲ್ಲಿ ಆರ್ಸ್‌ಲಾನ್-ಬೆಕ್ ಕೊಳದ ಸುತ್ತಮುತ್ತಿನಿಂದ ಕಾಪುಸಿಪಾಯಿಗಳನ್ನು ಹಿಂದಕ್ಕೆ ಕರಸಿಕೊಂಡನು.

"ಅವನು ಯಾವನೇ ಆಗಿದ್ದರೂ, ಆ ಪ್ರತ್ಯಕ್ಷ ಸೈತಾನನೇ ಆಗಿದ್ದರೂ ಕೂಡ, ನಾಲ್ಕು ಗಂಟೆಯ ಹೊತ್ತು ನೀರಿನಲ್ಲಿ ಮುಳುಗಿದ್ದ ಮೇಲೂ ಜೀವ ಸಹಿತ ಇರುವುದು ಅಸಾಧ್ಯ" ಎಂದನು ಆರ್ಸ್‌ಲಾನ್-ಬೆಕ್. ಹೀಗೆಂದು ಸಿಪಾಯಿಗಳನ್ನು ಹಿಂದೆಗೆದುಕೊಂಡನು. "ಅವನನ್ನು ಹುಡುಕಿ ಹೊರ ತೆಗೆ ಯುವ ಅವಶ್ಯವಿಲ್ಲ. ಯಾರಿಗಾದರೂ ಬೇಕಾಗಿರುವ ಪಕ್ಷದಲ್ಲಿ, ಅವನ ಆ ನಾರುವ ಹೆಣವನ್ನು ತೆಗೆದುಕೊಳ್ಳಲಿ" ಎಂದನು.

ಕೊನೆಯ ಸಿಪಾಯಿ ಮರೆಯಾಗಿ ಹೋದನೋ ಇಲ್ಲವೋ, ಜನರ ಗುಂಪು ಗಟ್ಟಿಯಾಗಿ ಕೂಗುತ್ತ ಕೊಳದ ದಡಕ್ಕೆ ನುಗ್ಗಿ ಬಂತು. ಮೊದಲೇ ಸಿದ್ಧ ಮಾಡಿಟ್ಟು ಹತ್ತಿರದಲ್ಲೆ ಪೊದೆಗಳ ಮರೆಯಲ್ಲಿ ಮುಚ್ಚಿಟ್ಟಿದ್ದ ಪಂಜುಗಳನ್ನು ತಂದು ಹೊತ್ತಿಸಿದರು. ಖೋಜಾ ನಸ್ರೆದ್ದೀನನಿಗೆ ಸಂಭವಿಸಿದ ಗತಿಯನ್ನು ನೆನೆದು ಹೆಂಗಸರು ಎದೆ ಕರಗುವಂತೆ ಗೋಳಾಡುತ್ತಿದ್ದರು.

"ಮುಸ್ಲಿಮರಿಗೆ ತಕ್ಕಂತೆ, ಯೋಗ್ಯವಾದ ರೀತಿಯಲ್ಲಿ ಅವನನ್ನು ಸಮಾಧಿಮಾಡಬೇಕು" ಎಂದನು ಮುದುಕ ನಿಯಾಸ್. ಗುಲ್ಜಾನ್ ಅಲು ಗಾಡದೆ ನಿಶ್ಶಬ್ದವಾಗಿ ನಿಂತಿದ್ದಳು; ತಂದೆಯ ಹೆಗಲ ಮೇಲೆ ಕೈಯೂರಿ ಆಶ್ರಯಹೊಂದಿ ನಿಂತಿದ್ದಳು.

ಟೀ ಅಂಗಡಿಯ ಮಾಲೀಕ ಆಲಿಯೂ ಕಮ್ಮಾರ ಯೂಸೂಫನೂ ದೋಣಿಯ ಗಳೆಗಳನ್ನು ಕೈಯಲ್ಲಿ ಹಿಡಿದು ನೀರಿಗೆ ದುಮುಕಿದರು. ಬಹಳ ಹೊತ್ತಿನ ವರೆಗೂ ಅವರು ಅಲ್ಲಲ್ಲಿ ತಿವಿದು ನೋಡುತ್ತಾ ಹುಡುಕಾಡಿದರು. ಕಡೆಗೆ ಚೀಲ ಸಿಕ್ಕಿತು. ಅದನ್ನು ದಡಕ್ಕೆ ಎಳೆದು ತಂದರು. ಅದು ನೀರ

ಮೇಲ್ಭಾಗದಲ್ಲಿ ಕಾಣಿಸಿಕೊಂಡಾಗ—ಕಪ್ಪಗೆ, ಪಂಜಿನ ಬೆಳಕಿನಲ್ಲಿ ಹೊಳೆಯುತ್ತ, ನೀರೊಳಗಿನ ಜೊಂಡು ಕಸಗಳಿಂದ ಸುತ್ತಿಕೊಂಡು ಮೇಲಕ್ಕೆ ಕಾಣಿಸಿಕೊಂಡಾಗ—ಹೆಂಗಸರ ಅಳು ಇನ್ನೂ ಗಟ್ಟಿಯಾಯಿತು. ಈ ಗೋಳು, ಅದೇ ಸಮಯದಲ್ಲಿ ಅರಮನೆಯಿಂದ ಕೇಳಬರುತ್ತಿದ್ದ ಉತ್ಸವದ ಸದ್ದನ್ನು ಮುಳುಗಿಸಿಬಿಟ್ಟಿತು.

ಡಸನ್ ಗಟ್ಟಿಳಿ ಕೈಗಳು ಚೀಲವನ್ನೆಳೆದುಕೊಂಡವು.

" ನನ್ನನ್ನು ಹಿಂಬಾಲಿಸಿ ಬನ್ನಿ ! " ಎಂದನು ಯೂಸುಫ್ ತನ್ನ ಕೈಯ ಪಂಜಿನ ಬೆಳಕಿನಲ್ಲಿ ದಾರಿ ತೋರಿಸುತ್ತಾ.

ಒಂದು ಮರದ ಹರಡಿದ ಕೊಂಬೆಗಳ ಕೆಳಗೆ ಚೀಲವನ್ನಿರಿಸಿದರು. ಜನವೆಲ್ಲ ಮೌನವಾಗಿ ಅದರ ಸುತ್ತಲೂ ಗುಂಪು ಸೇರಿದರು. ಯೂಸೂಫ್ ಒಂದು ಚಾಕುವನ್ನು ತೆಗೆದುಕೊಂಡು ಚೀಲವನ್ನು ಬಹು ಎಚ್ಚರಿಯಿಂದ ಉದ್ದುದ್ದವಾಗಿ ಸೀಳಿದನು. ಆ ಮೇಲೆ ಸತ್ತವನ ಮುಖವನ್ನು ನೋಡಿದನೋ ಇಲ್ಲವೋ ಎರಡು ಹೆಜ್ಜೆ ಹಿಂದಿಟ್ಟನು. ಕಲ್ಲಾದನೇನೋ ಎನ್ನುವ ಹಾಗೆ ಅವನು ನಿಶ್ಚಲವಾಗಿ ನಿಂತುಬಿಟ್ಟನು ; ಅವನ ಕಣ್ಣುಗುಡ್ಡೆ ಮುಂದಕ್ಕೆ ಚಾಚಿತ್ತು ; ಒಂದು ಮಾತನ್ನೂ ಆಡಲಾರದೆ ಹೋದನು.

ಆಲಿ ಯೂಸೂಫನ ಸಹಾಯಕ್ಕೆ ಓಡಿ ಬಂದನು. ಆದರೆ ಅವನಿಗೂ ಯೂಸೂಫನಿಗಾದಂತೆಯೇ ಆಯಿತು. ಅವನು ನೆಲದ ಮೇಲೆ ಕುಕ್ಕರಿಸಿಕೊಂಡು, ಒಂದು ಸಲ ಹೆಣದ ಮುಖ ನೋಡಿ, ಹೋ ಎಂದು ಕಿರಿಚಿ, ತನ್ನ ದೊಡ್ಡ ಹೊಟ್ಟೆ ಆಕಾಶಕ್ಕೆ ತಿರುಗಿಕೊಳ್ಳುವಂತೆ ಅಂಗತ್ತನಾಗಿ ಮಲಗಿಬಿಟ್ಟನು.

" ಏನು ? ಏನಾಯಿತು ? " ಎಂದು ಗುಂಪೆಲ್ಲ ಪಟಗುಟ್ಟಿತು. " ನಾವೂ ನೋಡೋಣ ! ತೋರಿಸಿ ನಮಗೆ ! " ಎಂದು ತಗ್ಗುದನಿಯಲ್ಲಿ ನುಡಿಯುತ್ತಿದ್ದರು.

ಗುಲ್ಜಾನ್ ಅಳುತ್ತಾ ಮಂಡಿಯೂರಿ ಕುಳಿತಳು. ಅವನ ನಿರ್ಜೀವ ದೇಹದ ಮೇಲೆ ಬಗ್ಗಿದಳು. ಆದರೆ ಯಾರೋ ಒಬ್ಬರು ಅವಳ ಕಡೆಗೆ ನೀಡಿ ಹಿಡಿದ ಪಂಜಿನ ಬೆಳಕಿನಲ್ಲಿ ನೋಡಿ ಹೆದರಿಕೆಯಿಂದಲೂ ಬೆರಗಿನಿಂದಲೂ ಹಿಂದಕ್ಕೆ ಸರಿದಳು.

ಆ ಮೇಲೆ ಕೈಯಲ್ಲಿ ಪಂಜು ಹಿಡಿದುಕೊಂಡು ಜನ ನಾಲ್ಕು ಕಡೆಯಿಂದಲೂ ಮುತ್ತಿ ಬಂದರು. ಕೊಳದ ದಡ ಪಂಜುಗಳಿಂದ ಬೆಳ್ಳಂಬೆಳಕಾ

ಗಿತ್ತು. ಹಲವು ಕಂಠಗಳಿಂದ ಹೊರಟ ದೊಡ್ಡ ಸದ್ದು ರಾತ್ರಿಯ ಮೌನವನ್ನು ಅಲುಗಿಸಿ ಅಳ್ಳಾಡಿಸಿಬಿಟ್ಟಿತು :

" ಜಾಫರ್ ! "

" ಅದು ದುಬಾರಿ ಬಡ್ಡಿಗಾರ ಜಾಫರ್ ! "

" ಅದು ಖೋಜಾ ನಸ್ರೆದ್ದೀನ್ ಅಲ್ಲ ! ಅದು ಜಾಫರ್, ದುಬಾರಿ ಬಡ್ಡಿಗಾರ ! "

ಮೊಟ್ಟಮೊದಲಿನ ಬೆರಗೂ ಗೊಂದಲವೂ ಕಳೆದುಹೋದ ಮೇಲೆ ಪ್ರತಿಯೊಬ್ಬನೂ ಗಟ್ಟಿಯಾಗಿ ಕೂಗಲು ಮೊದಲು ಮಾಡಿದನು ; ತಾವೇ ಕಣ್ಣಾರ ನೋಡಿ ನಿರ್ಧರ ಮಾಡಿಕೊಳ್ಳಬೇಕೆಂದು ಒಬ್ಬರನ್ನೊಬ್ಬರು ನೂಕುತ್ತ, ತಿವಿಯುತ್ತ, ಒಬ್ಬರ ಭುಜದ ಮೇಲೆ ಒಬ್ಬರು ಹತ್ತುತ್ತಾ ಗದ್ದಲ ಮಾಡತೊಡಗಿದರು. ಗುಲ್ಜಾನಿನ ಸ್ಥಿತಿ ಗಾಬರಿ ಹುಟ್ಟಿಸುವಂತಾಯಿತು ; ಅವಳಿಗೆಲ್ಲಿ ಹುಚ್ಚು ಹಿಡಿದೀತೋ ಎಂದು ಹೆದರಿ ಮುದುಕ ನಿಯಾಸ್ ಅವಳನ್ನು ಕೊಳದ ದಡದಿಂದ ದೂರ ಕರೆದುಕೊಂಡು ಹೋದನು. ಸಂಶಯ ನಿಶ್ಚಯಗಳ ನಡುವೆ ತೂಗಾಡುತ್ತಾ, ಮತ್ತೊಂದು ಸಲ ಆ ಹೆಣದ ಕಡೆ ನೋಡಬೇಕೆಂದು ಸಾಹಸಪಡುತ್ತಾ ಅವಳು ಅಳುತ್ತಾ ನಗುತ್ತಾ ಹೇಗೆ ಹೇಗೋ ಆಡುತ್ತಿದ್ದಳು.

" ಜಾಫರ್ ! ಜಾಫರ್ ! " ಎಂದು ಜನವೆಲ್ಲಾ ಕೂಗೆಬ್ಬಿಸಿತು. ಜನರ ಈ ಹರ್ಷಧ್ವನಿ ಹರಡಿ, ಅರಮನೆಯ ಆನಂದೋತ್ಸವದ ದೂರದ ದನಿಯನ್ನು ಪೂರ್ತಿಯಾಗಿ ಮುಳುಗಿಸಿಬಿಟ್ಟಿತು. " ಇವನು ದುಬಾರಿ ಬಡ್ಡಿಗಾರ ಜಾಫರ್ ! ಅವನೇ ! ಅವನೇ ! ಇಗೋ, ಇಲ್ಲಿದೆ ಅವನ ಚೀಲ ! ಸಾಲಪತ್ರಗಳಿಂದ ತುಂಬಿದ ಅವನ ಚೀಲ ! " ಎಂಬ ಕೂಗು ಗಗನವನ್ನು ಭೇದಿಸುತ್ತಿತ್ತು.

ಸ್ವಲ್ಪ ಹೊತ್ತು ಹೀಗೆಯೇ ಕಳೆಯಿತು. ಆ ಮೇಲೆ, ಸಂಭ್ರಮ ತಗ್ಗಿ ಸ್ವಸ್ಥಿತಿಗೆ ಬಂದ ಮೇಲೆ ಯಾರೋ ಒಬ್ಬರು ಗುಂಪನ್ನು ಕೇಳಿದರು :

" ಆದರೆ ಖೋಜಾ ನಸ್ರೆದ್ದೀನ್ ಎಲ್ಲಿ ? " ಎಂದು.

ಈ ಪ್ರಶ್ನೆಯನ್ನು ಗುಂಪೆಲ್ಲ ಕೇಳತೊಡಗಿತು. ದೊಡ್ಡ ಸದ್ದು ಎದ್ದಿತು :

" ಹಾಗಾದರೆ ಖೋಜಾ ನಸ್ರೆದ್ದೀನ್ ಎಲ್ಲಿ ? ನಮ್ಮ ಖೋಜಾ ನಸ್ರೆದ್ದೀನ್ ಎಲ್ಲಿದ್ದಾನೆ ? "

" ಅವನು ಇಲ್ಲೇ ಇದ್ದಾನೆ ! " ಎಂದು ಶಾಂತವಾಗಿ ಮರುನುಡಿಯಿತು

ಚಿರಪರಿಚಿತವಾದ ಒಂದು ದನಿ. ಎಲ್ಲರೂ ದನಿ ಬಂದ ದಿಕ್ಕಿಗೆ ತಟಕ್ಕನೆ ತಿರುಗಿಕೊಂಡರು. ಅಲ್ಲಿ ಪ್ರತ್ಯಕ್ಷವಾಗಿ ಬದುಕಿ ಬಂದಿರುವ, ಕಾಪುಸಿಪಾಯಿಗಳ ಕಾವಲಿಲ್ಲದೆ ಸ್ವತಂತ್ರವಾಗಿ ಬರುತ್ತಿರುವ ಖೋಜಾ ನಸ್ರೆದ್ದೀನನನ್ನು ಕಂಡು ಅವರಿಗೆಲ್ಲಾ ಬೆರಗಾಯಿತು. ಖೋಜಾ ನಸ್ರೆದ್ದೀನ್ ಆಕಳಿಸುತ್ತಾ, ಅಲಸತನದಿಂದ ಮೈ ಕೈ ನೀಡಿಕೊಳ್ಳುತ್ತಾ ನಿದಾನವಾಗಿ ನಡೆದುಬರುತ್ತಿದ್ದನು. ಸಮಾಧಿ ಭೂಮಿಯ ಸಮೀಪದಲ್ಲಿ ಅವನು ನಿದ್ದೆಹತ್ತಿ ಮಲಗಿಬಿಟ್ಟಿದ್ದನು. ಅವನು ಇಷ್ಟು ತಡವಾಗಿ ಬಂದದ್ದಕ್ಕೆ ಅದೇ ಕಾರಣ.

"ನಾನು ಇಲ್ಲೇ ಇದ್ದೇನೆ!" ಎಂದು ಅವನು ಮತ್ತೆ ನುಡಿದನು. "ಯಾರು ಯಾರಿಗೆ ನಾನು ಬೇಕಾಗಿದ್ದೇನೋ ಅವರೆಲ್ಲ ಬನ್ನಿ ಇಲ್ಲಿ! ಬುಖಾರ ಪಟ್ಟಣದ ಓ ಮಾನ್ಯ ನಿವಾಸಿಗಳೇ, ನೀವೆಲ್ಲಾ ಈ ಕೊಳದ ಬಳಿ ಏಕೆ ಸೇರಿದ್ದೀರಿ? ಇಲ್ಲಿ ಏನು ಮಾಡುತ್ತಿದ್ದೀರಿ?" ಎಂದು ಪ್ರಶ್ನೆಮಾಡಿದನು.

"ಏಕೆ? ಏಕೆ ಬಂದಿದ್ದೇವೆಯೆ? ಓ. ಖೋಜಾ ನಸ್ರೆದ್ದೀನ್, ನಾವೆಲ್ಲಾ ನಿನ್ನನ್ನು ಬೀಳ್ಕೊಟ್ಟು ಕಳಿಸಲೆಂದು ಬಂದೆವು. ನಿನಗಾಗಿ ಗೋಳಾಡಲೆಂದು, ನಿನ್ನನ್ನು ಸಮಾಧಿಮಾಡೋಣವೆಂದು ಇಲ್ಲಿ ಬಂದೆವು" ಎಂದು ನೂರಾರು ಮಂದಿ ಒಟ್ಟಿಗೆ ನುಡಿದರು.

"ನನ್ನನ್ನೆ? ನನ್ನನ್ನು ನೆನೆದು ಗೋಳಾಡುವುದಕ್ಕೆ ಬಂದಿರಾ? ಓ, ಬುಖಾರ ನಗರ ನಿವಾಸಿಗಳೇ, ಖೋಜಾ ನಸ್ರೆದ್ದೀನನು ಎಂದಾದರೂ ಸಾಯ ಬಯಸುತ್ತಾನೆಂದು ನೀವು ಭಾವಿಸುವುದಾದ ಪಕ್ಷದಲ್ಲಿ ಅವನನ್ನು ನೀವು ಸ್ವಲ್ಪವೂ ಅರ್ಥಮಾಡಿಕೊಂಡಿಲ್ಲವೆಂದೇ ಹೇಳಬೇಕಾಗುತ್ತದೆ. ನಾನು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವುದಕ್ಕಾಗಿ ಒಂದು ಸಮಾಧಿ ಭೂಮಿಯ ಹತ್ತಿರ ಮಲಗಿಕೊಂಡೆ, ಅಷ್ಟೆ. ಅಷ್ಟರಲ್ಲೇ ನೀವಾಗಲೇ ನಾನು ಸತ್ತುಹೋದೆನೆಂದೇ ಭಾವಿಸಿಬಿಟ್ಟಿರಿ!"

ಅಷ್ಟೇ ಅವನು ಆಡಿದ್ದು. ಅಷ್ಟರೊಳಗಾಗಿ ಟೀ ಅಂಗಡಿಯ ಯಜಮಾನ ಅಲಿಯೂ, ಕಮ್ಮಾರ ಯೂಸೂಫನೂ ಆನಂದದಿಂದ ಆರ್ಭಟಿಸುತ್ತಾ ಅವನ ಬಳಿ ಬಂದು ಬಲವಾಗಿ ತಬ್ಬಿಕೊಂಡರು; ಅವನು ಅಜ್ಜಿಬಜ್ಜಿಯಾದನೇನೋ ಎಂಬಂತೆ ಅಪ್ಪಿಕೊಂಡುಬಿಟ್ಟರು. ನಿಯಾಸ್ ಕುಂಟಿಕೊಂಡು ಅತ್ತ ಕಡೆ ಸರಿದನು; ಆದರೆ ಗುಂಪು ಮೊಳಕೈಯಿಂದ ತಿವಿದು ತಿವಿದು ಮುದುಕನನ್ನು

ಬೇಗ ಅತ್ತ ಕಡೆ ಅಟ್ಟಿಬಿಟ್ಟಿತು. ಖೋಜಾ ನಸ್ರೆದ್ದೀನನ ಸುತ್ತಲೂ ಭಾರಿಯ ಗುಂಪು ಸೇರಿತು. ಆ ಗುಂಪಿನಲ್ಲಿ ಪ್ರತಿಯೊಬ್ಬರೂ ಅವನನ್ನು ತಬ್ಬಿ ಸ್ವಾಗತಿಸ ಬಯಸುವವರೇ! ಅವನು ಒಬ್ಬನ ಅಪ್ಪುಗೆಯಿಂದ ಇನ್ನೊಬ್ಬನ ಅಪ್ಪುಗೆಗೆ ಜಾರುತ್ತಾ, ಗುಲ್ಜಾನ್ ಆತುರದಿಂದಲೂ ಕೋಪದಿಂದಲೂ ಆಡುತ್ತಿದ್ದ ಮಾತಿನ ದನಿ ಕೇಳಬರುತ್ತಿದ್ದ ಕಡೆಗೆ ಮೆಲ್ಲಮೆಲ್ಲನೆ ಸರಿದು ಬರುತ್ತಿದ್ದನು. ಗುಲ್ಜಾನ್ ಖೋಜಾ ನಸ್ರೆದ್ದೀನನ ಕಡೆಗೆ ಹೋಗಬೇಕೆಂದು ಆ ನೂಕು ನುಗ್ಗಲಿನಲ್ಲಿ ವ್ಯರ್ಥವಾಗಿ ಸಾಹಸಪಡುತ್ತಿದ್ದಳು; ಪ್ರಯತ್ನ ಸಾಗದೆ ಚಡಪಡಿಸುತ್ತಿದ್ದಳು. ಕಟ್ಟಕಡೆಗೆ ಇಬ್ಬರೂ ಎದುರೆದುರು ಬಂದರು. ತಕ್ಷಣವೇ ಗುಲ್ಜಾನ್ ತನ್ನೆರಡು ತೋಳುಗಳನ್ನೂ ಅವನ ಕುತ್ತಿಗೆಯ ಸುತ್ತ ಬೀಸಿ ತಬ್ಬಿಕೊಂಡಳು. ಖೋಜಾ ನಸ್ರೆದ್ದೀನ್ ಅವಳ ಮುಖಪರದೆಯನ್ನು ಮೇಲಕ್ಕೆತ್ತಿ, ಆ ಗುಂಪಿನೆದುರಿಗೇ ಅವಳಿಗೆ ಮುತ್ತಿಟ್ಟನು. ಅಲ್ಲಿದ್ದವರಲ್ಲಿ ಯಾರೊಬ್ಬರೂ, ಧರ್ಮಶಾಸ್ತ್ರ ನಿಯಮ ಗಳನ್ನೂ ಉಚಿತಾಚಾರಗಳನ್ನೂ ಚಾಚು ತಪ್ಪದೆ ಎತ್ತಿ ಹಿಡಿಯುವ ಸಂಪ್ರ ದಾಯವಂತರು ಕೂಡ, ಅದಕ್ಕೆ ಆಕ್ಷೇಪಣೆ ಮಾಡಲಿಲ್ಲ; ಅವರ ಆ ಪ್ರೇಮ ಸಮ್ಮಿಳನದಲ್ಲಿ ಯಾವ ಬಗೆಯ ಅನೌಚಿತ್ಯವೂ ಅವರಿಗೆ ಕಾಣಿಸಲಿಲ್ಲ.

ಖೋಜಾ ನಸ್ರೆದ್ದೀನ್ ತೋಳೆತ್ತಿ ನಿಂತನು; ತನ್ನ ಕಡೆ ಲಕ್ಷ್ಯ ಕೊಟ್ಟು ನಿಶ್ಶಬ್ದವಾಗಿರಬೇಕೆಂದು ಸೂಚಿಸಿದನು.

“ಘನವೊಂದಿದ ಬುಖಾರ ನಗರದ ನಿವಾಸಿಗಳೇ, ನನ್ನ ಸಾವಿಗಾಗಿ ದುಃಖ ಪ್ರದರ್ಶನ ಮಾಡಲೆಂದು ನೀವೆಲ್ಲಾ ಇಲ್ಲಿ ನೆರೆದಿದ್ದೀರಿ! ನಿಮಗೆ ಗೊತ್ತಿಲ್ಲವೆ, ನಾನು ಸಾವಿಲ್ಲದವನೆಂಬು?

“ನಾನು, ಖೋಜಾ ನಸ್ರೆದ್ದೀನ್.
ಸರ್ವದಾ ಸ್ವತಂತ್ರ ನಾನ್!
ಹೇಳುವೆ ನಾನಿದು ಸುಳ್ಳಲ್ಲ—
ನಾನು ಸಾಯುವುದೇ ಇಲ್ಲ.”

ಹಿಸ್ಸೆಂದು ಸದ್ದುಮಾಡುತ್ತಾ ಉರಿಯುತ್ತಿದ್ದ ಪಂಜುಗಳ ಬೆಳಕಿನಲ್ಲಿ ಅವನು ನಿಂತಿದ್ದನು. ಗುಂಪು ಅವನ ಹಾಡಿನ ಪಲ್ಲವಿಯನ್ನು ತೆಗೆದುಕೊಂಡು ಒಕ್ಕೊರಲಿನಲ್ಲಿ ಹಾಡಿತು. ರಾತ್ರಿಯ ಕತ್ತಲೆ ಕವಿದಿದ್ದ ಬುಖಾರ ಪಟ್ಟಣದ

ಮೇಲೆಲ್ಲಾ ಆ ಆನಂದದ ಪಲ್ಲವಿ ಹರಡಿ ಅನುರಣಿಸಿ ವ್ಯಾಪಿಸಿತು :

" ನಾನು, ಖೋಜಾ ನಸ್ರೆದ್ದೀನ್.
ಸರ್ವದಾ ಸ್ವತಂತ್ರ ನಾನ್ !
ಹೇಳುವೆ ನಾನಿದು ಸುಳ್ಳಲ್ಲ—
ನಾನು ಸಾಯುವುದೇ ಇಲ್ಲ "

ಅರಮನೆಯ ಆನಂದೋತ್ಸವ ಈ ಸಂತೋಷಕ್ಕೆ ಹೇಗೆ ತಾನೆ ಸಮಾನ ವಾದೀತು ?

ಯಾರೋ ಒಬ್ಬ ಕೂಗಿದನು : " ನಿನಗೆ ಬದಲಾಗಿ ಆ ದುಬಾರಿ ಬಡ್ಡಿ ಗಾರ ಜಾಫರ್ ನೀರಿನಲ್ಲಿ ಮುಳುಗಿ ಸಾಯುವಂತೆ ಹೇಗೆ ಮಾಡಿದೆ ? ಹೇಳು ನಮಗೆ."

" ಆ ! " ಎಂದು ನುಡಿದನು ಖೋಜಾ ನಸ್ರೆದ್ದೀನ್. ಅವನಿಗೆ ತಟಕ್ಕನೆ ಜ್ಞಾಪಕವಾಯಿತು. " ಯೂಸೂಫ್, ನಿನಗೆ ನೆನಪಿದೆಯೋ ನನ್ನ ಪ್ರತಿಜ್ಞೆ ? " ಎಂದು ಕೇಳಿದನು.

" ಜ್ಞಾಪಕವಿದೆ, ನಿನ್ನ ಪ್ರತಿಜ್ಞೆಯನ್ನು ನೆರವೇರಿಸಿಬಿಟ್ಟಿದ್ದೀಯೆ, ಖೋಜಾ ನಸ್ರೆದ್ದೀನ್ " ಎಂದು ಯೂಸೂಫ್ ಉತ್ತರ ಕೊಟ್ಟನು.

ಖೋಜಾ ನಸ್ರೆದ್ದೀನ್, " ಅವನೆಲ್ಲಿ ? ಆ ದುಬಾರಿ ಬಡ್ಡಿಗಾರ ಎಲ್ಲಿ ದ್ದಾನೆ ? ಆವನ ಚೀಲ ಸಿಕ್ಕಿತೋ ನಿಮಗೆ ? " ಎಂದು ಕೇಳಿದನು.

" ಇಲ್ಲ ; ಅದನ್ನು ನಾವು ಮುಟ್ಟಲಿಲ್ಲ."

" ಅಯ್ಯಯ್ಯೋ ! ಹೀಗೂ ಉಂಟೆ ! " ಎಂದು ನಿಂದಿಸುವ ದನಿಯಲ್ಲಿ ನುಡಿದನು ಖೋಜಾ ನಸ್ರೆದ್ದೀನ್. " ಓ, ಬುಖಾರ ನಿವಾಸಿಗಳೇ, ನಿಮ್ಮ ಮನಸ್ಸು ಬಹು ಉದಾರವಾದ್ದು, ಪಾಪರಹಿತವಾದ್ದು. ನೀವು ಸರಳ ಮನಸ್ಸಿನವರು. ಆದರೆ ವ್ಯವಹಾರಜ್ಞಾನ ಸ್ವಲ್ಪ ಹಾಗೆ ಹಾಗೇ ! ನಿಮಗೆ ಇಷ್ಟೂ ಗೊತ್ತಾಗಲಿಲ್ಲವಲ್ಲಾ ! ಈ ಚೀಲ ದುಬಾರಿ ಬಡ್ಡಿಗಾರನ ಉತ್ತರಾಧಿ ಕಾರಿಗಳ ಕೈಗೆ ಬಿದ್ದರೆ, ಆಗ, ಅವರು ನಿಮ್ಮ ಸಾಲವನ್ನೆಲ್ಲಾ ನಿಮ್ಮನ್ನು ಹಿಂಡಿ ಹಿಂಡಿ ವಸೂಲು ಮಾಡಿಕೊಳ್ಳುತ್ತಾರೆ ; ಕೊನೆಯ ಕಾಸಿನ ವರೆಗೂ ಬಿಡದೆ ಕಿತ್ತುಕೊಳ್ಳುತ್ತಾರೆ—ಎಂದು ಗೊತ್ತಿಲ್ಲವೆ ನಿಮಗೆ ? ಕೊಡಿ ಇಲ್ಲಿ, ನನ್ನ ಕೈಗೆ ಆ ಚೀಲವನ್ನು " ಎಂದನು.

ಖೋಜಾ ನಸ್ರೆದ್ದೀನನ ಅಪ್ಪಣೆ ನಡಸುವುದಕ್ಕೆ ಎಷ್ಟೋ ಮಂದಿ ಸಿದ್ಧ ರಾಗಿ ನೂಕಾಡುತ್ತಾ ಕೂಗಾಡುತ್ತಾ ನುಗ್ಗಿನಡೆದರು. ಅವರು ಆ ಚೀಲವನ್ನು ತಂದು ಅವನ ಕೈಗೆ ಕೊಟ್ಟರು.

ಅವನು ಅದರಿಂದ ಯಾವುದೋ ಒಂದು ಪತ್ರವನ್ನು—ತಕ್ಷಣ ಕೈಗೆ ಸಿಕ್ಕಿದ ಯಾವುದೋ ಒಂದನ್ನು—ಎತ್ತಿ ತೆಗೆದನು.

"ಜೇನುಗಾರ ಮಾಮೆದ್ !" ಎಂದು ಓದಿದನು. "ಯಾರು ಜೇನು ಗಾರ ಮಾಮೆದ್ ?" ಎಂದು ಕೇಳಿದನು.

"ನಾನು !" ಎಂದು ಉತ್ತರ ಕೊಟ್ಟಿತು ಒಂದು ನಡುಗುವ ಬಡಕಲು ದನಿ. ಆ ಮೇಲೆ ನಂಬಲಾರದಷ್ಟು ಮಟ್ಟಿಗೆ ಹರಿದು ಚಿಂದಿಯಾದ ಮತ್ತು ಬಣ್ಣ ಬಣ್ಣದ ತೇಪೆಯ ಖಲತ್ ತೊಟ್ಟ ತರಕಲು ಗಡ್ಡದ ಒಬ್ಬ ಮುದುಕನು ಗುಂಪಿನಿಂದ ಹೊರಬಂದನು.

"ಜೇನುಗಾರ ಮಾಮೆದ್, ನೀನು ಈ ಪತ್ರದ ಪ್ರಕಾರ ನಾಳೆಯ ದಿನ ಐದು ನೂರು ಟಂಗ ಕೊಡಬೇಕಾಗುತ್ತದೆ. ಆದರೆ, ನಾನು, ಖೋಜಾ ನಸ್ರೆ ದ್ದೀನ್ ನಿನ್ನ ಸಾಲವನ್ನು ರದ್ದು ಮಾಡಿಬಿಡುತ್ತೇನೆ. ಈ ಹಣವನ್ನು ನಿನ್ನ ಸ್ವಂತ ಆವಶ್ಯಕತೆಗಳಿಗಾಗಿ ಬಳಸಿಕೊ. ಒಂದು ಹೊಸ ಖಲತ್ ಕೊಂಡುಕೊ. ನಿನ್ನ ಈ ಖಲತ್ ಮಾಗಿ ಕುಯ್ಲಿಗೆ ಸಿದ್ಧವಾದ ಹತ್ತಿಯ ಹೊಲದಂತೆ ಕಾಣು ತ್ತಿದೆ; ಅದರ ಮೇಲೆ ಎಲ್ಲ ಕಡೆಯಲ್ಲೂ ಹತ್ತಿ ಹೊರಕ್ಕೆ ಚಾಚಿಕೊಂಡಿದೆ."

ಹೀಗೆ ಆಡುತ್ತಾಡುತ್ತಲೇ ಒಂದು ಪಂಜನ್ನು ಕೈಗೆತ್ತಿಕೊಂಡು ಅದರ ಉರಿಯಲ್ಲಿ ಕಾಗದವನ್ನು ಸುಟ್ಟುಬಿಟ್ಟನು.

ಉಳಿದೆಲ್ಲಾ ಪತ್ರಗಳನ್ನೂ ಖೋಜಾ ನಸ್ರೆದ್ದೀನ್ ಹೀಗೆಯೇ ಮಾಡಿ ದನು. ಈ ಕಾಗದದ ಚೂರುಗಳಿಂದೆದ್ದ ಚಿಕ್ಕ ಉರಿ, ದೊಡ್ಡ ದೊಡ್ಡ ಕೊಂಡ ಗಳಿಗಿಂತಲೂ ಹೆಚ್ಚು ಸಮರ್ಪಕವಾಗಿ ಜನರ ಹೃದಯಗಳನ್ನು ಬೆಚ್ಚಗೆ ಮಾಡಿತು; ಅವರಿಗೆ ಲವಲವಿಕೆ ಉಂಟುಮಾಡಿತು. ಈಗ ಈ ಜನ ಮೊದಲ ಬಾರಿಗೆ—ಅವರ ಜೀವಮಾನದಲ್ಲೇ ಮೊದಲನೆಯ ಸಲ—ಸ್ವತಂತ್ರರಾದರು. ಏಕೆಂದರೆ, ಅವರಲ್ಲಿ ಎಷ್ಟೋ ಮಂದಿ ತಮ್ಮ ಅಪ್ಪ ಅಜ್ಜಂದಿರಿಂದ ಸಾಲವನ್ನೂ ಉತ್ತರಾಧಿಕಾರದಿಂದ ಪಡೆದುಕೊಂಡಿದ್ದರು; ತಮಗೆ ಪ್ರಾಯ ಬಂದಂದಿನಿಂದಲೂ ಇಪ್ಪತ್ತು ಮೂವತ್ತು ವರ್ಷಕ್ಕೂ ಹೆಚ್ಚಾಗಿ ಅವರು ಜಾಫರನ ಬಂಧನದಲ್ಲಿ

ಸಿಕ್ಕಿಕೊಂಡು ನರಳುತ್ತಿದ್ದರು.

ಕೊನೆಯ ಪತ್ರವನ್ನು ಸುಟ್ಟು ಮುಗಿಸಿದ ಮೇಲೆ ಖೋಜಾ ನಸ್ರೆದ್ದೀನ್ ಆ ಚೀಲವನ್ನು ಕೊಳದೊಳಕ್ಕೆ ಬಹು ದೂರಕ್ಕೆ ಬೀಸಿ ಎಸೆದುಬಿಟ್ಟನು.

" ಇನ್ನು ಅದು ಸದಾಕಾಲವೂ ಕೊಳದ ತಳದಲ್ಲೇ ಬಿದ್ದಿರಲಿ! ಯಾವನೊಬ್ಬನೂ ಅದನ್ನು ಹೆಗಲಿಗೆ ತೂಗಹಾಕಿಕೊಳ್ಳದೆ ಇರಲಿ! ಬುಖಾರ ನಗರದ ಓ, ಮಾನ್ಯ ನಾಗರಿಕರೇ, ಮನುಷ್ಯನಾಗಿ ಹುಟ್ಟಿದವನಿಗೆ ಅಂಥ ಚೀಲವನ್ನು ಹೆಗಲಿಗೆ ಹಾಕಿಕೊಳ್ಳುವುದಕ್ಕಿಂತಲೂ ಹೆಚ್ಚಿನ ಅಪಕೀರ್ತಿ ಬೇರೊಂದಿಲ್ಲ. ನಿಮಗೆ ಏನೇ ಆಗಲಿ, ನಿಮ್ಮಲ್ಲಿ ಯಾರಾದರೊಬ್ಬರು ಐಶ್ವರ್ಯವಂತರೇ ಆಗಿಬಿಟ್ಟರೂ—ನಮ್ಮ ಸೂರ್ಯಸದೃಶರಾದ ಅಮೀರರೂ ಪರಮ ಜಾಗರೂಕರಾದ ಅವರ ವಜೀರರೂ ಬದುಕಿರುವ ವರೆಗೆ ಯಾರಾದರೂ ಐಶ್ವರ್ಯವಂತರಾದಾರೆಂದು ಆಶಿಸುವುದೂ ಅಸಾಧ್ಯ—ಆದರೆ, ಒಂದು ವೇಳೆ ಅಸಾಧ್ಯ ಸಾಧ್ಯವಾಗಿ ನಿಮ್ಮಲ್ಲಿ ಯಾರಾದರೂ ಒಬ್ಬರು ಐಶ್ವರ್ಯವಂತರಾಗಿಬಿಟ್ಟರೆ, ಅವರು ಇಂಥ ಚೀಲವನ್ನು ಖಂಡಿತ ತಗುಲುಹಾಕಿಕೊಳ್ಳಕೂಡದು. ಇಲ್ಲವಾದರೆ, ಅವರು ತಾವೂ ಮತ್ತು ಹದಿನಾಲ್ಕು ತಲೆಯ ವರೆಗೆ ತಮ್ಮ ಸಂತತಿಯವರೂ ಶಾಶ್ವತವಾದ ಕಳಂಕದಲ್ಲಿ ಮುಳುಗಿ ಹಾಳಾಗಿ ಹೋಗುತ್ತಾರೆ! ಅಂಥವನು ಇನ್ನೂ ಒಂದು ಸಂಗತಿಯನ್ನು ನೆನಪಿನಲ್ಲಿಟ್ಟುಕೊಳ್ಳಬೇಕು—ಈ ಪ್ರಪಂಚದಲ್ಲಿ ಖೋಜಾ ನಸ್ರೆದ್ದೀನ್ ಎಂಬವನೊಬ್ಬನಿದ್ದಾನೆ, ಅವನು ಅನ್ಯಾಯವನ್ನು ಕಠೋರವಾಗಿ ಶಿಕ್ಷಿಸುತ್ತಾನೆ ಎಂಬುದನ್ನು ನೆನೆಯುತ್ತಿರಬೇಕು. ದುಬಾರಿ ಬಡ್ಡಿಗಾರ ಜಾಫರನಿಗೆ ಅವನು ಎಂಥ ಶಿಕ್ಷೆವಿಧಿಸಿದನೆಂಬುದನ್ನು ನೀವು ಕಣ್ಣಾರ ಕಂಡಿದ್ದೀರಿ. ಈಗ, ಓ, ಘನಹೊಂದಿದ ಬುಖಾರ ನಗರದ ನಿವಾಸಿಗಳೇ, ನಿಮ್ಮಿಂದ ಬೀಳ್ಕೊಂಡು ಹೊರಡಬಯಸುತ್ತೇನೆ. ನಾನು ಮತ್ತೆ ದೀರ್ಘ ಪ್ರಯಾಣವನ್ನು ಪ್ರಾರಂಭಿಸಬೇಕಾದ ಸಮಯ ಬಂದಿದೆ. ಗುಲ್ಜಾನ್, ನೀನು ನನ್ನ ಜೊತೆ ಬರುತ್ತೀಯಷ್ಟೆ!"

" ನೀನು ಎಲ್ಲೆಲ್ಲಿ ಹೋಗಬೇಕೆಂದರೆ ಅಲ್ಲಲ್ಲಿಗೆಲ್ಲಾ ಬರುತ್ತೇನೆ " ಎಂದು ಗುಲ್ಜಾನ್ ಮರುನುಡಿದಳು.

ಬುಖಾರ ನಗರದ ನಿವಾಸಿಗಳು ಖೋಜಾ ನಸ್ರೆದ್ದೀನನಿಗೆ ಯೋಗ್ಯ ರೀತಿಯಿಂದ ಸನ್ಮಾನ ಮಾಡಿ ಬೀಳ್ಕೊಟ್ಟರು. ಕಾರವಾನ್ ಶಾಲೆಗಳ

ಮಾಲೀಕರು ಅವನ ವಧುವಿಗಾಗಿ ಹಸ್ತಿಯಂತೆ ಬೆಳ್ಳಗಿದ್ದ ಒಂದು ಕತ್ತೆಯನ್ನು ತಂದರು. ಅದರ ಮೈಮೇಲೆ ಒಂದೇ ಒಂದು ಕಪ್ಪು ಗುರುತೂ ಇರಲಿಲ್ಲ. ತನ್ನ ಬೂದು ಬಣ್ಣದ ಸೋದರನ ಜೊತೆಯಲ್ಲಿ—ಖೋಜಾ ನಸ್ರೆದ್ದೀನನ ಅಲೆತಗಳಲ್ಲೆಲ್ಲಾ ಅವನನ್ನು ಎಡೆಬಿಡದೆ ಹಿಂಬಾಲಿಸಿದ್ದ ಆ ನಿಷ್ಠಾವಂತ ಹಳೆಯ ಕತ್ತೆಯ ಜೊತೆಯಲ್ಲಿ—ಈ ಹೊಸ ಬಿಳಿಯ ಕತ್ತೆ ಹೆಮ್ಮೆಯಿಂದ ಹೊಳೆಯುತ್ತ ನಿಂತಿತು. ಈ ಸೊಗಸುಗಾರ ಸಂಗಾತಿ ಜೊತೆಗೆ ಬಂದದ್ದರಿಂದ ಬೂದು ಬಣ್ಣದ ಮೊದಲಿನ ಕತ್ತೆಗೆ ಸ್ವಲ್ಪವೂ ಸಂಕೋಚವಾಗಲಿಲ್ಲ. ಅದು ಅಳುಕದೆ ರಸತುಂಬಿದ ಕ್ಲೋವರನ್ನು ಮೆಲುಕು ಹಾಕುತ್ತಿತ್ತು; ಅಷ್ಟೇ ಅಲ್ಲ, ಬಿಳಿಯ ಕತ್ತೆಯನ್ನು ತನ್ನ ಮೂತಿಯಿಂದ ಅತ್ತತ್ತ ನೂಕಿಯೂ ಬಿಟ್ಟಿತು—ಅದು ಬಣ್ಣದಲ್ಲಿ ನಿಸ್ಸಂಶಯವಾಗಿ ತನಗಿಂತ ಮೇಲೆನಿಸಿದ್ದಿತಾದರೂ ಯಜಮಾನನಿಗೆ ಸಲ್ಲಿಸಿರುವ ಸೇವೆಯಲ್ಲಿ ತನ್ನ ಸಮಾನವಲ್ಲವೆಂದು ತೋರಿಸುವುದಕ್ಕೋ ಎಂಬಂತೆ ಅದನ್ನು ಅತ್ತ ನೂಕಿತು.

ಕಮ್ಮಾರರು ಅಲ್ಲೇ ಒಂದು ಕುಲುಮೆಯನ್ನು ಹೂಡಿ ಆ ಕ್ಷಣವೇ ಎರಡು ಕತ್ತೆಗಳಿಗೂ ಹಲ್ಲೆ ಕಟ್ಟಿದರು. ಜೀನುಗಾರರು ಬಹು ಬೆಲೆಬಾಳುವ ಎರಡು ಜೀನುಗಳನ್ನು ಬಹುಮಾನವಾಗಿ ಕೊಟ್ಟರು: ಮಖಮಲ್ಲಿನ ಅಲಂಕಾರ ಮಾಡಿದ್ದೊಂದು ಜೀನು ಖೋಜಾ ನಸ್ರೆದ್ದೀನನಿಗೆ; ಅದರ ಮೇಲೆ ಬೆಳ್ಳಿಯ ನಕಾಸೆ ಕೆಲಸ ಮಾಡಿದ್ದ ಜೀನು ಗುಲ್ಜಾನಿಗೆ. ಟೀ ಅಂಗಡಿಯ ಮಾಲೀಕ ಸರ್ವಶ್ರೇಷ್ಠವಾದ ಎರಡು ಟೀ ಪಾತ್ರೆಗಳನ್ನೂ ಮತ್ತು ಎರಡು ಚೀನಾ ಬಟ್ಟಲುಗಳನ್ನೂ ತಂದುಕೊಟ್ಟನು. ಆಯುಧಗಾರರು ಲೋಕಪ್ರಸಿದ್ಧವಾದ 'ಗರುಡ' ಉಕ್ಕಿನಿಂದ ನಿರ್ಮಿಸಿದ ಕತ್ತಿಯೊಂದನ್ನು ಕೊಟ್ಟರು; ದಾರಿಯಲ್ಲಿ ಕಳ್ಳಕಾಕರಿಂದ ಖೋಜಾ ನಸ್ರೆದ್ದೀನ್ ಆತ್ಮರಕ್ಷಣೆ ಮಾಡಿಕೊಳ್ಳುವುದಕ್ಕೆ ಅವನಲ್ಲಿ ಒಂದು ಆಯುಧವಿರಬೇಕೆಂದು ಆ ಕತ್ತಿಯನ್ನು ಕೊಟ್ಟರು. ಕಂಬಳಿ ನೇಯುವವರು ಜೀನಿನ ಕೆಳಗೆ ಹಾಸುವ ತಡಿ ಬಟ್ಟೆಗಳನ್ನು ತಂದು ಕೊಟ್ಟರು. ತೊಗಲು ಕೆಲಸಗಾರರು ಕುದುರೆ ಜವಿ ಸೇರಿಸಿ ತಯಾರಿಸಿದ ಜೀರುಗುಣಿಕೆಯುಳ್ಳ ತೊಗಲುಬಾರೊಂದನ್ನು ಕೊಟ್ಟರು. ಈ ಬಾರನ್ನು ಸುತ್ತಲೂ ಬರುವಂತೆ ಹರಡಿ ಅದರ ನಡುವೆ ಪ್ರಯಾಣಿಕನು ಮಲಗಿದರೆ, ವಿಷದ ಹಾವುಗಳು ಕಚ್ಚುವ ಅಪಾಯವಿಲ್ಲದಂತೆ ಅದು ಅವನನ್ನು ಕಾಪಾಡುತ್ತದೆ; ಏಕೆಂದರೆ ಮುಳ್ಳಿನಂತೆ

ಚುಚ್ಚುವ ಆ ಕೂದಲಿನ ಮೇಲೆ ಹಾವು ಹರಿದುಹೋಗಲಾರದು.

ನೇಯ್ಗೆಯವರು, ತಾಮ್ರಗಾರರು, ಚಿಪ್ಪಿಗರು, ಮೋಚಿಗಳು—ಎಲ್ಲರೂ ತಮ್ಮ ತಮ್ಮ ಬಹುಮಾನಗಳನ್ನು ತಂದೊಪ್ಪಿಸಿದರು. ಬುಖಾರ ನಗರವೆಲ್ಲಾ—ಮುಲ್ಲಾಗಳು, ಅಧಿಕಾರಿಗಳು, ಆಸ್ತಿವಂತರು ಇವರು ಹೊರತು ಮಿಕ್ಕವರೆಲ್ಲ—ಊರಿಗೆ ಊರೇ ಖೋಜಾ ನಸ್ರೆದ್ದೀನನಿಗೆ ಪ್ರಯಾಣಕ್ಕೆ ಅಣಿ ಮಾಡಿ ಕೊಟ್ಟಿತು.

ಕುಂಬಾರರು ಮಾತ್ರ ಮುಖ ಚಿಕ್ಕದು ಮಾಡಿಕೊಂಡು ಒಂದು ಕಡೆ ನಿಂತರು. ಖೋಜಾ ನಸ್ರೆದ್ದೀನನಿಗೆ ಕೊಡುವುದಕ್ಕೆ ಅವರ ಹತ್ತಿರ ಏನೂ ಇರಲಿಲ್ಲ. ತಾಮ್ರಗಾರರು ಈ ಮೊದಲೇ ತಾಮ್ರದ ಕೊಡವನ್ನು ಕೊಟ್ಟಿದ್ದು, ಅದು ಹತ್ತಿರಿರುವಾಗ ಅವನಿಗೆ ಮಣ್ಣಿನ ಗಡಿಗೆಯಿಂದ ಏನಾಗಬೇಕಾಗಿದೆ?

ಆಗ, ಕುಂಬಾರರಲ್ಲೆಲ್ಲಾ ಹಿರಿಯನಾದವನು, ನೂರು ವರ್ಷಕ್ಕೂ ಹೆಚ್ಚು ವಯಸ್ಸಾದ ಒಬ್ಬ ಮುದುಕನು, ಇದ್ದಕ್ಕಿದ್ದಂತೆ ದನಿಯೆತ್ತಿ ಹೇಳಿದನು :

"ನಾವು, ಕುಂಬಾರರು ಖೋಜಾ ನಸ್ರೆದ್ದೀನನಿಗೆ ಏನೂ ಕೊಟ್ಟಿಲ್ಲವೆಂದು ಯಾರು ಹೇಳುತ್ತಾರೆ? ಅವನ ವಧು, ಈ ಸುಂದರ ಕನ್ಯೆ, ಹೆಸರುವಾಸಿಯಾದ ನಮ್ಮ ಕುಂಬಾರರ ಗುಂಪಿಗೆ ಸೇರಿದವಳಲ್ಲವೆ?" ಎಂದನು.

ಕುಂಬಾರರ ಹಿಗ್ಗು ಹಿಡಿಸದಾಯಿತು. ಗಟ್ಟಿಯಾಗಿ ಆನಂದಘೋಷ ಮಾಡಿದರು. ಆ ಮೇಲೆ ಅವರು ಗುಲ್ಜಾನಳ ಕಡೆ ತಿರುಗಿ ಅವಳಿಗೆ ಉಪ ದೇಶದ ನುಡಿಗಳನ್ನು ಹೇಳಿದರು—ಖೋಜಾ ನಸ್ರೆದ್ದೀನನಿಗೆ ಶ್ರದ್ಧಾಭಕ್ತಿ ಗಳಿಂದ ಕೂಡಿದ ಯೋಗ್ಯ ಸಂಗಾತಿಯಾಗಿರಬೇಕೆಂದೂ, ತನ್ನ ಜನಗಳ ಗೌರ ವಕ್ಕೂ ಕೀರ್ತಿಗೂ ಕಳಂಕ ತರದೆ ಅವನನ್ನು ಕಾಪಾಡಿಕೊಂಡು ಬರಬೇಕೆಂದೂ ಒತ್ತಿ ನುಡಿದು ಉಪದೇಶ ಮಾಡಿದರು.

ಖೋಜಾ ನಸ್ರೆದ್ದೀನ್ ಹೀಗೆಂದನು :

"ಉಷಃಕಾಲ ಹತ್ತಿರವಾಗುತ್ತ ಬಂತು. ಬೇಗ ಪಟ್ಟಣದ ಹೆಬ್ಬಾಗಿಲು ಗಳನ್ನು ತೆರೆಯುತ್ತಾರೆ. ನಾನೂ ನನ್ನ ವಧುವೂ ಯಾರ ಕಣ್ಣಿಗೂ ಬೀಳ ದಂತೆ ಆದಷ್ಟು ರಹಸ್ಯವಾಗಿ ಪ್ರಯಾಣ ಮಾಡಬೇಕು. ನಮ್ಮನ್ನು ಕಳಿಸಿ ಕೊಡುವುದಕ್ಕೆಂದು ನೀವೆಲ್ಲಾ ಬಂದರೆ, ಕಾವುದಳದವರು ಈ ಬುಖಾರ ನಗರದವರೆಲ್ಲಾ ಊರು ಬಿಟ್ಟು ಬೇರೆ ಎಲ್ಲೋ ಹೋಗಿ ನೆಲಸಲು ಹೊರಟ

ದ್ದಾರೆಂದು ಭಾವಿಸಿ ತಟಕ್ಕನೆ ಬಾಗಿಲು ಮುಚ್ಚಿಬಿಡುತ್ತಾರೆ; ಯಾರನ್ನೂ ಹೊರಕ್ಕೆ ಬಿಡುವುದಿಲ್ಲ. ಆದ್ದರಿಂದ, ಓ, ಮಾನ್ಯ ಬುಖಾರ ನಿವಾಸಿಗಳೇ, ನೀವೆಲ್ಲಾ ನಿಮ್ಮ ನಿಮ್ಮ ಮನೆಗಳಿಗೆ ಹೋಗಿರಿ. ನಿಮ್ಮ ನಿದ್ರೆ ಶಾಂತವಾಗಿರಲಿ! ದುರದೃಷ್ಟದೇವತೆಯ ಕಪ್ಪು ರೆಕ್ಕೆಗಳು ನಿಮ್ಮ ಮೇಲೆ ನೆರಳು ಬೀಳಿಸದಿರಲಿ! ನಿಮ್ಮ ಕಾರ್ಯಗಳೆಲ್ಲಾ ಸಫಲವಾಗಲಿ! ನಿಮಗೆ ಜಯವಾಗಲಿ! ಖೋಜಾ ನಸ್ರೆದ್ದೀನನು ನಿಮ್ಮಿಂದ ಬೀಳ್ಕೊಂಡು ಹೋಗುತ್ತಿದ್ದಾನೆ. ಎಷ್ಟು ದಿನದ ವರೆಗೆ? ನನಗೆ ತಿಳಿಯದು."

ಪೂರ್ವ ದಿಕ್ಕಿನಲ್ಲಿ ಕಿರಿದಾದ ಬೆಳಕಿನ ಗೆರೆ—ಗುರುತಿಸುವುದಕ್ಕೇ ಸಾಧ್ಯ ವಿಲ್ಲವೆನ್ನಬಹುದಾದಷ್ಟು ಸೂಕ್ಷ್ಮ ರೇಖೆ—ಮೂಡಿ ಬರುತ್ತಿತ್ತು. ಕೊಳದ ಮೇಲೆ ತೆಳ್ಳಗೆ ಇಬ್ಬನಿ ಕಾಣಿಸಿಕೊಂಡಿತು. ಗುಂಪು ಚೆದರತೊಡಗಿತು. ಜನರೆಲ್ಲ ಪಂಜುಗಳನ್ನಾರಿಸಿ ಕೂಗುತ್ತಿದ್ದರು:

"ಸುಖಪ್ರಯಾಣವಾಗಲಿ, ಖೋಜಾ ನಸ್ರೆದ್ದೀನ್! ನಿನ್ನ ಹುಟ್ಟೂರನ್ನು ಮರೆಯಬೇಡ!"

ಕಮ್ಮಾರ ಯೂಸೂಫನೂ ಟೀ ಅಂಗಡಿಯ ಯಜಮಾನನೂ ಬೀಳ್ಕೊಟ್ಟದ್ದು ತುಂಬ ಮನಗರಗಿಸುವಂತಿತ್ತು. ಬೊಜ್ಜು ಹೊಟ್ಟೆಯ ಆಲಿ ಎಷ್ಟು ಪ್ರಯತ್ನ ಮಾಡಿದರೂ ಕಣ್ಣೀರನ್ನು ತಡೆದುಕೊಳ್ಳಲು ಅವನಿಗೆ ಸಾಧ್ಯವಾಗ ಲಿಲ್ಲ. ಅವನ ಕೆಂಪನೆಯ ದುಂಡು ಕೆನ್ನೆ ಕಣ್ಣೀರಿನಿಂದ ತೋಯ್ದುಹೋಯಿತು.

ಊರ ಹೆಬ್ಬಾಗಿಲು ತೆರೆಯುವ ಹೊತ್ತಿನ ವರೆಗೂ ಖೋಜಾ ನಸ್ರೆದ್ದೀನ್ ನಿಯಾಸನ ಮನೆಯಲ್ಲಿದ್ದನು. ಮೊಟ್ಟಮೊದಲನೆಯ ಮುಯೆಸಿನ್ ತನ್ನ ಆಹ್ವಾನವನ್ನು ದನಿಯೆಳೆದು ಘೋಷಿಸಿದೊಡನೆಯೇ ಖೋಜಾ ನಸ್ರೆದ್ದೀನ್ ಮತ್ತು ಗುಲ್ಜಾನ್ ಇಬ್ಬರೂ ಪ್ರಯಾಣವನ್ನು ಪ್ರಾರಂಭಿಸಿದರು. ಮುದುಕ ನಿಯಾಸ್ ತೀರಾ ಹತ್ತಿರದ ಮೂಲೆಯ ವರೆಗೂ ಅವರ ಜೊತೆ ಹೋಗಿ ಕಳಿಸಿ ಕೊಟ್ಟನು—ಅವನು ಅಲ್ಲಿಂದ ಮುಂದೆ ಬರದಂತೆ ಖೋಜಾ ನಸ್ರೆದ್ದೀನ್ ತಡೆದುಬಿಟ್ಟನು—ಹೋಗುತ್ತಿರುವ ಅವರಿಬ್ಬರನ್ನೂ ಕಣ್ಣೀರ ತೆರೆಯ ನಡುವಿ ನಿಂದ ನೋಡುತ್ತಾ, ಅವರು ದಾರಿಯ ತಿರುವನ್ನು ದಾಟಿ ಮರೆಯಾಗುವ ವರೆಗೂ ಮುದುಕ ಅಲ್ಲೇ ನಿಂತನು. ಪ್ರಾತಃಕಾಲದ ಹಿತಕರವಾದ ತಿಳಿಗಾಳಿ ಸುಳಿದು, ರಸ್ತೆಯಲ್ಲಿ ಅವರು ಹೋದ ಹೆಜ್ಜೆಯ ಗುರುತು ಉಳಿಯದಂತೆ

ಅಳಿಸುವುದರಲ್ಲಿ ನಿರತವಾಯಿತು.

ನಿಯಾಸ್ ಮನೆಗೆ ಓಡಿಹೋಗಿ ಚಾವಣಿಯ ಮೇಲಕ್ಕೆ ಹತ್ತಿದನು. ಅಲ್ಲಿ ನಿಂತು ನೋಡಿದರೆ, ಪಟ್ಟಣದ ಕೋಟೆಯಿಂದಾಚೆಗೆ ಬಹು ದೂರದ ವರೆಗೂ ಕಾಣಿಸುತ್ತಿತ್ತು. ಅವನು ಅಲ್ಲಿ ಬಹಳ ಹೊತ್ತು ನೋಡುತ್ತಾ ನಿಂತನು; ತನ್ನ ಮುದಿ ಕಣ್ಣುಗಳನ್ನು ನೋಯಿಸಿಕೊಂಡು, ಬೇಡವೆಂದರೂ ಉಕ್ಕಿ ಹರಿಯುವ ಕಣ್ಣೀರನ್ನು ಒರಸಿಕೊಳ್ಳುತ್ತಾ ಅಲ್ಲೇ ನಿಂತನು; ದೂರದಲ್ಲಿ ಬಿಸಿಲಿನಲ್ಲಿ ಒಣಗಿ ನಿಂತ ಕಂದುಬಣ್ಣದ ಬೆಟ್ಟಗಳೂ, ಅವುಗಳ ನಡುವೆ ಅತ್ತ ಇತ್ತ ಸುಳಿದು ಬಳಸಿ ಮುಂದುವರಿಯುವ ದಾರಿಯ ಪಟ್ಟಿಯೂ ಗೋಚರಿಸುತ್ತಿತ್ತು. ಅವನು ಬಹಳ ಹೊತ್ತು ನೋಡುತ್ತಲೇ ಇದ್ದನು. ಆತಂಕ ಎದೆಯನ್ನು ಮುತ್ತಿತು. ಖೋಜಾ ನಸ್ರೆದ್ದೀನ್, ಗುಲ್ಜಾನ್ ಇಬ್ಬರೂ ಕಾಪಿನವರ ಕೈಗೆ ಬಿದ್ದುಬಿಟ್ಟರೊ ಏನೋ ಎಂದು ಯೋಚನಗೊಳಗಾದನು. ಆದರೆ, ಕಟ್ಟಕಡೆಗೆ ದೂರದಲ್ಲಿ ಎರಡು ಚುಕ್ಕೆಗಳನ್ನು ಕಂಡನು; ಒಂದು ಬಿಳಿಯದು, ಒಂದು ಬೂದಿ ಬಣ್ಣದ್ದು. ಅವು ಕ್ರಮಕ್ರಮವಾಗಿ ದೂರದೂರ ಹೋಗಿ ಚಿಕ್ಕದಾಗುತ್ತಿದ್ದವು. ಬೇಗನೆ ಬೂದಿ ಬಣ್ಣದ ಚುಕ್ಕೆ ಗುಡ್ಡದ ಮೇಲ್ಮೈಯ ಬಣ್ಣದೊಡನೆ ಬೆರೆತು ಅದರಲ್ಲಿ ಮರೆಯಾಗಿಹೋಯಿತು. ಆದರೆ ಬಿಳಿಯ ಚುಕ್ಕೆ ಹೆಚ್ಚು ಹೊತ್ತು ಕಾಣುತ್ತಿತ್ತು; ತಗ್ಗುಗಳಲ್ಲಿ ಮರೆಯಾಗಿ ತಿಟ್ಟುಗಳಲ್ಲಿ ಮತ್ತೆ ಕಣ್ಣಿಗೆ ಗೋಚರವಾಗುತ್ತಿತ್ತು. ಆ ಮೇಲೆ ಅದೂ ಕಾಣದಾಯಿತು; ಮೇಲೇಳುತ್ತಿದ್ದ ಶಾಖದ ಮಬ್ಬಿನಲ್ಲಿ ಕರಗಿಹೋಯಿತು.

ಹಗಲು ಪ್ರಾರಂಭವಾಗುತ್ತಿತ್ತು. ಅದರ ಜೊತೆಯಲ್ಲೇ ಶಾಖವೂ ಬಂತು. ಮುದುಕ ಆ ಶಾಖವನ್ನು ಗಣನೆಗೇ ತಂದುಕೊಳ್ಳದೆ ಯಾವುದೋ ಯೋಚನೆಯಲ್ಲಿ ಮುಳುಗಿ ಚಾವಣಿಯ ಮೇಲೆಯೇ ಬಹಳ ಹೊತ್ತಿನ ವರೆಗೂ ಕುಳಿತಿದ್ದನು. ಅವನ ನರೆದಲೆ ನಡುಗಿತು. ಅವನ ಗಂಟಲಿನಲ್ಲಿ ಏನೋ ಸಿಕ್ಕಿಕೊಂಡ ಹಾಗಾಯಿತು. ಖೋಜಾ ನಸ್ರೆದ್ದೀನನ ವಿಷಯದಲ್ಲಾಗಲಿ, ತನ್ನ ಮಗಳ ವಿಷಯದಲ್ಲಾಗಲಿ ಅವನಿಗೆ ಯಾವ ಅಸಮಾಧಾನವೂ ಇರಲಿಲ್ಲ. ಅವರಿಗೆ ಶಾಶ್ವತ ಸುಖ ದೊರೆಯಲೆಂದೇ ಅವನು ಹರಸುತ್ತಿದ್ದನು. ಆದರೂ ತನ್ನ ವಿಷಯದಲ್ಲೇ ಅಸಮಾಧಾನಗೊಂಡು ಚಿಂತಿಸುತ್ತಿದ್ದನು. ಈಗ ಮನೆ ಬರಿದು; ಈಗ ತನ್ನ ಮುದಿ ವಯಸ್ಸಿನಲ್ಲಿ ತನ್ನ ಬಾಳಿಗೆ, ತನ್ನ ನಗುವ

ನಿಂದಾಗಲಿ ಹಾಡಿನಿಂದಾಗಲಿ ನಲವೆರೆಯುವವರು ಯಾರೂ ಇರಲಿಲ್ಲ. ಬಿಸಿಗಾಳಿ ಎದ್ದು ದ್ರಾಕ್ಷೆಹಿತ್ತಲಿನಲ್ಲಿ ಎಲೆಗಳ ನಡುವೆ ಮರ್ಮರ ಧ್ವನಿ ಮಾಡಿತು; ನೆಲದ ಧೂಳನ್ನೆಬ್ಬಿಸಿತು. ಅದರ ರೆಕ್ಕೆ ಚಾವಣಿಯ ಮೇಲೆ ಒಣಗಲಿಟ್ಟಿದ್ದ ಮಡಕೆಗಳಿಗೆ ತಗುಲಿತು; ಆಗ ಆ ಮಡಕೆಗಳು ಸಣ್ಣಗೆ ಗೋಳಾಡುದನಿಯನ್ನು ಹೊರಗೆಡಹಿ, ಮನೆ ಬಿಟ್ಟು ಹೋದವರನ್ನು ನೆನೆದು ವ್ಯಥೆಯಿಂದ ನಿಟ್ಟುಸಿರು ಬಿಡುವುವೋ ಎಂಬಂತೆ ತೋರಿತು.

ತನ್ನ ಹಿಂಭಾಗದಲ್ಲಿ ಏನೋ ಒಂದು ಬಗೆಯ ಅಸ್ಪಷ್ಟವಾದ ಸದ್ದು ಕೇಳಿದಂತಾಗಿ ನಿಯಾಸ್ ಯೋಚನೆಯಲ್ಲಿ ಮುಳುಗಿದ್ದವನು ಎಚ್ಚರಗೊಂಡನು. ಹಿಂದಿರುಗಿ ನೋಡಿದಾಗ ತನ್ನ ಮನೆಯ ಹತ್ತಿರದಲ್ಲೇ ವಾಸಿಸುತ್ತಿದ್ದ ಮೂವರು ಅಣ್ಣತಮ್ಮಂದಿರು ಮೆಟ್ಟಿಲು ಹತ್ತಿ ಬರುತ್ತಿರುವುದು ಕಾಣಿಸಿತು. ಆ ಮೂವರೂ ಚೆನ್ನಾಗಿ ಬೆಳೆದ ಪುಷ್ಟಕಾಯರಾದ ಸುಂದರ ಯುವಕರು; ಅವರೂ ಕುಂಬಾರರು. ಅವರು ಹತ್ತಿರ ಬಂದು ಬಹು ಗೌರವದಿಂದ ನಿಯಾಸನಿಗೆ ಬಗ್ಗಿ ನಮಸ್ಕಾರ ಮಾಡಿದರು.

ಅವರಲ್ಲಿ ಹಿರಿಯವನು ಹೀಗೆ ಹೇಳಿದನು:

"ಓ, ಮಾನ್ಯ ನಿಯಾಸ್, ನಿನ್ನ ಮಗಳು ನಿನ್ನನ್ನು ಬಿಟ್ಟು ಖೋಜಾ ನಸ್ರೆದ್ದೀನನ ಜೊತೆ ಹೊರಟು ಹೋದಳು. ಅದಕ್ಕಾಗಿ ನೀನು ದುಃಖಪಟ್ಟು ಕೊರಗಬಾರದು. ಏಕೆಂದರೆ, ಪ್ರಪಂಚದಲ್ಲಿ ಎಂದಿನಿಂದಲೂ ನಡೆದು ಬಂದ ನಿಯಮವೇ ಹಾಗಿದೆ. ಸಾರಂಗದ ಸಹವಾಸವಿಲ್ಲದೆ ಹೆಣ್ಣು ಜಿಂಕೆ ಬದುಕಲಾರದು. ಗೂಳಿಯ ಜೊತೆಯಿಲ್ಲದೆ ಹಸು ಬಾಳಲಾರದು. ಹೆಣ್ಣುಬಾತು ಗಂಡುಬಾತು ಜೊತೆಯಿಲ್ಲದೆ ಬದುಕಲಾರದು. ಹೀಗಿರುವಾಗ ಕನ್ಯೆಯೊಬ್ಬಳು ನಿಜವಾದ ಪ್ರೇಮನಿಷ್ಠನಾದ ಬಾಳ ಸಂಗಾತಿಯೊಬ್ಬನಿಲ್ಲದೆ ಹೇಗೆತಾನೆ ಜೀವಿಸಿಯಾಳು? ಅಲ್ಲಾ ಪ್ರಪಂಚದ ಮೇಲಿನ ಸರ್ವ ಜೀವರಾಶಿಯನ್ನೂ ಗಂಡು ಹೆಣ್ಣು ಜೋಡಿಯಾಗಿಯೇ ಸೃಷ್ಟಿಸಿಲ್ಲವೆ? ಹತ್ತಿ ಗಿಡದ ಸಸಿಗಳನ್ನು ಕೂಡ ಗಂಡು ಹೆಣ್ಣು ಎಂದು ವಿಂಗಡಿಸಿಯೇ ಇದ್ದಾನಲ್ಲವೆ?

"ಅದು ಹೇಗಾದರೂ ಇರಲಿ. ನಿನ್ನ ವೃದ್ಧಾಪ್ಯದಲ್ಲಿ, ಓ, ಮಾನ್ಯ ನಿಯಾಸ್, ನಾವು ಮೂರು ಮಂದಿಯೂ ನಿನಗೆ ಈ ರೀತಿ ಹೇಳಬೇಕೆಂದು ನಿರ್ಧರಿಸಿಬಿಟ್ಟಿದ್ದೇವೆ: ಯಾರು ಖೋಜಾ ನಸ್ರೆದ್ದೀನನ ಸಂಗಡ ಸಂಬಂಧ

ಬೆಳಸಿದ್ದಾರೋ ಅವರು ಬುಖಾರ ಪಟ್ಟಣದವರೆಲ್ಲರಿಗೂ ಸಂಬಂಧಿಗಳೇ ಆದ ಹಾಗಾಯಿತು. ಆದ್ದರಿಂದ, ಓ, ನಿಯಾಸ್, ಈಗ ನೀನು ನಮಗೆ ನೆಂಟನಾಗಿದ್ದೀಯೆ. ಹೋದ ವರ್ಷವಿನ್ನೂ ನಮ್ಮ ತಂದೆ, ನಿನ್ನ ಗೆಳೆಯ, ಬಹು ಮಾನ್ಯ ಮಾಮೆದ್-ಅಲಿಯನ್ನು ಅತ್ಯಂತ ವ್ಯಥೆಯಿಂದ ಸಮಾಧಿ ಮಾಡಿದೆವು; ಆ ದುಃಖ ಇನ್ನೂ ಆರಿಲ್ಲ. ಈಗ ನಮ್ಮ ಮನೆಯ ಬೆಚ್ಚನೆಯ ಮೂಲೆಯಲ್ಲಿ ಯಜಮಾನನ ಜಾಗ ಇನ್ನೂ ಖಾಲಿಯಾಗಿಯೇ ಇದೆ. ದಿನದಿನವೂ ಬಿಳಿಯ ಗಡ್ಡವೊಂದನ್ನು ಕಂಡು ಆನಂದಿಸಿ ಗೌರವ ಸಲ್ಲಿಸುವ ನಿತ್ಯಸುಖ ನಮಗಿಲ್ಲವಾಗಿದೆ; ಯಜಮಾನನ ಬಿಳಿಯ ಗಡ್ಡ ಮತ್ತು ಮಗುವಿನ ಅಳು—ಎರಡೂ ಇಲ್ಲವಾದರೆ ಗೃಹಸ್ಥಜೀವನ ಬರಿದು, ವ್ಯರ್ಥ. ಏಕೆಂದರೆ, ಮನುಷ್ಯನ ಆತ್ಮಕ್ಕೆ ಆಗ ಮಾತ್ರವೇ ಶಾಂತಿ, ತೃಪ್ತಿ; ತನಗೆ ಜೀವ ಕೊಟ್ಟಿರುವ ಆ ಬಿಳಿಯ ಗಡ್ಡದ ಯಜಮಾನ ಮತ್ತು ತನ್ನಿಂದಲೇ ಜೀವ ಪಡೆದಿರುವ ತೊಟ್ಟಿಲಲ್ಲಿ ಮಲಗಿರುವ ಮಗು—ಇವರಿಬ್ಬರ ನಡುವೆ ಇರುವಾಗ ಮಾತ್ರ ಮನುಷ್ಯನಿಗೆ ನಿಜವಾದ ಶಾಂತಿಯೂ ತೃಪ್ತಿಯೂ ದೊರೆಯುವುದು.

"ಆದ್ದರಿಂದ, ಓ ಮಾನ್ಯ ನಿಯಾಸ್, ನಮ್ಮ ಕಣ್ಣೀರಿಗೆ ಕರಗಿ ನಮ್ಮ ಪ್ರಾರ್ಥನೆಗೆ ನೀನು ಕಿವಿಕೊಡಬೇಕೆಂದೂ, ಇಲ್ಲವೆನ್ನದೆ ಒಪ್ಪಿಕೊಳ್ಳಬೇಕೆಂದೂ ಕೇಳಿಕೊಳ್ಳುತ್ತೇವೆ. ನಮ್ಮ ಮನೆಗೆ ಬಾ; ಯಜಮಾನನಿಗೆ ಮೀಸಲಿಟ್ಟಿರುವ ಜಾಗದಲ್ಲಿ ನೆಲಸಿ, ನಾವು ಮೂರು ಮಂದಿಗೂ ತಂದೆಯಾಗಿರು; ನಮ್ಮ ಮಕ್ಕಳಿಗೆ ಅಜ್ಜನಾಗಿರು."

ಆ ಸೋದರರು ಬಹಳ ಒತ್ತಾಯ ಮಾಡಿ ಕೇಳಿಕೊಂಡರು. ನಿಯಾಸ್ ಅವರ ಪ್ರಾರ್ಥನೆಯನ್ನು ನಿರಾಕರಿಸಲಾಗಲಿಲ್ಲ. ಅವನು ಅವರ ಮನೆಗೆ ಹೋದನು; ಅವರ ಕುಟುಂಬದಲ್ಲಿ ಸ್ಥಾನ ಪಡೆದನು. ಬಹು ಮರ್ಯಾದೆಯಿಂದ ಅವನನ್ನು ಆದರಿಸಿ ಸ್ವಾಗತಿಸಿದರು. ಹೀಗೆ ಪ್ರಾಮಾಣಿಕವಾಗಿ ಸದಾಚಾರವಂತನಾಗಿ ಶುದ್ಧಜೀವನ ನಡಸಿದ್ದಕ್ಕೆ ವೃದ್ಧಾಪ್ಯದಲ್ಲಿ ಅವನಿಗೆ ತಕ್ಕ ಪ್ರತಿಫಲ ದೊರೆಯಿತು; ಒಳ್ಳೆಯ ಮುಸ್ಲಿಮನಿಗೆ ಈ ಪ್ರಪಂಚದಲ್ಲಿ ದೊರೆಯಬಹುದಾದ ಉತ್ತಮ ಪ್ರತಿಫಲ ಅವನಿಗೆ ದೊರೆಯಿತು. ಅವನು ನಿಯಾಸ್-ಬಾಬಾ, ಎಂದರೆ ನಿಯಾಸ್ ಅಜ್ಜ, ಆದನು; ದೊಡ್ಡ ಕುಟುಂಬಕ್ಕೆ—ಆ ಮನೆಯಲ್ಲಿ ಅವನಿಗೆ ಹದಿನಾಲ್ಕು ಮಂದಿ ಮೊಮ್ಮಕ್ಕಳು—ಯಜಮಾನ

ನಾದನು. ದ್ರಾಕ್ಷಿಹಣ್ಣಿನ ರಸ ಬಳಿದು ರಂಗುರಂಗಾದ ಮಕ್ಕಳ ಕೆನ್ನೆಗಳನ್ನು ನೋಡುತ್ತಾ, ಒಬ್ಬರಾದ ಮೇಲೊಬ್ಬರಂತೆ ಆ ಮಕ್ಕಳ ಕಳೆದುಂಬಿದ ನಗು ಮುಖಗಳನ್ನು ನೋಡುತ್ತಾ ಅವನ ಕಣ್ಣುಗಳು ಸದಾ ಆನಂದದಿಂದ ಅರಳಿರುತ್ತಿದ್ದವು. ಆವತ್ತಿನಿಂದ ಮುಂದಕ್ಕೆ ಅವನ ಕಿವಿಗಳು ಮೌನಭಾರದಿಂದ ಎಂದೂ ಬಸವಳಿಯುಲಿಲ್ಲ. ಒಮ್ಮೊಮ್ಮೆ ಆ ಸುಖ ಸ್ವಲ್ಪ ಹೆಚ್ಚಾಗಿ ಅವನ ಹೃದಯ ಭಾರವಾಗುತ್ತಿತ್ತು. ಆಗ ಅವನು ತನ್ನ ಹಳೆಯ ಮನೆಗೆ ಹೋಗಿ ಒಂದು ಗಳಿಗೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದನು; ತನ್ನ ಹೃದಯಕ್ಕೆ ತೀರ ಹತ್ತಿರವಾದ ಆ ಇಬ್ಬರನ್ನೂ ನೆನೆದು ಒಂದು ಗಳಿಗೆ ಚಿಂತಿಸುತ್ತಿದ್ದನು; ಹೃದಯಕ್ಕೆ ಅಷ್ಟು ಹತ್ತಿರವಾದರೂ ಅವರು ಎಷ್ಟೋ ದೂರ ಹೋಗಿಬಿಟ್ಟಿದ್ದಾರೆ! ಎಲ್ಲಿ ಹೋಗಿದ್ದಾರೋ ಯಾರೂ ಅರಿಯರು!

ಸಂತೆಯ ದಿನಗಳಲ್ಲಿ, ಜಾತ್ರೆ ದಿನಗಳಲ್ಲಿ ಮಾರ್ಕಟ್ಟೆಗೆ ಹೋಗುತ್ತಿದ್ದನು; ಹೋಗಿ, ಪ್ರಪಂಚದ ಮೂಲೆ ಮೂಲೆಗಳಿಂದಲೂ ಬುಖಾರ ಪಟ್ಟಣಕ್ಕೆ ಬಂದು ನೆರೆದ ಕಾರ್‌ವಾನ್-ಸಾರಥಿಗಳನ್ನು ಕೇಳುತ್ತಿದ್ದನು: ದಾರಿಯಲ್ಲಿ ಅವರು ಎಲ್ಲಿಯಾದರೂ ಇಬ್ಬರು ಪ್ರಯಾಣಿಕರನ್ನು ಕಂಡಿದ್ದರೇ ಎಂದು ಪ್ರಶ್ನಿಸುತ್ತಿದ್ದನು; ಬೂದು ಕತ್ತೆಯ ಮೇಲೆ ಒಬ್ಬ ಗಂಡಸು, ಬಿಳಿಯ ಕತ್ತೆಯ ಮೇಲೆ—ಒಂದೇ ಒಂದು ಕಪ್ಪು ಚುಕ್ಕೆಯೂ ಇಲ್ಲದ ಅಚ್ಚ ಬಿಳಿಯ ಕತ್ತೆಯ ಮೇಲೆ—ಒಬ್ಬ ಹೆಂಗಸು ಜೊತೆ ಜೊತೆಯಾಗಿ ಪ್ರಯಾಣಮಾಡುವ ಇಬ್ಬರನ್ನು ಕಂಡಿದ್ದರೇ ಎಂದು ಪ್ರಶ್ನಿಸುತ್ತಿದ್ದನು. ಕಾರವಾನ್ ಸಾರಥಿಗಳು ಬಿಸಿಲಿನಲ್ಲಿ ಬಣ್ಣವೇರಿದ ತಮ್ಮ ಹಣೆಗಳನ್ನು ಸುಕ್ಕಿಸಿಕೊಂಡು ಯೋಚಿಸಿ, ತಲೆ ಅಳ್ಳಾಡಿಸುತ್ತಿದ್ದರು: ಇಲ್ಲ; ಅಂಥವರು ಯಾರನ್ನೂ ಅವರು ಕಂಡಿರಲಿಲ್ಲ.

ಖೊಜಾ ನಸ್ರೆದ್ದೀನ್ ಯಥಾಪ್ರಕಾರ ತಾನು ಹೋದ ಜಾಡು ಯಾರಿಗೂ ತಿಳಿಯದಂತೆ ಮರೆಯಾಗಿ ಬಿಟ್ಟಿದ್ದನು; ಅವನನ್ನು ಸ್ವಲ್ಪವೂ ನಿರೀಕ್ಷಿಸದಿದ್ದ ಕಡೆ ಅಕಸ್ಮಾತ್ತಾಗಿ ಕಾಣಿಸಿಕೊಳ್ಳುವುದು ಅವನ ರೂಢಿ.

---

# ಕಡೆಯ ಅಧ್ಯಾಯ

**ಹೊಸದೊಂದು ಪುಸ್ತಕಕ್ಕೆ ಆರಂಭವಾಗಬಹುದಾದ್ದು.**

“ನಾನು ಏಳು ಪ್ರಯಾಣಗಳನ್ನು ಮಾಡಿದೆನು. ಒಂದೊಂದು ಪ್ರಯಾಣದ ವಿಚಾರವಾಗಿಯೂ ಅಸಾಧಾರಣ ಘಟನೆಗಳಿಂದ ಕೂಡಿದ ಕಥೆಯಿದೆ; ಒಂದೊಂದು ಕಥೆಯೂ ಮನಸ್ಸನ್ನು ಕಲಕಿ ಕೆರಳಿಸುತ್ತದೆ.”

ಸಿಂದ್‌ಬಾದ್ ನಾವಿಕ.

ಅವನನ್ನು ಎಲ್ಲಿ ಸ್ವಲ್ಪವೂ ನಿರೀಕ್ಷಿಸಿರಲಿಲ್ಲವೋ ಅಲ್ಲಿ ಅವನು ಮತ್ತೆ ಕಾಣಿಸಿಕೊಂಡನು. ಅವನು ಸ್ಟಾಂಬೂಲಿನಲ್ಲಿ ಕಾಣಿಸಿಕೊಂಡನು.

ಇದು ನಡೆದದ್ದು ಅಮೀರನ ಪತ್ರ ಸುಲ್ತಾನನಿಗೆ ತಲುಪಿದ ಮೂರನೆಯ ದಿನ. ತುರ್ಕಿ ಸರ್ಕಾರಕ್ಕೆ ಸೇರಿದ ಹಳ್ಳಿ ಪಟ್ಟಣಗಳಲ್ಲೆಲ್ಲಾ ಸಾವಿರಾರು ಮಂದಿ ರಾಜಭಟರು ಸುತ್ತಾಡಿ ಖೋಜಾ ನಸ್ರೆದ್ದೀನನ ಸಾವಿನ ಸುದ್ದಿಯನ್ನು ಡಂಗೂರ ಹೊಡೆದು ಸಾರುತ್ತಿದ್ದರು. ಹರ್ಷಪರವಶರಾದ ಮುಲ್ಲಾಗಳು ಮಸೀದಿಗಳಲ್ಲಿ ನೆರೆದ ಭಕ್ತಮಂಡಲಿಗೆಲ್ಲಾ ಅಮೀರನ ಪತ್ರವನ್ನೋದಿ ತಿಳಿಸಿದರು; ದಿನಕ್ಕೆರಡು ಸಲದಂತೆ, ಬೆಳಗ್ಗೆ ಸಂಜೆ ತಪ್ಪದೆ ಅಲ್ಲಾಗೆ ವಂದನೆ ಸಲ್ಲಿಸುತ್ತಿದ್ದರು.

ಸುಲ್ತಾನನು ಅರಮನೆಯ ಉದ್ಯಾನದಲ್ಲಿ, ಪಾಪ್ಲರ್ ಮರಗಳ ತಂಪು ನೆರಳಿನಲ್ಲಿ ಔತಣದೂಟ ಮಾಡುತ್ತಿದ್ದನು. ಚಿಲುಮೆ ನೀರಿನಿಂದ ಚಿಮುಕಿಸಿ ನೆಲದ ಧೂಳನ್ನೆಲ್ಲ ಅಡಗಿಸಿತ್ತು. ಅವನ ಸುತ್ತಮುತ್ತ ವಜೀರರು, ಜ್ಞಾನಿಗಳು, ಕವಿಗಳು ಮತ್ತು ಇತರ ಅರಮನೆಯ ಪರಿವಾರದವರು—ಎಲ್ಲರೂ ಉದಾರವಾದ ಬಹುಮಾನಗಳನ್ನು ನಿರೀಕ್ಷಿಸುತ್ತ ಗುಂಪುಗುಂಪಾಗಿ ಒತ್ತಿ ಬರುತ್ತಿದ್ದರು. ಬೇರೆಬೇರೆ ಗುಂಪುಗಳ ನಡುವೆ ಬಿಸಿ ಬಿಸಿ ಅಡಿಗೆಗಳ ತಟ್ಟೆಗಳನ್ನೂ ಗುಡುಗುಡಿಗಳನ್ನೂ ಹೂಜಿಗಳನ್ನೂ ಹಿಡಿದು ಕರಿಯ ಗುಲಾಮರು ಸಡಗರದಿಂದ ಓಡಾಡುತ್ತಿದ್ದರು. ಸುಲ್ತಾನನಿಗೆ ಬಹು ಸುಖವಾಗಿತ್ತು; ಅವನು ವಿನೋದಭಾವದಲ್ಲಿದ್ದನು.

“ಇವತ್ತು ಸೆಕೆ ಹೆಚ್ಚಾಗಿರುವುದಾದರೂ ಗಾಳಿಯಲ್ಲಿ ಒಂದು ಬಗೆಯ

ಮನೋಹರವಾದ ಲಾಘವವೂ ಪರಿಮಳವೂ ತುಂಬಿದೆಯಲ್ಲಾ, ಅದೇಕೆ ?" ಎಂದು ಜ್ಞಾನಿಗಳನ್ನೂ ಕವಿಗಳನ್ನೂ ಪ್ರಶ್ನೆಮಾಡಿದನು ; ಗುಟ್ಟಾಗಿ ಕಣ್ಣು ಕಿರಿದು ಮಾಡಿಕೊಂಡು ನೋಡುತ್ತಾ ಕೇಳಿದನು.

ಅದಕ್ಕೆ ಅವರು, ಅವನ ಕೈಯಲ್ಲಿದ್ದ ಹಣದ ಚೀಲದ ಕಡೆಗೆ ಆಶಾ ದೃಷ್ಟಿಯಿಂದ ನೋಡುತ್ತ ಹೀಗೆ ಉತ್ತರ ಕೊಟ್ಟರು :

"ನಮ್ಮ ಪ್ರಕಾಶಮಯ ಪ್ರಭುವಿನ ಉಸಿರು ಗಾಳಿಯಲ್ಲಿ ಬೆರೆತು ಅದಕ್ಕೆ ಮನೋಹರವಾದ ಲಾಘವವನ್ನು ಕೊಟ್ಟಿದೆ. ಧರ್ಮನಿಷ್ಠೆಯಿಲ್ಲದ ಭ್ರಷ್ಟ ಖೋಜಾ ನಸ್ರೆದ್ದೀನನ ಆತ್ಮವು ಪ್ರಪಂಚವನ್ನೆಲ್ಲ ಕಲುಷಿತಮಾಡುವ ತನ್ನ ದುಷ್ಟ ದುರ್ವಾಸನೆಯನ್ನು ಹೊರಸೂಸುತ್ತಿದ್ದದ್ದು ಕಟ್ಟಕಡೆಗೆ ಪೂರ್ತಿಯಾಗಿ ನಿಂತುಹೋಗಿರುವುದರಿಂದ ಎಲ್ಲ ಕಡೆಯೂ ಈ ಪರಿಮಳ ಹರಡಿದೆ."

ಈ ಗುಂಪಿನಿಂದ ಸ್ವಲ್ಪ ಮಟ್ಟಿಗೆ ಅತ್ತತ್ತ ಪ್ರತ್ಯೇಕವಾಗಿದ್ದು ಎಲ್ಲ ಕಡೆಯೂ ಸುವ್ಯವಸ್ಥೆಯನ್ನು ಕಾಪಾಡಿಕೊಳ್ಳುತ್ತಾ ಅರಮನೆಯ ಕಾವುದಳದ ಅಧ್ಯಕ್ಷನು—ಸ್ಟಾಂಬೂಲಿನಲ್ಲಿ ಶಾಂತಿ ಧರ್ಮಗಳನ್ನು ರಕ್ಷಿಸುವಾತ—ನಿಂತಿದ್ದನು. ಅವನಿಗೂ ಬುಖಾರದ ಅವನ ಸಹೋದ್ಯೋಗಿ ಆರ್ಸ್‌ಲಾನ್-ಬೆಕ್ಕಿಗೂ ಇದ್ದ ವ್ಯತ್ಯಾಸವಿಷ್ಟೇ : ಇವನು ಅವನಿಗಿಂತ ಕ್ರೌರ್ಯದಲ್ಲಿ ಮೇಲುಗೈ ; ಅವನಿಗಿಂತ ಇವನು ತೀರ ತೆಳು. ಈ ಎರಡು ಗುಣಗಳೂ—ಎಂದರೆ ಕ್ರೌರ್ಯ ಮತ್ತು ಸಣಕಲುತನಗಳು—ಒಂದಕ್ಕೊಂದು ಹೊಂದಿಕೊಂಡಿದ್ದವು. ಇದು ಬಹು ದಿನಗಳಿಂದ ಸ್ಟಾಂಬೂಲಿನ ನಿವಾಸಿಗಳಿಗೆ ಸ್ಪಷ್ಟವಾಗಿ ಗೋಚರವಾಗಿತ್ತು. ಅವರು ವಾರವಾರವೂ ಅರಮನೆಯ ಸ್ನಾನಗೃಹದ ಸೇವಕರನ್ನು ಕಂಡು ಕಾವು ದಳದ ಅಧ್ಯಕ್ಷನ ತೂಕ ಕಡಮೆಯಾಯಿತೆ ಹೆಚ್ಚಾಯಿತೆ ಎಂದು ವಿಚಾರಿಸಿಕೊಳ್ಳುತ್ತಿದ್ದರು ; ಸುದ್ದಿ ಪ್ರತಿಕೂಲವಾಗಿದ್ದರೆ, ಅರಮನೆಯ ಸುತ್ತಮುತ್ತ ವಾಸಮಾಡುತ್ತಿದ್ದ ಜನವೆಲ್ಲ ಮನೆಯಲ್ಲೇ ಅಡಗಿಬಿಡುತ್ತಿದ್ದರು. ಮುಂದಿನ ಸ್ನಾನದ ದಿನ ಬರುವ ವರೆಗೂ ಹೊರಬರುತ್ತಿರಲಿಲ್ಲ ; ಏನು ಮಾಡಿದರೂ ತಪ್ಪಿಸಿಕೊಳ್ಳಲಾಗದಷ್ಟು ಅಗತ್ಯ ಬಿದ್ದ ಹೊರತು ಯಾರೊಬ್ಬರೂ ಹೊರಕ್ಕೆ ಇಣಿಕುತ್ತಿರಲಿಲ್ಲ. ಇಂಥ ಭಯಭೀತಿ ಹುಟ್ಟಿಸುವ ಈ ದೊಡ್ಡ ಮನುಷ್ಯನು ಸ್ವಲ್ಪ ಮಟ್ಟಿಗೆ ಗುಂಪಿನಿಂದ ಹೊರಚ್ಚಾಗಿ ನಿಂತಿದ್ದನು. ಉದ್ದವಾದ ಕಡ್ಡಿಯಂಥ ಕತ್ತಿನ ತುದಿಯಲ್ಲಿ ರುಮಾಲು ಸುತ್ತಿದ ಅವನ ತಲೆ ಶೂಲದ ತುದಿಯಲ್ಲಿ

ನೆಟ್ಟುಕೊಂಡಿದೆಯೋ ಎಂಬಂತೆ ಕಾಣುತ್ತಿತ್ತು. (ಈ ಹೋಲಿಕೆಯನ್ನು ಕೇಳಿ ಸ್ಟಾಂಬೂಲಿನ ಎಷ್ಟೋ ಮಂದಿ ನಾಗರಿಕರು 'ಅಯ್ಯೋ, ಹೀಗಾಗಿದ್ದಿದ್ದರೆ' ಎಂದು ಆಸೆಯಿಂದ ನಿಟ್ಟುಸುರು ಬಿಡುತ್ತಿದ್ದರು.)

ಎಲ್ಲಾ ಚೆನ್ನಾಗಿ ನಡೆಯುತ್ತಿತ್ತು; ಉತ್ಸವಗಳಿಗೆ ಯಾವ ಅಡ್ಡಿ ಆತಂಕವೂ ಒದಗಲಿಲ್ಲ; ಯಾವುದಾಗಲೂ ಕೇಡು ಒದಗೀತೆಂಬ ಶಂಕೆಯೂ ಇರಲಿಲ್ಲ. ಈ ನಡುವೆ ಅರಮನೆಯ ಒಕ್ಷಿಯು ಆಸ್ಥಾನಿಕರ ಗುಂಪಿನೊಳಗೆ ಸರಾಗವಾಗಿ ತೂರಿಕೊಂಡು ಕಾಪುದಳದ ಅಧ್ಯಕ್ಷನ ಬಳಿ ಹೋಗಿ ಕಿವಿಯಲ್ಲಿ ಏನೋ ಪಿಸುಗುಟ್ಟಿದನು. ಅಧ್ಯಕ್ಷನು ಬೆಚ್ಚಿ ಕಳೆಗುಂದಿ ಒಕ್ಷಿಯನ್ನು ಹಿಂಬಾಲಿಸಿ ಹೊರಕ್ಕೆ ಹೋದನು. ಒಂದೆರಡು ನಿಮಿಷಗಳೊಳಗೆ ಅವನು ಹಿಂದಿರುಗಿ ಬಂದನು; ಆಗ ಅವನ ಮುಖ ಬಿಳಿಚಿಕೊಂಡಿತ್ತು. ಅಲ್ಲಿ ನೆರೆದಿದ್ದ ಆಸ್ಥಾನಿಕರನ್ನು ಮೊಳಕೈಯಿಂದ ತಿವಿದು ದಾರಿ ಬಿಡಿಸಿಕೊಳ್ಳುತ್ತಾ ಸುಲ್ತಾನರ ಬಳಿ ಹೋಗಿ ನೆಲಕ್ಕೆ ಬಗ್ಗಿ ನಮಸ್ಕಾರ ಮಾಡಿದನು.

"ಓ, ಮಹಾಪ್ರಭೂ!........"

"ಸರಿ, ಏನದು?" ಎಂದು ಸುಲ್ತಾನ ಬಿಡಿಗುಟ್ಟಿದನು. "ಸೆರೆಮನೆ ಮತ್ತು ಅಂಗಾಲ ಹೊಡೆತಗಳ ಸುದ್ದಿಯನ್ನು ಹೇಳದಿದ್ದರಾಗುವುದಿಲ್ಲವೆ? ಅದರಲ್ಲೂ ಇಂಥ ದಿನವೂ ಅದನ್ನು ಇಲ್ಲಿಗೆ ಬಂದು ಹೇಳಲೇ ಬೇಕೆ? ಹೂಂ, ಆಗಲಿ! ಹೇಳಿಬಿಡು!" ಎಂದು ಗದರಿಸಿದನು.

"ಓ, ಘನ ಪ್ರಶಾಂತ ಮಹಾಪ್ರಭು ಸುಲ್ತಾನರೇ! ನನ್ನ ನಾಲಗೆ ನುಡಿಯಲು ಒಲ್ಲೆನೆನ್ನುತ್ತಿದೆ."

ಸುಲ್ತಾನ ಹುಬ್ಬುಗಂಟಿಕ್ಕಿದನು; ಅವನಿಗೆ ಒಂದು ವಿಚಿತ್ರ ರೀತಿಯ ಆತಂಕ ತಲೆದೋರಿತು. ಕಾಪುದಳದ ಅಧ್ಯಕ್ಷ ಮೆತ್ತಗೆ ಸಣ್ಣ ದನಿಯಲ್ಲಿ ನುಡಿದನು:

"ಅವನು ಸ್ಟಾಂಬೂಲಿನಲ್ಲಿದ್ದಾನೆ!"

"ಯಾರು?" ಎಂದು ಗಡಸು ದನಿಯಲ್ಲಿ ಕೇಳಿದನು ಸುಲ್ತಾನ. ಯಾರ ವಿಚಾರವಾಗಿ ಆ ಮಾತಾಡಿದ್ದೆಂದು ಅವನಿಗೆ ಆ ಕ್ಷಣವೇ ಹೊಳೆದು ಹೋಗಿದ್ದರೂ ಯಾರೆಂದು ಪ್ರಶ್ನೆಮಾಡಿದನು.

"ಖೋಜಾ ನಸ್ರೆದ್ದೀನ್!"

ಕಾವುದಳದ ಅಧ್ಯಕ್ಷ ಆ ಹೆಸರನ್ನು ಬಹಳ ಮೆಲ್ಲಗೆ ಹೇಳಿದ್ದನು. ಆದರೆ ಆಸ್ಥಾನಿಕರಿಗೆ ಕಿವಿ ಬಹಳ ಚುರುಕು. ಅರಮನೆಯ ಆವರಣದಲ್ಲೆಲ್ಲ ಗುಸುಗುಸು ಹರಡಿತು :

" ಖೋಜಾ ನಸ್ರೆದ್ದೀನ್ ಸ್ಟಾಂಬೂಲಿನಲ್ಲಿದ್ದಾನೆ ! "

" ಹೇಗೆ ಗೊತ್ತು ನಿನಗೆ ? " ಎಂದು ಸುಲ್ತಾನ್ ಕೇಳಿದನು ; ಅವನ ಗಂಟಲಾಗಲೇ ಗಾರಾಗಿ ಹೋಗಿತ್ತು. " ಅದು ಹೇಗೆ ಗೊತ್ತು ? ಯಾರು ಹೇಳಿದರು ? ಖೋಜಾ ನಸ್ರೆದ್ದೀನ್ ಇನ್ನು ಜೀವಲೋಕದಲ್ಲಿಲ್ಲವೆಂದು ತಮ್ಮ ರಾಜವಾಕ್ಯಗಳಿಂದ ನಮಗೆ ಆಶ್ವಾಸನೆ ಕೊಡುತ್ತಿರುವ ಬುಖಾರ ಅಮೀರರ ಪತ್ರ ಇಲ್ಲಿರುವಾಗ, ಅವನು ಇಲ್ಲಿ ಬಂದಿದ್ದಾನೆಂಬುದು—ಇದು ಹೇಗೆ ಸಾಧ್ಯವಾದೀತು ? "

ಕಾವು ದಳದ ಅಧ್ಯಕ್ಷನು ಅರಮನೆಯ ಬಕ್ಷಿಗೆ ಸನ್ನೆ ಮಾಡಿದನು. ಅವನು ಸುಲ್ತಾನನ ಹತ್ತಿರಕ್ಕೆ ಚಪ್ಪಟೆ ಮೂಗಿನ, ಸಿಡುಬಿನ ಕಲೆಯ ಮುಖದ, ಹಳದಿ ಬಣ್ಣದ ಹೊರಳುಗಣ್ಣಿನ ಮನುಷ್ಯನೊಬ್ಬನನ್ನು ಕರೆತಂದನು.

ಕಾವುದಳದ ಅಧ್ಯಕ್ಷನು ವಿವರಿಸಿದನು :

" ಓ, ಮಹಾಪ್ರಭೂ ! ಇವನು ಬುಖಾರ ಅಮೀರರ ಆಸ್ಥಾನದಲ್ಲಿ ಗೂಢಚಾರನಾಗಿ ಸೇವೆ ಸಲ್ಲಿಸುತ್ತಿದ್ದನು ; ಖೋಜಾ ನಸ್ರೆದ್ದೀನನನ್ನು ಇವನು ಚೆನ್ನಾಗಿ ಬಲ್ಲ. ಇವನು ಸ್ಟಾಂಬೂಲಿಗೆ ಬಂದಾಗ, ಇವನನ್ನು ಗೂಢಚಾರನನ್ನಾಗಿ ನೇಮಿಸಿಕೊಂಡೆ ; ಈಗ ಇವನು ಆಸ್ಥಾನದಲ್ಲಿ ಸೇವೆ ಸಲ್ಲಿಸುತ್ತಿದ್ದಾನೆ—"

ಸುಲ್ತಾನನು ನಡುವೆ ಬಾಯಿ ಹಾಕಿ, ಗೂಢಚಾರನ ಕಡೆಗೆ ತಿರುಗಿದನು. " ನೀನು ಅವನನ್ನು ಕಂಡೆಯೊ ? ನೀನೇ ಸ್ವಂತವಾಗಿ ಕಣ್ಣಾರ ಕಂಡೆಯೋ, ಅವನನ್ನು ? " ಎಂದು ಪ್ರಶ್ನೆಮಾಡಿದನು.

ಗೂಢಚಾರನು ತಾನು ಕಂಡದ್ದಾಗಿ ಮರುನುಡಿದನು.

" ನೀನು ತಪ್ಪು ತಿಳಿದುಕೊಂಡಿದ್ದರೂ ಇರಬಹುದು."

ಇಲ್ಲವೆಂದನು ಗೂಢಚಾರ. ಇಲ್ಲ, ಖಂಡಿತವಾಗಿಯೂ ತಾನು ತಪ್ಪು ಮಾಡಿರಲಾರನೆಂದನು. " ಖೋಜಾ ನಸ್ರೆದ್ದೀನನ ಜೊತೆಯಲ್ಲಿ ಒಬ್ಬ ಹೆಂಗಸಿದ್ದಳು ; ಅವಳು ಒಂದು ಬಿಳಿಯ ಕತ್ತೆಯ ಮೇಲೆ ಸವಾರಿ ಮಾಡುತ್ತಿದ್ದಳು."

“ಅಲ್ಲಿಯೇ, ಆ ಕ್ಷಣವೇ ಅವನನ್ನೇಕೆ ನೀನು ಸೆರೆಹಿಡಿಯಲಿಲ್ಲ? ಕಾಪುದಳದವರಿಗೇಕೆ ಅವನನ್ನು ಹಿಡಿದೊಪ್ಪಿಸಲಿಲ್ಲ?” ಎಂದು ಅಬ್ಬರಿಸಿದನು ಸುಲ್ತಾನ್.

ಗೂಢಚಾರನು ಗಡಗಡನೆ ನಡುಗುತ್ತಾ, ಮಂಡಿಯೂರಿ ಹೀಗೆ ಬಿನ್ನಯಿಸಿದನು: “ಓ, ಪ್ರಶಾಂತರಾದ ಮಹಾಸ್ವಾಮಿ, ಹಿಂದೊಮ್ಮೆ ಬುಖಾರದಲ್ಲಿ ನಾನು ಖೋಜಾ ನಸ್ರೆದ್ದೀನನ ಕೈಗೆ ಸಿಕ್ಕಿಬಿದ್ದಿದ್ದೆ. ಆಗ ಅಲ್ಲಾನ ದಯದಿಂದ ಮಾತ್ರವೇ ನಾನು ಜೀವ ಸಹಿತ ತಪ್ಪಿಸಿಕೊಂಡು ಬರಲು ಸಾಧ್ಯವಾಯಿತು. ಇವತ್ತು ಬೆಳಗ್ಗೆ ಸ್ಟಾಂಬೂಲಿನ ಬೀದಿಯಲ್ಲಿ ಅವನನ್ನು ನಾನು ಕಂಡಾಗ, ಭಯದಿಂದ ನನ್ನ ಕಣ್ಣು ಮಂಜಾಯಿತು. ಬುದ್ಧಿ ತಿಳಿದು ಸ್ವಸ್ಥನಾಗಿ ನೋಡುವಷ್ಟರಲ್ಲಿ ಅವನು ಆಗಲೇ ಅಲ್ಲಿಂದ ಹೋಗಿಬಿಟ್ಟಿದ್ದನು.”

ಬಗ್ಗಿ ನಮಸ್ಕರಿಸುವ ಕಾಪುದಳದ ಅಧ್ಯಕ್ಷನ ಕಡೆಗೆ ತಿರುಗಿ ಕೆಂಗಣ್ಣಿನಿಂದ ನೋಡುತ್ತಾ ಸುಲ್ತಾನನು, “ನಿನ್ನ ಗೂಢಚಾರರ ಯೋಗ್ಯತೆಯೆಲ್ಲ ಇಷ್ಟೇಯೋ! ಅಪರಾಧಿಯೊಬ್ಬನನ್ನು ಕಾಣುವುದಷ್ಟೇ ಸಾಕು, ಹೆದರಿ ನಡುಗಿ ಬುದ್ಧಿ ಕಳೆದುಕೊಂಡುಬಿಡುತ್ತಾರೆ!” ಎಂದು ಹಂಗಿಸಿ ನುಡಿದನು.

ಅವನು ಸಿಡುಬಿನ ಕಲೆಯ ಗೂಢಚಾರನನ್ನು ತಿರಸ್ಕಾರದಿಂದ ಕಾಲಿನಿಂದ ಒದ್ದು ನೂಕಿದನು. ಆ ಮೇಲೆ ಎದ್ದು ತನ್ನ ಕೋಣೆಗೆ ನಡೆದುಬಿಟ್ಟನು. ಕಪ್ಪು ಗುಲಾಮರ ಉದ್ದನೆಯ ಸಾಲು ಅವನನ್ನು ಹಿಂಬಾಲಿಸಿ ನಡೆಯಿತು.

ವಜೀರರು, ಕವಿಗಳು, ಜ್ಞಾನಿಗಳು—ಎಲ್ಲರೂ ಗುಜುಗುಜು ಗುಟ್ಟುತ್ತಾ ಆತಂಕದಿಂದ ಗುಂಪಾಗಿ ಬಾಗಿಲು ಕಡೆ ನಡೆದರು. ಕೆಲವು ನಿಮಿಷ ಕಳೆದ ಮೇಲೆ ಉದ್ಯಾನದಲ್ಲಿ ಕಾಪುದಳದ ಅಧ್ಯಕ್ಷನೊಬ್ಬನ ಹೊರತು ಬೇರೆ ಯಾರೂ ಉಳಿದಿರಲಿಲ್ಲ. ತನ್ನ ಕಣ್ಣ ಮುಂದಿನ ಶೂನ್ಯವನ್ನು ದಿಟ್ಟಿಸಿ ನೋಡುತ್ತಾ ಅವನು ಒಂದು ಚಿಲುಮೆಯ ಅಮೃತಶಿಲೆಯ ಅಂಚಿನ ಮೇಲೆ ಅಸಹಾಯನಾಗಿ ಕುಸಿದು ಕುಳಿತನು. ಮೆತ್ತಗೆ ಚಿಮ್ಮುತ್ತ ನಗುತ್ತಿದ್ದ ನೀರಿನ ಸದ್ದನ್ನು ಕೇಳುತ್ತಾ ಅವನು ಬಹಳ ಹೊತ್ತು ಅಲ್ಲೇ ಕುಳಿತಿದ್ದನು. ಅವನು ಆ ಕ್ಷಣದಲ್ಲಿ ತೀರ ಕುಗ್ಗಿ ಮುದುಡಿಹೋಗಿದ್ದಂತೆ ಕಾಣಿಸಿದನು. ಅವನನ್ನು ಆ ಸ್ಥಿತಿಯಲ್ಲಿ ಕಂಡಿದ್ದಿದ್ದರೆ ಸ್ಟಾಂಬೂಲ್ ನಗರದ ನಿವಾಸಿಗಳು ಅಲ್ಲಿ ಒಂದು ಕ್ಷಣ ಮಾತ್ರವೂ ನಿಲ್ಲದೆ ದಿಕ್ಕಾಪಾಲಾಗಿ ಓಡಿಬಿಡುತ್ತಿದ್ದರು; ಕಾಲಿನ ಸ್ಲಿಪ್ಪರ್‌ಗಳು

ಬಿದ್ದು ಹೋದರೂ ಲಕ್ಷ್ಯ ಮಾಡದೆ ಓಡಿಬಿಡುತ್ತಿದ್ದರು.

ಹೀಗಿರುವಲ್ಲಿ ಸಿಡುಬಿನ ಕಲೆಯ ಗೂಢಚಾರನು ನಗರದ ಬೀದಿಗಳಲ್ಲಿ ಉಸಿರುಕಟ್ಟಿ ಓಡುತ್ತಿದ್ದನು; ಸಮುದ್ರದ ಕಡೆಗೆ ಓಡುತ್ತಿದ್ದನು. ಅಲ್ಲಿ ಪ್ರಯಾಣಕ್ಕೆ ಸಿದ್ಧವಾಗಿ ನಿಂತಿದ್ದ ಒಂದು ಅರಬ್ಬಿ ಹಡಗು ಕಾಣಿಸಿತು. ಹಡಗಿನ ಯಜಮಾನನು ಯಾವನೋ ಒಬ್ಬ ಸೆರೆಯಾಳು ಸೆರೆಯಿಂದ ತಪ್ಪಿಸಿಕೊಂಡು ಓಡಿ ಬಂದಿರಬೇಕೆಂದು ಭಾವಿಸಿ ಒಂದಕ್ಕೆ ನಾಲ್ಕಾಗಿ ಹಣ ಕೇಳಿದನು. ಗೂಢಚಾರನು ಚೌಕಾಸಿ ಮಾಡದೆ ತಕರಾರಿಲ್ಲದೆ ಕೇಳಿದಷ್ಟು ಹಣ ತೆತ್ತು ಹಡಗು ಹತ್ತಿ ಮೇಲ್ಛಾವಣಿಗೆ ಹೋಗಿ ಒಂದು ಕೊಳಕು ಮೂಲೆಯಲ್ಲಿ ಮುದುರಿಕೊಂಡು ಕುಳಿತನು. ಆ ಮೇಲೆ ಹಡಗು ಚಲಿಸಿ ಸ್ಟಾಂಬೂಲಿನ ಮಸೀದಿಗಳ ಗೋಪುರಗಳು ನೀಲಾಕಾಶದಲ್ಲಿ ಕರಗಿ ಮರೆಯಾದ ಮೇಲೆ, ಹಡಗಿನ ಹಾಯಿಗಳ ಮೇಲೆ ಜೋರಾಗಿ ಗಾಳಿ ಬೀಸತೊಡಗಿದ ಮೇಲೆ, ಅವನು ತಾನು ಅಡಗಿಕೊಂಡಿದ್ದ ಕಡೆಯಿಂದ ಹೊರಹೊರಟನು. ಹೊರಬಂದು ಹಡಗಿನ ಮೇಲೆಲ್ಲಾ ಸುತ್ತಾಡಿ ಅಲ್ಲಿದ್ದ ಒಬ್ಬೊಬ್ಬನ ಮುಖವನ್ನೂ ಚೆನ್ನಾಗಿ ಪರೀಕ್ಷೆ ಮಾಡಿ ನೋಡಿದನು. ಎಲ್ಲಾ ನೋಡಿದ ಮೇಲೆ, ಖೋಜಾ ನಸ್ರೆದ್ದೀನ್ ಆ ಹಡಗಿನ ಮೇಲಿಲ್ಲವೆಂದು ಖಂಡಿತ ಮಾಡಿಕೊಂಡು ಆ ಬಳಿಕವೇ ಅವನು ಸಮಾಧಾನದಿಂದ ಉಸಿರಾಡತೊಡಗಿದನು.

ಅಲ್ಲಿಂದಾಚೆಗೆ ಆ ಸಿಡುಬಿನ ಕಲೆಯ ಗೂಢಚಾರನು ತಾನು ಬದುಕಿದ್ದಷ್ಟು ದಿನವೂ ಸದಾ ಹೆದರಿಕೆಯಿಂದ ನಡುಗುತ್ತಲೇ ಇದ್ದನು. ಅವನು ಯಾವ ಪಟ್ಟಣಕ್ಕೇ ಹೋಗಲಿ— ಬಾಗ್ದಾದ್, ಕೈರೋ, ಟೆಹರಾನ್ ಅಥವಾ ದಮಾಸ್ಕಸ್, ಯಾವ ಕಡೆಗೇ ಹೋಗಲಿ—ಅಲ್ಲಿ ಒಂದು ಸಲಕ್ಕೆ ಮೂರು ತಿಂಗಳಿಗಿಂತ ಹೆಚ್ಚು ಕಾಲ ಶಾಂತವಾಗಿ ವಾಸಿಸುತ್ತಿರಲಿಲ್ಲ; ಏಕೆಂದರೆ ಖೋಜಾ ನಸ್ರೆದ್ದೀನ್ ಆ ಪಟ್ಟಣಕ್ಕೆ ತಪ್ಪದೆ ಬರುತ್ತಿದ್ದನು; ಅವನಿಗೆಲ್ಲಿ ಸಿಕ್ಕಿಬಿಡುವೆನೋ ಎಂದು ಹೆದರಿ ಸಿಡುಬಿನ ಕಲೆಯ ಗೂಢಚಾರನು ಆ ಸ್ಥಳವನ್ನು ಬಿಟ್ಟು ಇನ್ನೂ ದೂರ ದೂರ ಓಡಿಬಿಡುತ್ತಿದ್ದನು. ಇಲ್ಲಿ ಖೋಜಾ ನಸ್ರೆದ್ದೀನನನ್ನು ಬಲವಾದ ಸುಂಟರಗಾಳಿಗೆ ಹೋಲಿಸುವುದು ಬಹಳ ಉಚಿತವಾಗಿ ಕಾಣುತ್ತದೆ; ಒಣಗಿದ ತರಗೆಲೆಯನ್ನು ಹುಲ್ಲ ಮೇಲಿನಿಂದ ಗುಡಿಸಿ ಮೇಲೆಬ್ಬಿಸಿ, ಸಂದಿ ಪೊಟರೆಗಳಿಂದ ಬಡಿದೆಬ್ಬಿಸಿ, ಹಾರಿಸಿ ತೂರಿಸಿಕೊಂಡು ದಬ್ಬಿ ತರುಬುತ್ತಿರುವ

ಬಿರುಗಾಳಿಗೆ ಹೋಲಿಸುವುದು ಅತ್ಯಂತ ಉಚಿತವಾಗಿದೆ. ಹೀಗೆ ಸಿಡುಬಿನ ಕಲೆಯ ಗೂಢಚಾರನಿಗೆ ತಕ್ಕ ಶಿಕ್ಷೆಯಾಯಿತು; ಅವನು ಬೇರೆಯವರಿಗೆ ತಂದೊಡ್ಡಿದ್ದ ಕಷ್ಟನಷ್ಟಗಳಿಗೆಲ್ಲಾ ಅವರಿಗೆ ಮಾಡಿದ್ದ ಕೆಡುಕುಗಳಿಗೆಲ್ಲಾ ತಕ್ಕ ಶಿಕ್ಷೆಯಾಯಿತು.

ಮರುದಿನದಿಂದ ಸ್ಟಾಂಬೂಲ್ ನಗರದಲ್ಲಿ ಅತ್ಯಾಶ್ಚರ್ಯಕರವಾದ ಅಸಾಧಾರಣ ಘಟನೆಗಳು ನಡೆಯತೊಡಗಿದವು........ಆದರೆ, ತಾನು ಪ್ರತ್ಯಕ್ಷವಾಗಿ ಕಂಡರಿಯದ ಸಂಗತಿಗಳನ್ನು ಕುರಿತು ಹೇಳುವುದು ಸರಿಯಲ್ಲ; ತಾನು ನೋಡಿ ಬಂದಿರದ ದೇಶಗಳನ್ನು ವರ್ಣಿಸುವುದು ಉಚಿತವಲ್ಲ. ಆದ್ದರಿಂದ ನಮ್ಮ ಕಥೆಯ ಕಡೆಯ ಅಧ್ಯಾಯವನ್ನು ಈ ಮಾತುಗಳಲ್ಲಿ ಮುಗಿಸುತ್ತೇವೆ. ಜಾಣನೂ ಉದ್ಯೋಗಶೀಲನೂ ಆದಾತನು ಇದನ್ನು ಮತ್ತೊಂದು ಪುಸ್ತಕಕ್ಕೆ ಆರಂಭವಾಗಿ ಉಪಯೋಗಿಸಿಕೊಳ್ಳಬಹುದು; ಸ್ಟಾಂಬೂಲ್, ಬಾಗ್ದಾದ್, ಟೆಹರಾನ್, ದಮಾಸ್ಕಸ್ ಮತ್ತು ಇನ್ನಿತರ ಅನೇಕ ಪ್ರಸಿದ್ಧ ನಗರಗಳಲ್ಲಿ ಖೋಜಾ ನಸ್ರೆದ್ದೀನನ ಮತ್ತಷ್ಟು ಸಾಹಸಗಳನ್ನು ವರ್ಣಿಸುವ ಪುಸ್ತಕಕ್ಕೆ ಆದಿಯಾಗಿ ಇದನ್ನು ಬಳಸಿಕೊಳ್ಳಬಹುದು.



# ನಮ್ಮ ಇತರ ಪ್ರಕಟನೆಗಳು

1. **ಸ್ಟಾಲಿನ್** (ಜೀವನಚಿತ್ರ) 1—0—0
   —ಶ್ರೀಮತಿ ಇಂದಿರಾ ಶ್ರೀಕಂಠಯ್ಯ
2. **ರಷ್ಯಾದ ಜಾನಪದ ಕಥೆಗಳು** 1—8—0
   —ಅನು: ಕೆ. ಟಿ. ಎಸ್. ಸುಂದರ್
3. **ಡುಬ್ರೋವ್‌ಸ್ಕಿ – ಎ. ಎಸ್. ಪುಷ್ಕಿನ್** 1—0—0
   —ಅನು: ಕೆ. ಎಲ್. ಗೋಪಾಲಕೃಷ್ಣ
4. **ಮಧುವಣಗಿತ್ತಿ – ಆಂಟನ್ ಚೆಖಾವ್** 1—8—0
   —ಅನು: ನಿರಂಜನ
5. **ನೀಲಲೋಚನೆ – ಮ್ಯಾಕ್ಸಿಂ ಗಾರ್ಕಿ** 1—8—0
   —ಅನು: ಅ. ನ. ಕೃ.
6. **ಮರೆಯಲಾಗದ ಪರಿಮಳ – ಇವಾನ್ ಟರ್ಗಿನಿವ್** 1—4—0
   —ಅನು: ತ. ರಾ. ಸು.
7. **ಭೂಮಿ ಮತ್ತು ಇತರ ಗ್ರಹಗಳ ಹುಟ್ಟು – ಬೋರಿಸ್ ಲೆವಿನ್** 1—8—0
   —ಅನು: ಬಿ. ವಿ. ಸುಬ್ಬರಾಯಪ್ಪ
8. **ಶಾಲೆಯ ಮಕ್ಕಳು – ಎನ್. ನೊಸೋವ್** 1–12–0
   —ಅನು: ಬಿ. ಎಸ್. ರುಕ್ಕಮ್ಮ
9. **ಮೇಕೆ ಮತ್ತು ಅದರ ಮೂರು ಮರಿಗಳು** 0—5—0
   —(ಮಕ್ಕಳ ಕಥೆ ಪುಸ್ತಕ)
10. **ಸಮಾಜ ವಿಜ್ಞಾನ ಸಂಗ್ರಹ** 1—0—0
   —ಶ್ರೀ ಎಂ. ಯಾಮುನಾಚಾರ್ಯ

